# ಕನ್ನಡ ಕಥನ ಸಾಹಿತ್ಯ ಮತ್ತು ಸ್ತ್ರೀ ನಿರ್ವಚನ

(ಪಿಎಚ್.ಡಿ. ಮಹಾಪ್ರಬಂಧ)


ಸಂಶೋಧಕರು

ಗೀತಾಬಾಲಿ ನಾಯಕ್

ಮಾರ್ಗದರ್ಶಕರು

ಡಾ. ಎಚ್. ಎಸ್. ಶ್ರೀಮತಿ





[illegible]

ಕನ್ನಡ [illegible]

[illegible]

[illegible]

# ಕನ್ನಡ ಕಥನ ಸಾಹಿತ್ಯ ಮತ್ತು ಸ್ತ್ರೀ ನಿರ್ವಚನ

## (ಪಿಎಚ್.ಡಿ. ಮಹಾಪ್ರಬಂಧ)


ಸಂಶೋಧಕರು

ಗೀತಾಬಾಲಿ ನಾಯಕ್





ಮಾರ್ಗದರ್ಶಕರು

ಡಾ. ಎಚ್. ಎಸ್. ಶ್ರೀಮತಿ







ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ
೧೯೯೯




# ಪ್ರಮಾಣ ಪತ್ರ

ಶ್ರೀಮತಿ ಗೀತಾಬಾಲಿ ನಾಯಕ್ ಅವರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿಯ, ಭಾಷಾನಿಕಾಯದ ಆಂತರಿಕ ವಿದ್ಯಾರ್ಥಿನಿಯಾಗಿ ಸಂಶೋಧನೆ ನಡೆಸಿ, "ಕನ್ನಡ ಕಥನ ಸಾಹಿತ್ಯ ಮತ್ತು ಸ್ತ್ರೀನಿರ್ವಚನ" ಎಂಬ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ಈ ಸಂಶೋಧನಾ ಮಹಾಪ್ರಬಂಧವು ಮೂಲ ಸಂಶೋಧನಾ ಕೃತಿಯಾಗಿದ್ದು ಇಡಿಯಾಗಿ ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(ಡಾ|| ಎಚ್. ಎಸ್. ಶ್ರೀಮತಿ)

ದಿನಾಂಕ : 2 · 25 · 98

ವಿದ್ಯಾರಣ್ಯ

# ಪ್ರಮಾಣ ಪತ್ರ

"ಕನ್ನಡ ಕಥನ ಸಾಹಿತ್ಯ ಮತ್ತು ಸ್ತ್ರೀ ನಿರ್ವಚನ" ಎಂಬ ಸಂಶೋಧನಾ ಮಹಾಪ್ರಬಂಧವನ್ನು ಡಾ|| ಎಚ್. ಎಸ್ ಶ್ರೀಮತಿಯವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾನಿಕಾಯದ ಆಂತರಿಕ ವಿದ್ಯಾರ್ಥಿನಿಯಾಗಿ ಸಿದ್ಧಪಡಿಸಿದ್ದೇನೆ.

ಈ ಸಂಶೋಧನಾ ಮಹಾಪ್ರಬಂಧವು ಮೂಲ ಸಂಶೋಧನಾ ಕೃತಿಯಾಗಿದ್ದು ಇಡಿಯಾಗಿ ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಗೀತಾಬಾಲಿ ನಾಯಕ್

**ಗೀತಾಬಾಲಿ ನಾಯಕ್**

ದಿನಾಂಕ : ೭-೭-೯೯

ವಿದ್ಯಾರಣ್ಯ.

# ಅರಿಕೆ

ಕಳೆದ ನಾಲ್ಕು ವರ್ಷಗಳ ವ್ಯಾಸಂಗದ ಅವಧಿಯಲ್ಲಿ ನನ್ನ ಸಂಶೋಧನಾ ಕಾರ್ಯಗಳಿಗೆ ನಿರಂತರ ಪ್ರೋತ್ಸಾಹ ಮತ್ತು ನೆರವು ನೀಡಿದ ಕನ್ನಡ ವಿಶ್ವವಿದ್ಯಾಲಯ, ಮತ್ತು ಕನ್ನಡ ವಿಶ್ವವಿದ್ಯಾಲಯದ ವರಿಷ್ಠ ಅಧಿಕಾರಿಗಳನ್ನು, ಗುರುಗಳನ್ನು ಮತ್ತು ಆತ್ಮೀಯ ಕಿರಿಯ ಮಿತ್ರರನ್ನು ನೆನೆದು ಕೃತಜ್ಞತೆ ಸೂಚಿಸುವುದು ನನ್ನ ಆದ್ಯ ಕರ್ತವ್ಯವೆಂದು ತಿಳಿಯುತ್ತೇನೆ.

ಕನ್ನಡ ವಿಶ್ವವಿದ್ಯಾಲಯದ ಮೊದಲ ಮಾನ್ಯ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರ ಅವರು ನಾನು ಉನ್ನತ ವ್ಯಾಸಂಗ ಕೈಗೊಳ್ಳಲು ಅವಕಾಶ ನೀಡಿ, ೧೯೯೫-೯೭ರ ಸಾಲಿನ ಪಿ.ಎಚ್.ಡಿ ಅಧ್ಯಯನಕ್ಕೆ ಆಯ್ಕೆ ಮಾಡಿ ಪ್ರೋತ್ಸಾಹಿಸಿದ್ದಾರೆ. ಸಾಹಿತ್ಯದ ವಿದ್ಯಾರ್ಥಿನಿಯಾಗಿಯೂ ನಾನು ಶ್ರೀ ಕಂಬಾರ ಅವರಿಂದ ಮಾರ್ಗದರ್ಶನ ಮತ್ತು ಪ್ರೇರಣೆ ಪಡೆದಿದ್ದೇನೆ. ಡಾ.ಕಂಬಾರರಿಗೆ ನನ್ನ ಗೌರವಪೂರ್ವಕ ಕೃತಜ್ಞತೆಗಳು.

ಕನ್ನಡ ವಿಶ್ವವಿದ್ಯಾಲಯದ ಮಾನ್ಯ ಕುಲಪತಿಗಳೂ, ಹಿರಿಯ ಸಂಶೋಧಕರೂ ಆಗಿರುವ ಡಾ. ಎಂ.ಎಂ. ಕಲಬುರ್ಗಿಯವರು ನನ್ನ ವ್ಯಾಸಂಗಕ್ಕೆ ನೆರವಾಗಲಬಲ್ಲ ಎಲ್ಲ ಅವಕಾಶಗಳನ್ನು ಕಲ್ಪಿಸಿಕೊಟ್ಟಿದ್ದಾರೆ. ಕನ್ನಡ ಭಾಷೆ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ಡಾ. ಕಲಬುರ್ಗಿಯವರು ನಡೆಸಿರುವ ಸಂಶೋಧನೆಗಳು ನನಗೆ ಮಾರ್ಗದರ್ಶಕ ಸೂತ್ರಗಳಾಗಿವೆ. ಅವರಿಗೆ ನನ್ನ ಗೌರವಪೂರ್ವಕ ಕೃತಜ್ಞತೆಗಳು.

ಕನ್ನಡ ವಿಶ್ವವಿದ್ಯಾಲಯದ ಮಾನ್ಯ ಕುಲಸಚಿವರೂ, ಹಿರಿಯ ವಿಮರ್ಶಕರೂ ಆಗಿರುವ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರು ನನ್ನ ಅಧ್ಯಯನದ ಅವಧಿಯಲ್ಲಿ ಗುರುವಿನ ಸ್ಥಾನದಲ್ಲಿ ನಿಂತು ಸೂಕ್ತ ರೀತಿಯ ಮಾರ್ಗದರ್ಶನ, ಪ್ರೋತ್ಸಾಹ ಮತ್ತು ನೆರವು ನೀಡಿ ನನ್ನ ಸಂಶೋಧನಾ ಕಾರ್ಯ ಯಶಸ್ವಿಯಾಗಿ ಮುಗಿಯುವುದರಲ್ಲಿ ಮಹತ್ವದ ಪಾತ್ರ ನಿರ್ವಹಿಸಿದ್ದಾರೆ. ಅವರು ನೀಡಿದ ಸಹಕಾರವನ್ನು ನಾನಿಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಅಧ್ಯಯನಾಂಗದ ನಿರ್ದೇಶಕರಾಗಿರುವ ಪ್ರೊ. ಬಾಲಸುಬ್ರಹ್ಮಣ್ಯಂ ವ್ಯಾಸಂಗದ ಅವಧಿಯಲ್ಲಿ ಅಗತ್ಯವಿರುವ ಎಲ್ಲ ರೀತಿಯ ನೆರವು ಮತ್ತು ಸಹಕಾರವನ್ನು ನೀಡಿದ್ದಾರೆ. ವಿಶ್ವವಿದ್ಯಾಲಯದ ಹಿರಿಯ ವಿದ್ವಾಂಸರೂ, ಸಾಹಿತಿಗಳೂ ಆಗಿರುವ ಡಾ.ಕೆ.ವಿ.ನಾರಾಯಣ, ಡಾ.ಕರೀಗೌಡ ಬೀಚನಹಳ್ಳಿ, ಪ್ರೊ.ಹಿ.ಚಿ.ಬೋರಲಿಂಗಯ್ಯ ಮತ್ತು ಡಾ.ಶೇಷಾದ್ರಿಯವರು ನನಗೆ ಪ್ರೋತ್ಸಾಹ ನೀಡಿದ್ದಾರೆ. ಈ ಎಲ್ಲ ವಿದ್ವಾಂಸರಿಗೆ ನನ್ನ ಕೃತಜ್ಞತೆಗಳು.

ನನ್ನ ಸಂಶೋಧನ ಕಾರ್ಯದಲ್ಲಿ ಕ್ಷೇತ್ರ ಗುರುತಿಸುವುದರೊಂದಿಗೆ, ಪ್ರತಿಹಂತದಲ್ಲಿ ನನ್ನನ್ನು ತಿದ್ದಿ, ಪ್ರೋತ್ಸಾಹಿಸಿ, ಈ ಮಹಾಪ್ರಬಂಧ ರಚನೆಯಲ್ಲಿ ಸೂಕ್ತ ರೀತಿಯ ಮಾರ್ಗದರ್ಶನ ನೀಡಿ, ನಾನು ಹಿಡಿದ ಕಾರ್ಯ ಯಶಸ್ವಿಯಾಗಿ ಮುಗಿಯಲು ಆತ್ಮೀಯವಾಗಿ ಸಹಕರಿಸಿದ ನನ್ನ ಪಿಎಚ್.ಡಿ. ವ್ಯಾಸಂಗದ ಮಾರ್ಗದರ್ಶಕರೂ,

ಮಹಿಳಾ ಅಧ್ಯಯನ ವಿಭಾಗದ ಮುಖ್ಯಸ್ಥೆಯೂ ಆಗಿರುವ ಡಾ. ಎಚ್. ಎಸ್. ಶ್ರೀಮತಿ ಅವರಿಗೆ ನನ್ನ ತುಂಬು ಹೃದಯದ ಕೃತಜ್ಞತೆಗಳು.

ಮಹಿಳಾ ಅಧ್ಯಯನ ಕ್ಷೇತ್ರದಲ್ಲಿ ಆಸಕ್ತಿ ಬರುವ ವಿಚಾರಗಳನ್ನು, ಹೊಸರೀತಿಯ ಆಲೋಚನಾ ವಿಧಾನಗಳನ್ನು ಬೇರೆ ಬೇರೆ ಜ್ಞಾನಶಿಸ್ತುಗಳ ಮೂಲಕ ಪರಿಚಯಿಸಿ ಚರ್ಚೆ, ಸಂವಾದದ ಮೂಲಕ ನನ್ನ ಬರವಣಿಗೆಗೆ, ಓದಿಗೆ, ಖಚಿತರೂಪ ಬರುವಲ್ಲಿ ಪ್ರೇರಣೆ ನೀಡಿದವರು ಡಾ.ಪುರುಷೋತ್ತಮ ಬಿಳಿಮಲೆ, ಡಾ.ಮೋಹನ್ ಕುಂಟಾರ್ ಮತ್ತು ಪ್ರೊ. ಸತ್ಯನಾಥ.

ಆತ್ಮೀಯ ಭಾವದಿಂದ ಸ್ನೇಹಪೂರ್ವಕವಾಗಿ ನನಗೆ ನೆರವಾದವರು ಡಾ.ಸುಬ್ಬಣ್ಣ, ಶ್ರೀ ಶಿವಾನಂದ ವಿರಕ್ತಮಠ, ಡಾ.ವಿರೇಶ ಬಡಿಗೇರ ಮತ್ತು ಶ್ರೀಮತಿಯರಾದ ಎಚ್. ನಾಗವೇಣಿ, ಡಿ. ಮೀನಾಕ್ಷಿ.

ಗ್ರಂಥಾಲಯದಲ್ಲಿ ನನಗೆ ಬೇಕಾದ ಎಲ್ಲ ನೆರವನ್ನು, ಸಹಕಾರವನ್ನು ಆತ್ಮೀಯವಾಗಿ ನೀಡಿದವರು ಶ್ರೀ ಮಲ್ಲಿಕಾರ್ಜುನ, ಶ್ರೀ ಸುಹಾಸ ಮತ್ತು ಶ್ರೀ ಗುಡಿಮನಿಯವರು.

ನನ್ನ ಆತ್ಮೀಯ ವಲಯದವರಾಗಿ ಕೃಷ್ಣಮೂರ್ತಿ ಪಿ., ವಿಜಯೇಂದ್ರ ಎಸ್.ಕೆ. ಮತ್ತು ದಿನೇಶ ಎ.ಎಸ್. ಪ್ರತಿಹಂತದಲ್ಲಿ ಸೋದರಭಾವದಿಂದ ನೆರವು ನೀಡಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಆಂತರಿಕ ವಿದ್ಯಾರ್ಥಿನಿಯಾಗಿ ಆಡಳಿತಾಂಗ, ಅಧ್ಯಯನಾಂಗ, ಪ್ರಸಾರಾಂಗ ಮತ್ತು ಗ್ರಂಥಾಲಯದ ಬೋಧಕೇತರ ಸಿಬ್ಬಂದಿಗಳಿಂದ ನಾನು ಪಡೆದ ನೆರವು, ಸಹಕಾರಗಳಿಗೆ ಮತ್ತು ಮೇಲೆ ಸೂಚಿಸಿದ ಎಲ್ಲ ಮಹನೀಯರಿಗೆ ನನ್ನ ಗೌರವ ಮತ್ತು ಕೃತಜ್ಞತೆಗಳು.

ಮಹತ್ವಾಕಾಂಕ್ಷೆಯ ನನ್ನ ಸಾಹಸಗಳಿಗೆ ಸದಾ ಸ್ಪಂದಿಸಿ, ಅಪೂರ್ವ ರೀತಿಯಲ್ಲಿ ಪ್ರೋತ್ಸಾಹಿಸುತ್ತ ಬಂದಿರುವ ನನ್ನ ಬಾಳಸಂಗಾತಿ ರಮಾನಂದ್, ಪಿಎಚ್.ಡಿ. ವ್ಯಾಸಂಗಕ್ಕೆ ಬೇಕಾದ ಅನುಕೂಲತೆಗಳನ್ನು, ನೆರವನ್ನು ನೀಡಿ ಸಹಕರಿಸಿದ್ದಾರೆ. ನನ್ನ ಅನುಪಸ್ಥಿತಿಯನ್ನು ತಾಳ್ಮೆಯಿಂದ ಸಹಿಸಿ, ಮಹಾಪ್ರಬಂಧದ ಯಶಸ್ವಿ ಮುಕ್ತಾಯದಲ್ಲಿ ಮುಖ್ಯ ಪಾತ್ರ ನಿರ್ವಹಿಸಿದವಳು ನನ್ನ ಚಂದ್ರಿಕ.

ಮಹಾಪ್ರಬಂಧದ ಮುದ್ರಣದಲ್ಲಿ ಆಸಕ್ತಿವಹಿಸಿ, ಹೊಣೆ ನಿಭಾಯಿಸಿದವರು ಶ್ರೀ ವಿಜಯೇಂದ್ರ ಎಸ್.ಕೆ. ಅವರಿಗೆ ಮತ್ತು ಕಂಪ್ಯೂಟರ್ ಅಕ್ಷರ ಸಂಯೋಜಿಸಿದ ಅರುಣ ಗ್ರಾಫಿಕ್ಸ್‌ನವರಿಗೆ ತನ್ನ ಆತ್ಮೀಯ ಕೃತಜ್ಞತೆಗಳು.

ಗೀತಾಬಾಲಿ ನಾಯಕ್
ಸಂಶೋಧಕರು.

# ಪರಿವಿಡಿ

ಪ್ರಸ್ತಾವನೆ

ಅಧ್ಯಾಯ : ೧ ಪ್ರಬಂಧ ಸ್ವರೂಪ

ಅಧ್ಯಾಯ : ೨ ಸಾಹಿತ್ಯದಲ್ಲಿ ಸ್ತ್ರೀ ಪರಿಕಲ್ಪನೆ

ಅಧ್ಯಾಯ : ೩ ಕಥನ ಸಾಹಿತ್ಯ ಮತ್ತು ಸ್ತ್ರೀ ಪ್ರಧಾನತೆ

ಅಧ್ಯಾಯ : ೪ ಕಥನ ಸಾಹಿತ್ಯದಲ್ಲಿ ಸ್ತ್ರೀ ಅಭಿವ್ಯಕ್ತಿ

ಅಧ್ಯಾಯ : ೫ ತ್ರಿವೇಣಿ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು

ಅಧ್ಯಾಯ : ೬ ವೈದೇಹಿ ಕತೆಗಳಲ್ಲಿ ಸ್ತ್ರೀಪಾತ್ರಗಳು

ಅಧ್ಯಾಯ : ೭ ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು

ಅಧ್ಯಾಯ : ೮ ಭೈರಪ್ಪನವರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು.

ಉಪಸಂಹಾರ :

ಅನುಬಂಧಗಳು

## ಪ್ರಸ್ತಾವನೆ

ಸಾಹಿತ್ಯ ಮತ್ತು ಸಮಾಜದ ಸಂಬಂಧ ವಿಶಿಷ್ಟ ರೀತಿಯದು. ಸಾಹಿತ್ಯ ಸಮಾಜದ ಪ್ರತಿನಿಧಿಕರಣ ಕಲೆಯಾಗುವುದರೊಂದಿಗೆ ಸಾಂಸ್ಕೃತಿಕ ಉತ್ಪಾದನೆಯೂ ಆಗಿದೆ. ಸಾಹಿತ್ಯದಲ್ಲಿ ಕಾಣಿಸಿಕೊಳ್ಳುವ ಸಮಾಜಚಿತ್ರಣ ಮತ್ತು ವಾಸ್ತವಿಕ ಸಮಾಜದ ಸ್ವರೂಪ ಹೆಚ್ಚು ಭಿನ್ನವಾಗಿರುವುದು ಸಾಧ್ಯವಾಗುವುದಿಲ್ಲ. ಆದುದರಿಂದ ಸಾಹಿತ್ಯದ ಮೂಲಕ ಸಮಾಜದ ವಾಸ್ತವಿಕತೆಯನ್ನು ಕಟ್ಟುವ ಪ್ರಯತ್ನ ಸಮಂಜಸವಾಗುತ್ತದೆ.

ಪ್ರತಿಯೊಂದೂ ಸಾಹಿತ್ಯಿಕ ಘಟ್ಟವು ಸಮಕಾಲೀನ ಸಾಮಾಜಿಕ ಸಂದರ್ಭಗಳಿಗೆ ಸ್ಪಂದಿಸುವ ರೀತಿ ಸಾಹಿತ್ಯದ ಚಲನಶೀಲತೆಯನ್ನು ಸೂಚಿಸುವ ರೀತಿಯದಾಗಿದೆ. ಸ್ಥಿತ್ಯಂತರಗೊಳ್ಳುತ್ತಿರುವ ಸಾಮಾಜಿಕ ಸ್ಥಿತಿಯನ್ನು ಪುನರಾವರ್ತಿಸುವ ಸಂದರ್ಭಗಳಲ್ಲಿ ಸಾಹಿತ್ಯವು ಕೆಲವು ಮಾದರಿಗಳನ್ನು ಸೃಷ್ಟಿಸಿ ದಾಖಲಿಸುತ್ತದೆ. ಸಾಹಿತ್ಯ ಚರಿತ್ರೆಯುದ್ದಕ್ಕೂ ಕಾಣಿಸಿಕೊಳ್ಳುವ ಈ ಮಾದರಿಗಳ ಅಧ್ಯಯನವು ನಿಶ್ಚಿತರೂಪದ ಪರಿಕಲ್ಪನೆಗಳನ್ನು ಕಾಲಾನುಕ್ರಮವಾಗಿ ಕಟ್ಟಿಕೊಡಲು ಸಹಾಯಕವಾಗುತ್ತದೆ. ಸಾಹಿತ್ಯ ಕಟ್ಟಿಕೊಡುವ ಸ್ತ್ರೀಪರಿಕಲ್ಪನೆಯನ್ನು ಈ ಮಾದರಿಗಳ ಹಿನ್ನೆಲೆಯಲ್ಲಿ ಗಮನಿಸುವುದು ಮತ್ತು ಸ್ತ್ರೀ ನಿರ್ವಚನದಲ್ಲಿ ಪಾಲುಗೊಳ್ಳುವ ವಿವಿಧ ಅಂಶಗಳನ್ನು ಸಾಹಿತ್ಯ ಒಳಗೊಂಡಿರುವುದನ್ನು ಪರಿಶೋಧಿಸುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಕೈಗೆತ್ತಿಕೊಳ್ಳಲಾಗಿದೆ.

ಸ್ತ್ರೀ ನಿರ್ವಚನವೆಂದರೆ ಸ್ತ್ರೀಯನ್ನು ವಿವರಿಸುವುದು/ವ್ಯಾಖ್ಯಾನಿಸುವುದು ಎಂದು ಅರ್ಥವಾಗುತ್ತದೆ. ವಿಭಿನ್ನ ನೆಲೆಗಳಿಂದ ಸ್ತ್ರೀಯನ್ನು ನಿರ್ವಚಿಸಲಾಗಿದೆ. ಸ್ತ್ರೀ ನಿರ್ವಚನದಲ್ಲಿ ಅನೇಕ ವಿಚಾರಗಳು ಪಾಲುಗೊಳ್ಳುತ್ತವೆ. ಸ್ತ್ರೀ ನಿರ್ವಚನದಲ್ಲಿ ಪಾಲುಗೊಳ್ಳುವ ವಿಭಿನ್ನನೆಲೆಗಳ ಹಿನ್ನೆಲೆಯಲ್ಲಿ ಸ್ತ್ರೀ ಸ್ವಭಾವವನ್ನು ಅರ್ಥಮಾಡಿಕೊಳ್ಳುವುದು ಮತ್ತು ಸ್ತ್ರೀ ಸ್ವರೂಪವನ್ನು ಅದರ ವಾಸ್ತವಿಕತೆಯೊಂದಿಗೆ ನಿರ್ವಚಿಸುವುದು ಆಧುನಿಕ ಚಿಂತನಾಕ್ರಮದ ಒಂದು ವಿಧಾನವೂ ಆಗಿದೆ. ಸಾಹಿತ್ಯ ಅಭಿವ್ಯಕ್ತಿ ಮಾಧ್ಯಮದ ರೂಪದಲ್ಲಿಯೂ ಸ್ತ್ರೀ ನಿರ್ವಚನದಲ್ಲಿ ಪಾಲುಗೊಳ್ಳುವುದರಿಂದ ಸ್ತ್ರೀ ನಿರ್ವಚನದ ಶೋಧನೆ ಸಾಹಿತ್ಯದ ಮೂಲಕವೂ ನಡೆಯಬೇಕಾಗಿದೆ.[1] ಸ್ತ್ರೀಗೆ ಸಂಬಂಧಿಸಿದ ಕೆಲವು ಚಿಂತನಾ ಕ್ರಮಗಳನ್ನು ಮತ್ತು ಅಧ್ಯಯನಗಳನ್ನು ಮೊದಲು ಗಮನಿಸುವುದು ಸೂಕ್ತವೆಂದು ತಿಳಿದು ಕೆಳಗಿನ ವಿವರಗಳನ್ನು ಇಲ್ಲಿ ನೀಡಲಾಗಿದೆ.

ಆಧುನಿಕಯುಗದ ಚಿಂತನಾ ಕ್ರಮಗಳಲ್ಲಿ 'ಸ್ತ್ರೀಮುಕ್ತಿ ಚಿಂತನೆ' ಇತ್ತೀಚಿಗಿನದು. ಈ ಶತಮಾನದ ಅರುವತ್ತರ ದಶಕಕ್ಕೆ ಸುಮಾರಾಗಿ ಸೈದ್ಧಾಂತಿಕ ರೂಪದಲ್ಲಿ ತನ್ನ ಚಿಂತನಾಧಾಟಿಯನ್ನು ರೂಪಿಸಿಕೊಂಡು, ಬೇರೆ ಬೇರೆ ಜ್ಞಾನಶಿಸ್ತುಗಳ ಮೂಲಕ ಪ್ರವೇಶ ಪಡೆಯತ್ತ ಮುಂದುವರಿಯತ್ತಿರುವ ಈ ಚಿಂತನೆಯು ತನ್ನ ಮೂಲಸ್ವರೂಪದಲ್ಲಿ ಲಿಂಗಜಾತಿ ಗಳಾಗಿರುವ ಸ್ತ್ರೀ ಮತ್ತು ಪುರುಷರನ್ನು ಸಮಾಜ ಕೇಂದ್ರಿತ ನೆಲೆಯಲ್ಲಿ ಮೊದಲು ತಿಳಿಯಲು ಪ್ರಯತ್ನಿಸಿ ಹಂತಹಂತವಾಗಿ ಕುಟುಂಬ, ಕುಟುಂಬದಿಂದ ವೈಯಕ್ತಿಕ ನೆಲೆಯೊಳಗೆ ಅರ್ಥೈಸುವ ಹಂತವನ್ನು ಮುಟ್ಟುತ್ತದೆ.

ಸ್ತ್ರೀ ವಿಮುಕ್ತಿ ಚಿಂತನೆ ತನ್ನ ಸೈದ್ಧಾಂತಿಕ ರೂಪದಲ್ಲಿ ಕಾಣಿಸಿಕೊಂಡಿರುವುದು ಇತ್ತೀಚಿಗಿನ ವರ್ಷಗಳಲ್ಲಿಯಾದರೂ ಈ ಚಿಂತನೆಗೆ ಹಿನ್ನೆಲೆಯಾಗಿ ಒಂದು ಶತಮಾನಕ್ಕಿಂತಲೂ ಅಧಿಕ ಕಾಲಾವಧಿಯ, ವಿಭಿನ್ನ ಸ್ವರೂಪವನ್ನುಳ್ಳ ಸ್ತ್ರೀಪರ ಹೋರಾಟದ ಹಿನ್ನೆಲೆ ಇದೆ.

ಸುಮಾರಾಗಿ ೧೮೭೫ ರಲ್ಲಿ ಸ್ತ್ರೀ ವಿಮುಕ್ತಿಯ ಬೇರು ಎನ್ನಬಹುದಾದ ಕಾರ್ಯವೈಖರಿಯು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕಾಣಿಸಿಕೊಂಡು ಮೊತ್ತಮೊದಲ ಬಾರಿ ಸ್ತ್ರೀ ನಿರ್ವಚನದ ಪ್ರಸ್ತಾಪವನ್ನು ಅಲ್ಲಿ ಮಾಡಲಾಯಿತು.

ಈ ಸಂದರ್ಭದಲ್ಲಿ ಬೇರೆ ಬೇರೆ ರೀತಿಯ ರಾಜಕೀಯ ಕಾರಣಗಳನ್ನು ಮುಂದಿಟ್ಟು, ಸಂಘಟಿತರಾಗಿ ಹೋರಾಡಿದ ಅನುಭವ ನೀಡಿದ ಪ್ರೇರಣೆ ಸ್ತ್ರೀಯರಿಗೆ ತಮ್ಮನ್ನು ತಾವು ಗುರುತಿಸುಕೊಳ್ಳುವ ಅವಕಾಶವನ್ನು ತೆರೆದುಕೊಟ್ಟಿತು.

ರಾಜಕೀಯ ಹಕ್ಕುಗಳಿಗಾಗಿ ಹೋರಾಡಿದ ಅನುಭವದ ಮೂಲಕ ಚರಿತ್ರೆಯುದ್ದಕ್ಕೂ ಸಾಮಾಜಿಕ ಗುಂಪಿನ ನಿರ್ದಿಷ್ಟತೆಯೂ ಇಲ್ಲದೆ ಅಸಮಾನತಾ ನೆಲೆಯಲ್ಲಿ ಪ್ರತ್ಯೇಕೀಕರಣಕ್ಕೆ ಒಳಗಾಗಿ ಬದುಕಿದ ರೀತಿಗಿಂತಲು ಭಿನ್ನವಾಗಿ ತಮ್ಮನ್ನು ವಿವರಿಸಿಕೊಳ್ಳಬೇಕಾದ ಅಗತ್ಯವನ್ನು ಮನಗಾಣುವುದು ಅವರಿಗೆ ಸಾಧ್ಯವಾಯಿತು. ತಮ್ಮನ್ನು ಗುರುತಿಸಿಕೊಳ್ಳುವ ಹೊಣೆಗಾರಿಕೆಯಲ್ಲಿ ಪ್ರಾಥಮಿಕ ಹಂತದ ಹೋರಾಟವು ಸ್ತ್ರೀ ನಿರ್ವಚನವನ್ನು ಮಾಡಿರುವುದು ಈ ರೀತಿಯಲ್ಲಿ:-

'ಸ್ತ್ರೀಯೆಂದರೆ ಒಂದು ಸಮನ್ವಿತ ಸಾಮಾಜಿಕ ಗುಂಪು. ಈ ಗುಂಪಿನ ಅಧೀನ ಸ್ಥಿತಿ ಪ್ರಕೃತಿ ಸಹಜವೂ ಅಲ್ಲ; ದೈವ ಕೊಡುಗೆಯೂ ಅಲ್ಲ'. ಮುಂದುವರಿದು - 'ನಿರ್ದಿಷ್ಟ ಸಾಮಾಜಿಕ ಗುಂಪುಗಳಾಗಿ ಗುರುತಿಸಿಕೊಳ್ಳಬೇಕಾದ ಸ್ತ್ರೀಯ ಪುರುಷಾಧೀನತೆಯು ಪ್ರಕೃತಿ ಸಹಜವಾದುದಲ್ಲ; ಸಾಮಾಜಿಕರಣ ಪ್ರಕ್ರಿಯೆಯ ಮೂಲಕ ಹಂತ ಹಂತವಾಗಿ ನಡೆದಿರುವಂತಹದು. ಭಿನ್ನರೂಪದ ಸಾಮಾಜಿಕ ಸಂಸ್ಥೆಯು ರೂಪುಗೊಂಡರೆ ಆಗ ಸ್ತ್ರೀಗೆ ಅಲ್ಲಿ ತನ್ನ ಅನನ್ಯತೆಯನ್ನು ಸ್ವ-ನಿರ್ವಚನದ ಮೂಲಕ ಕಂಡುಕೊಳ್ಳುವ ಸಾಧ್ಯತೆಗಳು ಇವೆ.'

ಇದು ಪರ್ಯಾಯ ಸಾಧ್ಯತೆಗಳ ವಾದದ ಆಧಾರದಲ್ಲಿ ಪ್ರೇರಿತವಾಗಿರುವ ಒಂದು ಚಿಂತನೆ / ವ್ಯಾಖ್ಯಾನವಾಗಿದೆ. ವರ್ಗಬೇಧನೀತಿ ವಿರುದ್ಧ ಹೊರಟ್ಟಿದ ವಾದಕ್ಕೆ ಸಂವಾದಿರೂಪದಲ್ಲಿರುವ ಈ ವ್ಯಾಖ್ಯಾನವು ಇತಿಹಾಸದುದ್ದಕ್ಕೂ ಸ್ತ್ರೀ ನಿರ್ವಚನದಲ್ಲಿ ಪಾಲುಗೊಂಡ ಬೇರೆ ಬೇರೆ ಜ್ಞಾನಶಿಸ್ತುಗಳನ್ನು ಒರೆಗೆ ಹಚ್ಚಿ ನೋಡುತ್ತದೆ. ಸ್ತ್ರೀ ವಿಮುಕ್ತಿ ಚಿಂತನೆಯು ಸ್ತ್ರೀ ನಿರ್ವಚನದ ಕುರಿತಾಗಿ ಮುಂದಿಡುವ ವಿಚಾರಗಳೆಂದರೆ -

'ಸ್ತ್ರೀಯ ನಿಜಸ್ವರೂಪ ತಿಳಿಯಬೇಕಾದರೆ ಅವಳಿರುವ ಸ್ಥಿತಿ ಬದಲಾಗಬೇಕು. ಅಧೀನತಾ ಕಲ್ಪನೆಯ ಸ್ತ್ರೀ ಬಿಡುಗಡೆಯಾಗಬೇಕು. ಸ್ತ್ರೀಯನ್ನು ಅವಳಿರುವ ಈಗಿನ ಸ್ಥಿತಿಯಲ್ಲಿ ಸ್ವತಂತ್ರವಾಗಿ ವಿವರಿಸುವುದು ಸಾಧ್ಯವಿಲ್ಲ. ಯಾಕೆಂದರೆ ಅವಳ ಸ್ವಭಾವ, ವರ್ತನೆ ಮತ್ತು ಬದುಕಿನ ರೀತಿ, ಇವುಗಳು ಪೂರ್ವ ನಿರ್ಣಯಕ್ಕೆ ಒಳಪಟ್ಟುಕೊಂಡು ಇವೆ. ಈ ನೆಲೆಯಲ್ಲಿ ಅವಳ ಸಾಮಾಜಿಕ ಪಾತ್ರವಾಗಿರುವ ಸಂಸ್ಕೃತಿ ನಿರ್ಮಿತಿಯಾದ 'ಲಿಂಗಪ್ರಭೇದ' ವಷ್ಟೇ ಗೋಚರಿಸುವ ಅಪಾಯವಿದೆ. ಅಧೀನ ಸ್ಥಿತಿಯಲ್ಲಿರುವ ಸ್ತ್ರೀ ನಿರ್ವಚನವು ಪುರುಷಪರ ನಿಲುವಿನದಾಗಿರುತ್ತದೆ. ಮುಕ್ತ ಸ್ಥಿತಿಯಲ್ಲಿ ಹೆಣ್ಣಿನ ಸ್ವತಂತ್ರ ವ್ಯಕ್ತಿತ್ವ, ಮನಸ್ಸು ಮತ್ತು ವರ್ತನ ರೀತಿಗಳು ಅನನ್ಯತೆಯನ್ನು ಪಡೆಯುತ್ತದೆ.

ಇದು ಸ್ವ ನಿರ್ವಚನಕ್ಕೆ ಮುಕ್ತವಾಗಿರುವ ಸ್ಥಿತಿ'. 'ವಿಮೋಚಿತ ಸ್ತ್ರೀ ಪರಿಕಲ್ಪನೆ'ಯು ಈ ನಿರ್ವಚನದ ಕೇಂದ್ರಸ್ಥಾನದಲ್ಲಿ ಇರುತ್ತದೆ.

**ಪಾರಂಪರಿಕ ಯೋಚನಾ ಕ್ರಮಗಳು ಮತ್ತು ಸ್ತ್ರೀ ನಿರ್ವಚನ**

ಸಾಂಪ್ರದಾಯಕ ನಿಲುವಿನಿಂದ ಹೋರಡುವ ಅಧ್ಯಯನಗಳಲ್ಲಿ (ಸಮಾಜ ಕೇಂದ್ರಿತ ಅಧ್ಯಯನಗಳಲ್ಲಿ) ಸ್ತ್ರೀ ನಿರ್ವಚನದಲ್ಲಿ ಪಾಲುಗೊಳ್ಳುವ ಮುಖ್ಯ ಅಂಶಗಳೆಂದರೆ - ಸಾಮಾಜಿಕ ವ್ಯವಸ್ಥೆ, ಸಾಮಾಜಿಕ ಮೌಲ್ಯಗಳು ಮತ್ತು ಸಂಸ್ಕೃತಿ ವಿಚಾರಗಳು. ಮಾನವಶಾಸ್ತ್ರ, ಸಮಾಜಶಾಸ್ತ್ರಗಳ ನೆಲೆಯಿಂದ ಮಾನವ ಚರಿತ್ರೆಯನ್ನು ರೂಪಿಸುವ ಅಧ್ಯಯನಗಳು ಹೆಣ್ಣಿನ ಚಾರಿತ್ರಿಕ ಸ್ಥಾನವನ್ನು ಸಾಮಾಜಿಕ ವ್ಯವಸ್ಥೆ, ಸಂಸ್ಕೃತಿ ಮತ್ತು ನಾಗರಿಕತೆಯ ಬೆಳವಣಿಗೆ - ಇವುಗಳ ಬೇರೆ ಬೇರೆ ಹಂತಗಳ ಮೂಲಕವಾಗಿಯೂ ಜೀವನಕ್ರಮದಲ್ಲಿ ಉಂಟಾಗಿರುವ ಬದಲಾವಣೆಗಳು ಮತ್ತು ಸಾಮಾಜಿಕ ಸಂಬಂಧಗಳ ಮೂಲಕವಾಗಿಯೂ ವಿವರಿಸುತ್ತವೆ.

ಸಾಮಾಜಿಕ ವ್ಯವಸ್ಥೆಗೆ ಕೆಲವು ಮೂಲಭೂತ ಆವಶ್ಯಕತೆಗಳಿರುತ್ತವೆ. ಈ ಆವಶ್ಯಕತೆಗಳ ಪೂರೈಕೆಗಾಗಿ ಈ ವ್ಯವಸ್ಥೆಯ ಅಸ್ತಿತ್ವ ಅವಶ್ಯಕವಾಗಿರುತ್ತದೆ. ಸಾಮಾಜಿಕರ(ಸಮಾಜದ ಸದಸ್ಯರ) ನಡುವಿನ ಸಂಬಂಧಗಳು ಒಂದು ಸಾಮಾಜಿಕ ವ್ಯವಸ್ಥೆಯಲ್ಲಿ ಕೆಲವು ನಿಯಮಗಳ ರೂಪದಲ್ಲಿ ರಚನೆಗೊಂಡಿರುತ್ತವೆ.

ಸಾಮಾಜಿಕ ಸಂಬಂಧಗಳು ಈ ರೀತಿಯಲ್ಲಿ ನಿರ್ದೇಶನಕ್ಕೆ ಒಳಪಟ್ಟು ಇರುತ್ತವೆ. ಪೂರ್ವಾನ್ವಯವಾಗುವಂತೆ ನಿರ್ಧರಿಸಲ್ಪಡುವ ಸಾಮಾಜಿಕ ವ್ಯವಸ್ಥೆಯ ವಿನ್ಯಾಸದಲ್ಲಿ ನಿಯಮಗಳು ರೂಪುಗೊಂಡು, ಈ ನಿಯಮಗಳು ಸಂಬಂಧವನ್ನು / ಸಂಬಂಧಗಳನ್ನು ನಿರ್ಧರಿಸುತ್ತವೆ.

'ಮೌಲ್ಯಗಳೆಂದರೆ ಪ್ರಾಮುಖ್ಯತೆ ಪಡೆದಿರುವ ಭಾವನೆಗಳು ಅಥವಾ ಆದರ್ಶಗಳು.' ಸಾಮಾಜಿಕ ಮೌಲ್ಯಗಳು ಸಮಾಜದವರ ವರ್ತನೆಗೆ ನಿರ್ದೇಶಕ ಸೂತ್ರಗಳಾಗಿ ಕಾರ್ಯ ಪ್ರವೃತ್ತವಾಗುತ್ತವೆ. ಈ ಸೂತ್ರಗಳು ನಿಯಮಬದ್ಧತೆಗೆ ನೇರವಾಗಿ ಅಳವಡಿಸಿಕೊಂಡ ವಿಧಾನದಲ್ಲಿ ನಿರ್ದೇಶನಕ್ಕೆ ಒಳಪಡುತ್ತವೆ.

ಈ ವಿವರಗಳೊಂದಿಗೆ ಪಾರಂಪರಿಕ ನಿಲುವಿನಿಂದ ಹೊರಡುವ ಸ್ತ್ರೀ ನಿರ್ವಚನವನ್ನು ಸಾಮಾಜಿಕ ವ್ಯವಸ್ಥೆ ಸಾಮಾಜಿಕ ಮೌಲ್ಯ, ಮತ್ತು ಸಾಮಾಜಿಕ ಸಂಬಂಧಗಳ ಹಿನ್ನೆಲೆಯೊಂದಿಗೆ ತಿಳಿಯುವುದು ಸುಲಭವಾಗುತ್ತದೆ.

ಚರಿತ್ರೆ, ಮಾನವಶಾಸ್ತ್ರ, ಸಮಾಜವಿಜ್ಞಾನ ಮತ್ತು ವಿಜ್ಞಾನದಂತಹ ಜ್ಞಾನಶಿಸ್ತುಗಳು ಸ್ತ್ರೀಯನ್ನು ಸಾಮಾಜಿಕ, ಚಾರಿತ್ರಿಕ, ರಾಜಕೀಯ, ಆರ್ಥಿಕ ಮತ್ತು ಮನೋದೈಹಿಕ ನೆಲೆಯ ಮೂಲಕ ನಿರ್ವಚನಕ್ಕೆ ಒಳಪಡಿಸುವ ಪ್ರಯತ್ನ ಮಾಡುತ್ತವೆ. ಈ ಕ್ಷೇತ್ರದ ಅದ್ಯಯನಗಳು ಸ್ತ್ರೀವ್ಯಕ್ತಿತ್ವ ಸ್ವರೂಪವನ್ನು ಕುರಿತಾಗಿ ಪರಿಶೋಧಿಸುವ ಕ್ರಮದಲ್ಲಿ ಬಾಹ್ಯಪರಿಸರದ ಪ್ರಭಾವ ಪ್ರದಾನನೆಲೆಯಲ್ಲಿ ಗಣನೆಗೆ ಬರುತ್ತವೆ.

ಬಾಹ್ಯಪ್ರೇರಣೆ ಮತ್ತು ಬಾಹ್ಯಪ್ರಭಾವಗಳು ಸ್ತ್ರೀವ್ಯಕ್ತಿತ್ವದ ದೈಹಿಕ ಮತ್ತು ಮಾನಸಿಕ ಸ್ವರೂಪ ನಿರ್ಧಾರದಲ್ಲಿ ಪಾಲುಗೊಳ್ಳುವ ಕಾರ್ಯವೈಖರಿಯನ್ನು ಈ ಅಧ್ಯಯನಗಳು ನಿರೂಪಿಸುತ್ತವೆ. ಈ ಅಧ್ಯಯನಗಳನ್ನು

ಆಧಾರವಾಗಿಟ್ಟುಕೊಂಡು ಹೊರಡುವ ಸ್ತ್ರೀನಿರ್ವಚನದ ವಿಭಿನ್ನ ನೆಲೆಗಳೆಂದರೆ-

೧. ಸಂಪ್ರದಾಯವಾದಿಗಳ ದೃಷ್ಟಿಯಲ್ಲಿರುವ ಸ್ತ್ರೀ ೨. ಆಧುನಿಕ ಯೋಚನಾಕ್ರಮಗಳಲ್ಲಿರುವ ಸ್ತ್ರೀ ಮತ್ತು ೩. ವಿಜ್ಞಾನದ ತಿಳುವಳಿಕೆಯಲ್ಲಿರುವ ಸ್ತ್ರೀ.

### ಸಂಪ್ರದಾಯವಾದಿಗಳ ದೃಷ್ಟಿಯಲ್ಲಿ ಸ್ತ್ರೀ

ಸಂಪ್ರದಾಯವಾದಿಗಳ ಪ್ರಕಾರ ಪುರುಷಪ್ರಧಾನ ವ್ಯವಸ್ಥೆಯು ಸಾರ್ವತ್ರಿಕವಾದುದು. ಈ ವ್ಯವಸ್ಥೆಯಲ್ಲಿರುವ ಲಿಂಗಾಧಾರಿತ ಶ್ರಮವಿಭಜನೆ ಮತ್ತು ಅಂಗಪ್ರಭೇದ ಕಲ್ಪನೆಯನ್ನು ಧಾರ್ಮಿಕನೆಲೆಯಿಂದ ವಿವರಿಸುವುದು ಸಾಧ್ಯವಿದೆ.

'ದೇವರಸೃಷ್ಟಿ ಸ್ತ್ರೀಯನ್ನು ಪಾತ್ರನಿರ್ದಿಷ್ಟತೆಗೆ ಒಳಪಡಿಸಿರುವಂಥದು. ಸ್ತ್ರೀಗೆಂದೇ ಪ್ರತ್ಯೇಕ ಜೈವಿಕ ಕಾರ್ಯವನ್ನು ನೀಡಿರುವುದು ಈ ಸೃಷ್ಟಿಯ ಉದ್ದೇಶವೆ ಆಗಿದೆ'. ಅಂಗಪ್ರಭೇದ ಕಲ್ಪನೆಯ ಶ್ರಮವಿಭಜನೆಯನ್ನು ಈ ವಾದ ದೈವೀಕಾರಣವನ್ನು ಮುಂದಿಟ್ಟು ಸಮರ್ಥನೆ ನೀಡುತ್ತದೆ. ಇಲ್ಲಿ ದೈವೀಕೊಡುಗೆಯಾಗಿ ಸ್ತ್ರೀ ವ್ಯಕ್ತಿತ್ವವಿದೆ; ಪ್ರಕೃತಿ ಸಹಜ ರೂಪದಲ್ಲಿ ಅವಳ ವ್ಯಕ್ತಿತ್ವ ಸ್ವೀಕರಣೆ ಇದೆ.

ಸಂತಾನಾಭಿವೃದ್ಧಿಕಾರ್ಯದಲ್ಲಿ ತೊಡಗಿಸಿಕೊಳ್ಳುವುದು ಸ್ತ್ರೀಯ ಮೂಲಸ್ವಭಾವವೆಂದೇ ಇಲ್ಲಿ ಪರಿಗಣಿಸಲಾಗಿದೆ. ಸ್ತ್ರೀ ಸಂತತಿಯ ಪೋಷಣೆ ಕಾರ್ಯದಲ್ಲಿ ತೊಡಗಿಕೊಳ್ಳುವುದು, ಪುರುಷ ದುಡಿಮೆಯ ಹೊಣೆಗಾರಿಕೆ ಮೂಲಕ, ದೈಹಿಕ ಶ್ರಮಗಾರಿಕೆಯಲ್ಲಿ ಪ್ರಧಾನವಾಗಿ ಕಾಣಿಸಿಕೊಳ್ಳುವುದು ಲಿಂಗಾಧಾರಿತ ಶ್ರಮ ವಿಭಜನೆಯ ಮೂಲವಿಧಾನವಾಗಿಯೇ ಸ್ವೀಕೃತವಾಗಿದೆ ಈ ಸಂದರ್ಭದಲ್ಲಿ.

### ಆಧುನಿಕ ಯೋಚನಾಕ್ರಮದಲ್ಲಿ ಸ್ತ್ರೀ

ಆಧುನಿಕ ಯೋಚನಾಕ್ರಮದ ಸಮರ್ಥನೆಗಳು ಜೀವವಿಕಾಸವಾದದ ಆಧಾರದ ಮೂಲಕ ಹೊರಡುತ್ತವೆ. "ಒಂದು ಸಾಮಾಜಿಕ ಗುಂಪಿನ ಉಳಿಯುವಿಕೆಯಲ್ಲಿ ಸ್ತ್ರೀಯ ಜೈವಿಕಕಾರ್ಯವು ಬಹು ಮುಖ್ಯ ಪಾತ್ರವನ್ನು ನಿರ್ವಹಿಸುತ್ತದೆ. ಗುಂಪಿನ ಉಳಿವಿನ ಆಸಕ್ತಿಯಲ್ಲಿ ಅವಳನ್ನು ಪಾತ್ರನಿರ್ದಿಷ್ಟತೆಗೆ ಒಳಪಡಿಸಿಕೊಂಡು ಇತರ ವಿಚಾರಗಳಿಂದ ದೂರವಿಡುವುದು ಅನಿವಾರ್ಯ ಮತ್ತು ಅಗತ್ಯವೂ ಹೌದು". ತಿಳುವಳಿಕೆ ಮತ್ತು ಜ್ಞಾನದ ಅರಿವು ಸ್ತ್ರೀಗೆ ಬೇಕಾಗಿರುವುದಿಲ್ಲ ಯಾಕೆ ಎನ್ನುವ ಪ್ರಶ್ನೆಗೆ ಮೇಲಿನ ಉತ್ತರವನ್ನು ದೊರಕಿಸಲಾಗಿದೆ. ಇಲ್ಲಿ ಕೂಡಾ ಸ್ತ್ರೀಯ ಸಂತಾನಾಭಿವೃದ್ಧಿಕಾರ್ಯವೇ ಅವಳ ನಿರ್ವಚನದ ಕೇಂದ್ರ ಸ್ಥಾನದಲ್ಲಿ ಇದೆ.

ಚರಿತ್ರೆ, ಜ್ಞಾನ ಮತ್ತು ಸಂಕೇತ ವ್ಯವಸ್ಥೆಗಳಿಂದ ಸ್ತ್ರೀ ಸಮುದಾಯವನ್ನು ಹೊರಗಿಡುವುದರ ಮೂಲಕ ಸ್ತ್ರೀಯನ್ನು ಪೂರ್ಣರೀತಿಯಲ್ಲಿ ಜೈವಿಕ ಕಾರ್ಯಕ್ಕೆ ಸೀಮಿತಗೊಳಿಸಿರುವ ವಿಧಾನದ ಹಿನ್ನಲೆಯಾಗಿ ಈ ಯೋಚನಾಕ್ರಮವನ್ನು ಗಮನಿಸಬೇಕಾಗಿದೆ.

### ವಿಜ್ಞಾನದ ತಿಳುವಳಿಕೆಯಲ್ಲಿರುವ ಸ್ತ್ರೀ

ಮಾನಸಿಕವಾಗಿ ತನ್ನ ನಿಗದಿತ ಸಾಮಾಜಿಕ ಪಾತ್ರನಿರ್ವಹಣೆಗೆ ಒಗ್ಗಿಕೊಂಡ ರೀತಿಯಲ್ಲಿ ಸ್ತ್ರೀ ವ್ಯಕ್ತಿತ್ವವು ರೂಪಗೊಳ್ಳುತ್ತದೆ. ಇಲ್ಲಿ ಕುಟುಂಬ ಮತ್ತು ಸಮಾಜದ ಸಾಂಸ್ಕೃತಿಕ ಪರಿಸರದ ಪ್ರಭಾವ ಗುರುತರವಾದದು. ವಿಜ್ಞಾನದ ದೃಷ್ಟಿಯಲ್ಲಿ - 'ಸಾರ್ವತ್ರಿಕ ಮಾನವ ಕಲ್ಪನೆಯ ಮಾದರಿಯು ಪುರುಷ ದೇಹವಾಗಿದೆ'. ಈ ಹಿನ್ನಲೆಯಲ್ಲಿ ಸ್ತ್ರೀದೇಹವು ಮೂಲಪುರುಷ ದೇಹದ ಹೋಲಿಕೆಯಲ್ಲಿ ಅಸ್ಪೂರ್ಣರೂಪವಾಗಿದೆ.

ದೈಹಿಕ ಹೋಲಿಕೆ ಮೂಲಕ ಗಂಡನ್ನು ಪರಿಪೂರ್ಣವೆಂದು, ಅಸಮತೆಯ ಆಧಾರದಲ್ಲಿ ಸ್ತ್ರೀಯನ್ನು ಅಪೂರ್ಣವೆಂದು ವಿಜ್ಞಾನ, ಅದರಲ್ಲಿಯೂ ಮುಖ್ಯವಾಗಿ ಮನಶ್ಯಾಸ್ತ್ರ ವಿವರಿಸುತ್ತದೆ. ಅರಿಸ್ಟಾಟಲನಿಂದ ಫ್ರ್ಯಾಡ್‌ವರೆಗಿನ ವೈಜ್ಞಾನಿಕ ತಿಳುವಳಿಕೆ ಸ್ತ್ರೀಯನ್ನು ಸ್ತ್ರೀಯೆಂದು ಪರಿಗಣಿಸದೆ, ಗಂಡಿನೊಡನೆ ಹೋಲಿಸುವುದರ ಮೂಲಕ 'ವಿಕಲಾಂಗ ಪುರುಷ' (Mutelated Male) ಎಂದು ವ್ಯಾಖ್ಯಾನಿಸುತ್ತದೆ.

ಪಾರಂಪರಿಕ ಯೋಚನಾಕ್ರಮಗಳು ಸಮಕಾಲೀನ ಚಿಂತನೆಗೆ ವಿರೋಧನೆಲೆಯಲ್ಲಿ ಯಾಕೆ ಕಾಣಿಸಿಕೊಳ್ಳುತ್ತವೆ ಎನ್ನುವುವಕ್ಕೆ ಈ ಕೆಳಗಿನಂತೆ ವಿವರಣೆ ನೀಡಬಹುದಾಗಿದೆ: 'ಯಾವುದೇ ರೀತಿಯ ಪ್ರಮುಖ ಸಾಮಾಜಿಕ ಅಭಿವ್ಯಕ್ತಿಯು ಆ ಸಮಾಜದ ಪ್ರಧಾನ ಸ್ಥಾನದಲ್ಲಿರುವ ಸಂಸ್ಕೃತಿ ಮೂಲಕ ವ್ಯಕ್ತವಾಗುವ ವಿಚಾರಗಳ ಅಭಿವ್ಯಕ್ತಿಯೇ ಆಗಿರುತ್ತದೆ. ಈ ಸಂದರ್ಭದಲ್ಲಿ ಇತರ / ಉಪಸಂಸ್ಕೃತಿಗಳ ಅಭಿವ್ಯಕ್ತಿಯ ಮುಂದಿರುವ ಎರಡು ಆಯ್ಕೆಗಳೆಂದರೆ - ಪ್ರಧಾನ ಸಂಸ್ಕೃತಿಯೊಂದಿಗೆ ಅದರ ಹಾದಿಯಲ್ಲಿಯೇ ತಾನೂ ಮುಂದುವರಿದು ತನ್ನನ್ನು ತಾನು ವ್ಯಕ್ತಗೊಳಿಸಿಕೊಳ್ಳುವುದು ಅಥವಾ ಪ್ರಧಾನ ಸಂಸ್ಕೃತಿಯ ರೀತಿಯಲ್ಲಿಯೇ ತನ್ನನ್ನು ಅಭಿವ್ಯಕ್ತಿಸಿಕೊಳ್ಳುವುದು. ಎರಡನೇ ಆಯ್ಕೆಯಲ್ಲಿ ಎರಡೂ ಸಂಸ್ಕೃತಿಧಾರೆಗಳು ಪರಸ್ಪರ ಸಂವಾದಿಗಳಾಗುತ್ತವೆ'.

ಚರಿತ್ರೆಯಲ್ಲಿ ಸ್ತ್ರೀ ಅಭಿವ್ಯಕ್ತಿ ಪುರುಷಾಭಿವ್ಯಕ್ತಿಯ ಪ್ರಧಾನನೆಲೆಯ ಮೂಲಕ ಕಾಣಿಸಿಕೊಂಡಿದೆ. ಇಲ್ಲಿ ಸ್ತ್ರೀ ನಿರ್ವಚನವೇನಿದ್ದರೂ ಪುರುಷಪರವಾಗಿ ನಿಂತು ವಿವರಣೆ ನಿಡುವುದು ಮತ್ತು/ ಅಥವಾ ಪುರುಷಪ್ರಜ್ಞೆಯ ನಿರ್ವಚನಕ್ಕೆ ಒಪ್ಪಿಕೊಂಡು ಬಿಡುವುದು. ಸ್ತ್ರೀ ಭಾಗವಹಿಸುವಿಕೆ ಇಲ್ಲದಿರುವ/ ಕನಿಷ್ಟವಾಗಿರುವ ಯಾವುದೇ ಸಂರಚನೆಗಳನ್ನು ಗಮನಿಸುವಾಗ ಈ ಅಂಶಸ್ಪಷ್ಟವಾಗುತ್ತದೆ.

ಸ್ತ್ರೀ - ಸ್ತ್ರೀ ಸಮುದಾಯದ ಪರವಾಗಿ ನಿಂತುಕೊಳ್ಳುವ ಸಂಭಾವ್ಯತೆಗಳು ಇಲ್ಲಿ ತುಂಬಾ ಕಡಿಮೆಯಾಗಿರುತ್ತವೆ.

ಈ ಕಾರಣಗಳನ್ನು ಹಿನ್ನಲೆಯಲ್ಲಿ ಇಟ್ಟುಕೊಂಡು ಲಿಂಗಾಧಾರಿತ ಅಧ್ಯಯನಗಳು ಹೊರಡುತ್ತವೆ. ಲಿಂಗಾಧಾರಿತ ಅಧ್ಯಯನಗಳು ಸ್ತ್ರೀ ನಿರ್ವಚನದಲ್ಲಿ ಪಾಲುಗೊಳ್ಳುವ ವಿಚಾರಗಳತ್ತ ಹೆಚ್ಚು ಗಮನವನ್ನು ಹರಿಸುವ ಅಧ್ಯಯನಗಳಾಗಿವೆ. ಈ ಕ್ಷೇತ್ರದಲ್ಲಿ ನಡೆದಿರುವ ಸಾಂಸ್ಕೃತಿಕ, ರಾಚನಿಕ ಮತ್ತು ಪ್ರತಿಮಾತ್ಮಕ ಅಧ್ಯಯನಗಳು 'ಲಿಂಗಪ್ರಭೇದ ಸಂಸ್ಕೃತಿ ನಿರ್ಮಿತಿ' ಕುರಿತು ನಡೆದಿರುವ ಅಧ್ಯಯನಗಳೇ ಆಗಿವೆ. ಅಧ್ಯಯನದ ಮುಖ್ಯ ವಿಶ್ಲೇಷಣೆಯು ಮನುಷ್ಯ ಪರಿಕಲ್ಪನೆಯ ಕುರಿತಾಗಿಯೇ ಇದೆ. ಮತ್ತು ಸಂಸ್ಕೃತಿ ನಿರ್ಮಿತ ಎನಿಸಲಾಗಿರುವ ಲಿಂಗಪ್ರಭೇದದ ನಿರ್ಮಿತಿಯಲ್ಲಿ ಪಾತ್ರವಹಿಸುವ ಮುಖ್ಯ ಅಂಶಗಳತ್ತ ಈ ಅಧ್ಯಯನಗಳು ಗಮನ ಹರಿಸುತ್ತವೆ.

ಅವುಗಳೆಂದರೆ -

೧. ಅಧಿಕಾರಕೇಂದ್ರ ೨. ಬಂಧುತ್ವದ ರಚನೆಗಳು ೩. ವಿವಾಹ ಪದ್ಧತಿ ೪. ಶ್ರೇಣೀಕರಣ ೫. ಪಾವಿತ್ರ್ಯತೆ, ಮಾಲಿನ್ಯದ ಕಲ್ಪನೆಗಳು, ೬. ಆಚರಣೆಗಳು ಮತ್ತು ಸಂಪ್ರದಾಯಗಳು.

'ಲಿಂಗಪ್ರಭೇದವೆಂದರೆ ಲಿಂಗಾಧಾರಿತ ಪಾತ್ರನಿರ್ವಹಣೆಯೇ ಆಗಿದೆ. ಇದು ಪ್ರಕೃತಿ ಸಹಜವಾದುದಲ್ಲ. ಸಮಾಜ ಮತ್ತು ಸಂಸ್ಕೃತಿ ಮೂಲಕ ಪಾತ್ರನಿರ್ದಿಷ್ಟತೆಗೆ ಕಂಡರಿಸಲಾದ ವರ್ತನೆಗಳಾಗಿವೆ. ಮೂಲಪ್ರವೃತಿ ಎಂಬ ತಪ್ಪುಗ್ರಹಿಕೆ ಇಲ್ಲಿರುವ ಕಾರಣ ಲಿಂಗಪ್ರಭೇದವನ್ನು ಆಧರಿಸಿದ ಯಾವುದೇ ನಿರ್ವಚನಗಳು ವರ್ತನಾವಿಶೇಷಗಳನ್ನು ಮೂಲ ಸ್ವಭಾವವಾಗಿ ಗುರುತಿಸಿಕೊಳ್ಳುವ ಅಪಾಯಕ್ಕೆ ಗುರಿಯಾಗುತ್ತವೆ' - ಲಿಂಗಧಾರಿತ ಅಧ್ಯಯನಗಳು ಲಿಂಗಪ್ರಭೇದವನ್ನು ಹೀಗೆ ವಿವರಿಸುತ್ತದೆ.

ಸಾಂಪ್ರದಾಯಕ ನಿಲುವು, ವಿಜ್ಞಾನದ ತಿಳುವಳಿಕೆ, ಇವುಗಳಿಂದ ಹೊರಡುವ ಸ್ತ್ರೀನಿರ್ವಚನಗಳು ಈ ಹಿನ್ನೆಲೆಯಿಂದ ಮರುವ್ಯಾಖ್ಯಾನಕ್ಕೆ ಒಳಪಡಬೇಕಾಗಿದೆ ಎಂಬುದು ಇಲ್ಲಿಯ ನಿಲುವು.

ಲಿಂಗಾಧಾರಿತ ಪಾತ್ರ ನಿರ್ವಹಣೆಯಲ್ಲಿ ಎರಡು ಲಿಂಗಗಳ ನಡುವಿನ ವ್ಯತ್ಯಾಸಗಳು ಸಾಮಾಜಿಕ ವರ್ತನೆಗಳ ಮೂಲಕ ವ್ಯಕ್ತವಾಗಿವೆ. ಸಾಮಾಜಿಕ ಚಟುವಟಿಕೆಗಳಲ್ಲಿ ಗುರುತಿಸಿಕೊಳ್ಳುವ ಈ ವರ್ತನೆಗಳು ಮೂಲಸ್ವಭಾವವಾಗಿರುವುದು ಸಾಧ್ಯವಿಲ್ಲ. ಹುಟ್ಟಿನಿಂದ ಬಂದ ಲಿಂಗಜಾತಿಯು ಸಾಮಾಜಿಕರಣದ ಮೂಲಕ ಲಿಂಗಪ್ರಭೇದವಾಗಿ ರೂಪುಗೊಳ್ಳುತ್ತದೆ. ಇಲ್ಲಿ ವ್ಯಕ್ತಿ ಬೆಳೆಯುವ ಪರಿಸರದ ಪಾತ್ರ ಗುರುತರವಾದುದು. ನಡವಳಿಕೆಯ ಲಕ್ಷಣಗಳು ವ್ಯಕ್ತಿತ್ವದ ಲಕ್ಷಣಗಳಾಗಿ ಆರೋಪಿತವಾಗಿದೆ.

ಸಮಾಜ ತನ್ನ ಕಾರ್ಯ ಸಫಲತೆಗಾಗಿ ಇಂಥ ವ್ಯಕ್ತಿತ್ವದ ಆರೋಪಣೆಗೆ ಬೆಂಬಲ ಸೂಚಿಸುತ್ತದೆ. ವ್ಯಕ್ತಿಯ ಪಾತ್ರನಿರ್ಣಯದೊಂದಿಗೆ, ಸ್ವಭಾವ ನಿರ್ಣಯ ಮತ್ತು ಬದುಕಿನ ಗುರಿ ನಿರ್ಣಯಗಳು ನಡೆಯುವುದರಿಂದ ಅನ್ಯಸಾಧ್ಯತೆಗಳಿಗೆ ಅವಕಾಶ ದೊರೆಯದಂತಹ ಸನ್ನಿವೇಶ ಉದ್ಭವವಾಗಿದೆ. ಆದುದರಿಂದ ಸ್ತ್ರೀಯ ಸಾಮಾಜಿಕ ಪಾತ್ರನಿರ್ವಹಣೆಯು ಲಿಂಗಸಂಬಂಧಿಯಾಗುವುದರೊಂದಿಗೆ ಸಮಾಜದ ನಿರೀಕ್ಷೆಯ ಫಲವು ಆಗಿದೆ. ಇಲ್ಲಿ ಸಮಾಜದ ನಿರೀಕ್ಷೆಯಲ್ಲಿರುವ ಸ್ತ್ರೀಯಂದರೆ-

ಪುರುಷ ಸಂಬಂಧದ ಮೂಲಕ ನಿರ್ವಚಿಸಿಕೊಳ್ಳುವ ಸ್ತ್ರೀಯೇ ಆಗಿದ್ದಾಳೆ. ಪತ್ನಿ, ಮಾತೆ ಅಥವಾ ಇತರ ಸಾಮಾಜಿಕ ಸಂಬಂಧಗಳ ಮೂಲಕ ಸ್ತ್ರೀಯನ್ನು ಸಮಾಜ ನಿರೀಕ್ಷೆಯೊಳಗೆ ಕಾಣಬಹುದೇ ವಿನಹ ಅನನ್ಯ ಸ್ತ್ರೀ ರೂಪದಲ್ಲಿ ಕಾಣವುದು ಸಾಧ್ಯವಿಲ್ಲ.

ಜೈವಿಕ ಕಾರಣವನ್ನು ಮುಂದಿಟ್ಟುಕೊಂಡು ಸಾಂಸ್ಕೃತಿಕ ವ್ಯಾಖ್ಯಾನಗಳ ಮೂಲಕ ಸ್ತ್ರೀ ವ್ಯಕ್ತಿತ್ವವನ್ನು ವಿವರಿಸುವುದು ಮತ್ತು ಸ್ತ್ರೀ ಅಭಿವ್ಯಕ್ತಿಯ ಮೂಲಕ ಅವಳನ್ನು ವಿವರಿಸುವುದು ಎರಡು ಭಿನ್ನರೂಪದ ಕ್ರಮಗಳಾಗಿದೆ.

ಸ್ತ್ರೀ ಅಭಿವ್ಯಕ್ತಿಗೆ ಅಡ್ಡಿರೂಪದಲ್ಲಿರುವ ವ್ಯವಸ್ಥೆಯ ಮೂಲವನ್ನು ಮತ್ತು ಸ್ತ್ರೀ ಅಭಿವ್ಯಕ್ತಿಗೆ ಅವಕಾಶ

ನೀಡಿರಬಹುದಾದ ಸಾಧ್ಯತೆಗಳ ಮೂಲವನ್ನು ಕಂಡುಕೊಳ್ಳಬೇಕಾದುದು ಸ್ತ್ರೀ ನಿರ್ವಚನದ ಆಯಾಮಗಳಲ್ಲಿ ಬಹುಮುಖ್ಯದ್ದಾಗಿದೆ.

ಸ್ತ್ರೀ ಅಭಿವ್ಯಕ್ತಿಗೆ ಅಡ್ಡಿ ಸ್ವರೂಪದಲ್ಲಿರುವುದು ಅಂಗಪ್ರಭೇದ ಕಲ್ಪನೆಯೇ. ಅಂಗಪ್ರಭೇದ ಕಲ್ಪನೆಗೆ ಅವಕಾಶ ನೀಡಿರುವ ಸಾಂಸ್ಕೃತಿಕ ಪರಿಸರ ಮತ್ತು ಸಾಮಾಜಿಕ ವ್ಯವಸ್ಥೆಯ ಘಟಕಗಳು ಇಲ್ಲಿ ಮರುಪರೀಶಿಲನೆಗೆ ಗುರಿಯಾಗುತ್ತವೆ. ಮರುಪರಿಶೀಲನೆಗೆ ಅವಕಾಶ ಕೊಡಬೇಕಾದ ಈ ರೀತಿಯ ಘಟಕಗಳೆಂದರೆ: ಸ್ತ್ರೀ ಪರಿಕಲ್ಪನೆಯಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸುವ ಅಧಿಕಾರ ಕೇಂದ್ರಗಳು, ವಿವಾಹಸಂಬಂಧಗಳು ಮತ್ತು ಬಂಧುತ್ವದ ರಚನೆಗಳು.

ಸ್ತ್ರೀ ನಿರ್ವಚನದಲ್ಲಿ ಅಧಿಕಾರ ಕೇಂದ್ರದ ರೂಪದಲ್ಲಿ ಪಿತೃಪ್ರಧಾನತೆಯನ್ನು ಪರಿಗಣಿಸಿಬಹುದಾಗಿದೆ. 'ಪಿತೃಪ್ರಧಾನತೆಯು ಪಿತೃಶಾಸನವುಳ್ಳ ಅಧಿಕಾರ ಕೇಂದ್ರಿತ ವ್ಯವಸ್ಥೆಯಾಗಿದೆ.'[೨] ಪಿತೃಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯರದು ಅಧೀನಸ್ಥಿತಿಯಿರುತ್ತದೆ. ಸ್ತ್ರೀಪುರುಷ ಅಸಮಾನತಾ ಕಲ್ಪನೆಯನ್ನು ಪಿತೃಪ್ರಧಾನ ವ್ಯವಸ್ಥೆಯು ಹೆಚ್ಚು ಕಡಿಮೆ ಬೆಂಬಲಿಸುತ್ತದೆ. ಪಿತೃ ಪ್ರಧಾನ ವ್ಯವಸ್ಥೆಯ ಉಗಮ ಮತ್ತು ವಿಕಾಸವನ್ನು ಚರಿತ್ರೆಯ ಹಿನ್ನೆಲೆಯಲ್ಲಿ ವಿಶ್ಲೇಷಣೆಗೆ ಗುರಿಪಡಿಸಿರುವ ಗೆರ್ಡಾಲರ್ನರ್[೩] ಹೇಳುವ ಪ್ರಕಾರ ಪಿತೃಪ್ರಧಾನತೆಯು ಕ್ರಿಸ್ತಪೂರ್ವ ೬ನೇ ಶತಮಾನದಲ್ಲಿ ವಿಧಿವತ್ತಾಗಿ ಸ್ಥಾಪಿಸಲ್ಪಟ್ಟಿತು. ಆ ಕಾಲದಲ್ಲಿದ್ದ ಪ್ರಭುವರ್ಗ, ಅಧಿಕಾರ ವರ್ಗ ನಿರ್ದಿಷ್ಟಕಾರಣಗಳನ್ನು ಮುಂದಿಟ್ಟು ಕೆಳವರ್ಗದ ಜನರನ್ನು ಮತ್ತು ಸ್ತ್ರೀಯರನ್ನು ಪ್ರತ್ಯೇಕವಾಗಿ ಇಟ್ಟು ನೋಡಲು ಪ್ರಾರಂಭಿಸಿತು. ಈ ಪ್ರತ್ಯೇಕೀಕರಣದ ವಿರುದ್ಧ ನಡೆದಿರುವ ಹೋರಾಟಗಳು ಚರಿತ್ರೆಯಲ್ಲಿ ನಮಗೆ ದೊರೆಯುತ್ತವೆ. ವರ್ಗಭೇದನೀತಿಯನ್ನು ಎದುರಿಸಿ ನಡೆಸಿದ ಹೋರಾಟಗಳ ಕತೆಗಳಲ್ಲಿ ಇದೇ ನೆಲೆಯಿಂದ ಸ್ತ್ರೀ ಪ್ರತಿಭಟಿಸಿ ಹೋರಾಡಿದ ದಾಖಲೆಗಳು ಮಾತ್ರ ನಮಗೆ ಸಿಗಲಾರದು ಎಂದು ಲರ್ನರ್ ಹೇಳುತ್ತಾರೆ.

ಪ್ರಾಚೀನವು ಸಾರ್ವತ್ರಿಕವೂ ಎನಿಸಿರುವ ಪಿತೃಪ್ರಧಾನ ವ್ಯವಸ್ಥೆಯ ರೀತಿಯಲ್ಲಿಯೇ ಮಾತೃಪ್ರಧಾನ ವ್ಯವಸ್ಥೆಯು ಇದ್ದಿರಬಹುದಾದ ಸಾಧ್ಯತೆಗಳಿವೆ. ಸ್ತ್ರೀಯ ಅಧೀನ ಸ್ಥಿತಿ ಮತ್ತು ಸ್ತ್ರೀ ಪುರುಷ ನಡುವಿನ ಅಸಮಾನತೆಗಳು ಕಾಲಾನುಕ್ರಮದಲ್ಲಿ ಉಂಟಾಗಿರುವ ಪರಿಸ್ಥಿತಿಗಳಾಗಿರಬಹುದು. ಮಾತೃಪ್ರಧಾನತೆಯ ಸಾಧ್ಯತೆಗಳ ಹುಡುಕಾಟ ಸ್ತ್ರೀ ಅಧಿಕಾರ ಕೇಂದ್ರದಲ್ಲಿ ಇದ್ದಿರಬಹುದಾದ ಅವಕಾಶಗಳ ಕುರಿತು ಯೋಚಿಸುತ್ತದೆ. ಮಾನವ ಇತಿಹಾಸದಲ್ಲಿ ಕುಟುಂಬದ ಸಂಗೋಪನ ಕಾರ್ಯಗಳಲ್ಲಿ ಸ್ತ್ರೀ ಮುಖ್ಯ ಪಾತ್ರವಹಿಸಬೇಕಾಗಿದ್ದು ಅವಳಿಗೆ ಮಹತ್ವದ ಸ್ಥಾನವನ್ನು ಸಮಾಜ ಕೊಟ್ಟಿರಬಹುದು; ಒಂದು ಸಮಾಜದ ಕಟ್ಟುವಿಕೆಯಲ್ಲಿ, ಒಂದು ಸಂಸ್ಕೃತಿ ನಿರ್ಮಾಣಕಾರ್ಯದಲ್ಲಿ ಸ್ತ್ರೀಪುರುಷ ಸಹಭಾಗಿತ್ವ ಪರಸ್ಪರ ಪೂರಕವಾಗಿಯೇ ಇರಬೇಕಾಗಿದೆ. ಆದುದರಿಂದ ಸ್ತ್ರೀ ನಿರ್ವಚನದಲ್ಲಿ ಸ್ತ್ರೀ ಅಧಿಕಾರ ಸ್ಥಾನದಲ್ಲಿದ್ದು ಬದುಕಿರಬಹುದಾದ ಚಾರಿತ್ರಿಕತೆಗೆ ಮಹತ್ವವಿದೆ. ಮಾತೃಪ್ರಧಾನ ಸಮಾಜ, ಮಾತೃಮೂಲೀಯ ಕುಟುಂಬ ವ್ಯವಸ್ಥೆಯಲ್ಲಿ ಸ್ತ್ರೀಗೆ ಪುರುಷನಿಗಿರುವಷ್ಟೇ ಸ್ವಾತಂತ್ರ್ಯ, ಹಕ್ಕುಬಾಧ್ಯತೆಗಳು ಮತ್ತು ಸ್ಥಾನಮಾನಗಳು ದೊರೆಯುತ್ತವೆ. ಮಾತೃದೇವತಾರಾಧನೆ, ಪುರಾಣಕಲ್ಪನೆ ಮತ್ತು ಸಾಂಕೇತಿಕತೆಗಳಲ್ಲಿ ಈ ವ್ಯವಸ್ಥೆಗೆ ಆಧಾರವನ್ನು ಕಂಡುಕೊಳ್ಳುವ ಪ್ರಯತ್ನ ನಡೆದಿದೆ. ಮಾತೃಪ್ರಧಾನತೆಯಲ್ಲಿ ಎಲ್ಲ/ಹಲವು ಅಧಿಕಾರ ಕೇಂದ್ರಗಳು

ಹೆಣ್ಣಿನ ಅಧೀನವಾಗಿರುತ್ತವೆ. ಇದರಲ್ಲಿ ಪುರುಷವರ್ಗದ ಮೇಲಿನ ನಿಯಂತ್ರಣವೂ ಸೇರುತ್ತದೆ. ಮಾತೃಪ್ರಧಾನ ವ್ಯವಸ್ಥೆಯ ಆಸ್ತಿತ್ವವನ್ನು ೧೯೬೦ರ ತನಕ ಮಾನವಶಾಸ್ತ್ರದ ವ್ಯಾಸಂಗಕಾರರು ಒಪ್ಪಿರಲಿಲ್ಲ, ಆದರೆ ೧೯೭೦ರ ದಶಕದಲ್ಲಿ ಸ್ತ್ರೀಪರ ಹೋರಾಟಗಳು. ಜಾಗೃತಿ ಮೂಡಿಸಿದುದರ ಫಲದಿಂದ, ಈಗ ಮಾತೃಪ್ರಧಾನ ವ್ಯವಸ್ಥೆಯನ್ನು ತಿಳಿದುಕೊಳ್ಳುವ ವಿಚಾರ ಮರುಪರಿಶೀಲನೆಗೆ ಒಳಗಾಗಿದೆ. ಪಿತೃಪ್ರಧಾನ ವ್ಯವಸ್ಥೆಯ ಅಧಿಕಾರ ಕೇಂದ್ರದಲ್ಲಿ ಸ್ತ್ರೀಯನ್ನು ಎಲ್ಲ ರೀತಿಯಿಂದಲೂ ನಿಯಂತ್ರಣಕ್ಕೆ ಒಳಪಡಿಸಲಾಗುತ್ತದೆ. ಈ ವ್ಯವಸ್ಥೆ ಸ್ತ್ರೀಯ ಅಧೀನಸ್ಥಿತಿಯ ಅವಳ ವ್ಯಕ್ತಿತ್ವವನ್ನು ದುರ್ಬಲವೆಂದು ಪರಿಗಣಿಸಿರುವುದು ಮತ್ತು ಅವಳಿಗೆ ಬೇಕಾದ ಸ್ವಾತಂತ್ರ್ಯ, ಹಕ್ಕುಬಾಧ್ಯತೆ ಮತ್ತು ಬದುಕುವ ಸಾಧ್ಯತೆಗಳನ್ನು ನಿಯಂತ್ರಣಕ್ಕೆ ಒಳಪಡಿಸಿರುವುದನ್ನು ಸೂಚಿಸುತ್ತದೆ. ಈ ನಿಯಂತ್ರಣದ ಮೂಲಕವೇ ಸ್ತ್ರೀವ್ಯಕ್ತಿತ್ವದ ಅಪೂರ್ಣತೆಯ ಕಲ್ಪನೆ ಹೊರಡುತ್ತದೆ. 'ಮೂಲದಲ್ಲಿದ್ದ ಸ್ತ್ರೀ ಅಧಿಕಾರ ವ್ಯವಸ್ಥೆಯನ್ನು ಪುರುಷಾಧಿಕಾರ ಹಂತಹಂತವಾಗಿ ಹಿಮ್ಮೆಟ್ಟಿಸಿ ತನ್ನ ಸ್ಥಾನವನ್ನು ಬಲಪಡಿಸಿಕೊಂಡಿದುರ ಕಾರಣವಾಗಿ ಸ್ತ್ರೀ ತನ್ನ ಸ್ವಾತಂತ್ರ್ಯ, ಸಮಾನತೆ ಅಥವಾ ಹಿರಿಮೆ, ಮತ್ತು ಬದುಕುವ ಅಧಿಕಾರವನ್ನು ಅದೇ ರೀತಿ ಕಳೆಯುತ್ತ ಬಂದು ನಿರ್ಬಂಧಿತ ಸ್ಥಿತಿ ಮುಟ್ಟುವ ಹಂತ ತಲುಪಿದಳು. ಆದುದರಿಂದ ಸ್ತ್ರೀಯ ಅಧೀನ ಸ್ಥಿತಿಯು ಸಾರ್ವತ್ರಿಕವಾದುದಲ್ಲ; ಪುರುಷ ಕೇಂದ್ರಿತ ಪ್ರಜ್ಞೆ ಅದಕ್ಕೆ ಅವಕಾಶವನ್ನು ನೀಡಿದೆ,. ಎನ್ನುವ ವಾದಕ್ಕೆ ಏಂಗೆಲ್ಸ್‌ನ ವಿಶ್ಲೇಷಣೆ, ಲೆವಿಸ್ಟ್ರಾಸ್ ವಿಶ್ಲೇಷಣೆಗಳು ಪುರಾವೆಗಳನ್ನು ನೀಡುತ್ತವೆ. ಚರಿತ್ರೆಯಲ್ಲಿ ಹೆಣ್ಣಿನ ಸ್ಥಾನಮಾನವನ್ನು ಕಂಡುಕೊಳ್ಳಲು ಈ ವಿಶ್ಲೇಷಣೆಗಳು ಉಪಯೋಗವಾಗುತ್ತವೆ.

ಏಂಗೆಲ್ಸ್ ವಿಶ್ಲೇಷಣೆಯು ವಿವಾಹಪದ್ಧತಿ ಮತ್ತು ವೇಶ್ಯಾಪದ್ಧತಿಗಳ ಸಾಂಸ್ಥಿಕ ರಚನೆಗಳ ಕುರಿತಾಗಿ ಇದೆ. 'ಚರಿತ್ರೆಯಲ್ಲಿ ವರ್ಗಭೇದ ಕಾಣಿಸಿಕೊಂಡಿರುವುದು ಮತ್ತು ಗಂಡು-ಹೆಣ್ಣಿನ ನಡುವೆ ವಿವಾಹಪದ್ಧತಿ (ಏಕಪತ್ನಿತ್ವ)ಯೊಂದಿಗೆ ಕಾಣಿಸಿಕೊಂಡ ವೈರುಧ್ಯಗಳು ಪರಸ್ಪರ ಒಂದೇ ಅವಧಿಯವುಗಳಾಗಿವೆ. ಸ್ತ್ರೀ ಮೇಲಿನ ಅಧಿಕಾರ ಸ್ಥಾಪನೆ ಇದೇ ಅವಧಿಯಲ್ಲಿ ವೈವಾಹಿಕ ಚೌಕಟ್ಟಿನೊಳಗೆ ಪ್ರಾರಂಭವಾಯಿತು' ಎಂದು ಏಂಗೆಲ್ಸ್. ವಿವರಿಸುತ್ತಾನೆ.

ಖಾಸಗಿ ಆಸ್ತಿಕಲ್ಪನೆ ಮತ್ತು ವಿವಾಹಪದ್ಧತಿ, ವೇಶ್ಯಾಪದ್ಧತಿಗಳು ಇಲ್ಲಿ ಸಂವಾದಿರೂಪಗಳಲ್ಲಿವೆ. ಆರ್ಥಿಕ ಮತ್ತು ರಾಜಕೀಯ ಹಿರಿಮೆ/ಅಧಿಕಾರ ಸ್ಥಾನ ಗಂಡಿಗೆ ದೊರೆತುದರಿಂದ ಗಂಡು ಲೈಂಗಿಕ ಸಂಬಂಧಗಳನ್ನು ನಿಯಂತ್ರಣಕ್ಕೆ ಒಳಪಡಿಸುವುದು ಸಾಧ್ಯವಾಯಿತು. ಲೈಂಗಿಕ ಸಂಬಂಧಗಳನ್ನು ಬದಲಾಗುತ್ತಿರುವ ಸಾಮಾಜಿಕ ಸಂಬಂಧಗಳ ಜತೆಯಲ್ಲಿ ಸಂಬಂಧ ಕಲ್ಪಿಸಿಕೊಳ್ಳುವುದರ ಮೂಲಕ ಏಂಗೆಲ್ಸ್ ಸಂಪ್ರದಾಯವಾದಿಗಳ ಜೈವಿಕ ವಾದವನ್ನು ಮುಂದುವರಿಸುವಂತೆ ಕಾಣುತ್ತವೆ.

ಕ್ಲಾಡ್ ಲೆವಿಸ್ಟ್ರಾಸ್ ಹೇಳುವ ಪ್ರಕಾರ - 'ಮುಕ್ತ ಲೈಂಗಿಕ ಬದುಕಿನ ವಿಧಾನಕ್ಕೆ ಕಡಿವಾಣ ಹಾಕಿ ಸಮೀಪ ಬಂಧುಗಳ ನಡುವೆ (ತಾಯಿ/ಮಗಳು/ತಂಗಿಯೊಡನೆ ದೈಹಿಕ ಸಂಬಂಧ) ಲೈಂಗಿಕ ಸಂಬಂಧಗಳು ನಿಷೇಧಗೊಂಡು ಮತ್ತೊಂದು ಗುಂಪಿನೊಡನೆ ಸಂಬಂಧದಲ್ಲಿ ವಿನಿಮಯ ಪದ್ಧತಿ ಪ್ರಾರಂಭವಾದ ಕಾರಣವಾಗಿಯೇ ಹೆಣ್ಣು ಒಂದು ವಸ್ತುವಿನಂತೆ ಗುಂಪುಗಳ ನಡುವೆ ವಿನಿಮಯಕ್ಕೆ ಬಳಪಡಬೇಕಾಯಿತು'. ವಿವಾಹಪದ್ಧತಿಗಳು ಸ್ತ್ರೀ ಅಧೀನ ಸ್ಥಿತಿಗೆ ಮತ್ತು ಅವಳನ್ನು ವ್ಯಕ್ತಿನೆಲೆಯಿಂದ ಕೆಳಗಿಳಿಸಲು ಕಾರಣವಾದವು ಎಂಬುದು ಈ ವಿಶ್ಲೇಷಣೆಗಳಲ್ಲಿ ತಿಳಿದು ಬರುವ

ವಿಚಾರವಾಗಿದೆ. ಅಧಿಕಾರ ಕೇಂದ್ರಗಳು ಸ್ತ್ರೀ ವ್ಯಕ್ತಿತ್ವವಿಕಾಸಕ್ಕೆ ಅವಕಾಶ ನೀಡದಂತೆ ತಡೆಯುತ್ತವೆ. ಅಧಿಕಾರ ಕೇಂದ್ರಗಳನ್ನು ಹೊರತು ಪಡಿಸಿರುವ ಸಾಮಾಜಿಕ ವ್ಯವಸ್ಥೆಯು ರೂಪುಗೊಂಡರೆ ಇಲ್ಲಿ ಸ್ತ್ರೀಗೆ ಅಧೀನತೆಯಾಗಲೇ, ಸ್ತ್ರೀ-ಪುರುಷರ ನಡುವಿನ ಅಸಮಾನತೆಯಾಗಲೇ ಅವಕಾಶ ಪಡೆಯದ ಸಾಧ್ಯತೆಗಳಿದ್ದು ಸ್ವತಂತ್ರ ಬದುಕಿನ ರೀತಿಗಳು ವ್ಯಕ್ತಿವಿಕಾಸಕ್ಕೆ ಅನುವು ಮಾಡಿಕೊಡುತ್ತವೆ. ಈ ಪರ್ಯಾಯ ವ್ಯವಸ್ಥೆಯಲ್ಲಿ ಯಾವುದೇ ರೀತಿಯ ಅಧಿಕಾರ ಕೇಂದ್ರಗಳು ಇರದೆ ಸ್ತ್ರೀಪುರುಷರ ನಡುವೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಮಾನತಾ ಅವಕಾಶಗಳು ಇರಬೇಕಾಗಿದೆ ಎನ್ನುವುದನ್ನು ಸ್ತ್ರೀಪರ ಹೋರಾಟಗಳು ಪ್ರತಿಪಾದಿಸುತ್ತವೆ. ವಿವಾಹಪದ್ಧತಿಗಳು ಮತ್ತು ಬಂಧುತ್ವದ ರಚನೆಗಳು ಸ್ತ್ರೀ - ಪುರುಷರ ನಡುವಿನ ಅಸಮಾನತಾ ಕಲ್ಪನೆಗಳನ್ನು ಬೆಂಬಲಿಸುವ ವಿಧಾನವನ್ನು ಈ ದಿಕ್ಕಿನಲ್ಲಿ ಗಮನಕ್ಕೆ ತಂದುಕೊಳ್ಳಲಾಗಿದೆ.

ವಿವಾಹ ಸಂಸ್ಥೆ ಕುಟುಂಬ ವ್ಯವಸ್ಥೆಯ ಬಹು ಮುಖ್ಯ ಅಂಗವ್ಯವಸ್ಥೆಯಾಗಿದೆ. ವ್ಯಕ್ತಿಯ ಸಾಮಾಜಿಕ, ಭಾವನಾತ್ಮಕ ಮತ್ತು ಆರ್ಥಿಕ ಭದ್ರತೆಯಾಗಿ ವಿವಾಹಸಂಸ್ಥೆ ಕಾರ್ಯನಿರ್ವಹಿಸುತ್ತದೆ. ಇದು ಸಂಪ್ರದಾಯ ಮತ್ತು ಸಾಮಾಜಿಕ ಮೌಲ್ಯಗಳಿಗೆ ತಾತ್ವಿಕವಿಧಾನಗಳ ಮೂಲಕ ಅವಕಾಶ ಕಲ್ಪಿಸಿಕೊಡುವ ವ್ಯವಸ್ಥೆಯೂ ಆಗಿದೆ. ಸ್ತ್ರೀ-ಪುರುಷ ವೈವಾಹಿಕ ಸಂಬಂಧಗಳು ಕುಟುಂಬ ವ್ಯವಸ್ಥೆಯ ಸಾಂಸ್ಥಿಕತೆಗೆ ಕಾರಣವಾಗಿದೆ. ಸ್ತ್ರೀಗೆ ವಿವಾಹ ಸಂಸ್ಥೆ ಪುರುಷಾಶ್ರಯ ಸ್ಥಿತಿಯನ್ನು, ಲಿಂಗಪ್ರಭೇದಕ್ಕೆ ಸಾಂಸ್ಕೃತಿಕ ಪರಿಸರವನ್ನು ಬದಗಿಸಿಕೊಡುತ್ತದೆ.

ಲೆವಿಸ್ಟ್ರಾಸ್ ತಮ್ಮ ವಿಶ್ಲೇಷಣೆಯಲ್ಲಿ ಲಿಂಗಪ್ರಭೇದ ನಿರ್ಮಿತಿ ಮತ್ತು ಹೆಣ್ಣಿನ ಅಧೀನಸ್ಥಿತಿಗೆ ವಿವಾಹದ ಸಾಂಸ್ಥೀಕರಣವನ್ನೇ ಗುರಿಯಾಗಿಸುತ್ತಾರೆ. ಪರಸ್ಪರ ಒಪ್ಪಂದದ ಮೂಲಕ ಎರಡು ಗುಂಪಿನ ನಡುವೆ ಹೆಣ್ಣಿನ ವಿನಿಮಯ ಮಾಡಿಕೊಳ್ಳುವ ಪದ್ದತಿ (ವಿವಾಹ ಸಂಬಂಧದ ಮೂಲಕ) ಸ್ತ್ರೀ-ಪುರುಷ ಸಂಬಂಧದಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸಿತು ಎನ್ನುತ್ತಾರೆ ಲೆವಿಸ್ಟ್ರಾಸ್ . ವಿವಾಹ ಸಂಬಂಧವನ್ನು ಮುಂದುವರಿಸುವುದರಲ್ಲಿ ಎರಡು ಗುಂಪಿನ ಸಮ್ಮತಿ, ಪುರುಷನ ಆಯ್ಕೆ ಮತ್ತು ಸ್ತ್ರೀಯ ಸಹಕಾರಗಳು ಇರುತ್ತವೆ. ಆದರೆ ಯಾವುದೇ ರೀತಿಯ ಅಧಿಕಾರವಾಗಲೀ, ಹಕ್ಕುಬಾದ್ಯತೆಗಳಾಗಲೀ ಹೆಣ್ಣಿಗೆ ಈ ಕಾರ್ಯದೊಳಗೆ ಇರುವ ಸಂಭವಗಳು ಕಡಿಮೆ. ಅವಳ ಅನುಮೋದನೆಗೆ ಸಿಗುವಷ್ಟು ಅವಕಾಶಗಳು ವಿರೋಧಿಸುವ ರೀತಿಗೆ ಇರುವುದಿಲ್ಲ.

ಲೆವಿಸ್ಟ್ರಾಸ್‌ನ ಈ ವಿಶ್ಲೇಷಣೆಯು ಮುಖ್ಯವಾಗಿ ಮಾನವ ಸಮಾಜದ ಬೆಳವಣಿಗೆಯಲ್ಲಿ ಸ್ತ್ರೀ ವ್ಯಕ್ತಿಗತನೆಲೆಯಿಂದ ಕೆಳಗಿಳಿದು ಪುರುಷವರ್ಗದಲ್ಲಿ ಪರಸ್ಪರ ವಿನಿಮಯವಾಗುವ ವಸ್ತುವಿನಂತೆ ನಿರ್ವಚಿಸಿಕೊಂಡ ವಿಧಾನವನ್ನು ಸೂಚಿಸುತ್ತದೆ. ಕಾಲಾನುಕ್ರಮದಲ್ಲಿ ವಿವಾಹ ಪದ್ಧತಿಗೆ ದೊರೆತ ಸಾಮಾಜಿಕ ಮನ್ನಣೆ ಮತ್ತು ಈ ಪದ್ಧತಿಯೊಳಗೆ ಅವಕಾಶ ಪಡೆದ ವಿಧಿನಿಷೇಧಗಳೂ ಪುರುಷಾಧಿಕಾರವನ್ನೇ ಬೆಂಬಲಿಸುವ ರೀತಿಯಲ್ಲಿಯೇ ನಡೆದವು.

ಪ್ರಾಚೀನ ಭಾರತದ ಶಾಸ್ತ್ರಜ್ಞರಾದ ಕೌಟಿಲ್ಯ ಮತ್ತು ಮನು ಉಲ್ಲೇಖಿಸಿರುವ ವಿವಾಹ ಪದ್ಧತಿಗಳು ಕಾಲಾನುಕ್ರಮದಲ್ಲಿ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ವಿವಾಹ ಪದ್ದತಿ ಪುರುಷನಿಗೆ ಕಲ್ಪಿಸಿದ ಅವಕಾಶಗಳನ್ನು ವಿವರಿಸುತ್ತವೆ. ವಿವಾಹ ಪದ್ಧತಿಗಳು ಸಾಮಾಜಿಕ ಮನ್ನಣೆ ದೊರೆಕಿಸುವ ಹಂತವನ್ನು ಮುಟ್ಟಿದ ಸಂದರ್ಭದಲ್ಲಿ (ಸುಮಾರು ಕ್ರಿಶ ೨ನೇ ಶ.) ವರ್ಣಾಶ್ರಮವನ್ನಾಧಾರಿಸಿ ಮೂಡಿದ ಅನುಲೋಮ, ಪ್ರತಿಲೋಮ ಪದ್ಧತಿಗಳು ಬೇರೆ

ಬೇರೆ ದಿಕ್ಕಿನಲ್ಲಿ ಸ್ತ್ರೀ ಸ್ವಾತಂತ್ರ್ಯವನ್ನು ನಿರ್ಬಂಧನಕ್ಕೆ ಒಳಪಡಿಸಿ ಅವಳ ಸ್ಥಾನಮಾನಗಳನ್ನು ನಿರ್ಧರಿಸುವ ಅಂಶಗಳಾಗಿ ಕಾಣಿಸಿದವು. ವ್ಯಕ್ತಿ ಸ್ವಾತಂತ್ರ್ಯ, ಆರ್ಥಿಕಸ್ವಾತಂತ್ರ್ಯ ಸ್ತ್ರೀಗೆ ದೊರೆಕದೆ ಹೋಗಲು ಈ ವಿವಾಹ ಪದ್ಧತಿಗಳೂ ಕಾರಣವಾದವು.

ವಿವಾಹ ಪದ್ಧತಿಯಲ್ಲಿ ಸಂತಾನದ ನಿರೀಕ್ಷೆಗಳು ಪ್ರಧಾನನೆಲೆಯಲ್ಲಿ ಇರುತ್ತದೆ. ಸಂತಾನದ ಪೋಷಣೆಗೆ ಬೇಕಾದ ಕೌಟುಂಬಿಕ ಪರಿಸರ, ಸಂತಾನವನ್ನು ಕಾಪಾಡಿ ಬೆಳೆಸಬೇಕಾದ ಕಾಳಜಿಗಳು ಪತ್ನಿ ಸ್ಥಾನಕ್ಕೆ ನಿಯಂತ್ರಣದ ರೂಪದಲ್ಲಿ ಗೋಚರವಾದವು. ಏಕಪತ್ನಿತ್ವದ ವಿವಾಹಸ್ಥಿತಿಯಲ್ಲಿ ಹೆಣ್ಣಿನ ಲೈಂಗಿಕ ಸ್ವಾತಂತ್ರ್ಯವು ನಿಯಂತ್ರಣಕ್ಕೆ ಒಳಗಾಯಿತು. ಕ್ಷೇತ್ರಕಲ್ಪನೆಯಲ್ಲಿ ಪಾವಿತ್ರ್ಯತೆ ಮತ್ತು ಶುದ್ಧತೆಗಳು ಬಾಲ್ಯ ವಿವಾಹಗಳಿಗೂ ಅವಕಾಶವನ್ನು ತೋರಿದವು.

ಈ ರೀತಿಯಾಗಿ ಮೂಲಪ್ರವೃತಿಯಾಗಿರುವುದನ್ನು ವಿವಾಹ ಸಂಸ್ಥೆಯ ನಿಯಂತ್ರಣದೊಳಗೆ ಸಂಸ್ಕೃತಿರೂಪವಾಗಿ ಸ್ವೀಕಾರ ಮಾಡಿರುವ ಸ್ಥಿತಿಯಲ್ಲಿ ಸ್ತ್ರೀ ಅಧೀನತಾ ಸ್ಥಿತಿಯ ಸ್ಥಾಪನೆ ನಡೆಯುತ್ತದೆ. ಬಂಧುತ್ವ ರಚನೆಗೆ ಮೂಲಕಾರಣವೆನಿಸಿದ ವಿವಾಹ ಕಲ್ಪನೆಯೂ ಸ್ತ್ರೀಯನ್ನು ಎಲ್ಲ ರೀತಿಯಿಂದಲೂ ಪುರುಷಾಧಿಕಾರದೊಳಗೆ ಕಲ್ಪಿಸಿಕೊಳ್ಳಲು ಬೇಕಾದ ಸಂದರ್ಭಗಳನ್ನು ಸೃಷ್ಟಿಮಾಡಿತು. ಸ್ತ್ರೀಪುರುಷರ ನಡುವಿನ ಅಸಮಾನತೆ, ಶ್ರೇಣೀಕರಣಗಳು, ಸ್ತ್ರೀ ಕುರಿತಾದ ಪವಿತ್ರತೆ, ಮಾಲಿನ್ಯದ ಕ್ಷೇತ್ರಕಲ್ಪನೆಗಳು ಈ ವ್ಯವಸ್ಥೆಯೊಳಗೇ ಹುಟ್ಟಿಕೊಂಡವು. ಈ ಸಾಮಾಜಿಕ ವ್ಯವಸ್ಥೆಯು ಹುಟ್ಟುಹಾಕಿದ ಸಾಂಸ್ಕೃತಿಕ ಪರಿಸರವನ್ನು ಸಂಪ್ರದಾಯ ಮತ್ತು ಆಚರಣೆಗಳು ದಾಖಲುಗಳಂತೆ ಕಾರ್ಯನಿರ್ವಹಿಸಿ ಮುಂದುವರೆಸುತ್ತಾ ಬಂದಿವೆ.

ಅಧೀನತಾ ಕಲ್ಪನೆಯಲ್ಲಿರುವ ಸ್ತ್ರೀಯ ನಿರ್ವಚನವು ಜೈವಿಕ ಕಾರಣವನ್ನು ಮುಂದಿಟ್ಟು ಸಾಂಸ್ಕೃತಿಕ ವ್ಯಾಖ್ಯಾನಗಳ ಮೂಲಕ ಸ್ತ್ರೀಯ ವ್ಯಕ್ತಿತ್ವವನ್ನು ರೂಪಿಸಿದೆ. ಈ ನಿರ್ವಚನದಲ್ಲಿ ಲಿಂಗಭೇದಕ್ಕೆ ಅನ್ವಯಿಸಲಾಗಿರುವ ಮೌಲ್ಯಗಳು ಸಾಂಸ್ಕೃತಿಕ ಉತ್ಪನ್ನಗಳಾಗಿವೆ. ಈ ವ್ಯಾಖ್ಯಾನಕ್ಕೆ ಹೊರತಾಗಿ ಸ್ತ್ರೀಯ ಅನನ್ಯತೆಯನ್ನು ಗುರುತಿಸಲು ಸ್ತ್ರೀ ಅಭಿವ್ಯಕ್ತಿ ಅವಕಾಶ ಪಡೆದಿರಬಹುದಾದ ಮೂಲಗಳ ಮೂಲಕವೇ ಅಧಾರವನ್ನು ಸಂಗ್ರಹಿಸುವ ಕಾರ್ಯ ನಡೆಯಬೇಕಾಗಿದೆ. ಈ ಆಧಾರವನ್ನು ಮುಂದಿಟ್ಟು ಸ್ತ್ರೀವಿಮುಕ್ತಿ ಚಿಂತನೆಯು ಸಾಂಸ್ಥಿಕರೂಪದಲ್ಲಿ ಮತ್ತು ವೈಯಕ್ತಿಕ ನೆಲೆಗಳಲ್ಲಿ ಚಳುವಳಿ, ಹೋರಾಟಗಳ ಮೂಲಕ, ಅಭಿವ್ಯಕ್ತಿ ಮಧ್ಯಮಗಳ ಮೂಲಕ ವ್ಯಕ್ತಗೊಳ್ಳುತ್ತ ಹೋಗುತ್ತವೆ. ಹಕ್ಕುಸ್ಥಾಪನಾ ಪ್ರಯತ್ನಗಳು ಮತ್ತು ಸಾಹಿತ್ಯ ರಚನೆಗಳು ಈ ಅಭಿವ್ಯಕ್ತಿಯ ನಿರ್ದಿಷ್ಟರೂಪಗಳಾಗಿವೆ.

ಹಕ್ಕುಸ್ಥಾಪನಾ ಚಳುವಳಿಯಲ್ಲಿ ಸ್ತ್ರೀ-ಪುರುಷ ಅಸಮಾನತೆ ವಿರುದ್ಧ ಹೋರಾಟವಿರುತ್ತದೆ. ಅಸಮಾನತೆ ಅಧೀನಸ್ಥಿತಿಗೆ ಕಾರಣವಾಗುತ್ತದೆ. ಅಧೀನಸ್ಥಿತಿಯ ಹೊರಟು, ಬಂಧವಿಮುಕ್ತ ಸ್ಥಿತಿ ಲಭಿಸಿದಾಗ ಅನನ್ಯತೆ ಸಾಧ್ಯವಾಗುತ್ತದೆ. ಈ ಚಳುವಳಿಯು ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಸಮಾನತೆಯನ್ನು ಸ್ತ್ರೀ ಪುರುಷರ ನಡುವೆ ಬಯಸುತ್ತವೆ. ಸಮಾನ ಅವಕಾಶಗಳಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ತ್ರೀಗೆ ತನ್ನ ಆಸೆ, ಆಕಾಂಕ್ಷೆಗಳಿಗೆ ಅವಕಾಶ ಸಿಕ್ಕಿ, ಬದುಕಿನ ಇತರ ಸಾಧ್ಯತೆಗಳತ್ತ ತೊಡಗಿಕೊಳ್ಳುವುದರ ಮೂಲಕ ಸ್ವ-ನಿರ್ವಚನ ಸಾಧ್ಯವಾಗುತ್ತದೆ. ಹಕ್ಕೋತ್ತಾಯದ ಚಳುವಳಿ ಸ್ತ್ರೀ ವ್ಯಕ್ತಿತ್ವ ವಿಕಾಸಕ್ಕೆ ಅಗತ್ಯವಿರುವ ಶಿಕ್ಷಣ, ರಾಜಕಿಯ ಸ್ವಾತಂತ್ರ್ಯ ಮತ್ತು ಕಾನೂನಿನ ಹಕ್ಕುಗಳನ್ನು ಪಡೆಯುವ ಹಾದಿಯಲ್ಲಿ ಪ್ರಯತ್ನ ನಡೆಸುತ್ತದೆ. ಪಿತೃಪ್ರಧಾನ ಅಧಿಕಾರ ಕೇಂದ್ರದ ಕ್ರಿಯಾಚರಣೆಗಳು

ವ್ಯಕ್ತವಾಗುವ ಆರ್ಥಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ವಿಚಾರಗಳ ವಿರುದ್ಧ ಈ ಚಳುವಳಿಗಳು ಕಾರ್ಯವೆಸಗುತ್ತವೆ.

**ಸ್ತ್ರೀ ಅಭಿವ್ಯಕ್ತಿ ಸಾಹಿತ್ಯ ಮತ್ತು ಸ್ತ್ರೀ ನಿರ್ವಚನ**

ಸ್ತ್ರೀ ಅಭಿವ್ಯಕ್ತಿಯನ್ನು ಸಾಹಿತ್ಯದಲ್ಲಿ ಗಮನಿಸುವ ಸಂದರ್ಭದಲ್ಲಿ, ಈ ಅಭಿವ್ಯಕ್ತಿ ತಾಳಿದ ಪರಿಸರದ ಹಿನ್ನೆಲೆಯನ್ನು ಗಮನಿಸುವುದು ಉಚಿತಕ್ರಮವಾಗುತ್ತದೆ. ಆಯಾ ಕಾಲದ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸರದಲ್ಲಿ ಪ್ರಚಲಿತವಾಗಿರುವ ಭಾವಗಳನ್ನೇ ಸಾಹಿತ್ಯ ಕೂಡಾ ಸ್ತ್ರೀ ಅಭಿವ್ಯಕ್ತಿಯಲ್ಲಿ ವ್ಯಕ್ತಪಡಿಸುತ್ತದೆ.

ಪ್ರಾರಂಭದಲ್ಲಿ ಬರವಣಿಗೆ, ಕೃತಿರಚನೆ ಪುರುಷಸಾಧಿತ ಕ್ಷೇತ್ರವಾಗಿ, ಹೆಣ್ಣಿನ ಗೈರುಹಾಜರಿಯಲ್ಲಿ ಸ್ತ್ರೀ ಬದುಕಿನ ಅನುಭವಗಳು, ಗ್ರಹಿಕೆಗಳು ಮತ್ತು ಸ್ತ್ರೀ ಸ್ವಭಾವದ ಸ್ವರೂಪ ಪುರುಷ ನೆಲೆಯಿಂದ ಬಂದ ಕಾರಣ ಸಾಹಿತ್ಯದಲ್ಲಿ ಸ್ತ್ರೀನಿರ್ವಚನವು ಪುರುಷಾಧಾರಿತ ನಿಲುವಿನಿಂದ ಹೊರಟ ನಿರ್ವಚನವೇ ಆಗಿದೆ. ಸ್ತ್ರೀ ತನ್ನ ಮನಸ್ಸಿನ ಭಾವನೆಗಳಿಗೆ ಶಾಬ್ದಿಕರೂಪವನ್ನು ಕೊಡಲು ಪ್ರಾರಂಭಿಸಿದಾಗಲು, ಸ್ತ್ರೀ ನಿರ್ವಚನ ಸ್ತ್ರೀ ನೆಲೆಯಿಂದ ಬಂದರೂ ಅದು ಪುರುಷಾಧ್ಧೂತ ನಿಲುವಿನ ಸ್ತ್ರೀ ನಿರ್ವಚನವೇ ಆಗಿರುತ್ತದೆ ಸ್ತ್ರೀ ಲೇಖಕಿಯಾಗಿ ಆಯಾಕಾಲದ ಅಗತ್ಯವನ್ನೇ ಅಭಿವ್ಯಕ್ತಿಸಬೇಕಾಗಿರುವುದು ಇಲ್ಲಿ ಅನಿವಾರ್ಯವಾಗುತ್ತದೆ. ಈ ಸಂದರ್ಭದಲ್ಲಿ ಸಾಹಿತ್ಯದ ಸ್ತ್ರೀ ನಿರ್ವಚನಕ್ಕಿಂತಲು ಹೆಚ್ಚಾಗಿ ಸ್ತ್ರೀ ತನಗೆ ಇದುವರೆಗೆ ಅಪರಿಚಿತವೆನಿಸಿರುವ ಕ್ಷೇತ್ರವನ್ನು ಪ್ರವೇಶಿಸಿ ಅಭಿವ್ಯಕ್ತಿ ಪಡೆಯಲು ನಡೆಸಿದ ಪ್ರಯತ್ನವೇ ಇಲ್ಲಿ ಮುಖ್ಯವಾಗುತ್ತದೆ.

ತಮ್ಮ ಬದುಕಿನ ನಿಜ ಅನುಭವಗಳನ್ನು, ಮನಸ್ಸಿನ ಅಮೂರ್ತ ಭಾವಗಳಾದ ದುಃಖ, ನಿರಾಶೆ, ಪ್ರೀತಿ, ಸ್ನೇಹ, ದುಗುಡ ಮುಂತಾದುವುಗಳಿಗೆ ಶಾಬ್ದಿಕ ರೂಪವನ್ನು ಕೊಡುವದರ ಮೂಲಕ ಅದುವರೆಗೆ ಪುರುಷನೆಲೆಯಿಂದ ಕಾಣಿಸಿಕೊಳ್ಳುತ್ತಿದ್ದ ಸ್ತ್ರೀ ಚಿತ್ರಣ ಮತ್ತು ಸ್ತ್ರೀ ಅನುಭವಗಳು ಸ್ತ್ರೀ ಮೂಲಕವೇ ಇಲ್ಲಿ ದಾಖಲಾಗುವುದು ಪ್ರಾರಂಭವಾಯಿತೆನ್ನಬಹುದು. ಸ್ತ್ರೀಪರ ಧ್ವನಿಯೊಂದು ತನ್ನ ಭಾವವನ್ನು ವ್ಯಕ್ತಪಡಿಸಲು, ಅನುಭವವನ್ನು ದಾಖಲಿಸಲು ಸಾಹಿತ್ಯ ಮಾಧ್ಯಮದ ರೂಪದಲ್ಲಿ ಸಹಕರಿಸಿತು. ಎರಡನೇಯದಾಗಿ ಮಹಿಳಾರಚನೆಗಳು ಸ್ತ್ರೀಯನ್ನು ಬೌಧಿಕ ಕ್ಷೇತ್ರದಲ್ಲಿಯೂ ಗುರುತಿಸಲು ಕೂಡ ಅವಕಾಶ ನೀಡಿದವು. ಮಾನಸಿಕಸ್ತರದಿಂದಲೂ ಅವಳ ವ್ಯಕ್ತಿತ್ವವನ್ನು ಗುರುತಿಸುವುದು ಸಾಧ್ಯವಾಯಿತು. ಮತ್ತು ಸ್ತ್ರೀಗೂ ಕೂಡಾ ಅದುವರೆಗೆ ಪುರುಷಸಂಬಂಧಗಳ ಮೂಲಕ ಗುರುತಿಸಲ್ಪಡುವ ತನ್ನ ವ್ಯಕ್ತಿತ್ವವನ್ನು ಬಿಟ್ಟುಕೊಟ್ಟು ಸ್ವತಂತ್ರವಾಗಿ ಗುರುತಿಸಿಕೊಳ್ಳಲು ಬೌಧಿಕ ಕ್ಷೇತ್ರದ ಪ್ರವೇಶ ಸಹಾಯ ಮಾಡಿದೆ. ಬುದ್ಧಿಮತ್ತೆ, ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ ಸ್ತ್ರೀಗೆ ಸಾಹಿತ್ಯದ ಮೂಲಕ ದೊರೆತಿದೆ. ಈ ಅಭಿವ್ಯಕ್ತಿ ಸ್ವಾತಂತ್ರ್ಯದ ಕಾರಣವಾಗಿಯೇ ಪ್ರತಿಭಟನಾ ಸಾಹಿತ್ಯ ಕಾಣಿಸಿಕೊಳ್ಳುತ್ತದೆ. ಈ ಪ್ರತಿಭಟನಾ ಸಾಹಿತ್ಯ ರಚನೆಯಲ್ಲಿ ಪಾಲುಗೊಳ್ಳುವವರಲ್ಲಿ ಸಮಾಜದ ಎಲ್ಲ ವರ್ಗಗಳಿಗೆ ಸೇರಿದ ಮಹಿಳಾ ಬರಹಗಾರರು ಕಾಣಿಸಿರುತ್ತಾರೆ. ಪ್ರತಿಭಟನಾ ಸಾಹಿತ್ಯ ಅಥವಾ ಯಾವುದೇ ಪ್ರಕಾರದ ಸಾಹಿತ್ಯ ರಚನೆಗಳು ಪುರುಷಾಶ್ರಯಯಿಲ್ಲದ ಅನನ್ಯತೆ ಮತ್ತು ತನ್ನ ನಿಜ ಸ್ವರೂಪವನ್ನು ಸ್ತ್ರೀ ಅಭಿವ್ಯಕ್ತಿಯಲ್ಲಿ ಕಾಣಿಸಿಕೊಳ್ಳುವ ಪ್ರಯತ್ನದಲ್ಲಿ ಸ್ತ್ರೀ ನಿರ್ವಚನದ ಸಾಧ್ಯತೆಗಳು ಕಾಣಿಸಿಕೊಳ್ಳುತ್ತವೆ.

**ಅಡಿಟಿಪ್ಪಣಿಗಳು :**

೧. ಚಿದಾನಂದ ಮೂರ್ತಿ ಎಂ. ಹೇಳುವ ಪ್ರಕಾರ (ಸಂಶೋಧನಾ ತರಂಗ, ಪುಟ - ೩) "ಯಾವ ಭಾವನೆ ಅಥವಾ ಆದರ್ಶಗಳು ಒಟ್ಟು ಜನಜೀವನವನ್ನು ಹಿಡಿದು ನಡೆಸುತ್ತದೆಯೇ, ಯಾವುದನ್ನು ಪಡೆಯಲು ಅಥವಾ ಆಗಲು ಒಂದು ಕಾಲದ ಜನಾಂಗ ಬೆಂಬಲಿಸುತ್ತದೆಯೇ, ಯಾವ ಭಾವನೆ ಅಥವಾ ಆದರ್ಶಗಳಿಗೆ ಉಳಿದ ಭಾವನೆ ಅಥವಾ ಆದರ್ಶಗಳಿಗಿಂತ ಹೆಚ್ಚು ಪ್ರಾಮುಖ್ಯತೆ ಉಂಟೋ ಅವುಗಳನ್ನು ಮೌಲ್ಯವೆಂದು ಕರೆಯಬಹುದು."

೨. ಗೆರ್ಡಾಲರ್ನರ್ ಹೇಳುವಂತೆ (Lerner Gerda, **The Creation of Patriarchy**, Woman and History : Vol 1, Oxford University Press, New York, 1986) 'ಪಿತೃಪ್ರಧಾನತೆಯೆನ್ನುವುದು ವ್ಯವಸ್ಥೆಯ ರೂಪದಲ್ಲಿ ಚಾರಿತ್ರಿಕವಾಗಿ ಗ್ರೀಕ್ ಮತ್ತು ರೋಮನ್ ನ್ಯಾಯವ್ಯವಸ್ಥೆಯಲ್ಲಿದ್ದ ಮನೆಯಜಮಾನ ಸ್ಥಾನದಲ್ಲಿದ್ದ ಗಂಡಸಿಗೆ ತನ್ನ ಆಶ್ರಯದಲ್ಲಿರುವ ಗಂಡಸರ ಮತ್ತು ಹೆಂಗಸರ ಮೇಲಿದ್ದ ನಿರಂಕುಶ ನ್ಯಾಯಸಮ್ಮತ ಮತ್ತು ಆರ್ಥಿಕ ಅಧಿಕಾರವನ್ನು ಮುಂದುವರಿಸುವ ರೀತಿಯದಾಗಿದೆ'

೩. ಮೇಲಿನದೇ.

೪. ಎಂಗಲ್ಸ್ ವಿವರಣೆ ಹೀಗಿದೆ: (ಎಂಗಲ್ಸ್ ಪ್ರೆಡರಿಕ್,(೧೮೮೪) **ಕುಟುಂಬ, ಖಾಸಗಿ ಆಸ್ತಿ ಹಾಗು ರಾಜ್ಯ ಇವುಗಳ ಉಗಮ**', ಕನ್ನಡಾನುವಾದ: ಗೋಪಾಲಕೃಷ್ಣರಾವ್, ಕೆ.ಎಲ್,ಪ್ರಗತಿ ಪ್ರಕಾಶನ್, ಮಾಸ್ಕೋ, ೧೯೮೦).

'ಏಕಪತ್ನಿತ್ವವು ಇತಿಹಾಸದಲ್ಲಿ ಗಂಡಸು ಹೆಂಗಸಿನ ನಡುವೆ ಸರಿಹೋಂದಾಣಿಕೆಯಾಗೇನೂ ಯಾವ ರೀತಿಯಲ್ಲೂ ಕಾಣಿಸಿಕೊಳ್ಳಲಿಲ್ಲ. ತದ್ವಿರುದ್ಧವಾಗಿ, ಅದು ಗಂಡಸು ಹೆಂಗಸನ್ನು ತನ್ನ ಆಧೀನಪಡಿಸಿಕೊಂಡುದರ ಸೂಚನೆಯಾಗಿ ಗಂಡು ಹೆಣ್ಣುಗಳ ನಡುವೆ ಇತಿಹಾಸ ಪೂರ್ವ ಕಾಲದಲ್ಲಿ ಅದುವರೆವಿಗೂ ಏನೇನೂ ತಿಳಿಯಬರದಿದ್ದಂಥ ಘರ್ಷಣೆಯ ಸೂಚನೆಯಾಗಿ ಕಾಣಿಸಿಕೊಂಡಿತ್ತು. ಏಕ ಪತ್ನಿ ವಿವಾಹ ಪದ್ಧತಿಯಲ್ಲಿ ಗಂಡಸು ಹೆಂಗಸಿನ ನಡುವೆ ವೈಷಮ್ಯ ಹುಟ್ಟಿಕೊಂಡಾಗಲೇ ಇತಿಹಾಸದಲ್ಲಿನ ಮೊದಲ ವರ್ಗ ವೈಷಮ್ಯವೂ ಹುಟ್ಟಿಕೊಂಡಿತು ಮತ್ತು ಪುರುಷವರ್ಗವು ಸ್ತ್ರೀ ವರ್ಗದ ಮೇಲೆ ದಬ್ಬಾಳಿಕೆ ನಡೆಸುವುದರೊಂದಿಗೆ ಮೊದಲ ವರ್ಗ ದಬ್ಬಾಳಿಕೆಯೂ ಪ್ರಾರಂಭವಾಯಿತು'ಪುಟ ೬೨- ೬೪.

ಅಧ್ಯಾಯ ೧

# ಪ್ರಬಂಧ ಸ್ವರೂಪ

ಸ್ತ್ರೀಕೇಂದ್ರಿತ ಅಧ್ಯಯನದಲ್ಲಿ ಸ್ತ್ರೀಯನ್ನು ವಿವರಿಸುವ ವಿಧಾನಗಳತ್ತ ಗಮನ ಹರಿಸುವುದು ಮುಖ್ಯವಾಗಿದೆ. ಸ್ತ್ರೀಯನ್ನು ವಿವರಿಸುವ ಸಂದರ್ಭಗಳಲ್ಲಿ ಬೇರೆ ಬೇರೆ ಅಂಶಗಳು ಪ್ರಭಾವವನ್ನು ಬೀರುತ್ತವೆ. ಸ್ತ್ರೀತ್ವ, ಸ್ತ್ರೀಸತ್ವ ಮೊದಲಾದ ಕಲ್ಪನೆಗಳೂ ಪೂರ್ವ ನಿರ್ಧಾರಿತ ವಿಚಾರಗಳಿಂದ ಪ್ರೇರಣೆ ಪಡೆದಿರುವುದನ್ನು ಇಂದು ತಿಳಿದುಕೊಳ್ಳಲಾಗಿದೆ. ಸಂಪ್ರದಾಯ, ಪರಂಪರೆ, ನಂಬಿಕೆ, ಚಾರಿತ್ರಿಕತೆ, ಸಾಂಸ್ಕೃತಿಕ ಪರಿಸರ, ಪುರುಷಕೇಂದ್ರಿತ ಪ್ರಜ್ಞೆ- ಇವೇ ಮೊದಲಾದ ಅಂಶಗಳು ಸ್ತ್ರೀ ನಿರ್ವಚನದಲ್ಲಿ ಪಾಲುಗೊಳ್ಳುತ್ತವೆ. ಈ ಅಂಶಗಳಿಂದ ಹೊರತುಪಡಿಸಿ ಸ್ತ್ರೀಯ ನಿಜವ್ಯಕ್ತಿತ್ವವನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ಇಂದಿನ ಯೋಚನಾಕ್ರಮವಿದೆ.

ಸ್ತ್ರೀ ಪಾತ್ರಚಿತ್ರಣಕ್ಕೆ ಸಂಬಂಧಿಸಿದಂತೆ ಸಾಹಿತ್ಯ ಒದಗಿಸುವ ಕೆಲವು ಮಾದರಿಗಳು ಈ ಸ್ತ್ರೀನಿರ್ವಚನದ ವಿಭಿನ್ನ ನೆಲೆಗಳನ್ನು ಗುರುತಿಸಲು ಸಹಾಯಕ-ವೆನಿಸುತ್ತವೆ. ಈ ವಿಭಿನ್ನ ಮಾದರಿಗಳ ಮೂಲಕ ಸ್ತ್ರೀ ಅಭಿವ್ಯಕ್ತಿ ಅಥವಾ ಸ್ತ್ರೀ ನಿರ್ವಚನವನ್ನು ಕಂಡುಕೊಳ್ಳುವ ಸಾಧ್ಯತೆ ಇದೆ ಎನ್ನುವ ದಿಕ್ಕಿನಲ್ಲಿ ಪ್ರಸ್ತುತ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

'ಕಥನ ಸಾಹಿತ್ಯ ಮತ್ತು ಸ್ತ್ರೀ ನಿರ್ವಚನ' ಸಂಶೋಧನಾ ಮಹಾಪ್ರಬಂಧದಲ್ಲಿ ಆಧುನಿಕ ಕನ್ನಡ ಸಾಹಿತ್ಯದ ಮುಖ್ಯ ಪ್ರಕಾರವಾಗಿರುವ ಸಣ್ಣಕತೆ ಮತ್ತು ಕಾದಂಬರಿ ಪ್ರಕಾರವನ್ನು ಒಳಗೊಂಡಿರುವ ಕಥನ ಸಾಹಿತ್ಯವನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಕಥನ ಸಾಹಿತ್ಯವನ್ನು ಸ್ತ್ರೀಕೇಂದ್ರಿತ ದೃಷ್ಟಿಕೋನದಿಂದ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹೊಸಗನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಥನ ಸಾಹಿತ್ಯಕ್ಕೆ ನೂರುವರ್ಷಗಳ ಇತಿಹಾಸವಿದೆ. ಆಧುನಿಕತೆ ಮತ್ತು ವೈಚಾರಿಕತೆ ಸಾಹಿತ್ಯದ ಮೇಲೆ ಬೀರಿದ ಪ್ರೇರಣೆಯಿಂದಾಗಿ ವಸ್ತು, ಪಾತ್ರಚಿತ್ರಣ, ತಂತ್ರ, ಕಲೆಗಾರಿಕೆ ಮುಂತಾದ ಕ್ಷೇತ್ರಗಳಲ್ಲಿ ಸಾಹಿತ್ಯ ಗಮನಾರ್ಹ ಬದಲಾವಣೆಗಳನ್ನು ಅಳವಡಿಸಿಕೊಂಡು ಬಂದಿದೆ. ಅದೇ ರೀತಿ ಮನುಷ್ಯ ಪರಿಕಲ್ಪನೆಯಲ್ಲಿ ಕೂಡಾ. ಆಯಾಕಾಲಾದ ಹಿನ್ನೆಲೆಯೊಂದಿಗೆ ಸಾಹಿತ್ಯದಲ್ಲಿ ಮನುಷ್ಯ ಪರಿಕಲ್ಪನೆ ಮೂಡಿಬಂದಿದೆ. ಪ್ರಸ್ತುತ ಅಧ್ಯಯನವು ಸ್ತ್ರೀಕೇಂದ್ರಿತ ವಾಗಿರುವುದರಿಂದ ಸಾಹಿತ್ಯದಲ್ಲಿ ಮೂಡಿರುವ ಸ್ತ್ರೀ ಪರಿಕಲ್ಪನೆಯನ್ನು ತಿಳಿದು ಕೊಳ್ಳುವುದು ಇಲ್ಲಿ ಮುಖ್ಯ ವಿಚಾರವಾಗಿದೆ. ಸಾಹಿತ್ಯದಲ್ಲಿ ಬದಲಾಗುತ್ತಿರುವ ಸ್ತ್ರೀ ಪರಿಕಲ್ಪನೆ ಆಯಾಕಾಲದ ಸಾಮಾಜಿಕ ಸಂದರ್ಭ, ರಾಜಕೀಯ ಬೆಳವಣಿಗೆ, ಸಮಕಾಲೀನ ಚಿಂತನಾಕ್ರಮ (ವಾದ ಮತ್ತು ಸಿದ್ಧಾಂತರೂಪಗಳಲ್ಲಿರುವ ಚಿಂತನೆಗಳು) ಮೊದಲಾದ ಅಂಶಗಳಿಂದ ಪ್ರಭಾವಗೊಂಡಿರುತ್ತದೆ. ಇವುಗಳಿಂದ ಹೊರತಾಗಿ ಬರಹಗಾರನ ಧೋರಣೆ, ನಿಲುವುಗಳೂ ಈ ಪರಿಕಲ್ಪನೆಯಲ್ಲಿ ಪಾಲುಗೊಳ್ಳುತ್ತವೆ. ಕನ್ನಡದಲ್ಲಿ ಬಂದಿರುವ ಕತೆ ಮತ್ತು ಕಾದಂಬರಿಗಳಲ್ಲಿ ಸ್ತ್ರೀಪಾತ್ರಚಿತ್ರಣದ ಮೂಲಕ ಮೂಡಿರುವ ಸ್ತ್ರೀಪರಿಕಲ್ಪನೆಯ ನಿರ್ವಚನದಲ್ಲಿ ಪಾಲುಗೊಂಡಿರುವ ಬೇರೆ ಬೇರೆ

ವಿಚಾರಗಳನ್ನು ಗಮನಿಸುತ್ತ, ಸಾಹಿತ್ಯದಲ್ಲಿ ಕಾಣಸಿರುವ ಸ್ತ್ರೀಸ್ವರೂಪವನ್ನು ತಿಳಿದುಕೊಳ್ಳುವುದು ಈ ಅಧ್ಯಯನದ ಉದ್ದೇಶವಾಗಿದೆ.

ಸಾಹಿತ್ಯದ ಇತರ ಪ್ರಕಾರಗಳಿಗಿಂತ ಅತಿ ಹೆಚ್ಚು ಸಂಖ್ಯೆಯಲ್ಲಿ ಕಥನ ಸಾಹಿತ್ಯ ಪ್ರಕಾರದ ಕೃತಿಗಳು ಬೆಳಕು ಕಂಡಿವೆ. ಈ ಎಲ್ಲ ಕೃತಿಗಳನ್ನು ಸಮಗ್ರವಾಗಿ ಅಧ್ಯಯನದ ವ್ಯಾಪ್ತಿಗೆ ಒಳಪಡಿಸುವುದು ಕಷ್ಟಸಾಧ್ಯವಾಗಿರುವುದರಿಂದ ಇಲ್ಲಿ ಸ್ಥೂಲವಾಗಿ ಸ್ತ್ರೀಪ್ರಧಾನತೆಗೆ ಅವಕಾಶ ನೀಡಿರುವ ಕೃತಿ ಮತ್ತು ಕೃತಿಕಾರರನ್ನಷ್ಟೇ ಗಮನಕ್ಕೆ ತರಲಾಗಿದೆ. ಸ್ತ್ರೀಪಾತ್ರ ಚಿತ್ರಣದ ಸಮಕಾಲೀನತೆಯನ್ನು ಗಮನಿಸಲು ಕನ್ನಡ ನಾಲ್ಕು ಬರಹಗಾರರನ್ನು ಪ್ರಾತಿನಿಧಿಕವೆಂದು ಆಯ್ಕೆ ಮಾಡಿ, ಈ ಬರಹಗಾರರ ಸ್ತ್ರೀಕೇಂದ್ರಿತ ವಸ್ತುವನ್ನುಳ್ಳ ಕಥಾಸಾಹಿತ್ಯವನ್ನು ಇಲ್ಲಿ ವಿವೇಚಿಸಿಕೊಳ್ಳಲಾಗಿದೆ.

ಅಧ್ಯಯನ ಪ್ರವೇಶಕ್ಕೆ ಮೊದಲ ಇಲ್ಲಿವರೆಗೆ ಈ ಕ್ಷೇತ್ರದಲ್ಲಿ ನಡೆದಿರುವ ಸಂಶೋಧನೆಗಳನ್ನು ಮತ್ತು ಅಧ್ಯಯನಗಳನ್ನು ಗಮನಿಸಲಾಗಿದೆ -

ಹೊಸಗನ್ನಡ ಸಾಹಿತ್ಯದ ಸಣ್ಣಕತೆ ಮತ್ತು ಕಾದಂಬರಿ ಪ್ರಕಾರಗಳಲ್ಲಿ ಹಾಗೂ ಇತರ ಸಾಹಿತ್ಯ ಪ್ರಕಾರಗಳಲ್ಲಿ ಸ್ತ್ರೀಕೇಂದ್ರಿತ ನೆಲೆಯಿಂದ ಇಲ್ಲಿವರೆಗೆ ನಡೆದಿರುವ ಸಂಶೋಧನೆಗಳು/ಅಧ್ಯಯನಗಳು ಈ ಕೆಳಗಿನಂತಿವೆ:

ಕನ್ನಡ ಭಾಷೆ ಮತ್ತು ಸಾಹಿತ್ಯದ ಕ್ಷೇತ್ರದಲ್ಲಿ ಮೊದಲ ಸಂಶೋಧನಾ ಪ್ರಬಂಧ (ಛಂದೋವಿಕಾಸ, ೧೯೪೯) ಸ್ವೀಕೃತವಾದ ನಂತರದ ೫೦ ವರ್ಷಗಳ ಅವಧಿಯಲ್ಲಿ ಸುಮಾರು ೩೬ ಸಂಶೋಧನಾ ಮಹಾಪ್ರಬಂಧಗಳು (ಪಿಎಚ್.ಡಿ. ನಿಬಂಧಗಳು) ಕಥನ ಸಾಹಿತ್ಯದ ಅಧ್ಯಯನರೂಪದಲ್ಲಿ ವಿವಿಧ ವಿಶ್ವವಿದ್ಯಾಲಯಗಳಿಂದ ಸ್ವೀಕೃತವಾಗಿವೆ.[೧]

ಈ ಅಧ್ಯಯನಗಳು ಕಥಾಸಾಹಿತ್ಯದ ಮೊದಲ ಘಟ್ಟ, ಸಣ್ಣಕತೆ ಮತ್ತು ಕಾದಂಬರಿ ಪ್ರಕಾರ, ಮಹಿಳಾ ಸಾಹಿತ್ಯ, ಬರಹಗಾರರ ಸಮಗ್ರ ಕೃತಿ, ಬರಹಗಾರರ ಬದುಕು-ಬರಹಗಳ ಮೂಲಕ ಕೃತಿಪರಿಚಯ, ಕಥಾಸಾಹಿತ್ಯದಲ್ಲಿ ಹಲವು ಅಂಶಗಳ ಗುರುತಿಸುವಿಕೆ (ಪ್ರಾದೇಶಿಕತೆ, ಮಾರ್ಗ ಸಂಘರ್ಷ, ಸಾಂಸ್ಕೃತಿಕ ಸಂಘರ್ಷ, ಇತ್ಯಾದಿ) - ಇವುಗಳ ಕುರಿತಾಗಿರುವ ವಿವರ, ವಿಶ್ಲೇಷಣೆಗಳನ್ನು ಒಳಗೊಂಡಿವೆ. ಈ ಅಧ್ಯಯನಗಳಲ್ಲಿ ಕಥನ ಸಾಹಿತ್ಯದ ಚರಿತ್ರೆ: ಉಗಮ ಮತ್ತು ವಿಕಾಸ, ಬರಹಗಾರರ ಹಿನ್ನೆಲೆ ಮತ್ತು ಬದುಕಿನ ವಿವರಗಳು, ಕೃತಿರಚನೆಯ ಚಾರಿತ್ರಿಕತೆ, ಸಾಂಧರ್ಭಿಕತೆ, ಪ್ರಭಾವ, ಪ್ರೇರಣೆ, ಕೃತಿಸಂಖ್ಯೆ, ಕೃತಿವಿಮರ್ಶೆ - ಇವುಗಳ ವಿವರಗಳಿವೆ. ಸಮಗ್ರ ಅಧ್ಯಯನಗಳಲ್ಲಿ ಕೃತಿಸ್ವರೂಪ, ತಂತ್ರ, ಪಾತ್ರವಿಶ್ಲೇಷಣೆಗಳು ಇವೆ.

ಸಣ್ಣಕತೆ ಮತ್ತು ಕಾದಂಬರಿ ಪ್ರಕಾರಗಳ ಮುಂದುವರಿದ ಅಧ್ಯಯನಗಳಿಗೆ ಈ ಸಂಶೋಧನೆಗಳು ಮಾಹಿತಿಗಳನ್ನು, ಕೃತಿವಿವರಗಳನ್ನು ಮತ್ತು ಕೃತಿವಿಶ್ಲೇಷಣೆಯನ್ನು ನೀಡುತ್ತವೆ. ಸ್ತ್ರೀಕೇಂದ್ರಿತ ಅಧ್ಯಯನ ರೂಪದಲ್ಲಿ ಮಹಿಳಾಸಾಹಿತ್ಯ, ಸಾಹಿತ್ಯದಲ್ಲಿ ಮಹಿಳೆ ಮತ್ತು ಮಹಿಳೆ - ಸಾಹಿತ್ಯರಚನೆಯಲ್ಲಿ - ಹೀಗೆ ಮೂರು, ಭಿನ್ನರೂಪದಲ್ಲಿ ಸಂಶೋಧನೆಗಳು ನಡೆದಿವೆ. ಹೊಸಗನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಹಿಳಾ ಸಾಹಿತ್ಯವನ್ನು ಆಧುನಿಕ ಸಂದರ್ಭದಲ್ಲಿಟ್ಟು ನೋಡುವ ಪ್ರಯತ್ನದಲ್ಲಿ ಮಹಿಳಾಸಾಹಿತ್ಯವನ್ನು ಕುರಿತಾಗಿ ೩ ನಿಬಂಧಗಳು ಬಂದಿವೆ.

೧. 'ಆಧುನಿಕ ಕನ್ನಡದಲ್ಲಿ ಮಹಿಳಾಸಾಹಿತ್ಯ'[೨], (ಡಾ|| ಶಕುಂತಳಾ ಸಿದ್ಧರಾಮ ದುರಗಿ, ೧೯೮೨)

೨. 'ಕನ್ನಡದಲ್ಲಿ ಮಹಿಳಾ ಕಥಾಸಾಹಿತ್ಯ[೩]', (ಡಾ|| ಮಲ್ಲಿಕಾಘಂಟಿ, ೧೯೯೧)

೩. 'ಕನ್ನಡದಲ್ಲಿ ಮಹಿಳಾ ಬಂಡಾಯ ಸಾಹಿತ್ಯ[೪]', (ಡಾ|| ವಿನಯಾ ನಾಯಕ)

ಮಹಿಳಾ ಸಾಹಿತ್ಯದ ಚರಿತ್ರೆ, ಹಿನ್ನೆಲೆ, ಪ್ರಗತಿಯೊಂದಿಗೆ, ಮಹಿಳಾ ಸಾಹಿತ್ಯದ ಮಿತಿಗಳು, ವೈಶಿಷ್ಟ್ಯ, ಸಾಧ್ಯತೆಗಳನ್ನು ಮತ್ತು ಲೇಖಕಿಯರ ಕೃತಿವಿವರಗಳ ಮಾಹಿತಿಗಳನ್ನು ವಿಶ್ಲೇಷಣೆ ಮೂಲಕ ಈ ನಿಬಂಧಗಳು ವಿವರಿಸುತ್ತವೆ. ಮಹಿಳಾ ಸಾಹಿತ್ಯ ಆಧುನಿಕ ಸಾಹಿತ್ಯ ಸಂದರ್ಭಗಳಿಗೆ ಪ್ರತಿಕ್ರಿಯಿಸಿದ ವಿಧಾನವನ್ನು ವಿವರಿಸಿದೆ.

ಸಾಹಿತ್ಯರಚನೆಯಲ್ಲಿ ಲೇಖಕಿಯರನ್ನು ಗುರುತಿಸುವ ಪ್ರಯತ್ನ ಮಹಿಳಾ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಚಾರಿತ್ರಿಕ ಮಹತ್ವವನ್ನು ಪಡೆಯುತ್ತದೆ.

ಸಾಹಿತ್ಯರಚನೆಯಲ್ಲಿ ಮಹಿಳೆಯನ್ನು ಗುರುತಿಸುವ ಹಾದಿಯಲ್ಲಿ 'ಕನ್ನಡದ ಕವಯತ್ರಿಯರು'[೫] ( ಡಾ|| ಸರೋಜಿನಿ ಮಹಿಷಿ ೧೯೬೨(೬೫) ಮೊದಲ ಪ್ರಯತ್ನವಾಗಿದೆ. ಇದು ಕನ್ನಡದ ಮೊದಲ ಮಹಿಳಾಸಂಶೋಧನಾ ನಿಬಂಧ (ಪಿ.ಎಚ್.ಡಿ.)ವೂ ಹೌದು. ವೇದಕಾಲದಿಂದ ಆಧುನಿಕ ಕಾಲದವರೆಗಿನ ಕರ್ನಾಟಕದ ಕವಯತ್ರಿಯರ ಪರಿಚಯ, ಸಾಧನೆ, ಮತ್ತು ಸಿದ್ಧಿಗಳನ್ನು ಈ ನಿಬಂಧ ವಿವರಿಸುತ್ತದೆ. ಮಹಿಳಾ ಬರವಣಿಗೆಗೆ ಚಾರಿತ್ರಿಕ ಹಿನ್ನೆಲೆ ನೀಡುವ ಪ್ರಯತ್ನವಿದು. ಲೇಖಕಿಯರನ್ನು ಕೇಂದ್ರವಾಗಿಟ್ಟು ೫ ಮಹಾಪ್ರಬಂಧಗಳ ರೂಪದಲ್ಲಿ ಸಂಶೋಧನೆ ನಡೆಸಲಾಗಿದೆ. ಕನ್ನಡದ ಪ್ರಮುಖ ಲೇಖಕಿಯರಾದ ಅಕ್ಕಮಹಾದೇವಿ, ತಿರುಮಲಾಂಬ, ಎಂ. ಕೆ. ಇಂದಿರಾ ಮತ್ತು ಅನುಪಮಾ ನಿರಂಜನರ ಸಮಗ್ರ ಅಧ್ಯಯನಗಳು ಇಲ್ಲಿ ಕಾಣಿಸಿಕೊಂಡಿವೆ. ಅನುಭಾವ ಸಾಹಿತ್ಯಕ್ಕೆ ವಚನಗಳನ್ನು ನೀಡಿದ ಲೇಖಕಿಯಾಗಿ ಮತ್ತು ತನ್ನ ಜೀವನದ ರೀತಿ ಮತ್ತು ಅಧ್ಯಾತ್ಮಿಕ ಮನೋಧರ್ಮದ ಮೂಲಕ ಚಾರಿತ್ರಿಕ ವ್ಯಕ್ತಿಯಾಗಿಯೂ ಮುಖ್ಯವಾಗುವ ಅಕ್ಕಮಹಾದೇವಿ ಆಧುನಿಕ ಮಹಿಳಾಕಾವ್ಯದ ಹಿಂದಿರುವ ಮುಖ್ಯ ಪ್ರೇರಣೆಯೂ ಆಗಿದ್ದಾಳೆ. ಅಕ್ಕಮಹಾದೇವಿಯ ಜೀವನ ಮತ್ತು ಕೃತಿಗಳ ಕುರಿತು ೨ ಅಧ್ಯಯನಗಳು ನಡೆದಿವೆ:

೧. ಅಕ್ಕಮಹಾದೇವಿ ಜೀವನ ಮತ್ತು ಕೃತಿಗಳು[೬]. (ಡಾ|| ಕಮಲಮ್ಮ ವಿ. ೧೯೭೦)

೨. ಅಕ್ಕಮಹಾದೇವಿ[೭]. (ಡಾ|| ಪಾಟೀಲ, ಎನ್. ಎಸ್, ೧೯೮೭).

ಭಕ್ತಿಪಂಥದಲ್ಲಿ ಪ್ರಾದೇಶಿಕ ಹಿನ್ನೆಲೆ ಮತ್ತು ಕಾಲಘಟ್ಟದಿಂದ ಭಿನ್ನವಾಗುವ ಇತರ ಅನುಭಾವಿ ಕವಯತ್ರಿಯರೊಂದಿಗೆ ಅಕ್ಕಮಹಾದೇವಿಯನ್ನು ತೌಲನಿಕವಾಗಿ ವಿಶ್ಲೇಷಿಸಿದ ಅಧ್ಯಯನ: 'ಆಂಡಾಳ್, ಮಹಾದೇವಿ, ಮೀರಾ',[೮] (ಡಾ|| ವಿನೋದಾಬಾಯಿ ಎಸ್. ೧೯೬೯)

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಬೇರೆ ಬೇರೆ ಕಾರಣಗಳಿಂದ ಮಹಿಳಾ ಸಾಹಿತ್ಯದ ಪ್ರಮುಖ ಘಟ್ಟಗಳನ್ನು ಪ್ರತಿನಿಧಿಸುವ ಕತಾಲೇಖಕಿಯರು: ತಿರುಮಲಾಂಬ, ಅನುಪಮಾ ಮತ್ತು ಇಂದಿರಾ. ಈ ಲೇಖಕಿಯರ ಸಮಗ್ರ ಅಧ್ಯಯನಗಳು ಆಧುನಿಕ ಮಹಿಳೆ ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದಲೂ ಮುಖ್ಯವಾಗುತ್ತವೆ. ತಿರುಮಲಾಂಬ,

ಆಧುನಿಕ ಕನ್ನಡ ಸಾಹಿತ್ಯದ ಮೊದಲ ಹಂತದ ಲೇಖಕಿ. ತಮ್ಮ ಬರವಣಿಗೆ ಮತ್ತು ಪ್ರಕಟಣಾಕಾರ್ಯ (ಪ್ರಕಾಶಕಿಯಾಗಿ) ಗಳಿಂದ ಸ್ತ್ರೀ ಸಮಸ್ಯೆಗಳತ್ತ ಸಾರ್ವಜನಿಕ (ಓದುಗರ)ರ ಗಮನ ಸೆಳೆದ ಮೊದಲ ಲೇಖಕಿ ಮತ್ತು ಮಹಿಳಾ ಸಾಹಿತ್ಯಕ್ಕೆ ಅದರ ಪ್ರಾಥಮಿಕ ಹಂತದಲ್ಲಿ ಚಾಲನೆ ನೀಡಿದ ಶಕ್ತಿಯಾಗಿಯೂ ಗುರುತಿಸಲ್ಪಡಬೇಕಾದವರು. ಈ ದಿಕ್ಕಿನಲ್ಲಿ ಬಂದಿರುವ ಅಧ್ಯಯನ: ‘ನಂಜನಗೂಡು ತಿರುಮಲಾಂಬ - ಒಂದು ಅಧ್ಯಯನ’[೯] (ಡಾ|| ಅಪ್ಪಾಜಿಗೌಡ ಎಸ್ . ಎ.,೧೯೮೯) ತಿರುಮಲಾಂಬರ ಕೃತಿ, ಜೀವನ ಮತ್ತು ವೈಯಕ್ತಿಕ ಸಾಧನೆಗಳ ಪರಿಚಯ ನಿರ್ದಿಷ್ಟ ಸಾಮಾಜಿಕ ಪರಿಸರವನ್ನು ಪರಿಚಯಿಸುವುದರೊಂದಿಗೆ ಮಹಿಳಾ ಸಾಹಿತ್ಯವನ್ನು ಚಾರಿತ್ರಿಕವಾಗಿಯೂ ದಾಖಲಿಸುತ್ತದೆ ಈ ಅಧ್ಯಯನ. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಹೊಸಗನ್ನಡದ ಮೂರನೇ ಹಂತದ ಲೇಖಕಿಯರೆನಿಸಿಕೊಂಡು ಮಹಿಳಾ ಸಾಹಿತ್ಯಕ್ಕೆ ನಿಶ್ಚಿತರೂಪವನ್ನು ಸ್ತ್ರೀಪರ ಧ್ವನಿಯನ್ನು ನೀಡಿದವರು. ಅನುಪಮಾ ಮತ್ತು ಇಂದಿರಾ. ಈ ಲೇಖಕಿಯರ ಸಮಗ್ರ ಅಧ್ಯಯನಗಳು:

೧. ‘ಶ್ರೀಮತಿ ಎಂ. ಕೆ. ಇಂದಿರಾರ ಕಾದಂಬರಿಗಳು’[೧೦] ( ಡಾ|| ಮಂದಾಕಿನಿ ಪುರೋಹಿತ, ೧೯೮೪)

೨. ‘ಅನುಪಮಾ ನಿರಂಜನ ಅವರ ಕಾದಂಬರಿಗಳು’[೧೧] - ಒಂದು ಸಾಹಿತ್ಯಿಕ ಅಧ್ಯಯನ’(ವಿಜಯಶ್ರೀ ಪಾಟೀಲ, ೧೯೯೧)

ಇಂದಿರಾ ಕಾದಂಬರಿ ವಿಶ್ಲೇಷಣೆಯಲ್ಲಿ ಸ್ಥಿತ್ಯಂತರಕ್ಕೆ ಒಳಗಾಗುತ್ತಿರುವ ಸಾಮಾಜಿಕ ಸ್ಥಿತಿ ಮತ್ತು ಬದಲಾಗುತ್ತಿರುವ ಮೌಲ್ಯ ಸ್ವೀಕರಣೆಗೆ ಸಿದ್ಧವಾಗುತ್ತಿರುವ ಗ್ರಾಮೀಣ ಪರಿಸರದಲ್ಲಿ ಬದಲಾಗುತ್ತಿರುವ ಹೆಣ್ಣಿನ ಬದುಕಿನ ಚಿತ್ರಣಕ್ಕೆ ಆದ್ಯತೆ ನೀಡಲಾಗಿದೆ. ೧೯೬೩ - ೧೯೮೪ ರ ವರೆಗಿನ ಇಂದಿರಾ ಕಾದಂಬರಿಗಳ ಕುರಿತಾದ ಕೃತಿವಿವೇಚನೆಯನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ.

ಅನುಪಮಾ ಕಾದಂಬರಿ ವಿಶ್ಲೇಷಣೆಯಲ್ಲಿ ನಗರ ಬದುಕಿನ ಹಿನ್ನೆಲೆಯಲ್ಲಿ ಬದಲಾಗುತ್ತಿರುವ ಸಾಮಾಜಿಕ ಪರಿಸರದೊಡನೆ ಸ್ಪಂದಿಸುವ ಹೆಣ್ಣಿನ ಬಂಡಾಯ ಮತ್ತು ಪ್ರತಿರೋಧದ ಕುರಿತಾಗಿ ಗಮನ ಹರಿಸಲಾಗಿದೆ.

ತಾನು ಹುಟ್ಟಿ ಬೆಳೆದ ಪರಿಸರವನ್ನು ಕೃತಿರಚನೆಯಲ್ಲಿ ಮರುಚಿತ್ರಣ ಮಾಡುವ ಸಂದರ್ಭಗಳಲ್ಲಿ ಇಂದಿರಾ ಜೀವ ವಿರೋಧಿ ಭಾವಗಳನ್ನು ತಿರಸ್ಕರಿಸಿ ಹೆಣ್ಣಿನ ಬದುಕಿನ ಕುರಿತು ಇತ್ಯಾತ್ಮಕ ಧೋರಣೆಯನ್ನು ತೋರಿದ ವಿಧಾನವನ್ನು ಪ್ರಸ್ತುತ ಅಧ್ಯಯನವು ಗಮನಿಸಿದೆ.

ಅನುಪಮಾರಲ್ಲಿ ವ್ಯಕ್ತಿಗತವಾಗಿದ್ದ ಬಂಡಾಯ ಮನೋಧರ್ಮ, ವೈಜ್ಞಾನಿಕ ವಿಶ್ಲೇಷಣೆ ಮತ್ತು ಮಾನವೀಯ ಸಹಜ ಅನುಕಂಪ ಕಾಳಜಿಗಳು ಸ್ತ್ರೀ ಪಾತ್ರಚಿತ್ರಣದಲ್ಲಿ ವ್ಯಕ್ತವಾಗಿರುವ ವಿಧಾನವನ್ನು ಪ್ರಸ್ತುತ ಅಧ್ಯಯನವು ಗಮನಿಸಿದೆ.

ಆಧುನಿಕಪೂರ್ವಕಾಲದಲ್ಲಿ ಬರವಣಿಗೆಯಲ್ಲಿ ತೊಡಗಿಸಿಕೊಂಡು ಸ್ತ್ರೀ ಅಭಿವ್ಯಕ್ತಿಯನ್ನು ಪ್ರಯತ್ನಿಸಿದವರು ಶಿವಶರಣೆಯರು ಮತ್ತು ಕವಯತ್ರಿ ಹೊನ್ನಮ್ಮ. ತಮ್ಮ ಬದುಕಿನ ಸೀಮಿತ ಪರಿಸರ, ವ್ಯಾಪ್ತಿಯೊಳಗೆ, ಅಭಿವ್ಯಕ್ತಿಗೆ ಮನಸ್ಸು ಹರಿಸಿದ ಈ ಕವಯತ್ರಿಯರ ಕೃತಿ ಆಧಾರಿತ ಅಧ್ಯಯನಗಳು ಎರಡು ಬಂದಿವೆ:

೧. ಶಿವಶರಣೆಯರ ವಚನಗಳಲ್ಲಿ ಸಾಮಾಜಿಕ ಪ್ರಜ್ಞೆ[೨] ( ಡಾ|| ಸುಲೋಚನಾ ಎಸ್ ಮಟ್ಟಿ., ೧೯೯೩)

೨. 'ಹೊನ್ನಮ್ಮನ ಹದಿಬದೆಯ ಧರ್ಮ - ಒಂದು ಅಧ್ಯಯನ'[೩] (ಡಾ|| ಮಧು ವೆಂಕಾರೆಡ್ಡಿ, ೧೯೮೮)

ಆಧುನಿಕ ಯೋಚನಾಕ್ರಮಗಳಿಗೆ ಭಿನ್ನವಾಗಿ ಹೊನ್ನಮ್ಮನ ಕಾವ್ಯವು ಪಾತಿವ್ರತ್ಯ ಮೌಲ್ಯವನ್ನು ಉನ್ನತೀಕರಿಸಿ, ಆ ಮೂಲಕ ಗೃಹಿಣಿಧರ್ಮವನ್ನು, ಎತ್ತಿಹಿಡಿಯುತ್ತದೆ. ಪ್ರಸ್ತುತ ಅಧ್ಯಯನವು ಕೃತಿನಿಷ್ಠವಾಗಿರುವುದರಿಂದ ಹೊನ್ನಮ್ಮನಿಂದ ಭಿನ್ನ ನಿಲುವು ತೋರುವುದು ಇಲ್ಲಿ ಸಾಧ್ಯವಾಗಿಲ್ಲ.

ಶರಣಕ್ರಾಂತಿಯಲ್ಲಿ ಹನ್ನೆರಡನೆ ಶತಮಾನ ಸ್ತ್ರೀ ಸ್ವಾತಂತ್ರ್ಯಕ್ಕೆ ನೀಡಿದ ಉದಾಹರಣೆಗಳಂತೆ ಶರಣೆಯರ ವಚನಗಳಿವೆ. ವಿಭಿನ್ನ ಸಾಮಾಜಿಕ ಪರಿಸರದಿಂದ ಬಂದ ಶರಣೆಯರು ತಮ್ಮ ನಿಜ ಅನುಭವವನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿರುವುದು ಮತ್ತು ಈ ಅಭಿವ್ಯಕ್ತಿಯೂ ಸಮಕಾಲೀನ ಯೋಚನಕ್ರಮಗಳಿಗೆ ಸಂವಾದಿಯಾಗಿರುವುದು ತಿಳಿಯವುದು ಆವಶ್ಯಕವಾಗಿದೆ.

ಶಿವಶರಣೆಯರ ವಚನಗಳಲ್ಲಿ ಸಾಮಾಜಿಕ ಪ್ರಜ್ಞೆಯ ಗುರುತಿಸುವಿಕೆ 'ಸ್ತ್ರೀ ಎಚ್ಚರ'ದ ಗುರುತಿಸುವಿಕೆಯ ದೃಷ್ಟಿಯಿಂದಲೂ ಮಹತ್ವವನ್ನು ಪಡೆಯುತ್ತದೆ. ಸಾಹಿತ್ಯದಲ್ಲಿ ಮಹಿಳೆ ಅಥವಾ ಪಾತ್ರ ಕೇಂದ್ರಿತ ನೆಲೆಯ ಅಧ್ಯಯನದಲ್ಲಿ ಸ್ತ್ರೀ ಪಾತ್ರಾಭಿವ್ಯಕ್ತಿಯನ್ನು ಗುರುತಿಸುವ ಪ್ರಯತ್ನಗಳು ಸಂಶೋಧನಾ ಕ್ಷೇತ್ರದಲ್ಲಿ ಹಲವು ವಿಧದಲ್ಲಿ ನಡೆದಿವೆ. ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಪುರಾಣ ಸ್ತ್ರೀ ಪಾತ್ರಗಳ ಪುನರ್ ವ್ಯಾಖ್ಯಾನಗಳು ಈ ಅಧ್ಯಯನಗಳ ಕೇಂದ್ರಭಾಗದಲ್ಲಿ ಇವೆ.

ಪ್ರಾಚೀನ ಮತ್ತು ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಪುರಾಣ, ಮಹಾಕಾವ್ಯ ಮತ್ತು ಧಾರ್ಮಿಕ ಕ್ಷೇತ್ರ ಕತೆಗಳಿಗೆ ಸಂದಿರುವ ಪ್ರಾಮುಖ್ಯತೆದಾಗಿ ಈ ಅವಧಿಯ ಸಾಹಿತ್ಯ ಕೃತಿಗಳಲ್ಲಿ ಕಾಣಿಸಿಕೊಂಡಿರುವ ಸ್ತ್ರೀ ಪಾತ್ರಗಳೂ ಈ ಹಿನ್ನೆಲೆಯವುಗಳೇ ಆಗಿವೆ.

ದ್ರೌಪದಿ, ಚಿತ್ರಾಂಗದೆ, ಸೀತೆ, ಗಿರಿಜೆ ಮೊದಲಾದ ನಾಯಕಿಪಾತ್ರಗಳೊಡನೆ, ಇತರ ಪುರಾಣ ಪಾತ್ರಗಳೂ ಅಧ್ಯಯನವಿಶ್ಲೇಷಣೆಯಲ್ಲಿ ಕೇಂದ್ರ ಸ್ಥಾನವನ್ನು ಪಡೆದಿವೆ. ಪ್ರಾಚೀನಕಾಲದಿಂದ ಆಧುನಿಕ ಯುಗದವರೆಗೆ ಬಂದ ಪಠ್ಯಗಳ ಮೂಲಕ ಸ್ತ್ರೀ ಪರಿಕಲ್ಪನೆಯುವಿಭಿನ್ನ ಕಥಾನಕಗಳ ಸ್ತ್ರೀ ಪಾತ್ರಾಭಿವ್ಯಕ್ತಿಯ ಮೂಲಕ ಹೊಂದಿರಬಹುದಾದ ರೂಪವ್ಯತ್ಯಾಸಗಳನ್ನು ಗುರುತಿಸಿಕೊಳ್ಳಲು ಈ ಕ್ಷೇತ್ರದಲ್ಲಿ ನಡೆದಿರುವ ಸಂಶೋಧನೆಗಳು ಸಹಕರಿಸುತ್ತವೆ.

ಮೂಲಮಾದರಿಯನ್ನು ಮುಂದುವರಿಸುವುದು ಅಥವಾ ಬದಲಾವಣೆಗೆ ಒಳಪಡಿಸುವುದು ಕವಿಸ್ವಾತಂತ್ರ್ಯವನ್ನು ಹೊಂದಿಕೊಂಡು ನಡೆಯುವ ಪ್ರಕ್ರಿಯೆಯಾಗಿದೆ. ಈ ದಿಕ್ಕಿನಲ್ಲಿ ನಡೆದಿರುವ ಸ್ತ್ರೀಪಾತ್ರಕೇಂದ್ರಿತ ಅಧ್ಯಯನಗಳು ಇಂದಿನ ಅಧ್ಯಯನ ಕ್ರಮಗಳಿಗೆ ಪೂರಕ ನೆಲೆಯನ್ನು ಒದಗಿಸುವ ಸಾಧ್ಯತೆಗಳಾಗಿ ಕಾಣಿಸಿಕೊಳ್ಳುತ್ತವೆ.

ಹೀಗೆ ನಡೆದಿರುವ ಕೆಲವು ಅಧ್ಯಯನಗಳು: ಪ್ರಾಚೀನ ಸಾಹಿತ್ಯದಲ್ಲಿ ಮೂಡಿರುವ ಹೆಣ್ಣಿನ ಪರಿಕಲ್ಪನೆಯನ್ನು ಸಾಂಪ್ರದಾಯಿಕ ರೀತಿಯಲ್ಲಿ ವಿವರಿಸುವ ನಿಬಂಧ: 'ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಹೆಣ್ಣಿನ ಪರಿಕಲ್ಪನೆ,[೪] (ಡಾ|| ಕೇಶವಶರ್ಮ, ಕೆ. ೧೯೮೮). ಕಾವ್ಯಪ್ರಕಾರದಲ್ಲಿ ಬಂದಿರುವ ಸ್ತ್ರೀ ಪರಿಕಲ್ಪನೆಯ ಕುರಿತಾಗಿ ನಡೆದ ಅಧ್ಯಯನ:

'ಕನ್ನಡ ಕಾವ್ಯ ಮತ್ತು ಹೆಣ್ಣು' (ಡಾ|| ವೀರಣ್ಣ ಸಿ. ೧೯೯೧) ವಚನಸಾಹಿತ್ಯದಲ್ಲಿ ಬಂದಿರುವ ಸ್ತ್ರೀ ಚಿತ್ರಣವನ್ನು ವಿವರಿಸುವ ಪ್ರಯತ್ನ : 'ವಚನಕಾರರ ದೃಷ್ಟಿಯಲ್ಲಿ ಸ್ತ್ರೀ' (ಡಾ|| ಶೈಲಜಾ ಉಡುಚಣ, ೧೯೭೮)

ನಾಯಕಿ ಪಾತ್ರವನ್ನು ಕೇಂದ್ರವಾಗಿಟ್ಟುಕೊಂಡು ಕಾವ್ಯ ರಚಿಸಿದ ಮೊದಲ ಕವಿ ಹರಿಹರ. ಹರಿಹರನ ಸಾಹಿತ್ಯದಲ್ಲಿ ಸ್ತ್ರೀ ಪಾತ್ರಗಳು ಸಂಖ್ಯೆ ಮತ್ತು ಪ್ರಾಮುಖ್ಯತೆಗಳಲ್ಲಿ ಮೊದಲ ಸ್ಥಾನದಲ್ಲಿವೆ. ಹರಿಹರ ಕಾವ್ಯಗಳಲ್ಲಿ ಬಂದಿರುವ ಪೌರಾಣಿಕ, ಚಾರಿತ್ರಿಕ ಮತ್ತು ಸಾಮಾನ್ಯವರ್ಗಕ್ಕೆ ಸೇರಿದ ಸ್ತ್ರೀ ಕುರಿತಾಗಿ ಬಂದಿರುವ ಅಧ್ಯಯನ: 'ಹರಿಹರ ಕವಿಯ ಸ್ತ್ರೀ ಪಾತ್ರದರ್ಶನ' (ಡಾ|| ಜವಳಿ. ಬಿ.ಸಿ., ೧೯೭೯)

ಈ ಪ್ರಬಂಧದಲ್ಲಿ ಹರಿಹರ ಕವಿಯೊಡನೆ ಜಗತ್ತಿನ ಇತರ ಶ್ರೇಷ್ಠಲೇಖಕರೆನಿಸಿಕೊಂಡಿರುವ ಕಾಳಿದಾಸ, ಬಾಸ, ಪ್ರೇಮಚಂದ ಮತ್ತು ಶೇಕ್ಸಪಿಯರ್ ಕೃತಿಗಳ ಸ್ತ್ರೀಪಾತ್ರಗಳನ್ನು ವಿವೇಚನೆ ಒಳಪಡಿಸಲಾಗಿದೆ. ಇಲ್ಲಿ ಭಿನ್ನ ಸಂಸ್ಕೃತಿ ಮತ್ತು ಭಿನ್ನ ಪ್ರಾದೇಶಿಕ ಹಿನ್ನೆಲೆಯ ಲೇಖಕರ ಮನೋಧರ್ಮ ಸ್ತ್ರೀ ಪಾತ್ರಚಿತ್ರಣದಲ್ಲಿ ಪ್ರಭಾವ ಬೀರಿರಬಹುದಾದ ಅಂಶದತ್ತ ಗಮನ ಹರಿಸಲಾಗಿದೆ. ಅದೇ ರೀತಿ ವಿಭಿನ್ನ ಹಿನ್ನೆಲೆಯಲ್ಲಿ ಬದುಕಿದ ಭಕ್ತಿಸಾಹಿತ್ಯದ ಪ್ರಮುಖ ಅನುಭಾವಿ ಕವಯತ್ರಿಯರನ್ನು ಪರಿಚಯಿಸುತ್ತದೆ. ಅಕ್ಕಮಹಾದೇವಿ, ಆಂಡಾಳ್, ಮೀರಾ, ಕಾರಿಕಾಲಮ್ಮ, ರಬಿಯಾ, ಲಲ್ಲೇಶ್ವರಿ, ಸಂತತೆರೆಸಾ, ಸಂತ ಜಾನ್ ಮೊದಲಾದವರ ವಿವರಗಳೂ ಇಲ್ಲಿ ಇವೆ.

ವೈಯಕ್ತಿಕ ನೋವಿಗೆ ಪ್ರತಿಭಟನಾ ವಿಧಾನವಾಗಿ ಲೌಕಿಕ ಬದುಕಿನ ಸುಖಭೋಗಗಳನ್ನು ನಿರಾಕರಿಸಿದ ಈ ಕವಯತ್ರಿಯರು ಸಾಹಿತ್ಯವನ್ನು ತಮ್ಮ ಅಭಿವ್ಯಕ್ತಿ ಮಾಧ್ಯಮವಾಗಿ ಸ್ವೀಕರಿಸಿದವರು. ಲೌಕಿಕದ ನಿರಾಕರಣೆ ಅವರಿಗೆ ವೈಯಕ್ತಿಕ ಸ್ವಾತಂತ್ರ್ಯವನ್ನು ದೊರಕಿಸುವ ಮುಖ್ಯಪ್ರೇರಣೆಯೂ ಆಗಿದೆ.

ಬೇರೆ ಬೇರೆ ಕಾಲಘಟ್ಟದಲ್ಲಿ ಬಂದಿರುವ ಕನ್ನಡದ ಕೃತಿಗಳಲ್ಲಿ ಸೀತೆ, ದ್ರೌಪದಿ ಮತ್ತು ಇತರ ಪುರಾಣ ಪಾತ್ರಗಳ ಕುರಿತಾದ ಅಧ್ಯಯನಗಳು ಪಾತ್ರಕೇಂದ್ರಿತ ನೆಲೆಯಲ್ಲಿವೆ. ತೌಲನಿಕ ಅಧ್ಯಯನಗಳಲ್ಲಿ ಭಿನ್ನ ಕಾಲಘಟ್ಟದ, ಕವಿಗಳ ವಿಭಿನ್ನ ಮನೋಧರ್ಮವನ್ನು ಪರಸ್ಪರ ತೂಗಿ ನೋಡುವ ರೀತಿಯಲ್ಲಿ ಈ ಅಧ್ಯಯನಗಳು ಇವೆ. ಕವಿ/ಲೇಖಕ ತಾನು ಬದುಕುವ ಪರಿಸರ, ತನ್ನ ಕಾಲದ ಜೀವನವಿಧಾನ, ಮೌಲ್ಯದ ಪ್ರಭಾವ ಮತ್ತು ಅನ್ಯಪ್ರೇರಣೆಗೆ ಒಳಗಾಗಿರುವ ಸಂಭವ ಇದೆ. ಎಲ್ಲ ಕವಿಗಳಿಗೂ ಈ ಮಾತು ಅನ್ವಯಸಬೇಕಿಲ್ಲವಾದರೂ ಕೆಲವರಾದರೂ ಸಮಕಾಲೀನತೆಗೆ ಸ್ಪಂದಿಸಿ ಕೃತಿರಚನೆ ಮಾಡಿದ್ದಾರೆ. ಕುವೆಂಪುರವರ 'ಶ್ರೀರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ಪುರಾಣ ಸ್ತ್ರೀಪಾತ್ರಗಳು ಮಾನವೀಯ ನೆಲೆಯಲ್ಲಿ ಗುಣ/ದೋಷ ಎರಡನ್ನೂ ಪಡೆದಿವೆ.

ಪುರಾಣ ಪಾತ್ರಗಳನ್ನು ಮಾನವೀಯನೆಲೆಯಲ್ಲಿ ನೋಡುವುದು ಕುವೆಂಪುರವರಿಗೆ ಸಾಧ್ಯವಾಗಿರುವುದರಿಂದ ಅವರ ಕೃತಿಯಾಧಾರಿತ ಅಧ್ಯಯನವು ಸಮಕಾಲೀನ ಸಾಹಿತ್ಯ ಸಂದರ್ಭದಲ್ಲಿ ಪುರಾಣ ಪಾತ್ರಗಳನ್ನು ಕಲ್ಪಿಸಿಕೊಳ್ಳಲು ಸಹಕಾರಿಯಾಗಿದೆ. 'ರಾಮಾಯಣದರ್ಶನಂನ ಸ್ತ್ರೀ ಪಾತ್ರಗಳು' (ಡಾ|| ಕಲಾಶ್ರೀ ಎಚ್.ಎಂ. ೧೯೯೪) ಈ ರೀತಿಯ ಪ್ರಯತ್ನವಾಗಿದೆ.

ಮಹಾಭಾರತ ಮತ್ತು ರಾಮಾಯಣದ ಸ್ತ್ರೀಪಾತ್ರಗಳನ್ನು ಕೇಂದ್ರವಾಗಿಟ್ಟುಕೊಂಡು ಬೇರೆ ಬೇರೆ ನೆಲೆಗಳಿಂದ ನಾಲ್ಕು ಅಧ್ಯಯನಗಳು ನಡೆದಿದೆ:

೧. 'ಪ್ರಾಚೀನ ಕನ್ನಡ ಕೃತಿಗಳಲ್ಲಿ ದ್ರೌಪದಿಯ ಪಾತ್ರಚಿತ್ರಣ'[೧೯] (ಡಾ|| ಪ್ರಭಾವತಿ ಎಸ್.ವಿ., ೧೯೭೬)

೨. 'ದ್ರೌಪದೀ ಸಮೀಕ್ಷೆ'[೨೦] (ಡಾ|| ಮಣಿಮಾಲಿನಿ ವಿ. ಕೆ., ೧೯೯೬)

೩. 'ಕನ್ನಡ ಸಾಹಿತ್ಯದಲ್ಲಿ ಚಿತ್ರಾಂಗದ'[೨೧] (ಡಾ|| ಶೋಭಾ ಸಾಹುಕಾರ)

೪. 'ಕನ್ನಡ ಮಹಾಕಾವ್ಯಗಳಲ್ಲಿ ಸೀತೆಯ ಪಾತ್ರ'[೨೪] (ಡಾ|| ಮಂದಾಕಿನಿ ತವಗ, ೧೯೮೪)

ಪ್ರಾಚೀನ ಸಾಹಿತ್ಯದಲ್ಲಿ ಸೀತೆ ಮತ್ತು ದ್ರೌಪದಿ ಪಾತ್ರಗಳು ಮೂಲ ಕಲ್ಪನೆಯಿಂದ ಹೆಚ್ಚು ಭಿನ್ನತೆ ತೋರದೆ ಉಳಿದು ಬಿಟ್ಟಿರುವುದರಿಂದ ಈ ಸತೀತ್ವದ ಮಾದರಿಗಳನ್ನು ಅವುಗಳ ಗುಣಶೀಲಗಳ ಹಿನ್ನೆಲೆಯಿಂದ ನೋಡುವುದು ಮಾತ್ರ ಸಾಧ್ಯವಾಗುತ್ತದೆ.

ಇಲ್ಲಿವರೆಗೆ ಸಾಹಿತ್ಯಕ್ಷೇತ್ರಕ್ಕೆ ಸಂಬಂಧಿಸಿದ ವಿವರಗಳನ್ನೊಳಗೊಂಡ ಅಧ್ಯಯನವನ್ನು ಗಮನಿಸುವುದರೊಂದಿಗೆ, ಮೇಲೆ ವ್ಯಕ್ತಪಡಿಸಲಾಗಿರುವ ವಿವರಗಳಿಗೆ ಭಿನ್ನರೀತಿಯ ನೆಲೆಯಿಂದ ಬಂದಿರುವ ಎರಡು ಸಂಶೋಧನಾ ಪ್ರಬಂಧಗಳನ್ನು ಸ್ತ್ರೀಕೇಂದ್ರಿತನೆಲೆಯ ಅಧ್ಯಯನಕ್ಕೆ ಸಂವಾದಿಯಾಗಿ ಪರಿಗಣಿಸಬಹುದಾಗಿದೆ. ಅವುಗಳೆಂದರೆ: 'ಶಾಸನಗಳಲ್ಲಿ ಸ್ತ್ರೀ ಸಮಾಜ'[೨೨] (ಡಾ|| ಎಲಿಗಾರ ಚೆನ್ನಕ್ಕ, ೧೯೮೧) ಮತ್ತು 'ಕರ್ನಾಟಕದಲ್ಲಿ ಸತಿ ಪದ್ಧತಿ'[೨೩] (ಡಾ||ಬಿ.ಎಸ್.ಶೇಟ್, ೧೯೮೮).

ಚರಿತ್ರೆ ಲೇಖದ ಅನುಪಸ್ಥಿತಿಯಲ್ಲಿ ಶಾಸನ ಸಾಹಿತ್ಯ ಮತ್ತು ಕಾವ್ಯಪ್ರಕಾರಗಳ ಆಧಾರವನ್ನು ಇಟ್ಟುಕೊಂಡು ಪ್ರಾಚೀನ ಕರ್ನಾಟಕದ ಸ್ತ್ರೀ ಸಮಾಜವನ್ನು ಕಟ್ಟಿಕೊಡುವ ಈ ಪ್ರಯತ್ನಗಳು ಮಹತ್ವಪೂರ್ಣ ಮಾಹಿತಿಯನ್ನು ನೀಡುತ್ತವೆ. ಪ್ರಾಚೀನ ಕರ್ನಾಟಕದ ಸಾಮಾಜಿಕ ಪರಿಸರದ ಸ್ತ್ರೀಯ ಸ್ಥಾನಮಾನವನ್ನು ನಿರ್ಧರಿಸುವುದರಲ್ಲಿ ಧರ್ಮ ಮತ್ತು ರಾಜತ್ವ ಬೀರಿದ ಪ್ರಭಾವದ ಸ್ವರೂಪವನ್ನು ನಿರ್ದಿಷ್ಟ ಕಾಲಾವಧಿಯ ದಾಖಲೆಯ ಶಾಸನಗಳ ಮೂಲಕ ವಿವರಿಸುವ ಈ ಅಧ್ಯಯನವು ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಕಾರಣಗಳ ಮೂಲಕ ಹೆಣ್ಣಿನ ಸ್ಥಿತಿಯನ್ನು ವಿಶ್ಲೇಷಿಸುತ್ತದೆ. ಗೃಹಿಣಿ ಸಮಾಜ, ಸೂಳೆ ಸಮಾಜದ ಉಲ್ಲೇಖ, ಸತೀತ್ವ, ಪಾತಿವ್ರತ್ಯಮೌಲ್ಯಗಳ ಆದರಣೆ, ಸ್ತ್ರೀಶಿಕ್ಷಣ ಮತ್ತು ಸ್ತ್ರೀ ಸ್ವಾತಂತ್ರ್ಯಕ್ಕೆ ಒದಗಿದ ಖಂಡನೆ, ಸತಿಪದ್ಧತಿಗಳ ವೈಭವೀಕರಣ ಈ ಎಲ್ಲ ವಿವರಗಳನ್ನು ಪ್ರಾಚೀನ ಸಮಾಜ ಒಳಗೊಂಡಿರುವುದರಿಂದ ಇಂದಿನ ಸಮಾಜದ ಸ್ತ್ರೀ ಸ್ಥಾನಮಾನಗಳ ಹಿನ್ನೆಲೆಯಾಗಿ ಈ ಶೋಷಣಾನೆಲೆಗಳನ್ನು ತಿಳಿಯವುದು ಆವಶ್ಯಕವಾಗಿದೆ.

ಇದುವರೆಗೆ ಕಥನ ಸಾಹಿತ್ಯ ಪ್ರಕಾರದಲ್ಲಿ ಮತ್ತು ಕನ್ನಡ ಸಾಹಿತ್ಯವನ್ನು ಸ್ತ್ರೀ ಕೇಂದ್ರಿತನೆಲೆಯಲ್ಲಿ ಅಧ್ಯಯನಮಾಡಿದ ಸಂಶೋಧನಾವಿಧಾನಗಳನ್ನು ಮತ್ತು ವಿವರಗಳನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

ಈ ಸಂಶೋಧನಾ ಮಹಾಪ್ರಬಂಧವು ಕನ್ನಡ ಕಥನಸಾಹಿತ್ಯ ಪ್ರಕಾರವನ್ನು ಸ್ತ್ರೀಕೇಂದ್ರಿತನೆಲೆಯಿಂದ ಅಧ್ಯಯನಕ್ಕೆ

ಒಳಪಡಿಸುವ ವಿಧಾನವನ್ನು ಅಳವಡಿಸಿಕೊಂಡಿದೆ. ಸಾಹಿತ್ಯದಲ್ಲಿ ಮಹಿಳೆಯನ್ನು ಗುರುತಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲಿ ಒಂದು.

ಪ್ರಸ್ತುತ ಪ್ರಬಂಧ ಸ್ವರೂಪವು ಹೀಗಿದೆ: ಈ ಪ್ರಬಂಧದಲ್ಲಿ ನಾಲ್ಕು ಭಾಗಗಳಿವೆ: ಪ್ರಸ್ತಾಪನೆ, ಅಧ್ಯಾಯಗಳು, ಉಪಸಂಹಾರ ಮತ್ತು ಅನುಬಂಧ.

ಪ್ರಸ್ತಾವನೆಯಲ್ಲಿ ಅಧ್ಯಯನಕ್ಕೆ ಆಯ್ಕೆಮಾಡಿರುವ ಸ್ತ್ರೀನಿರ್ವಚನದ ಸಮಸ್ಯೆ ಕುರಿತು ಬೇರೆ ಬೇರೆ ಕ್ಷೇತ್ರಗಳಲ್ಲಿ ನಡೆದಿರುವ ಪ್ರಯತ್ನಗಳ ಮತ್ತು ಬೇರೆ ಬೇರೆ ಆಲೋಚನೆಗಳ ಸ್ಥೂಲ ಪರಿಚಯವನ್ನು ಮಾಡಿಕೊಡಲಾಗಿದೆ. ಸ್ತ್ರೀನಿರ್ವಚನವನ್ನು ಸಾಹಿತ್ಯದಲ್ಲಿ ಕಂಡುಕೊಳ್ಳಬೇಕಾದ ಅಗತ್ಯಕ್ಕೆ ಪೂರಕವಾಗಿ ಈ ಮಾಹಿತಿಗಳ ಪರಿಚಯವನ್ನು ನೀಡಲಾಗಿದೆ. ಅನ್ಯ ಜ್ಞಾನಶಿಸ್ತುಗಳ ರೀತಿಯಲ್ಲಿಯೇ ಸಾಹಿತ್ಯವೂ ಸಮಕಾಲೀನ ಅಗತ್ಯಗಳಿಗೆ ಯಾವ ರೀತಿಯಲ್ಲಿ ಸಹಕಾರಿಯಾಗಬಲ್ಲದು ಎಂಬ ದೃಷ್ಟಿಯಲ್ಲಿ ಇಲ್ಲಿ ವಿವರಣೆಯನ್ನು ನೀಡಲಾಗಿದೆ. ಅಧ್ಯಾಯಗಳು ಒಟ್ಟು ಎಂಟು ಇವೆ. ಅಧ್ಯಯನ ಪ್ರವೇಶಕ್ಕೆ ಆವಶ್ಯಕವಾದ ರೀತಿಯಲ್ಲಿ ಅಧ್ಯಾಯಗಳನ್ನು ನಾಲ್ಕು ವಿಭಾಗಗಳಾಗಿ ವಿಂಗಡಿಸಲಾಗಿದೆ.

ಮೊದಲ ಅಧ್ಯಾಯವು ಅಧ್ಯಯನ ಸ್ವರೂಪವನ್ನು ಕುರಿತ ವಿವರಣೆ ನೀಡುತ್ತದೆ. 'ಕನ್ನಡ ಕಥನ ಸಾಹಿತ್ಯ ಮತ್ತು ಸ್ತ್ರೀನಿರ್ವಚನ' ಸಂಶೋಧಾನಾ ಪ್ರಬಂಧದ ಉದ್ದೇಶ, ವ್ಯಾಪ್ತಿ ಮತ್ತು ಇಲ್ಲಿವರೆಗೆ ಈ ಕ್ಷೇತ್ರದಲ್ಲಿ ನಡೆದ ಸಂಶೋಧನೆಗಳ ಸಂಕ್ಷಿಪ್ತ ಪರಿಚಯದೊಡನೆ, ಪ್ರಸ್ತುತ ಮಹಾಪ್ರಬಂಧದ ವಿವರಗಳನ್ನು ಇಲ್ಲಿ ಪರಿಚಯಿಸಲಾಗಿದೆ. ಉಳಿದ ಅಧ್ಯಾಯಗಳು ನಾಲ್ಕು ವಿಭಾಗಗಳಲ್ಲಿ ಇರುತ್ತವೆ: ಸಾಹಿತ್ಯ ಮತ್ತು ಸ್ತ್ರೀಪರಿಕಲ್ಪನೆ, ಕಥನ ಸಾಹಿತ್ಯ ಮತ್ತು ಸ್ತ್ರೀಪ್ರಧಾನತೆ, ಕಥನ ಸಾಹಿತ್ಯದಲ್ಲಿ ಸ್ತ್ರೀ ಅಭಿವ್ಯಕ್ತಿ ಮತ್ತು ಕತಾಸಾಹಿತ್ಯದಲ್ಲಿ ಸ್ತ್ರೀ ಪಾತ್ರಗಳು. 'ಸಾಹಿತ್ಯದಲ್ಲಿ ಸ್ತ್ರೀಪರಿಕಲ್ಪನೆ' ಅಧ್ಯಾಯವು (ಅಧ್ಯಾಯ ೨) ಸಾಹಿತ್ಯದಲ್ಲಿ ಕಾಣಿಸಿಕೊಳ್ಳುವ ಸ್ತ್ರೀ ಚಿತ್ರಣದ ಮೇಲೆ ಪ್ರಭಾವಬೀರುವ ವಿವಿಧ ಅಂಶಗಳ ಕುರಿತು ಚರ್ಚೆಗೆ ಅವಕಾಶ ನೀಡುತ್ತದೆ. ಸಾಹಿತ್ಯ ರಚನೆಗಳಲ್ಲಿ ಕಾಣಿಸಿಕೊಳ್ಳುವ ಸ್ತ್ರೀ ಮತ್ತು ವಾಸ್ತವಿಕನೆಲೆಯಲ್ಲಿರುವ ಸ್ತ್ರೀಗೆ ಇರಬಹುದಾದ ವ್ಯತ್ಯಾಸಗಳು/ಭಿನ್ನತೆ ಯಾವ ರೀತಿಯಲ್ಲಿ ತಮ್ಮ ಉದ್ದೇಶವನ್ನು ವ್ಯಕ್ತಪಡಿಸುವಲ್ಲಿ ಕಾರ್ಯನಿರತವಾಗುತ್ತವೆ ಎನ್ನುವುದು ಇಲ್ಲಿ ಗಮನಕ್ಕೆ ತಂದುಕೊಳ್ಳಲಾಗಿದೆ. ಆಯಾ ಕಾಲದ ಅಗತ್ಯಗಳಿಗೆ ಅನುಗುಣವಾದ ರೀತಿಯಲ್ಲಿಯೇ ಸಾಹಿತ್ಯವು ಕೂಡಾ ತನ್ನಲ್ಲಿರುವ ಸ್ತ್ರೀ ಪರಿಕಲ್ಪನೆಯನ್ನು ಬದಲಾವಣೆಗೆ ಒಳಪಡಿಸಿಕೊಂಡಿದೆ. ಈ ಬದಲಾವಣೆಗಳು ಆವಶ್ಯಕವೆನಿಸುವ ಸಂದರ್ಭಗಳನ್ನು ಇಲ್ಲಿ ಶೋಧಿಸುವ ಪ್ರಯತ್ನವನ್ನು ಮಾಡಲಾಗಿದೆ.

'ಕಥನ ಸಾಹಿತ್ಯ ಮತ್ತು ಸ್ತ್ರೀಪ್ರಧಾನತೆ' ಅಧ್ಯಾಯದಲ್ಲಿ (ಅಧ್ಯಾಯ: ೩) ಕನ್ನಡದ ಸಣ್ಣಕತೆ ಮತ್ತು ಕಾದಂಬರಿಗಳು ತೋರಿದ ಸ್ತ್ರೀಪರ ದೃಷ್ಟಿಯನ್ನು ಗಮನಿಸಲಾಗಿದೆ. ಸಾಮಾಜಿಕ ವಸ್ತುವನ್ನುಳ್ಳ ಕತಾಸಾಹಿತ್ಯ ತನ್ನ ಉಗಮಕಾಲದಿಂದಲೇ ಹೆಣ್ಣಿನ ಬದುಕಿನ ವಿವರಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿರುವುದಕ್ಕೆ ಕಾರಣವಾದ ಅಂಶಗಳನ್ನು ಗುರುತಿಸಲಾಗಿದೆ. ಕನ್ನಡದ ಹೆಚ್ಚಿನ ಬರಹಗಾರರು ಸ್ತ್ರೀಕೇಂದ್ರಿತ ವಸ್ತುವಿಗೆ ಮತ್ತು ನಾಯಕಿ ಪ್ರಧಾನತೆಗೆ ಆದ್ಯತೆಗಳನ್ನು ನೀಡಿದ್ದಾರೆ. ಸಂಖ್ಯೆಯಲ್ಲಿ ಹೆಚ್ಚಿರುವ ಲೇಖಕಿಯರು ಸ್ತ್ರೀಪ್ರಧಾನ ಸಾಹಿತ್ಯ ರಚನೆಗೆ ಹೆಚ್ಚಿನ ಅವಕಾಶ ದೊರೆಯಲು ಸಹಕರಿಸಿದ್ದಾರೆ.

ಸಾಹಿತ್ಯದಲ್ಲಿ ಸ್ತ್ರೀ ನಿರ್ವಚನವನ್ನು ಗಮನಿಸಲು ಈ ಸಾಹಿತ್ಯ ಪ್ರಕಾರದ ಸ್ತ್ರೀಪರದೃಷ್ಟಿ ಅನುಕೂಲಕರವಾಗಿ ಸಂಭವಿಸುವುದರಿಂದ ಈ ಹಿನ್ನೆಲೆಯಲ್ಲಿ ಬಂದಿರುವ ಕತೆಕಾದಂಬರಿಗಳ ವಿವರಗಳನ್ನು ಬರಹಗಾರರ ಮಾಹಿತಿಯೊಡನೆ ಸಂಗ್ರಹಿಸಿ ಕೊಡಲಾಗಿದೆ.

'ಕಥನ ಸಾಹಿತ್ಯದಲ್ಲಿ ಸ್ತ್ರೀ ಅಭಿವ್ಯಕ್ತಿ' ಅಧ್ಯಾಯದಲ್ಲಿ (ಅಧ್ಯಾಯ: ೪) ೧೮೫೦ ರಿಂದ ೧೯೯೦ ರವರೆಗಿನ ಕತೆ, ಕಾದಂಬರಿಗಳಲ್ಲಿ ಮೂಡಿರುವ ಸ್ತ್ರೀ ಪಾತ್ರಾಭಿವ್ಯಕ್ತಿಯನ್ನು ವಿವರಿಸಲಾಗಿದೆ. ಮೂರು ಉಪವಿಭಾಗಗಳಲ್ಲಿ ಇಲ್ಲಿ ವಿಷಯದ ಪ್ರವೇಶವಿದೆ. ಮೊದಲನೆಯ ಉಪವಿಭಾಗದಲ್ಲಿ ಸಮಕಾಲೀನ ಸಾಮಾಜಿಕ ಸಂದರ್ಭ ಕಥನ ಸಾಹಿತ್ಯದ ಮೇಲೆ ಬೀರಿರುವ ಪ್ರಭಾವ ಮತ್ತು ಕಥನ ಸಾಹಿತ್ಯ ತನ್ನ ಸ್ತ್ರೀ ಪಾತ್ರಾಭಿವ್ಯಕ್ತಿಯಲ್ಲಿ ಈ ಮೂಲಕ ಪಡೆದಿರಬಹುದಾದ ಪ್ರೇರಣೆಯನ್ನು ಗಮನಿಸಲಾಗಿದೆ. ಎರಡನೇಯದರಲ್ಲಿ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲದ ಕತೆ ಕಾದಂಬರಿಗಳ ವಿಶ್ಲೇಷಣೆ ಮೂಲಕ ಸ್ತ್ರೀ ಅಭಿವ್ಯಕ್ತಿ ಸ್ವರೂಪವನ್ನು ನೋಡುವ ಪ್ರಯತ್ನ ಮಾಡಲಾಗಿದೆ. ಕೊನೆಯದಾಗಿ ಪಾತ್ರ ಚಿತ್ರಣಗಳು ಸ್ತ್ರೀ ಅಭಿವ್ಯಕ್ತಿಯಲ್ಲಿ ಪಾಲುಗೊಳ್ಳುವ ಅಂಶದತ್ತ ಗಮನಹರಿಸಲಾಗಿದೆ. ಸಮಕಾಲೀನ ಸಾಮಾಜಿಕ ಸಂದರ್ಭಗಳು, ರಾಜಕೀಯ ಬೆಳವಣಿಗೆಗಳು ಸಾಹಿತ್ಯವನ್ನು ಪ್ರಭಾವಿಸಿವೆ. ಈ ಪ್ರಭಾವದ ಪರಿಣಾಮವನ್ನು ಸ್ತ್ರೀ ಪಾತ್ರಚಿತ್ರಣದಲ್ಲಿ ಕಾಣಬಹುದಾಗಿದೆ. ಬರಹಗಾರರ ವೈಯಕ್ತಿಕ ಧೋರಣೆಯಿಂದಲೂ ಇಲ್ಲಿ ಕೆಲವು ಮಾದರಿ ಪಾತ್ರಗಳು ಮೂಡುತ್ತದೆ. ಈ ಮಾದರಿಗಳು ಕೂಡಾ ಕಾಲಾನುಕ್ರಮದಲ್ಲಿ ಭಿನ್ನರೀತಿಯವುಗಳಿಗೆ ದಾರಿಯನ್ನು ಬಿಟ್ಟುಕೊಡುವುದು ಕಾಣಬಹುದು.

ಕಥಾ ಸಾಹಿತ್ಯ ಸ್ತ್ರೀಯನ್ನು ವಿವರಿಸುವ ವಿಧಾನದಲ್ಲಿ ಸಮಕಾಲೀನತೆ, ಬರಹಗಾರರ ಧೋರಣೆ ಮತ್ತು ನಿರಂತರವಾಗಿ ಒದಲಾಗುತ್ತಿರುವ ಯೋಚನಾಕ್ರಮಗಳಿಂದ ಪ್ರಭಾವ ಪಡೆದಿರುವುದು ಇಲ್ಲಿ ವ್ಯಕ್ತವಾಗುತ್ತದೆ. ಅದೇ ರೀತಿ ಸ್ತ್ರೀ ನಿರ್ವಚಿಸಿಕೊಂಡಿರುವ ರೀತಿಯನ್ನು ಈ ವಿಶ್ಲೇಷಣೆಯು ವಿವರಿಸುತ್ತದೆ.

ಕತಾಸಾಹಿತ್ಯದಲ್ಲಿ ಸ್ತ್ರೀ ಪಾತ್ರಗಳನ್ನು ಗಮನಿಸುವ ಸಲುವಾಗಿ ಕನ್ನಡದ ನಾಲ್ಕು ಬರಹಗಾರರನ್ನು ಅಧ್ಯಯನದ ಉದ್ದೇಶಕ್ಕಾಗಿ ಪ್ರಾತಿನಿಧಿಕ ಬರಹಗಾರರೆಂದು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರಾತಿನಿಧಿಕ ಬರಹಗಾರರ ಆಯ್ಕೆ ಕೃತಿಗಳಿಂದ ಸ್ತ್ರೀಪಾತ್ರಗಳ ಚಿತ್ರಣದ ಮೂಲಕ ಸ್ತ್ರೀನಿರ್ವಚನದ ವಿವರಗಳನ್ನು ಸಂಗ್ರಹಿಸಲಾಗಿದೆ. ನಾಲ್ಕು ಪ್ರತ್ಯೇಕ ಅಧ್ಯಾಯಗಳಲ್ಲಿ ಪ್ರಾತಿನಿಧಿಕ ಬರಹಗಾರರನ್ನು ಅವರ ಕೃತಿ ಮತ್ತು ಪಾತ್ರಚಿತ್ರಣದ ಮೂಲಕ ವಿಶ್ಲೇಷಣೆಗೆ ಅವಕಾಶವನ್ನು ಮಾಡಲಾಗಿದೆ. ಪ್ರಾತಿನಿಧಿಕ ಬರಹಗಾರರು: ಶ್ರೀ ಶಿವರಾಮಕಾರಂತ ಶ್ರೀ ಎಸ್.ಎಲ್. ಬೈರಪ್ಪ, ಶ್ರೀಮತಿ ತ್ರಿವೇಣಿ ಮತ್ತು ಶ್ರೀಮತಿ ವೈದೇಹಿ.

ಸೃಜನಶೀಲಸಾಹಿತ್ಯ ರಚನೆಯಲ್ಲಿ ಹೆಚ್ಚಿನ ಕೃತಿಗಳನ್ನು ನೀಡಿರುವ ಈ ಬರಹಗಾರರು ಸಾಹಿತ್ಯಿಕ ಚಳುವಳಿಗಳಿಂದಾಗಲೀ, ಯಾವುದೇ ಪಂಥಗಳಿಂದಾಗಲೀ ತಮ್ಮನ್ನು ಗುರುತಿಸಿಕೊಂಡಿರುವುದು ಕಡಿಮೆ. ಕತಾಸಾಹಿತ್ಯ ಪ್ರಕಾರದಲ್ಲಿ ಮಹತ್ವಪೂರ್ಣ ಕೃತಿಗಳನ್ನು ರಚಿಸಿರುವ ಈ ಬರಹಗಾರರು ತಮ್ಮ ಕೃತಿಗಳಲ್ಲಿ ಸ್ತ್ರೀಪಾತ್ರಚಿತ್ರಣಕ್ಕೆ ಮತ್ತು ಸ್ತ್ರೀಕೇಂದ್ರಿತ ವಸ್ತುವಿಗೆ ಆದ್ಯತೆ ನೀಡಿದ್ದಾರೆ. ಹೆಣ್ಣನ್ನು ಮಾನವೀಯನೆಲೆಯಲ್ಲಿ ಕಾಣುವುದು, ಅವಳ ಸಮಸ್ಯೆಯನ್ನು ಇಡೀ ಸಮುದಾಯದ ಸಮಸ್ಯೆಯಾಗಿ ಕಾಣುವುದು ಮತ್ತು ತಮ್ಮ ಭಿನ್ನ ದೃಷ್ಟಿಕೋನದಿಂದ

ಸ್ತ್ರೀನಿರ್ವಚನವನ್ನು ಮಾಡಿರುವ ಹಿನ್ನೆಲೆಯಲ್ಲಿ ಈ ಬರಹಗಾರರನ್ನು ಆಯ್ಕೆ ಮಾಡಲಾಗಿದೆ.

'ತ್ರಿವೇಣಿ ಕಾದಂಬರಿಗಳಲ್ಲಿ ಸ್ತ್ರೀಪಾತ್ರಗಳು' ಅಧ್ಯಾಯದಲ್ಲಿ (ಅಧ್ಯಾಯ:೫) ತ್ರಿವೇಣಿಯವರ ಇಪ್ಪತ್ತು ಸಾಮಾಜಿಕ ಕಾದಂಬರಿಗಳಲ್ಲಿ ಬರುವ ಸ್ತ್ರೀಪಾತ್ರಗಳನ್ನು ವಿಶ್ಲೇಷಿಸಲಾಗಿದೆ. ತ್ರಿವೇಣಿಯದರ ೧೯ ಕಾದಂಬರಿಗಳು ನಾಯಕಿ ಪ್ರಧಾನಗಳಾಗಿವೆ. ಎಲ್ಲ ಕಾದಂಬರಿಗಳಲ್ಲಿ ಕೌಟುಂಬಿಕ ವಾತಾವರಣಗಳ ಚಿತ್ರಣವಿರುವುದು ಮತ್ತು ಸ್ತ್ರೀ ಬದುಕಿನ ಎಲ್ಲ ವಿವರಗಳಿಗೆ ಆದ್ಯತೆ ನೀಡಿರುವುದು ತ್ರಿವೇಣಿ ಕಾದಂಬರಿಗಳ ವೈಶಿಷ್ಟ್ಯ.

ತ್ರಿವೇಣಿಯವರಿಗೆ ಸ್ತ್ರೀ ಎಂದರೆ ರೂಢಿಗತ ಕಲ್ಪನೆಯಲ್ಲಿರುವ ಹೆಂಡತಿ, ತಾಯಿ ಮೊದಲಾದ ಸಾಮಾಜಿಕ ಪಾತ್ರವಾಗಿ ಮಾತ್ರ ಕಂಡಿಲ್ಲ. ಸ್ತ್ರೀ ಬದುಕನ್ನು ಅವಳ ಸ್ವಭಾವವನ್ನು ಅವಳ ವ್ಯಕ್ತಿತ್ವವನ್ನು ನಿಯಂತ್ರಿಸುವ ಸಾಮಾಜಿಕ ಮೌಲ್ಯಗಳನ್ನು ಮತ್ತು ಸ್ವತಃ ಹೆಣ್ಣಿನಲ್ಲಿಯೇ ಮೂಡಿರಬಹುದಾದ ಪ್ರಜ್ಞೆಯೊಂದನ್ನು ಗುರುತಿಸುವ ಪ್ರಯತ್ನವನ್ನು ತಮ್ಮ ಅಲ್ಪಾವಧಿಯ (ಸುಮಾರು ೧೨ ವರ್ಷಗಳ) ಬರವಣಿಗೆಯಲ್ಲಿ ತ್ರಿವೇಣಿ ಕಾಣಿಸಿದ್ದಾರೆ. ನಿರ್ದಿಷ್ಟ ಸ್ತ್ರೀ ಸಮಸ್ಯೆಯನ್ನು ಬೇರೆ ಬೇರೆ ಕಾದಂಬರಿಗಳಲ್ಲಿ ಪುನರಾವರ್ತನೆ ಮಾಡಿಕೊಳ್ಳುತ್ತ ಒಂದೇ ವಿಚಾರವನ್ನು ವಿವಿಧ ಕೋನಗಳಿಂದ ಪರಿಶೀಲನೆ ಒಳಪಡಿಸುತ್ತ ಬೇರೆ ಬೇರೆ ಪರಿಸರದ ಹೆಣ್ಣು ಇದಕ್ಕೆ ಪ್ರತಿಕ್ರಿಯೆ ನೀಡುವುದರಲ್ಲಿರುವ ಭಿನ್ನತೆಯನ್ನು ಗುರುತಿಸಿ ಕೊಳ್ಳುವ ಪ್ರಾಯೋಗಿಕ ವಿಧಾನದ ಮೂಲಕ ತ್ರಿವೇಣಿ ಸ್ತ್ರೀ ವ್ಯಕ್ತಿತ್ವದ ಆಯಾಮಗಳನ್ನು ಅನಾವರಣಗೊಳಿಸುತ್ತಾರೆ.

ತ್ರಿವೇಣಿ ಕಾದಂಬರಿಗಳಲ್ಲಿ ಬರುವ ಸ್ತ್ರೀನಿರ್ವಚನದ ಮಾದರಿಗಳನ್ನು ಕುಟುಂಬ ವ್ಯವಸ್ಥೆ, ವೈವಾಹಿಕ ಬದುಕು, ಪುರುಷ ಸಂಬಂಧಗಳ ಮೂಲಕ ಸ್ಪಷ್ಟಪಡಿಸುವ ಪ್ರಯತ್ನ ಮಾಡಲಾಗಿದೆ.

'ವೈದೇಹಿ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು' ಅಧ್ಯಾಯದಲ್ಲಿ (ಅಧ್ಯಾಯ:೬) ವೈದೇಹಿಯವರ ೨೮ ಸಣ್ಣಕತೆಗಳನ್ನು ಆಯ್ಕೆಮಾಡಿ, ಈ ಕತೆಗಳಲ್ಲಿ ಬರುವ ಸ್ತ್ರೀ ಪಾತ್ರಗಳನ್ನು ವಿಶ್ಲೇಷಿಸಲಾಗಿದೆ. ವೈದೇಹಿಯವಗದು ಸ್ತ್ರೀ ದೃಷ್ಟಿಕೋನದ ಬರವಣಿಗೆ. ಅವರ ಕತಾಸಾಹಿತ್ಯಕ್ಕೆ ತಾತ್ತ್ವಿಕ ಚೌಕಟ್ಟು ಕಾಣಿಸದಿದ್ದರೂ, ಸ್ತ್ರೀ ಪರಚಿಂತನೆಗಳ ಪ್ರಭಾವ ಅವರ ಕತೆಗಳ ಮೇಲೆ ಆಗಿರುವುದು ಸ್ಪಷ್ಟ.

ವೈದೇಹಿಯವರ ಬಹುತೇಕ ಕತೆಗಳು ಸ್ತ್ರೀ ಕೇಂದ್ರಿತ ವಸ್ತುವನ್ನುಳ್ಳ ಕತೆಗಳಾಗಿವೆ. ಸಮಾಜದ ಎಲ್ಲ ವರ್ಗದ ಸ್ತ್ರೀ ಯರಿಗೆ ಆದ್ಯತೆ ನೀಡುವ ಈ ಕತೆಗಳಲ್ಲಿ ಸ್ತ್ರೀಪರ ಕಾಳಜಿ ಪ್ರಧಾನನೆಲೆಯಲ್ಲಿ ಕಾಣಿಸಿಕೊಂಡಿದೆ. ವೈದೇಹಿ ಕತೆಗಳ ಸ್ತ್ರೀ ನಿರ್ವಚನ ಮಾದರಿಗಳನ್ನು ಕುಟುಂಬ ವ್ಯವಸ್ಥೆ, ವೈವಾಹಿಕ ಬದುಕು ಮತ್ತು ಕತೆಯ ಪಾತ್ರಚಿತ್ರಣದ ಮೂಲಕ ಸ್ಪಷ್ಟಪಡಿಸುವ ಪ್ರಯತ್ನ ಇಲ್ಲಿಯದು.

'ಕಾರಂತರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು' ಅಧ್ಯಾಯದಲ್ಲಿ (ಅಧ್ಯಾಯ:೭) ಕಾರಂತರ ಕಾದಂಬರಿಗಳಲ್ಲಿ ಬಂದಿರುವ ಸ್ತ್ರೀ ಪಾತ್ರಗಳನ್ನು ಸ್ಥೂಲವಾಗಿ ಮತ್ತು ಅವರ ನಾಲ್ಕು ಕಾದಂಬರಿಗಳಲ್ಲಿ ಬಂದಿರುವ ಸ್ತ್ರೀ ಪಾತ್ರಚಿತ್ರಣವನ್ನು ವಿವರವಾಗಿ ಇಲ್ಲಿ ಗಮನಿಸಲಾಗಿದೆ. ಕಾರಂತರ ೪೫ ಸಾಮಾಜಿಕ ಕಾದಂಬರಿಗಳಲ್ಲಿ ಅನೇಕ ಸ್ತ್ರೀ ಪಾತ್ರಗಳು ಕಾಣಿಸಿಕೊಳ್ಳುತ್ತವೆ. ಅಜ್ಜಿ, ತಾಯಿ, ಅತ್ತೆ, ಹೆಂಡತಿ, ಸಾಕು ತಾಯಿ, ಮಗಳು, ನಾದಿನಿ, ಸೂಳೆ -

ಈ ರೀತಿ ಕೌಟುಂಬಿಕ ಮತ್ತು ಸಾಮಾಜಿಕ ನೆಲೆಗಳಿಂದ ಪುರುಷಸಂಬಂಧದ ಮೂಲಕ ಕಾಣಿಸಿಕೊಳ್ಳುವ ಪಾತ್ರಗಳು ಇಲ್ಲಿ ಪ್ರಧಾನ ಭೂಮಿಕೆಯಲ್ಲಿ ಕಾಣಿಸಿಕೊಳ್ಳುತ್ತವೆ. ಕಾರಂತರು ಮನುಷ್ಯ ಪರಿಕಲ್ಪನೆಯಲ್ಲಿ ಗಂಡು ಮತ್ತು ಹೆಣ್ಣು ಎರಡೂ ಜಾತಿಗಳನ್ನು ಗಣನೆಗೆ ತಂದು ಕೊಳ್ಳುತ್ತಾರೆ. ವೈಯಕ್ತಿಕ ಬದುಕಿನಲ್ಲಿ ನಡೆಯುವ ಘಟನೆಗಳನ್ನು, ಸಂಬಂಧಗಳನ್ನು ವಿವರಿಸುವ ಪ್ರಸಂಗಗಳಲ್ಲಿ ಗಂಡುಹೆಣ್ಣು ಜಾತಿಯನ್ನು ಒಂದೇ ನೆಲೆಯಲ್ಲಿ ಕಾಣುವ ಇತ್ಯಾತ್ಮಕ ಧೋರಣೆ ಕಾರಂತರಲ್ಲಿದ್ದರೂ ಕೂಡಾ ಸ್ತ್ರೀ ಪಾತ್ರ ಚಿತ್ರಣದಲ್ಲಿ ಸ್ತ್ರೀ ಅನುಭವ ವಿವರಿಸುವ ಸಂದರ್ಭದಲ್ಲಿ ಪುರುಷನೆಲೆಯ ವಿಮರ್ಶಕ ದೃಷ್ಟಿಯನ್ನು ಗುರುತಿಸುವುದು ಸಾಧ್ಯವಿದೆ.

ಕಾರಂತರ 'ಮೂಕಜ್ಜಿಯ ಕನಸುಗಳು' ಸರಸಮ್ಮನ ಸಮಾಧಿ' 'ಮೈಮನಗಳ ಸುಳಿಯಲ್ಲಿ' ಮತ್ತು 'ಅಳಿದ ಮೇಲೆ' ಕಾದಂಬರಿಯ ಮುಖ್ಯ ಸ್ತ್ರೀಪಾತ್ರಗಳಲ್ಲಿ ಸ್ತ್ರೀ ನಿರ್ವಚನದ ಮಾದರಿಗಳನ್ನು ಗುರುತಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

'ಭೈರಪ್ಪನವರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು' ಅಧ್ಯಾಯದಲ್ಲಿ (ಅಧ್ಯಾಯ:೮) ಭೈರಪ್ಪನವರ ಕಾದಂಬರಿಗಳಲ್ಲಿ ಬರುವ ಸ್ತ್ರೀ ಪಾತ್ರಗಳನ್ನು ಸ್ಥೂಲವಾಗಿಯೂ, ಅವರ ನಾಲ್ಕು ಕಾದಂಬರಿಗಳ ಸ್ತ್ರೀ ಪಾತ್ರಗಳನ್ನು ವಿವರವಾಗಿಯೂ ಇಲ್ಲಿ ಗಮನಿಸಲಾಗಿದೆ. ಬೈರಪ್ಪನವರ ಕಾದಂಬರಿಗಳಲ್ಲಿ ಪಾತ್ರಚಿತ್ರಣಕ್ಕೆ ಆದ್ಯತೆ ಇದೆ. ವ್ಯಕ್ತಿನಿಷ್ಠ ಮನೋಭಾವವನ್ನು ಇವರ ಅನೇಕ ಕಾದಂಬರಿಗಳು ವ್ಯಕ್ತಪಡಿಸಿವೆ. ಧರ್ಮತತ್ವ ನಿರೂಪಣೆ ಭೈರಪ್ಪನವರ ಕಾದಂಬರಿ ಆಶಯಗಳಲ್ಲಿ ಒಂದಾದರೆ, ಆದರ್ಶ ವ್ಯಕ್ತಿತ್ವದ ಚಿತ್ರಣ ಆ ಆಶಯದ ಇನ್ನೊಂದು ಮುಖ. ಕೇಂದ್ರ ಆಶಯಕ್ಕೆ ಬದ್ಧತೆಯಿರದ ಪಾತ್ರಗಳಿಗೆ ಸೋಲು ಮತ್ತು ದೌರ್ಬಲ್ಯಗಳು ಇಲ್ಲಿ ಸಾಮಾನ್ಯ. ಭೈರಪ್ಪನವರ ೧೮ ಕಾದಂಬರಿಗಳಲ್ಲಿ ನಾಲ್ಕು ಕಾದಂಬರಿಗಳು ಸ್ತ್ರೀ ಕೇಂದ್ರಿತ ವಸ್ತುವನ್ನು ಹೊಂದಿವೆ. ಭೈರಪ್ಪನವರು ಸ್ವಾತಂತ್ರ್ಯೋತ್ತರ ಅವಧಿಯ ಕಾದಂಬರಿಕಾರರು. ತಮ್ಮ ಬರವಣಿಗೆಯ ಅವಧಿಯಲ್ಲಿ (ಸುಮಾರು ಎಪ್ಪತ್ತರ ದಶಕದಲ್ಲಿ) ಪ್ರಾರಂಭವಾದ ಸ್ತ್ರೀ ಪುರುಷ ಸಮಾನತೆಯ ಚರ್ಚೆ, ಚಿಂತನೆ ಮತ್ತು ಆಂದೋಲನಗಳನ್ನು ಗಮನಿಸಿರುವುದು ಅವರ ಬರವಣಿಗೆ ಮೂಲಕ ಸ್ಪಷ್ಟವಾಗುತ್ತದೆ. ತೊಂಭತ್ತರ ದಶಕದಲ್ಲಿ ಅವರು ಪ್ರಕಟಿಸಿರುವ 'ಅಂಚು' ಮತ್ತು 'ತಂತು' ಕಾದಂಬರಿಗಳಲ್ಲಿ ಬರುವ ವಿವರಗಳು ಸ್ತ್ರೀ ಸಮಾನತೆಯ ಚರ್ಚೆ ಉಂಟು ಮಾಡಿದ ಪ್ರಭಾವವನ್ನು ಸ್ಪಷ್ಟಪಡಿಸುತ್ತದೆ.

ಭೈರಪ್ಪನವರ 'ವಂಶವೃಕ್ಷ' 'ಗೃಹಭಂಗ' 'ಅಂಚು' ಮತ್ತು 'ತಂತು' ಕಾದಂಬರಿಗಳ ನಾಯಕಿ ಪಾತ್ರಗಳಲ್ಲಿ ಸ್ತ್ರೀ ನಿರ್ವಚನದ ಮಾದರಿಗಳನ್ನು ಗುರುತಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

'ಉಪಸಂಹಾರ' ವಿಭಾಗದಲ್ಲಿ ಸಂಶೋಧನೆ ಕೈಗೆತ್ತಿಕೊಂಡಿರುವ ಸಮಸ್ಯೆಗೆ ಪರಿಹಾರ ಕಂಡುಕೊಂಡ ವಿಧಾನವನ್ನು ವಿವರವಾಗಿ ಚರ್ಚಿಸಲಾಗಿದೆ. ಸಣ್ಣಕತೆ, ಕಾದಂಬರಿ ಪ್ರಕಾರದ ರೀತಿಯಲ್ಲಿಯೇ ಕನ್ನಡ ಸಾಹಿತ್ಯದ ಇತರ ಪ್ರಕಾರಗಳನ್ನು ಆಕರರೂಪದಲ್ಲಿ ಇಟ್ಟುಕೊಂಡು ಸ್ತ್ರೀ ನಿರ್ವಚನದ ವಿವರಣೆಯ ಸಾಧ್ಯತೆಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಅನುಬಂಧದಲ್ಲಿ ನಾಲ್ಕು ಉಪವಿಭಾಗಗಳಿವೆ. ಪ್ರಾತಿನಿಧಿಕ ಬರಹಗಾರರ ಕೃತಿಸೂಚಿ ಮತ್ತು ಕೃತಿವಿವರವನ್ನುಳ್ಳ

ಆಕರಗ್ರಂಥಸೂಚಿ ಮೊದಲ ಭಾಗದಲ್ಲಿ ಇದೆ.

ಮಹಾಪ್ರಬಂದದಲ್ಲಿ ಆಕರಗ್ರಂಥರೂಪದಲ್ಲಿ ಬಳಕೆಯಾಗಿರುವ ಕಾದಂಬರಿ, ಕತಾಸಂಕಲನ, ವಿಮರ್ಶೆ, ಸಂಶೋಧನೆ, ಅಭಿನಂಧನಗ್ರಂಥ, ಬದುಕು-ಬರಹ, ಜೀವನಚರಿತ್ರೆ, ಆತ್ಮಚರಿತ್ರೆ, ಅನುವಾದ ಸಾಹಿತ್ಯ ಮತ್ತು ಮಹಿಳಾ ಅಧ್ಯಯನಕ್ಕೆ ಸಂಬಂಧಿಸಿದ ಗ್ರಂಥ ಸೂಚಿ ಎರಡನೆ ಭಾಗದಲ್ಲಿ ಇದೆ. ಲೇಖನ ಸೂಚಿ ಮೂರರಲ್ಲಿಯೂ ಆಂಗ್ಲ ಭಾಷೆಯ, ಆಕರ ಗ್ರಂಥ ಮತ್ತು ಲೇಖನಗಳನ್ನು ನಾಲ್ಕನೇಯದರಲ್ಲಿ ಕೊಡಲಾಗಿದೆ.

ಇಲ್ಲಿವರೆಗೆ ನಡೆದಿರುವ ಅಧ್ಯಯನಗಳನಲ್ಲಿ ಹೆಚ್ಚಿನವು ಆಧುನಿಕ ಪೂರ್ವ ಕಾಲಾವಧಿಯ ಸಾಹಿತ್ಯರಚನೆಗಳನ್ನು ಕೇಂದ್ರವಾಗಿಟ್ಟುಕೊಂಡು ನಡೆದ ಪ್ರಯತ್ನಗಳಾಗಿವೆ. ಪ್ರಾಚೀನ ಲಿಖಿತ ಸಾಹಿತ್ಯ ಮತ್ತ ಪ್ರಾಚೀನ ಶಾಸನ ಸಾಹಿತ್ಯ ಈ ಅಧ್ಯಯನದ ಮುಖ್ಯ ಆಕರಗಳಾಗಿವೆ. ಮಹಿಳಾ ಸಾಹಿತ್ಯದ ಕುರಿತಾದ ಸ್ತ್ರೀ ಕೇಂದ್ರಿತ ಅಧ್ಯಯನಗಳಲ್ಲಿ ಮಾತ್ರ ಆಧುನಿಕ ಸಾಹಿತ್ಯವು ಆಕರವಾಗಿದೆ.

ಸಾಹಿತ್ಯ ಯಾವುದೇ ಕಾಲಘಟ್ಟದ್ದಾಗಿರಲಿ, ಅದರ ಸಮಕಾಲೀನತೆಯಿಂದ ಹೊರತಾಗಿರುವುದು ಅದಕ್ಕೆ ಸಾಧ್ಯವಾಗುವುದಿಲ್ಲ. ಪ್ರಾಚೀನ ಮತ್ತು ಮಧ್ಯಕಾಲೀನ ಕನ್ನಡ ಸಾಹಿತ್ಯವು ಬಹುವಾಗಿ ಧರ್ಮ ಮತ್ತು ಪ್ರಭುತ್ವದ ಪ್ರಭಾವದಿಂದ ಮೂಡಿರುವ ಸಾಹಿತ್ಯವಾಗಿದೆ. ಆಧುನಿಕ ಸಾಹಿತ್ಯವು ಮಾನವಕೇಂದ್ರಿತ ನೆಲೆಯ ವಿಚಾರಗಳಿಂದ ಪ್ರಭಾವಿತವಾಗಿರುವುದರಿಂದ ಮತ್ತು ವಸಾಹತು ಆಡಳಿತಾವಧಿಯದಾಗಿ ಕಥನಸಾಹಿತ್ಯ ಪ್ರಕಾರವೇ ಆಗಿರುವುದರಿಂದ ಆಧುನಿಕ ಚಿಂತನಾಕ್ರಮದ ಮೂಲಕ ಈ ಸಾಹಿತ್ಯಧ್ಯಯನವನ್ನು ಪ್ರವೇಶ ಪಡೆಯುವುದು ಹೆಚ್ಚು ಸೂಕ್ತವೆಂದು ಇಲ್ಲಿ ತಿಳಿಯಲಾಗಿದೆ. ಆಧುನಿಕ ಚಿಂತನಾಕ್ರಮವಾಗಿರುವ ಸ್ತ್ರೀವಾದದ ಮೂಲಕ ಕನ್ನಡದ ಸಣ್ಣ ಕತೆಗಳ ಅಧ್ಯಯನವಾಗಿ ಇತ್ತೀಚಿಗೆ ಬಂದಿರುವ ಸಂಶೋಧನ ಮಹಾಪ್ರಬಂಧ; 'ಕನ್ನಡ ಸಣ್ಣಕತೆಗಳು - ಒಂದು ಸ್ತ್ರೀವಾದಿ ಅಧ್ಯಯನ'[೨೫] (ಡಾ|| ಗಿರಿಜಾ ಶಾಸ್ತ್ರೀ, ೧೯೯೪)

**ಅಡಿಟಿಪ್ಪಣಿಗಳು**

೧. ಮಾಹಿತಿ ಆಕರ: ಸಂವದತ್ತಿಮಠ, ಸಂಗಮೇಶ, (೧೯೯೫) "**ಕನ್ನಡದ ವಿವಿಧ ಕ್ಷೇತ್ರಗಳಲ್ಲಿ ವಿಶ್ವವಿದ್ಯಾಲಯಗಳಿಂದ ಸ್ವೀಕೃತ ಸಂಶೋಧನ ಪ್ರಬಂಧಗಳು**", ಸಾಹಿತ್ಯ ಸಂಶೋಧನ ಮಾರ್ಗ, ರೂಪರಶ್ಮಿ ಪ್ರಕಾಶನ, ಕಲಬುರ್ಗಿ, ಪುಟ : ೧೫೬ - ೨೦೩ ಮತ್ತು ಶ್ರೀ ರವೀಂದ್ರಕುಮಾರ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರ ವೈಯಕ್ತಿಕ ಸಂಗ್ರಹ ಮಾಹಿತಿಗಳಿಂದ.

೨. ದುರಗಿ, ಶಕುಂತಳಾ, '**ಆಧುನಿಕ ಕನ್ನಡದಲ್ಲಿ ಮಹಿಳಾ ಸಾಹಿತ್ಯ**' ಪಿಎಚ್.ಡಿ. ಮಹಾಪ್ರಬಂಧ, ಗುಲಬರ್ಗಾ, ವಿಶ್ವವಿದ್ಯಾಲಯದಿಂದ ಸ್ವೀಕೃತ, ೧೯೮೨.

೩. ಘಂಟಿ, ಮಲ್ಲಿಕಾ, "**ಕನ್ನಡದಲ್ಲಿ ಮಹಿಳಾ ಕಥಾಸಾಹಿತ್ಯ**", ಪಿಎಚ್.ಡಿ. ಮಹಾಪ್ರಬಂಧ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಿಂದ ಸ್ವೀಕೃತ, ೧೯೯೧.

೪. ನಾಯಕ, ವಿನಯಾ, "**ಕನ್ನಡದಲ್ಲಿ ಮಹಿಳಾ ಬಂಡಾಯ ಸಾಹಿತ್ಯ**" ಪಿಎಚ್.ಡಿ. ಮಹಾಪ್ರಬಂಧ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಿಂದ ಸ್ವೀಕೃತ.

೫. ಮಹಿಷಿ, ಸರೋಜಿನಿ, '**ಕನ್ನಡದ ಕವಯತ್ರಿಯರು**' ಪಿಎಚ್.ಡಿ. ಮಹಾಪ್ರಬಂಧ ಕರ್ನಾಟಕ ವಿಶ್ವವಿದ್ಯಾಲಯ,

ಧಾರವಾಡದಿಂದ ಸ್ವೀಕೃತ, ೧೯೬೨.

೬. ಕಮಲಮ್ಮ, ವಿ., "ಅಕ್ಕಮಹಾದೇವಿ ಜೀವನ ಮತ್ತು ಕೃತಿಗಳು'' ಪಿಎಚ್.ಡಿ. ಮಹಾಪ್ರಬಂಧ ಉಸ್ಮಾನಿಯಾ ವಿಶ್ವವಿದ್ಯಾಲಯದಿಂದ ಸ್ವೀಕೃತ, ೧೯೭೦.

೭. ಪಾಟೀಲ್.ಎಸ್.ಎಸ್., 'ಅಕ್ಕಮಹಾದೇವಿ' ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿ.ವಿ., ಧಾರವಾಡದಿಂದ ಸ್ವೀಕೃತಿ, ೧೯೮೭.

೮. ವಿನೋದಾಬಾಯಿ. ಎಸ್., "ಆಂಡಾಳ್, ಮಹಾದೇವಿ, ಮೀರಾ" ಪಿಎಚ್.ಡಿ. ಮಹಾಪ್ರಬಂಧ, ದೆಹಲಿ ವಿಶ್ವವಿದ್ಯಾಲಯ, ದೆಹಲಿಯಿಂದ ಸ್ವೀಕೃತಿ, ೧೯೭೯.

೯. ಅಪ್ಪಾಜಿಗೌಡ. ಎಸ್.ವಿ. "ನಂಜನಗೂಡು ತಿರುಮಲಾಂಬ - ಒಂದು ಅಧ್ಯಯನ" ಪಿಎಚ್.ಡಿ. ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾಲಯದಿಂದ ಸ್ವೀಕೃತಿ, ೧೯೮೯.

೧೦. ಪುರೋಹಿತ, ಮಂದಾಕಿನಿ, "ಶ್ರೀಮತಿ ಎಂ.ಕೆ. ಇಂದಿರಾರ ಕಾದಂಬರಿಗಳು", ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಿಂದ ಸ್ವೀಕೃತ, ೧೯೮೫.

೧೧. ಪಾಟೀಲ, ವಿಜಯಶ್ರೀ, "ಅನುಪಮಾ ನಿರಂಜನ ಅವರ ಕಾದಂಬರಿಗಳು - ಒಂದು ಸಾಹಿತ್ಯಿಕ ಅಧ್ಯಯನ", ಪಿಎಚ್.ಡಿ. ಮಹಾಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯದಿಂದ ಸ್ವೀಕೃತ, ೧೯೯೧.

೧೨. ಮಟ್ಟಿ, ಸುಲೋಚನಾ, ಎಸ್., "ಶಿವಶರಣೆಯರ ವಚನಗಳಲ್ಲಿ ಸಾಮಾಜಿಕ ಪ್ರಜ್ಞೆ" ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಿಂದ ಸ್ವೀಕೃತ, ೧೯೯೩.

೧೩. ವೆಂಕಾರೆಡ್ಡಿ. ಮಧು., "ಹೊನ್ನಮ್ಮನ ಹದಿಬದೆಯ ಧರ್ಮ - ಒಂದು ಅಧ್ಯಯನ" ಪಿಎಚ್.ಡಿ ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಿಂದ ಸ್ವೀಕೃತ, ೧೯೮೯.

೧೪. ಕೇಶವಶರ್ಮಾ.ಕೆ., "ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಹೆಣ್ಣಿನ ಪರಿಕಲ್ಪನೆ" ಪಿಎಚ್.ಡಿ. ಮಹಾಪ್ರಬಂಧ, ಮಂಗಳೂರು ವಿಶ್ವವಿದ್ಯಾಲಯದಿಂದ ಸ್ವೀಕೃತ,೧೯೮೯.

೧೫. ವೀರಣ್ಣ.ಸಿ., "ಕನ್ನಡ ಕಾವ್ಯ ಮತ್ತು ಹೆಣ್ಣು", ಪಿಎಚ್.ಡಿ. ಮಹಾಪ್ರಬಂಧ, ಬೆಂಗಳೂರು, ವಿಶ್ವವಿದ್ಯಾಲಯದಿಂದ ಸ್ವೀಕೃತಿ, ೧೯೯೧.

೧೬. ಉಡುಚಣ, ಶೈಲಜಾ, "ವಚನಕಾರರ ದೃಷ್ಟಿಯಲ್ಲಿ ಸ್ತ್ರೀ" ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಿಂದ ಸ್ವೀಕೃತ, ೧೯೭೮.

೧೭. ಜವಳಿ. ಬಿ.ಸಿ.,"ಹರಿಹರಕವಿಯ ಸ್ತ್ರೀಪಾತ್ರದರ್ಶನ", ಪಿಎಚ್ ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಿಂದ ಸ್ವೀಕೃತ, ೧೯೭೯.

೧೮. ಕಲಾಶ್ರೀ. ಎಚ್.ಎಂ., "ರಾಮಾಯಣದರ್ಶನಂನಲ್ಲಿನ ಸ್ತ್ರೀಪಾತ್ರಗಳು", ಪಿಎಚ್.ಡಿ. ಮಹಾಪ್ರಬಂಧ, ಮೈಸೂರು, ವಿಶ್ವವಿದ್ಯಾಲಯದಿಂದ ಸ್ವೀಕೃತ, ೧೯೯೪.

೧೯. ಪ್ರಭಾವತಿ. ಎಸ್.ವಿ., "ಪ್ರಾಚೀನ ಕನ್ನಡ ಕೃತಿಗಳಲ್ಲಿ ದ್ರೌಪದಿಯ ಪಾತ್ರಚಿತ್ರಣ" ಪಿಎಚ್.ಡಿ. ಮಹಾಪ್ರಬಂಧ, ಬೆಂಗಳೂರು ವಿಶ್ವವಿದ್ಯಾಲಯದಿಂದ ಸ್ವೀಕೃತ, ೧೯೭೬.

೨೦. ಮಣಿ – ಮಾಲಿನಿ. ವಿ.ಕೆ. " ದ್ರೌಪದೀ ಸಮೀಕ್ಷೆ", ಪಿಎಚ್.ಡಿ. ಮಹಾಪ್ರಬಂಧ, ಮುಂಬೈ ವಿಶ್ವವಿದ್ಯಾಲಯದಿಂದ ಸ್ವೀಕೃತ, ೧೯೯೬.

೨೧. ಸಾಹುಕಾರ, ಶೋಭಾ, "ಕನ್ನಡ ಸಾಹಿತ್ಯದಲ್ಲಿ ಚಿತ್ರಾಂಗದ" ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಿಂದ ಸ್ವೀಕೃತ.

೨೨. ಎಲಿಗಾರ, ಚೆನ್ನಕ್ಕ, "ಶಾಸನಗಳಲ್ಲಿ ಸ್ತ್ರೀ ಸಮಾಜ", ಪಿ.ಎಚ್ .ಡಿ. ಮಹಾಪ್ರಬಂಧ,ಕರ್ನಾಟಕ

ವಿಶ್ವವಿದ್ಯಾಲಯ, ಧಾರವಾಡದಿಂದ ಸ್ವೀಕೃತ, ೧೯೮೧.

೨೩. ಶೇಟ್.ಬಿ.ಎಸ್., "**ಕರ್ನಾಟಕದಲ್ಲಿ ಸತಿ ಪದ್ಧತಿ**", ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಿಂದ ಸ್ವೀಕೃತ, ೧೯೮೮.

೨೪. ತವಗ, ಮಂದಾಕಿನಿ, "**ಕನ್ನಡ ಮಹಾಕಾವ್ಯಗಳಲ್ಲಿ ಸೀತೆಯ ಪಾತ್ರ**" ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಿಂದ, ಸ್ವೀಕೃತ, ೧೯೮೪.

೨೫. ಶಾಸ್ತ್ರೀ, ಗಿರಿಜಾ, "**ಕನ್ನಡ ಸಣ್ಣಕತೆಗಳು - ಒಂದು ಸ್ತ್ರೀವಾದಿ ಅಧ್ಯಯನ**" ಪಿಎಚ್.ಡಿ. ಮಹಾಪ್ರಬಂಧ, ಮುಂಬೈ ವಿಶ್ವವಿದ್ಯಾಲಯ, ಮುಂಬೈ,೧೯೯೪.

## ಅಧ್ಯಾಯ ೨

# ಸಾಹಿತ್ಯ ಮತ್ತು ಸ್ತ್ರೀ ಪರಿಕಲ್ಪನೆ

'ಸ್ತ್ರೀ ಪರಿಕಲ್ಪನೆ'ಯನ್ನು ಸ್ತ್ರೀ ಕುರಿತಾದ ಭಾವಗೃಹಿಕೆ ಎಂದು ತಿಳಿಯಬಹುದು. ಸಾಹಿತ್ಯದ ಸ್ತ್ರೀ ಪರಿಕಲ್ಪನೆ, ಸಾಹಿತ್ಯದ ಭಾವಗೃಹಿಕೆಯಲ್ಲಿರುವ ಹೆಣ್ಣು ಅಥವಾ ಹೆಣ್ಣಿನ ಸ್ವರೂಪವಾಗಿರುತ್ತದೆ. ಸಾಹಿತ್ಯ ಚರಿತ್ರೆಯ ವಿವಿಧ ಕಾಲಘಟ್ಟದ ಸ್ತ್ರೀ ಪರಿಕಲ್ಪನೆಗಳಲ್ಲಿ ಏಕಸೂತ್ರತೆ ಕಾಣವುದು ಕಷ್ಟಸಾಧ್ಯ. ಸಾರ್ವತ್ರಿಕವಾದ ಪರಿಕಲ್ಪನೆಯೊಂದು ಸ್ತ್ರೀ ವ್ಯಕ್ತಿತ್ವವನ್ನು ರೂಪಿಸಿರಬಹುದಾದ ಸಾಧ್ಯತೆಗಳು ಸಾಹಿತ್ಯ ಸಂದರ್ಭದಲ್ಲಿ ಗೋಚರವಾಗುವುದಿಲ್ಲ. ಆದರೆ ಪರಸ್ಪರ ಸಂವಾದಿರೂಪದಲ್ಲಿ ನಂಬಿಕೆಗಳು, ವಿಚಾರಗಳು ಹೆಣ್ಣಿನ ಅಸ್ತಿತ್ವವನ್ನು, ಅವಳ ವ್ಯಕ್ತಿತ್ವವನ್ನು ಸಾಹಿತ್ಯದ ಮೂಲಕ ನಿರೂಪಿಸಿವೆ; ಕಟ್ಟಿಕೊಟ್ಟಿವೆ. ಸಾಹಿತ್ಯದ ಮುಖ್ಯವಾಹಿನಿಗಳಲ್ಲಿ ಗೋಚರವಾದ ಆದರ್ಶನೆಲೆಯ ಸ್ತ್ರೀ ವ್ಯಕ್ತಿತ್ವದಲ್ಲಿ ಕಾಣಬಹುದಾದ/ಗುರುತಿಸಬಹುದಾದ ಭಿನ್ನತೆಯು ಆಯಾಕಾಲದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಸರವನ್ನು ತಿಳಿಯುವುದಕ್ಕೂ ಸಹಾಯಕವಾಗಿವೆ. ಕಾಲಾನುಕ್ರಮದಲ್ಲಿ ಸಾಹಿತ್ಯಘಟ್ಟಗಳು ಸಮಕಾಲೀನ ಸಾಮಾಜಿಕ ಮತ್ತು ಸಾಂಸ್ಕೃತಿಕ ಪಲ್ಲಟಗಳಿಗೆ ಸ್ಪಂದಿಸುವ ನೆಲೆಯಲ್ಲಿ, ತಮ್ಮ ಮೌಲ್ಯ ಸ್ವೀಕೃತಿಯಲ್ಲಿ ಉಂಟು ಮಾಡಿದ ಬದಲಾವಣೆಗಳು, ಆಯಾ ಕಾಲಘಟ್ಟ ಸ್ವೀಕರಿಸಿದ ವ್ಯಕ್ತಿತ್ವ ಸ್ವರೂಪದಲ್ಲಿ ಕೂಡಾ ಬದಲಾವಣೆಗಳನ್ನು ದಾಖಲಿಸಿವೆ.

ಕಲಾವಿದರ ಕಲ್ಪನೆ ಮತ್ತು ವಿಚಾರಗಳ ಆಧಾರದಲ್ಲಿ ಪುನರ್ ಸೃಷ್ಟಿಯಾಗುವ ವಾಸ್ತವಿಕತೆಯೇ ಒಂದು ಕಲಾಕೃತಿ. ಸಾಹಿತ್ಯವೂ ಒಂದು ಕಲೆ. ವಾಸ್ತವತೆಯನ್ನು ಪ್ರತಿನಿಧಿಸುವ ಒಂದು ಮಾದರಿ. ಹೀಗಾಗಿ ಒಂದು ಸಾಹಿತ್ಯ ಕೃತಿಯು ಬರಹಗಾರನ/ಳ ಕಲ್ಪನೆ ಮತ್ತು ವೈಚಾರಿಕತೆ ಮೂಲಕ ಕಟ್ಟಿಕೊಡುವ ವಾಸ್ತವಿಕತೆಯ ಪುನರ್ ಸೃಷ್ಟಿ ಅಥವಾ ಪ್ರತಿರೂಪವಾಗುತ್ತದೆ. ಈ ನೆಲೆಯಲ್ಲಿ ಸಾಹಿತ್ಯದ ಪರಿಕಲ್ಪನೆಯಲ್ಲಿ ಮಾಡಿರುವ ಸ್ತ್ರೀ ಸ್ವರೂಪವು ಲೇಖಕ/ಕಿಯ ಕಲ್ಪನೆ ಮತ್ತು ವೈಚಾರಿಕತೆಯ ಮೂಲಕ ಕಟ್ಟಿಕೊಡಲಾದ ವಾಸ್ತವಿಕ ನೆಲೆಯ ಸ್ತ್ರೀಯ ಪ್ರತಿಕೃತಿಯಾಗುತ್ತದೆ; ಮತ್ತು ಆಯಾಕಾಲದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಸರದ ಸ್ವೀಕೃತ ಮಾದರಿಯೂ ಆಗಿರುತ್ತದೆ. ಮನುಷ್ಯ ಬದುಕಿನ ಪ್ರತಿಯೊಂದೂ ಕಾಲಘಟ್ಟವು (ಸಾಮಾಜಿಕ ಸ್ಥಿತ್ಯಂತರವನ್ನು ಗುರುತಿಸಬಹುದಾದ ನಿಶ್ಚಿತ ಕಾಲಘಟ್ಟ) ತಾನು ಸ್ವೀಕರಿಸಿದ ಮೌಲ್ಯಾದರ್ಶಗಳ ಹಿನ್ನೆಲೆಯಲ್ಲಿ ಸ್ತ್ರೀ ಅಸ್ತಿತ್ವದ ಕುರಿತಾಗಿ ಕೆಲವೊಂದು ನಿರೀಕ್ಷೆಗಳನ್ನು ವ್ಯಕ್ತಪಡಿಸುತ್ತಾ ಬಂದಿದೆ. ಈ ನಿರೀಕ್ಷೆ ರೂಪಿಸಿರುವ ಸ್ತ್ರೀ ವ್ಯಕ್ತಿತ್ವವು ಆಯಾ ಕಾಲಘಟ್ಟ ಸ್ವೀಕರಿಸಿದ ಆದರ್ಶನೆಲೆಯ ಸ್ತ್ರೀ ಸ್ವರೂಪವೇ ಆಗಿದೆ. ಮತ್ತು ಈ ಸ್ತ್ರೀ ವ್ಯಕ್ತಿತ್ವವೇ ಸಾಹಿತ್ಯದಲ್ಲಿ ಕೂಡಾ ಅಭಿವ್ಯಕ್ತಿಗೊಂಡು ದಾಖಲಾಗಿರುವ ಸಂದರ್ಭಗಳು ಪ್ರಶ್ನಾತೀತವಾಗುತ್ತವೆ. ಸಾಹಿತ್ಯವು ತನ್ನ ಚರಿತ್ರೆಯುದ್ದಕ್ಕೂ ಹೆಣ್ಣಿನ ವ್ಯಕ್ತಿತ್ವ ಸ್ವರೂಪದಲ್ಲಿ ಬದಲಾವಣೆಗಳನ್ನು ದಾಖಲಿಸಿದ ವಿಧಾನವು ಮನುಷ್ಯ ಚರಿತ್ರೆಯಲ್ಲಿ ಸಮಾಜದ ನಿರೀಕ್ಷೆಗಳು ಸ್ತ್ರೀ ಕುರಿತಾಗಿ ತಮ್ಮಲ್ಲಿ ಗುರುತಿಸಿಕೊಂಡಿರಬಹುದಾದ ಬದಲಾವಣೆಗಳನ್ನೇ, ಅವು ವ್ಯಕ್ತಪಡಿಸಿವೆ ಎಂದು ತಿಳಿಯುವ ಸಾಧ್ಯತೆಗಳಿವೆ. ಈ ನೆಲೆಯಲ್ಲಿ ಸಾಹಿತ್ಯ ಕೃತಿಯನ್ನು ಸ್ವತಂತ್ರ ಸೃಷ್ಟಿಯೆಂದು ಒಪ್ಪದ ವಾದವು ಸಾಹಿತ್ಯರಚನೆಯನ್ನು ಸಾಂಸ್ಕೃತಿಕ

ಉತ್ಪಾದನೆಯಾಗಿ ಕಲ್ಪಿಸಿಕೊಳ್ಳುತ್ತದೆ. "ಸಾಹಿತ್ಯವು ಗಾಢವಾಗಿ ಚಾರಿತ್ರಿಕವಾದುದು ಒಬ್ಬ ವ್ಯಕ್ತಿಯ ಸೃಷ್ಟಿಗಿಂತ ಮುಖ್ಯವಾಗಿ ಅದೊಂದು ಸಾಂಸ್ಕೃತಿಕ ಉತ್ಪಾದನೆ. ಆದುದರಿಂದ ಶ್ರೇಷ್ಠ ಸಾಹಿತಿಗಳೆಂದು ಕರೆಯಲ್ಪಡುವವರು ಕೂಡಾ ಸಂಸ್ಕೃತಿ ವಿಮರ್ಶೆಗೆ ಹೊರತಾಗಿರುವುದಿಲ್ಲ. ಅತೀತರಲ್ಲ"[೭]. (ತೇಜಸ್ವಿನಿ , ೧೯೯೩: ೪೫). ಈ ಹಿನ್ನೆಲೆಯಲ್ಲಿ ಸಾಹಿತ್ಯದ ಸ್ತ್ರೀ ಪರಿಕಲ್ಪನೆಯನ್ನು ಅರಿಯಲು ಕೃತಿ, ಕೃತಿಕಾರನ ಪಾತ್ರದೊಡನೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸರವನ್ನು ತಿಳಿದು ಕೊಳ್ಳುವುದೂ ಆವಶ್ಯಕವಾಗುತ್ತದೆ. ಸಾಹಿತ್ಯ ಮತ್ತು ಸಮಾಜದ ಸಂಬಂಧವು ವಿಶಿಷ್ಟರೀತಿಯದು. ಬಹುಪಾಲು ಸಮಾಜದ ನಿರೀಕ್ಷೆಗಳು ಸಾಹಿತ್ಯ ಮಾಧ್ಯಮದ ಮೂಲಕ ವ್ಯಕ್ತವಾಗಿ ಮನುಷ್ಯನ ಆಲೋಚನೆಗಳನ್ನು, ಬದುಕಿನ ವಿಧಾನವನ್ನು ಪ್ರಭಾವಿಸಿವೆ, ನಿಯಂತ್ರಿಸಿವೆ ಅಥವಾ ರೂಪಿಸಿಯೂ ಇವೆ. ಅದರಲ್ಲಿ ಸ್ತ್ರೀ ಕುರಿತಾದ ನಿರೀಕ್ಷೆಗಳು ಈ ದಿಕ್ಕಿನಲ್ಲಿ ಪ್ರತ್ಯಕ್ಷ ರೂಪದಲ್ಲಿ ತಮ್ಮ ಕಾರ್ಯವನ್ನು ಸಾಧಿಸಿವೆ, ಸಾಧಿಸುತ್ತಿವೆ ಎಂಬುದು ಇತ್ತೀಚಿಗಿನ ಸ್ತ್ರೀಪರ ಚಿಂತನೆಯಲ್ಲಿ ಮೂಡಿರುವ ಅಭಿಪ್ರಾಯವಾಗಿದೆ. ಸಂಸ್ಕೃತಿಯೊಂದರ ಲಿಂಗಭೇದಮತದ ರೂಪಣೆಯಲ್ಲಿ ಸಾಹಿತ್ಯದ ಪಾತ್ರವನ್ನು ಅದರ ಸಹಭಾಗಿತ್ವವನ್ನು ವಿವರಿಸುವ ಈ ಅಭಿಪ್ರಾಯ ಹೀಗಿದೆ:

"ಇತರ ಪಠ್ಯಗಳ ಹಾಗೆ ಸಾಹಿತ್ಯವೂ ಮೊದಲೇ ಇರುವ ವಾಸ್ತವವೊಂದನ್ನು ಪ್ರತಿಫಲಿಸುವುದಿಲ್ಲ. ಬದಲಾಗಿ, ಒಂದು ಸಂಸ್ಕೃತಿಯ ಸಂಕೇತ, ನಿಯಮಗಳನ್ನು ಬಳಸಿಕೊಳ್ಳುವ ಅರ್ಥಸೂಚನೆಯ ಪ್ರಕ್ರಿಯೆಗಳನ್ನು ಸಾಹಿತ್ಯ ಕೃತಿಗಳು ಸಂಯೋಜಿಸುತ್ತವೆ ಮತ್ತು ಅವುಗಳೂ ಈ ಪ್ರಕ್ರಿಯೆಗಳಿಂದಲೇ ಸಂಯೋಜಿಸಲ್ಪಟ್ಟಿವೆ. ಈ ಅರ್ಥದಲ್ಲಿ ಸಾಹಿತ್ಯ ಕೃತಿಗಳು ವಾಸ್ತವಿಕತೆಯನ್ನು ಪ್ರತಿಫಲಿಸುವುದಕ್ಕಿಂತ ಬೇರೆಯಾಗಿ ತಮ್ಮ ವಾಸ್ತವವಿಕತೆಯನ್ನು ತಾವೇ ಕಟ್ಟಿಕೊಳ್ಳುತ್ತವೆ, ರೂಪಿಸುತ್ತವೆ, ಚಿತ್ರಿಸುತ್ತವೆ". (ಅದೇಪುಟ: ೪೯)

ಸಾಹಿತ್ಯವನ್ನು ಅರಿಯಲು ಸಾಮಾಜಿಕ ಮತ್ತು ಸಾಂಸ್ಕೃತಿಕ ಸನ್ನಿವೇಶಗಳನ್ನು ವಿಶ್ಲೇಷಿಸುವುದು ಅಗತ್ಯ ಎಂಬ ರೀತಿಯಲ್ಲಿ ಈ ವಾದವೂ ಮಂಡಿತವಾಗಿದೆ. ಈ ಹಿನ್ನೆಲೆಯಲ್ಲಿ ಸಾಹಿತ್ಯದ ಪರಿಕಲ್ಪನೆಯಲ್ಲಿರುವ ಸ್ತ್ರೀ ವ್ಯಕ್ತಿತ್ವ ಅಥವಾ ಸ್ತ್ರೀ ಸ್ವರೂಪವು ವಾಸ್ತವಿಕ ಜಗತ್ತಿನ ಸ್ತ್ರೀವ್ಯಕ್ತಿತ್ವಕ್ಕಿಂತ ಭಿನ್ನವಾಗಿರಬಹುದಾದ ಸಾಧ್ಯತೆಯನ್ನು ಕೂಡಾ ಸ್ವೀಕರಿಸುವಂತಾಗುತ್ತದೆ, ಮತ್ತು ಸಾಹಿತ್ಯ ಕಟ್ಟಿಕೊಡುವ ವ್ಯಕ್ತಿತ್ವ ಚಿತ್ರಣವನ್ನು ಮಾದರಿರೂಪದಲ್ಲಿ ಪರಿಗಣಿಸುವ ಅವಕಾಶವು ಕೂಡಾ ಇಲ್ಲಿ ಲಭ್ಯವಾದಂತಾಗಿದೆ.

### ಸಾಹಿತ್ಯದಲ್ಲಿ ಸ್ತ್ರೀಪರಿಕಲ್ಪನೆ

ಸಾಹಿತ್ಯ ಪರಂಪರೆಯಲ್ಲಿ ಪುರಾಣ, ಇತಿಹಾಸ ಮತ್ತು ಆಧುನಿಕ ಸಾಹಿತ್ಯದ ಕತೆ, ಕಾದಂಬರಿಗಳೂ ಕಥಾನಕಗಳಾಗಿವೆ. ಕಾವ್ಯ,ಪುರಾಣ ಸಾಹಿತ್ಯದ ರೂಪಾಂತರವೇ ಆಗಿದೆ. ಈ ಕಥಾನಕಗಳಲ್ಲಿನ ಚಿತ್ರಣದ ಮೂಲಕ ಸ್ತ್ರೀ ಪರಿಕಲ್ಪನೆಯನ್ನು ತಿಳಿದುಕೊಳ್ಳಬಹುದಾಗಿದೆ. ಪಾತ್ರಕಲ್ಪನೆಯಲ್ಲಿ ಬರಹಗಾರರ ಕಲ್ಪನೆ, ವೈಚಾರಿಕತೆ ಮತ್ತು ಸ್ವೀಕೃತ ಮೌಲ್ಯ, ಆದರ್ಶಗಳು ಕಾರ್ಯನಿರತವಾಗಿರುತ್ತವೆ.

ಸಾಮಾನ್ಯ ನೆಲೆಯಲ್ಲಿ ಸಾಹಿತ್ಯದ ಪರಿಕಲ್ಪನೆಯಲ್ಲಿರುವ ಹೆಣ್ಣು ಉದಾತ್ತೀಕರಣ ಹಾಗೂ ಮೌಲ್ಯ ಪ್ರತಿನಿಧೀಕರಣ ಪ್ರಕ್ರಿಯೆಯ ಕಾರಣವಾಗಿ ಮನುಷ್ಯ ಸ್ತರದಿಂದ ಮೇಲಿನ ಸ್ಥಾನದಲ್ಲಿ ಗೋಚರವಾಗುತ್ತಾಳೆ. ಇದನ್ನು ಸಾಂಸ್ಕೃತಿಕ

ವ್ಯಕ್ತಿತ್ವವೆಂದೂ ತಿಳಿಯಬಹುದಾಗಿದೆ. ಪುರಾಣಕಲ್ಪನೆಯಲ್ಲಿರುವ ಸ್ತ್ರೀ ಸ್ವರೂಪ ಈ ಮಾದರಿಯದಾಗಿದೆ. ವ್ಯಕ್ತಿಗತ ಮತ್ತು ಸಾಮಾಜಿಕ ನೆಲೆಯಲ್ಲಿ, ಮಾನವ ಸಹಜಗುಣಗಳುಳ್ಳ, ಸ್ವತಂತ್ರ ಮಾನೋಭಾವದ, ಆತ್ಮಗೌರವವನ್ನು ವ್ಯಕ್ತಪಡಿಸುವ ಸ್ತ್ರೀ ವ್ಯಕ್ತಿತ್ವವನ್ನು ಆಧುನಿಕ ಸಾಹಿತ್ಯದಲ್ಲಿ ಕಾಣಬಹುದಾಗಿದೆ.ಉದಾತ್ತ ಸ್ವಭಾವ ಮತ್ತು ಮೌಲ್ಯ ಸಂಕೇತಿಕತೆಯನ್ನು ಆದರ್ಶವ್ಯಕ್ತಿತ್ವದ ಸ್ವರೂಪ ನಿರ್ಧಾರದಲ್ಲಿ ಪರಿಗಣಿಸಲಾಗುತ್ತದೆ. ಸ್ತ್ರೀಯ ಆದರ್ಶ ವ್ಯಕ್ತಿತ್ವದಲ್ಲಿ ದೌರ್ಬಲ್ಯಗಳು ಗೋಚರವಾಗುವುದಿಲ್ಲ. ಉದಾತ್ತತೆಯ ಗುಣಲಕ್ಷಣಗಳಾದ ಪ್ರೀತಿ, ಪ್ರೇಮ, ಸಹನೆ, ಸಾತ್ವಿಕತೆಗಳ ಮೂಲಕ ವ್ಯಕ್ತಿತ್ವವನ್ನು ಉದಾತ್ತೀಕರಿಸಲಾಗುತ್ತದೆ. ಮೌಲ್ಯಪ್ರತಿನಿಧೀಕರಣದ ಸಂದರ್ಭದಲ್ಲಿ ಮೌಲ್ಯಗಳು ಬಾಹ್ಯನಿಯಮಗಳಾಗಿ ಉಳಿಯದೆ ಪ್ರಜ್ಞೆಯ ಒಂದು ಭಾಗವಾಗಿಯೇ ಸಂಬಂಧವನ್ನು ಪಡೆದಿರುತ್ತವೆ.

ಪಾತ್ರಗಳನ್ನು ಮೌಲ್ಯಸಂಕೇತಗಳಾಗಿ ಬಳಸಿಕೊಂಡು ಕೃತಿಯ ಆಶಯವನ್ನು ವ್ಯಕ್ತಪಡಿಸುವ ಕ್ರಮ ಸಾಹಿತ್ಯದ ಮೂಲಸ್ವರೂಪದಲ್ಲಿಯೇ ಇದೆ. ಪ್ರಾಚೀನ ಹಾಗೂ ಅಧುನಿಕ ಸಾಹಿತ್ಯ ಎರಡರಲ್ಲಿಯೂ ಸ್ತ್ರೀಯನ್ನು ಮೌಲ್ಯ ಪ್ರತಿನಿಧೀಕರಣದ ಸಂಕೇತವಾಗಿ ಬಳಸಿಕೊಳ್ಳಲಾಗಿದೆ.

ನಿಶ್ಚಿತ ಕಾಲಘಟ್ಟವೊಂದರ ಕೃತಿರಚನೆಯಲ್ಲಿ, ಸಮಕಾಲೀನ ಸ್ವೀಕೃತ ಸ್ತ್ರೀವ್ಯಕ್ತಿತ್ವ ಸ್ವರೂಪವನ್ನು ಸಾಮಾಜಿಕ ನೆಲೆಯಿಂದ ಆಯ್ದುಕೊಂಡು ಸಾಹಿತ್ಯ ಬಳಸಿಕೊಳ್ಳುವುದು ಅನಿವಾರ್ಯವಾಗುತ್ತದೆ. ಇದಕ್ಕೆ ಭಿನ್ನವಾದ ಗ್ರಹಿಕೆಯಲ್ಲಿ ಚಿತ್ರಿಸುವುದು ಆಯಾ ಕಾಲದ ಸಾಮಾಜಿಕ ವ್ಯವಸ್ಥೆಯ ಸ್ವೀಕೃತ ಮೌಲ್ಯಗಳ ಕಾರಣವಾಗಿ ಸಾಧ್ಯವಾಗುವುದಿಲ್ಲ. ಆದುದರಿಂದ ಮನುಷ್ಯನ ಆಸ್ತಿತ್ವ ಕಲ್ಪನೆಯಲ್ಲಿ ಸಾಮಾಜಿಕ ವ್ಯವಸ್ಥೆ ಪ್ರಧಾನ ಪಾತ್ರ ನಿರ್ವಹಿಸುತ್ತದೆ ಎಂದು ತಿಳಿಯಬಹುದಾಗಿದೆ. ಅದೇ ರೀತಿ ಸಾಂಸ್ಕೃತಿಕ ಪರಿಸರದ ಪ್ರಭಾವವು ಬಹು ಮುಖ್ಯವಾಗುತ್ತದೆ. ಸಾಂಸ್ಕೃತಿಕ ಪರಿಸರವು ತಾನು ಸ್ವೀಕರಿಸಿದ ಮೌಲ್ಯ, ನಂಬಿಕೆ ಮತ್ತು ರೂಢಿಗತ ವಿಚಾರಗಳೊಂದಿಗೆ ಕೃತಿ ಅಶಯದಲ್ಲಿ ಪಾಲುಗೊಳ್ಳುತ್ತದೆ. ಸಾಹಿತ್ಯದ ಪರಿಕಲ್ಪನೆಯಲ್ಲಿ ನಂಬಿಕೆ ಮೂಲದಲ್ಲಿರುವ ಸ್ತ್ರೀವ್ಯಕ್ತಿತ್ವದ ಪ್ರಭಾವವನ್ನು ಪ್ರಾಥಮಿಕ ಹಂತದಿಂದಲೇ ಸಾಹಿತ್ಯ ಪರಂಪರೆಯಲ್ಲಿ ಗುರುತಿಸಬಹುದಾಗಿದೆ. ಸಂಪ್ರದಾಯ, ಪರಂಪರೆ, ಐತಿಹ್ಯ ಮತ್ತು ಆಚಾರ ವಿಚಾರಗಳು ಮನುಷ್ಯ ಬದುಕಿನ ನಂಬಿಕೆಯ ಮೂಲಗಳಾಗಿವೆ. ಸಾಂಸ್ಕೃತಿಕ ಪರಿಸರದ ಪ್ರಭಾವದಿಂದ ಸಾಂಸ್ಕೃತಿಕ ವ್ಯಕ್ತಿತ್ವ ರೂಪುಗೊಳ್ಳುತ್ತದೆ. ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸರದ ನಂತರ ಕೃತಿರಚನೆಯಲ್ಲಿ ಕೃತಿಕಾರನ ಕಲ್ಪನೆ ಮತ್ತು ವೈಚಾರಿಕತೆ ಸ್ಥಾನ ಪಡೆಯುತ್ತದೆ. ಸಾಹಿತ್ಯ ಸಂದರ್ಭದಲ್ಲಿ ಸೃಜನಶೀಲತೆಯೆನ್ನುವುದು ಬಹುವಾಗಿ ಪುರುಷಾಭಿವ್ಯಕ್ತಿಯ ರೂಪವೇ ಆಗಿದೆ. ಆಧುನಿಕ ಸಾಹಿತ್ಯವನ್ನು ಹೊರತು ಪಡಿಸಿದರೆ ಬಹುಪಾಲು ಸಾಹಿತ್ಯ ಕೃತಿಗಳು ಪುರುಷ ರಚನೆಗಳೇ. ಸಾಹಿತ್ಯದ ಗ್ರಹಿಕೆ, ಅಭಿವ್ಯಕ್ತಿ ಮತ್ತು ದರ್ಶನಗಳು ಪುರುಷ ದೃಷ್ಟಿಕೋನದ ಮೂಲಕವೇ ಸ್ಥಾಪಿತವಾಗಿರುವ ಸಂಗತಿ ಸರ್ವವಿದಿತವಾಗಿದೆ. ಈ ನೆಲೆಯಲ್ಲಿ ಸಾಹಿತ್ಯದಲ್ಲಿರುವ ಸ್ತ್ರೀ ಸ್ವರೂಪವು ಪುರುಷ ಗ್ರಹಿಕೆಯ ಸ್ತ್ರೀ ಸ್ವರೂಪವೂ ಆಗಿರುತ್ತದೆ.

**ಪುರಾಣ ಕಥಾನಕಗಳಲ್ಲಿ ಸ್ತ್ರೀ ಪರಿಕಲ್ಪನೆ**

ಪುರಾಣ ಕಲ್ಪನೆಯಲ್ಲಿ ಸ್ತ್ರೀಯು ದೇವತಾ ಸ್ವರೂಪಿ ಮತ್ತು ಸತೀತ್ವದ ಉಜ್ವಲ ಮಾದರಿಯಾಗಿದ್ದಾಳೆ. ಮಾನವಾತೀತ ಗುಣಗಳ ಆರೋಪದಲ್ಲಿ ನಡೆಯುವ ಉನ್ನತೀಕರಣ ಪ್ರಕ್ರಿಯೆಯ ಮೂಲಕ ಅಸಾಮಾನ್ಯತೆಯ

ಸ್ವರೂಪವನ್ನು ಕಲ್ಪಿಸಿಕೊಳ್ಳಲಾಗಿದೆ. ಸ್ತ್ರೀ ಪರಿಕಲ್ಪನೆಯು ಪುರಾಣ ಕಥಾನಕಗಳಲ್ಲಿ ಸಮಸ್ತ ಮನುಜ ಕುಲವನ್ನು ರಕ್ಷಿಸುವ ನಿಯಂತ್ರಿಸುವ ಮತ್ತು ಕಾಪಾಡುವ ಶಕ್ತಿಕೇಂದ್ರವೆನಿಸಿದೆ. ಆದಿಮ ಸಂಸ್ಕೃತಿಯಿಂದ ಆಧುನಿಕ ಕಾಲದವರೆಗೆ ಮುಂದುವರಿದುಕೊಂಡು ಬಂದಿರುವ ಮಾತೃದೇವತಾ ಆರಾಧನಾ ಪದ್ಧತಿಯಲ್ಲಿರುವ ದೇವಿಕಲ್ಪನೆಯ ಮಾದರಿಯೇ ಈ ಪುರಾಣಕಲ್ಪನೆಯಾಗಿದೆ. ಉಗ್ರ, ಸೌಮ್ಯ ಮತ್ತು ಪ್ರಾಕೃತಿಕ ವಿಕೋಪದ ರೂಪದಲ್ಲಿ ಕಾಣಿಸಿಕೊಳ್ಳುವ ಪುರಾಣದ ಸ್ತ್ರೀದೇವತೆಗಳು ಶಕ್ತಿಕೇಂದ್ರದ ಸಂಕೇತವಾಗಿ ಪುರಾಣ ಸಾಹಿತ್ಯದಲ್ಲಿ ಕಾಣಿಸಿಕೊಂಡಿವೆ.

ಈ ಶಕ್ತಿಕೇಂದ್ರಗಳು ಬಹುಮಟ್ಟಿಗೆ ಸ್ವತಂತ್ರರೂಪವಾಗಿದ್ದು, ಮಾತೃ ಸ್ವರೂಪವನ್ನು ಅಂತರ್ಗತಗೊಳಿಸಿಕೊಂಡು ಇವೆ. ಮಾತೃಕಲ್ಪನೆಯಲ್ಲಿ 'ಈಕೆ ರಕ್ಷಕಳು, ಅವಳ ಆರೈಕೆ ಸಾಮಿಪ್ಯವಿದ್ದರೆ ಮಾತ್ರ ಬದುಕು, ಆಕೆ ನಿರ್ಲಕ್ಷದಿಂದ ಸಾವು' ಎಂಬ ಸಮಾಜ ಹಿತದ ನಿರೀಕ್ಷೆಗಳು ಇವೆ. ಪುರಾಣದ ಕಲ್ಪನೆಗೆ ಮೂಲವಾಗಿರುವುದ ವೇದಸಾಹಿತ್ಯದ ಪರಿಕಲ್ಪನೆ ಮೂಡಿಸಿದ ಪ್ರಕೃತಿಸ್ವರೂಪಿ ಸ್ತ್ರೀ. ವೇದ ಸಾಹಿತ್ಯದ ಉಷಸ್, ಅದಿತಿ, ಮತ್ತು ಪೃಥ್ವಿ ಇವುಗಳೆಲ್ಲ ಪ್ರಕೃತಿರೂಪವಾಗಿರುವ ಸ್ವತಂತ್ರ ಸ್ತ್ರೀ ಸ್ವರೂಪಗಳು. ಸಾಂಖ್ಯತತ್ವದಲ್ಲಿ ಬರುವ ಪ್ರಕೃತಿಯ ಆದಿಮ ರೂಪವು ಪೃಥ್ವಿಯೇ ಆಗಿದೆ. ಸಾಮಾಜಿಕ ಪದ್ಧತಿಗಳು ಇನ್ನೂ ಸ್ಪಷ್ಟವಾಗಿ ಮೂಡದ, ಮುಕ್ತ ಸಾಮಾಜಿಕ ವ್ಯವಸ್ಥೆಯಲ್ಲಿದ್ದ ಸ್ತ್ರೀ ಸ್ವರೂಪವನ್ನೇ ಈ ಸಾಹಿತ್ಯಗಳು ಮೂಡಿಸಿರಬಹುದಾದ ಸಾಧ್ಯತೆಗಳು ಹೆಚ್ಚಾಗಿವೆ. ಸ್ವತಂತ್ರ ಕಲ್ಪನೆಯಲ್ಲಿ ಮೂಡಿಸಿರುವ ಈ ಸ್ತ್ರೀ ಕಲ್ಪನೆಯಲ್ಲಿ ಅಸಾಮಾನ್ಯರೂಪ ಮತ್ತು ಅಸಾಮಾನ್ಯ ಸಾಮರ್ಥ್ಯವಿದ್ದು, ಮಾನವ ಸ್ವಭಾವಕ್ಕೆ ಅತೀತವಾಗಿದೆ.

ಮೂಲದಲ್ಲಿದ್ದ ಮಾತೃಸ್ವರೂಪಕ್ಕಿಂತ ಭಿನ್ನಸ್ವರೂಪವನ್ನು ಮತ್ತು ಭಿನ್ನನಿರೀಕ್ಷೆಯನ್ನು ಪಡೆದು ಪುರಾಣಕಲ್ಪನೆ ಮೂಡಿಸಿದ ಸ್ತ್ರೀ ಪರಿಕಲ್ಪನೆಃ ಸತೀತ್ವದ ಮಾದರಿಯದು. ಪತ್ನೀ ಸ್ಥಾನದಲ್ಲಿರುವ ಪಾತ್ರಾಭಿವ್ಯಕ್ತಿಯ ಮೂಲಕ ವ್ಯಕ್ತವಾಗುವ ಈ ಸ್ತ್ರೀ ವ್ಯಕ್ತಿತ್ವವು ಪಾತಿವ್ರತ್ಯ ಮೌಲ್ಯದ ಉಜ್ವಲ ಸಂಕೇತವಾಗಿದೆ. ಪಾವಿತ್ರ್ಯತೆಯನ್ನು ತನ್ನ ಕೇಂದ್ರ ಪ್ರಜ್ಞೆಯಾಗಿ ಸ್ವೀಕರಿಸಿದ ಈ ಸ್ತ್ರೀವ್ಯಕ್ತಿತ್ವದಲ್ಲಿ ಉದಾತ್ತ ಗುಣಲಕ್ಷಣಗಳಿವೆ. ಪಾತಿವ್ರತ್ಯದ ಮೌಲ್ಯ ಸಂಕೇತವಾಗಿರುವ ಈ ಸ್ತ್ರೀ ಪತಿನಿಷ್ಠೆ ಮತ್ತು ಸೇವಾಮನೋಭಾವದವಳು. ಸಹನೆ, ದಯೆ ಮತ್ತು ಕ್ಷಮೆಗಳಂತಹ ಉದಾತ್ತಗುಣಗಳು, ಪಾತಿವ್ರತ್ಯದ ಮೂಲಕ ಪಡೆಯುವ ಅಲೌಕಿಕಶಕ್ತಿ ಅವಳನ್ನು ಮಾನವಸ್ತರದಿಂದ ಮೇಲಿನ ಸ್ಥಾನದಲ್ಲಿ ಕಲ್ಪಿಸುತ್ತವೆ. ಆದರೆ ಮೂಲಸ್ವರೂಪದಲ್ಲಿರುವ ದೇವಿಕಲ್ಪನೆಯಿಂದ ಸತೀತ್ವದ ಮಾದರಿಯ ಸ್ತ್ರೀ ಭಿನ್ನವಾಗಿ ಕಾಣಲು ಕಾರಣವೆಂದರೆ ಈ ವ್ಯಕ್ತಿತ್ವವು ಸ್ವತಂತ್ರವಾದುದಲ್ಲ. ಈ ಪರಿಕಲ್ಪನೆಯಲ್ಲಿರುವ ಸ್ತ್ರೀಸ್ವರೂಪದ ವ್ಯಕ್ತಿತ್ವ, ನಿಷ್ಠೆ ಮತ್ತು ಬದುಕಿನ ರೀತಿಗಳು ಪಾತಿವ್ರತ್ಯ ಮೌಲ್ಯಕ್ಕೆ ಬದ್ಧವಾಗಿರುತ್ತವೆ. ಪುರಾಣ ಕಥಾನಕದಲ್ಲಿ ಬರುವ ರಾಜನ ಪತ್ನಿಯರು, ಋಷಿಪತ್ನಿಯರು ಈ ಸತೀತ್ವದ ಸಂಕೇತವೇ ಆಗಿದ್ದಾರೆ. ಸೀತೆ, ಸಾವಿತ್ರಿ, ದಮಯಂತಿ, ಅನಸೂಯೆ, ಅಹಲ್ಯೆ, ರೇಣುಕ ಮೊದಲಾದವರು ಪತಿವ್ರತೆಯರು, ಪತಿವ್ರತಾಮೌಲ್ಯದ ಅನುಸರಣೆಯ ಕಾರಣವಾಗಿಯೇ ದೈವತ್ವವನ್ನು ಆರೋಪಿಸಿಕೊಂಡವರು.

ಸಾಮಾಜಿಕ ವ್ಯವಸ್ಥೆಯಲ್ಲಿ ಉಂಟಾದ ಬದಲಾವಣೆ, ವಿವಾಹ ಪದ್ಧತಿಯಂತಹ ಸಾಮಾಜಿಕ ಪದ್ಧತಿಗಳ ಸ್ವೀಕರಣೆ ಮತ್ತು ಮುಕ್ತ ಸಾಮಾಜಿಕ ವ್ಯವಸ್ಥೆಯಿಂದ ಆರ್ಥಿಕ ಮತ್ತು ರಾಜಕೀಯ ಕಾರಣಗಳಿಂದಾಗಿ ನಿಯಂತ್ರಿತ ಸಾಮಾಜಿಕ

ವ್ಯವಸ್ಥೆಯು ರೂಪುಗೊಂಡಿರುವುದು, ಸ್ತ್ರೀ ಸ್ವರೂಪದಲ್ಲಿ ಕಾಣಿಸಿದ ಬದಲಾವಣೆಗೆ ಕಾರಣವಾಗಿರಬಹುದು. ಹೆಣ್ಣಿನ ದೇಹದ ಕುರಿತಾಗಿರುವ ಸಾಂಪ್ರದಾಯಿಕ ಪರಿಕಲ್ಪನೆಗಳಾದ ಶೀಲ, ಪಾವಿತ್ರ್ಯತೆ, ಮೈಲಿಗೆ ಹಾಗೂ ಪಾತಿವ್ರತ್ಯ ಮೊದಲಾದವು ಸತೀ ಕಲ್ಪನೆ ಮೂಲಕವೇ ಪ್ರಾರಂಭಗೊಂಡಿರುವ ಸಾಧ್ಯತೆಗಳಿವೆ. ಈ ಸತೀತ್ವದ ಮಾದರಿಗಳಲ್ಲಿ ವ್ಯಕ್ತಿತ್ವ ತ್ಯಾಗದ ಆದರ್ಶವಿದೆ ಮತ್ತು ಪಾತೀವ್ರತ್ಯ ಮೌಲ್ಯದ ಸ್ವೀಕೃತಿ ಇದೆ. ಪುರಾಣ ಸಾಹಿತ್ಯದ ರೂಪಾಂತರವೇ ಮಹಾಕಾವ್ಯವಾಗಿದೆ. ಮಹಾಕಾವ್ಯದಲ್ಲಿ ಪುರಾಣ ಪರಿಕಲ್ಪನೆಯ ಸ್ತ್ರೀ ಸ್ವರೂಪವೇ ಮುಂದುವರಿದುಕೊಂಡು ಬಂದಿದೆ.

ಕನ್ನಡದ ಸಂದರ್ಭದಲ್ಲಿ ಆಧುನಿಕ ಪೂರ್ವ ಸಾಹಿತ್ಯ ಕೃತಿಗಳು ಪುರಾಣ ಹಾಗೂ ಮಹಾಕಾವ್ಯಗಳನ್ನು ತಮ್ಮ ಪ್ರಧಾನ ಆಕರಗಳಾಗಿ ಉಪಯೋಗಿಸಿಕೊಂಡಿವೆ. ಈ ಕಾರಣವಾಗಿ ಸ್ತ್ರೀ ಪರಿಕಲ್ಪನೆಯು ಪುರಾಣ ಪ್ರಜ್ಞೆಯಲ್ಲಿ ಮುಂದುವರಿದುಕೊಂಡು ಬಂದಿರುವುದು ಸಹಜವೇ ಆಗಿದೆ. ಕೆಲವೊಂದು ಅಪವಾದ ಬಿಟ್ಟರೆ (ಉದಾ: ವಚನ ಸಾಹಿತ್ಯ) ಬಹುವಾಗಿ ಆಧುನಿಕ ಪೂರ್ವ ಸಾಹಿತ್ಯದ ಸ್ತ್ರೀ ಪರಿಕಲ್ಪನೆಯು ಪುರಾಣ ಪ್ರಜ್ಞೆಯ ಸತೀತ್ವದ ಮಾದರಿಯನ್ನೇ ಸ್ವೀಕರಿಸಿದೆ. ಪ್ರಾಚೀನ ಮತ್ತು ಮಧ್ಯಕಾಲೀನ ಸಾಹಿತ್ಯದ ನಾಯಕಿಯರು ಪತ್ನಿ ಸ್ಥಾನದಲ್ಲಿರುವವರು. ಪತಿವ್ರತೆಯರು. ಪತಿನಿಷ್ಠೆ, ನಿಷ್ಕಳಂಕ ವ್ಯಕ್ತಿತ್ವ ಅವರದು. ಪಾತಿವ್ರತ್ಯ ಮೌಲ್ಯದ ಕಾರಣವಾಗಿಯೇ ಇವರು ಆದರಣೀಯರಾಗಿದ್ದಾರೆ. ಸೀತೆ, ದ್ರೌಪದಿ, ಗಿರಿಜೆ, ಸುನಂದೆ ಈ ಮಾದರಿಯಲ್ಲಿ ಕಾಣಿಸಿಕೊಂಡಿರುವ ಪಾತ್ರಾಭಿವ್ಯಕ್ತಿಗಳು.

ಆಧುನಿಕ ಪೂರ್ವ ಸಾಹಿತ್ಯ ತನ್ನ ಮನುಷ್ಯ ಪರಿಕಲ್ಪನೆಯಲ್ಲಿ ಪ್ರಧಾನವಾಗಿ ಪರಿಗಣಿಸಿರುವುದು ಪುರುಷ ವ್ಯಕ್ತಿತ್ವವನ್ನು, ಪ್ರಾಚೀನ ಸಾಹಿತ್ಯ ಮತ್ತು ಮಧ್ಯಕಾಲೀನ ಸಾಹಿತ್ಯಗಳು ಪುರುಷ ಕೇಂದ್ರವಾಗಿರುವ ರಾಜತ್ವ ಮತ್ತು ದೈವತ್ವವನ್ನು ಅನುಕ್ರಮವಾಗಿ ಬೆಂಬಲಿಸಿದ ಕಾರಣವಾಗಿ ನಾಯಕ ಪ್ರದಾನತೆ, ಪುರುಷ ಶ್ರೇಷ್ಠತೆ ಈ ಕಾವ್ಯದಲ್ಲಿ ಗೋಚರಿಸಿದ್ದು ಧಾರ್ಮಿಕ, ಸಾಮಾಜಿಕ ಮತ್ತು ರಾಜಕೀಯ ಪ್ರತೀಕಗಳೆಲ್ಲವೂ ಪುರುಷ ಪರಿಕಲ್ಪನೆಯಲ್ಲಿಯೇ ಮೂಡಿಬಂದಿವೆ. ಸತೀತ್ವದ ಮಾದರಿಯನ್ನು ಬಿಟ್ಟರೆ ಶೃಂಗಾರ ಕಲ್ಪನೆಗಳಲ್ಲಿ ಮಾತ್ರ ಸ್ತ್ರೀ ಸ್ವರೂಪವಿದೆ.

ಇದು ಸಾಹಿತ್ಯದ ಪರಿಕಲ್ಪನೆಯಲ್ಲಿ ಹೆಣ್ಣಿನ ಸ್ವರೂಪದಲ್ಲಿ ಉಂಟಾದ ಬದಲಾವಣೆಯ ಸೂಚನೆಯೆನ್ನಬಹುದು. ಸ್ತ್ರೀಯನ್ನು ಪುರುಷಾಧೀನಳಾಗಿ, ಅಧೀನತಾ ಕಲ್ಪನೆಗೆ ಒಳಪಡಿಸಿರುವುದು ಇಲ್ಲಿ ವ್ಯಕ್ತವಾಗಿದೆ. ಶೃಂಗಾರಕಲ್ಪನೆಗಳು ಹೆಣ್ಣನ್ನು ವ್ಯಕ್ತಿನೆಲೆಯಲ್ಲಿ ಪರಿಗಣಿಸಿರುವುದು ಕಡಿಮೆ ಸಂದರ್ಭಗಳಲ್ಲಿ. ಹೀಗೆ ಆಧುನಿಕ ಪೂರ್ವ ಸಾಹಿತ್ಯವು ತನ್ನ ರಾಜನಿಷ್ಠೆ ಮತ್ತು ಅಧ್ಯಾತ್ಮನಿಷ್ಠೆ ಮನೋಭಾವದಿಂದ, ಮತ್ತು ಸಾಹಿತ್ಯದ ಅಭಿವ್ಯಕ್ತಿ ಪುರುಷ ಗ್ರಹಿಕೆಯಾಗಿರುವುದರ ಕಾರಣವಾಗಿ, ಮತ್ತು ಸಮಕಾಲೀನ ರಾಜಕೀಯ ಮತ್ತು ಸಾಂಸ್ಕೃತಿಕ ಪರಿಸರಗಳೂ ಇದೇ ನೆಲೆಯಲ್ಲಿ ಸ್ತ್ರೀತ್ವವನ್ನು ರೂಪಿಸಿದುದರಿಂದ, ಹೆಣ್ಣು ಸ್ವತಂತ್ರ ವ್ಯಕ್ತಿತ್ವವಿಲ್ಲದೆ, ತ್ಯಾಗ ಸೇವೆ ಮತ್ತು ಬಲಿದಾನದಂತಹ ಮೌಲ್ಯಗಳ ಪ್ರತೀಕವಾಗಿದ್ದಾಳೆ. ಈ ಸ್ತ್ರೀ ಪರಿಕಲ್ಪನೆಯಲ್ಲಿರುವುದು ವ್ಯಕ್ತಿತ್ವತ್ಯಾಗದ ಆದರ್ಶ.

ಆಧುನಿಕ ಸಾಹಿತ್ಯ ತನ್ನ ಪರಿಕಲ್ಪನೆಯಲ್ಲಿ ಸ್ತ್ರೀ ಸ್ವರೂಪವನ್ನು ಆಧುನಿಕ ಪೂರ್ವ ಸಾಹಿತ್ಯದ ಮೂಲಕ ಮತ್ತು ತನ್ನದೇ ಆದ ಬದಲಾದ ಮೌಲ್ಯ ಸ್ವೀಕರಣೆಯ ಮೂಲಕ ಕಂಡರಿಸಿದೆ. ಆಧುನಿಕ ಸಾಹಿತ್ಯದ ವಿವಿಧ ಕಾಲಘಟ್ಟಗಳು ಬೇರೆ ಬೇರೆ ರೀತಿಯ ಸ್ತ್ರೀ ಪರಿಕಲ್ಪನೆಗಳನ್ನು ಮೂಡಿಸಿವೆ. ವಚನ ಸಾಹಿತ್ಯದ ಮೂಲಕ ಸಾಮಾನ್ಯನೆಲೆಯ ಸಾಮಾಜಿಕ ವ್ಯಕ್ತಿತ್ವರೂಪದಲ್ಲಿ ಹೆಣ್ಣನ್ನು ನಿರೂಪಿಸುವ ವಿಧಾನವು ಇಲ್ಲಿ ಪ್ರಗತಿಶೀಲ, ಬಂಡಾಯ, ನವೋತ್ತರ ಸಾಹಿತ್ಯಗಳು

ಅಳವಡಿಸಿಕೊಂಡರೆ, ನವೋದಯ ಮತ್ತು ನವ್ಯ ಸಾಹಿತ್ಯಗಳು ಅನುಕ್ರಮವಾಗಿ ಪುರಾಣಪ್ರಜ್ಞೆ ಮತ್ತು ಆಧುನಿಕಪೂರ್ವ ಸಾಹಿತ್ಯದ ಪರಿಕಲ್ಪನೆಗಳಲ್ಲಿಯೇ ಹೆಣ್ಣಿನ ಸ್ವರೂಪವನ್ನು, ವ್ಯಕ್ತಿತ್ವವನ್ನು ನಿರೂಪಿಸಿವೆ.

ಆಧುನಿಕ ಸಾಹಿತ್ಯವು ಪರಂಪರೆ[೩] ನಿರ್ಮಿಸಿದ ಸ್ತ್ರೀ ಪರಿಕಲ್ಪನೆ ಹಾಗೂ ಆಧುನಿಕ ಪ್ರಜ್ಞೆ ಮೂಡಿಸಿದ ಸ್ತ್ರೀ ಪರಿಕಲ್ಪನೆ - ಇವೆರಡಕ್ಕೂ ತನ್ನಲ್ಲಿ ಅವಕಾಶ ನೀಡಿದೆ.ಆಧುನಿಕ ಸಾಹಿತ್ಯದ ಪರಿಕಲ್ಪನೆಯಲ್ಲಿರುವ ಹೆಣ್ಣು ಗೃಹಾಧೀನಳಾಗಿರುವ ಹಾಗೆಯೇ ಸ್ವತಂತ್ರಳೂ ಆಗಿದ್ದಾಳೆ. ಸಾಂಸ್ಕೃತಿಕ ವಕ್ರಾತತೆಯೊಂದಿಗೆ ಆಧುನಿಕ ಪ್ರಜ್ಞೆಯನ್ನು ಬೆಳೆಸಿಕೊಂಡವಳಾಗಿದ್ದಾಳೆ.

**ಅಡಿಟಿಪ್ಪಣಿಗಳು**

೧.ನಿರಂಜನ, ತೇಜಸ್ವಿನಿ (೧೯೯೩), "ಪ್ರಸ್ತಾವನೆ", **ಸ್ತ್ರೀವಾದಿ ಸಾಹಿತ್ಯ ವಿಮರ್ಶೆ**, ಕ್ರೈಸ್ತ ಕಾಲೇಜು, ಬೆಂಗಳೂರು . ಪುಟ : ೪೫

೨. ಪೂರ್ವೋಕ್ತ : ಪುಟ : ೪೯

೩."ಪರಂಪರೆ ಎಂಬುದು ನಮ್ಮ ಹಿಂದಿನವರು ನಡೆದ ಹಾದಿ, ಸಾಧಿಸಿದ ಸಾಧನೆ, ಕಂಡುಕೊಂಡ ಜೀವನ ಸ್ವರೂಪ, ಒಪ್ಪಿಕೊಂಡ ಮೌಲಿಕ ವ್ಯವಸ್ಥೆ - ಈ ಎಲ್ಲವನ್ನೂ ಇನ್ನು ಹಲವನ್ನು ಒಳಗೊಳ್ಳುತ್ತದೆ."ದಬ್ಬೆ, ವಿಜಯಾ **"ಮಧ್ಯಯುಗೀನ ಭಾರತೀಯ ಮಹಿಳೆ, ಕೆಲವು ವಿಚಾರಗಳು"**, ನಾರಿ-ದಾರಿ ದಿಗಂತ. ಪುಟ : ೬೨-೬೩.

## ಅಧ್ಯಾಯ ೩

# ಕಥನ ಸಾಹಿತ್ಯ ಮತ್ತು ಸ್ತ್ರೀಪ್ರಧಾನತೆ

ಹೊಸಗನ್ನಡ ಸಾಹಿತ್ಯ ಚರಿತ್ರೆಯ ಪ್ರಾಥಮಿಕ ಹಂತದ ಸಣ್ಣಕತೆ ಮತ್ತು ಕಾದಂಬರಿಗಳು ಸ್ತ್ರೀ ಮತ್ತು ಸ್ತ್ರೀಬದುಕಿಗೆ ಸಂಬಂಧಿಸಿದ ವಿಚಾರಗಳಿಗೆ ಹೆಚ್ಚಿನ ಅವಕಾಶವನ್ನು ನೀಡಿವೆ. ಕನ್ನಡದ ಹಲವು ಪ್ರಸಿದ್ಧ ಸಾಮಾಜಿಕ ಮತ್ತು ಚಾರಿತ್ರಿಕ ಕಾದಂಬರಿಗಳು ಸ್ತ್ರೀಪ್ರಧಾನಗಳಾಗಿವೆ. ಸ್ತ್ರೀಕೇಂದ್ರಿತ ವಸ್ತುವಿನ ಆಯ್ಕೆಯಲ್ಲಿ ಹೆಚ್ಚಿನ ಲೇಖಕರು ಒಲವನ್ನು ತೋರಿದ್ದಾರೆ. ಹೆಣ್ಣಿಗೇ ವಿಶಿಷ್ಟವೆನಿಸುವ ಹಲವು ಸಮಸ್ಯೆಗಳನ್ನು ಕತಾಮಾಧ್ಯಮದ ಮೂಲಕ ಚರ್ಚೆ ನಡೆಸುವ ಪ್ರಯತ್ನವೂ ಕಥನ ಸಾಹಿತ್ಯದಲ್ಲಿ ನಡೆದಿದೆ. ವಿವಿಧ ಸಾಹಿತ್ಯಸಂದರ್ಭದ ರಚನೆಗಳು ಹೆಣ್ಣನ್ನು ಪ್ರಧಾನ ನೆಲೆಯಲ್ಲಿ ಪರಿಗಣಿಸಿವೆ.

ಸ್ತ್ರೀಬದುಕಿಗೆ ಸಂಬಂಧಿಸಿದ ವಿವಿಧ ಸಮಸ್ಯೆಗಳು, ಸಂವೇದನೆಗಳು, ಸ್ತ್ರೀವ್ಯಕ್ತಿತ್ವವನ್ನು ವಿವರಿಸುವ ಪ್ರಯತ್ನಗಳು, ಸ್ತ್ರೀಪಾತ್ರಗಳನ್ನು ಕೇಂದ್ರವಾಗಿಟ್ಟು ಆ ಮೂಲಕ ಸಮಾಜದ ಇತರ ವಿಚಾರಗಳತ್ತ ಗಮನ ಹರಿಸಿ ವಿಶ್ಲೇಷಣೆಗೆ ಒಳಪಡಿಸುವ ವಿಧಾನಗಳು- ಈ ಹಲವು ಕಾರಣಗಳು ಕಥನ ಸಾಹಿತ್ಯದ ಸ್ತ್ರೀಪ್ರಧಾನತೆಗೆ ಮೂಲವಾಗಿವೆ ಎಂದು ತಿಳಿಯಬಹುದಾಗಿದೆ.

ಕಥನ ಸಾಹಿತ್ಯದ ಪ್ರಾಥಮಿಕ ಹಂತದಿಂದಲೇ ಮಹಿಳಾ ಸಮಸ್ಯೆಗಳಿಗೆ ನೇರವಾಗಿ ಸ್ಪಂದಿಸುತ್ತ ಅನೇಕ ಲೇಖಕರು ಮತ್ತು ಲೇಖಕಿಯರು ಕತೆ ಮತ್ತು ಕಾದಂಬರಿಗಳನ್ನು ಬರೆದಿದ್ದಾರೆ. ಚಾರಿತ್ರಿಕ ವಸ್ತುವನ್ನುಳ್ಳ ಕಾದಂಬರಿಗಳು ಧೈರ್ಯ, ಸಾಹಸ ಮತ್ತು ಕಲಾಭಿರುಚಿಯುಳ್ಳ ರಾಣಿಯರ, ವೀರರಮಣಿಯರ ಜೀವನ ವಿವರಗಳನ್ನು ಸಾದ್ಯಂತವಾಗಿ ನಿರೂಪಿಸಿವೆ. ಹೊಯ್ಸಳ ವಂಶದ ರಾಣಿಯಾಗಿದ್ದ ಶಾಂತಲಾದೇವಿಯ ಜೀವನ ಚರಿತ್ರೆಯನ್ನಾಧಾರಿಸಿ ಎರಡು ಬೃಹತ್ ಕಾದಂಬರಿಗಳು ಕನ್ನಡದಲ್ಲಿ ಬಂದಿವೆ.[1] ಪೌರಾಣಿಕತೆ ಮತ್ತು ಅಧ್ಯಾತ್ಮಿಕತೆಯ ವಸ್ತುವನ್ನು ಆಧಾರವಾಗಿಟ್ಟುಕೊಂಡು ಬಂದ ಕಾದಂಬರಿಗಳಲ್ಲಿ ಕುಂತಿ, ದ್ರೌಪದಿ ಮತ್ತು ಅಕ್ಕಮಹಾದೇವಿಯಂತಹ ಸ್ತ್ರೀಪಾತ್ರಗಳನ್ನು ನಾಯಕಿ ಸ್ಥಾನದಲ್ಲಿಟ್ಟು ಬರೆಯಲಾಗಿದೆ.

ಸ್ತ್ರೀಪ್ರಧಾನ ಕಥನ ಸಾಹಿತ್ಯದಲ್ಲಿ ಪುರುಷ ಪಾತ್ರ ಮತ್ತು ಪುರುಷ ಜೀವನ ವಿವರಗಳಿಗೆ ಎರಡನೇ ಸ್ಥಾನವನ್ನು, ಪ್ರಧಾನ ಸ್ಥಾನದಲ್ಲಿರುವ ಸ್ತ್ರೀಪಾತ್ರದ ಜೀವನ ವಿವರಗಳಿಗೆ, ಆಂತರಿಕ ಭಾವನೆಗಳಿಗೆ ಹೆಚ್ಚಿನ ಅವಕಾಶವನ್ನು ನೀಡಲಾಗಿದೆ.

**ಮೊದಲ ಹಂತದ ಕಥನ ಸಾಹಿತ್ಯ ಮತ್ತು ಸ್ತ್ರೀಪರ ದೃಷ್ಟಿ**

ಸಾಹಿತ್ಯ ಚರಿತ್ರೆಯಲ್ಲಿ ಕಾದಂಬರಿ ಪರಂಪರೆ ಪ್ರಾರಂಭವಾಗುವುದು ಹೆಣ್ಣಿನ ಹೆಸರನ್ನುಳ್ಳ ಶಿರ್ಷಿಕೆಯ

ಕಾದಂಬರಿಗಳಿಂದ. ಕನ್ನಡವನ್ನು ಒಳಗೊಂಡಂತೆ ಅನ್ಯಭಾಷೆಯ ಕಥನ ಸಾಹಿತ್ಯದಲ್ಲಿಯೂ ಈ ಒಲವು ಕಾಣಿಸಿದೆ. ಕನ್ನಡದಲ್ಲಿ ಮೊದಲ ಸ್ವತಂತ್ರ ಸಾಮಾಜಿಕ ಕಾದಂಬರಿ ಪ್ರಕಟವಾಗಿರುವುದು ೧೮೯೯ರಲ್ಲಿ. ಇದಕ್ಕೆ ಮೊದಲು ಅನುವಾದಗಳು, ರೂಪಾಂತರಗಳು ಪ್ರಕಟವಾಗುತ್ತಿದ್ದವು. ಕನ್ನಡದ ಮೊದಲ ಸಾಮಾಜಿಕ ಕಾದಂಬರಿ ಹೆಸರು 'ಇಂದಿರಾಬಾಯಿ'[೨]. ಗುಲವಾಡಿ ವೆಂಕಟರಾಯರು ಈ ಕಾದಂಬರಿಯ ಲೇಖಕರು. ಈ ಕಾದಂಬರಿಯಲ್ಲಿ ಬರುವ ಸ್ತ್ರೀಪಾತ್ರ ಇಂದಿರೆಯ ಹೆಸರನ್ನೇ ಕಾದಂಬರಿಗೆ ಇಡಲಾಗಿದೆ. ಅನ್ಯಭಾಷೆಯ ಮೊದಲ ಸಾಮಾಜಿಕ ಕಾದಂಬರಿಗಳು ಎಂದು ಕರೆಯಲಾಗಿರುವ ರಚನೆಗಳೂ ಇದೇ ರೀತಿಯ ಹೆಣ್ಣಿನ ಹೆಸರಿನ ಶಿರ್ಷಿಕೆಯನ್ನು ಹೊತ್ತಿವೆ. ಮಲಯಾಳಂ ಭಾಷೆಯ 'ಇಂದುಲೇಖಾ'[೩], ಉರ್ದುಭಾಷೆಯ 'ಉಮ್ರಾವ್ ಜಾನ್'[೪], ಮರಾಠಿ ಭಾಷೆಯ 'ಯಮುನಾ ಪರ್ಯಟನ್'[೫] ತಮಿಳಿನ 'ಕಮಲಾಂಬಾಳ್ ಚರಿತಂ'[೬] ಈ ಮಾತಿಗೆ ಕೆಲವು ಉದಾಹರಣೆಗಳಾಗಿವೆ. ಯಮುನಾ ಪರ್ಯಟನ್ ಮಿಷನರಿಗಳಿಂದ ಕನ್ನಡ ಭಾಷೆಗೆ ಅನುವಾದಗೊಂಡ ಮೊದಲ ಸಾಮಾಜಿಕ ಕಾದಂಬರಿಯಾಗಿದೆ. ಕನ್ನಡ ಭಾಷೆಯಲ್ಲಿ ಈ ಕಾದಂಬರಿ 'ಯಮುನೆಯ ಸಂಚಾರ' ಹೆಸರನ್ನು ಪಡೆದಿದೆ.

ಇಂದಿರಾಬಾಯಿ ಕಾದಂಬರಿ ಪ್ರಕಟವಾದ ನಂತರ ಮೊದಲ ಎರಡು ದಶಕಗಳಲ್ಲಿ (೧೯೨೦ರವರೆಗೆ) ಬಂದ ಇತರ ಕಾದಂಬರಿಗಳು: 'ವಾಗ್ದೇವಿ'[೭],'ರೋಹಿಣಿ'[೮], 'ಇಂದಿರಾ'[೯], 'ಸದ್ಗುಣಿ ಕೃಷ್ಣಾಬಾಯಿ'[೧೦], 'ಕುಮುದಿನಿ'[೧೧], 'ಸಾವಿತ್ರಿ'[೧೨], 'ಸುಶೀಲ'[೧೩], 'ನಭ'[೧೪], 'ಭಾಗೀರಥಿ',[೧೫] 'ಗೌರಿ',[೧೬] 'ಮಾತೃನಂದಿನಿ'[೧೭]. ತಿರುಮಲಾಂಬರ ಇತರ ಕಾದಂಬರಿಗಳಾದ 'ವಿರಾಗಿಣಿ'[೧೮], 'ವಿದ್ಯುಲ್ಲತ'[೧೯], ಹೆಣ್ಣಿನ ಹೆಸರನ್ನು ಶಿರ್ಷಿಕೆಯಲ್ಲಿ ಪಡೆಯದಿದ್ದರೂ ಸ್ತ್ರೀಪಾತ್ರವನ್ನು ಕೇಂದ್ರವಾಗಿರಿಸಿದ ಕಾದಂಬರಿಗಳಾಗಿವೆ. ಶಿರ್ಷಿಕೆಯಲ್ಲಿ ಹೆಣ್ಣಿನ ಹೆಸರನ್ನು ಸೂಚಿಸುವುದು ಕನ್ನಡ ಭಾಷೆಗೆ ಮಾತ್ರ ಸೀಮಿತವಾಗಿರದೆ ಬಂಗಾಲಿ, ಉರ್ದು, ಮರಾಠಿ,ಮಲಯಾಳಂ ಮೊದಲಾದ ಭಾಷೆಗಳಲ್ಲಿಯೂ ಪ್ರಚಲಿತವಾಗಿದ್ದುದನ್ನು, ವಿವಿಧ ಭಾಷೆಗಳಿಂದ ಕನ್ನಡಕ್ಕೆ ಅನುವಾದಗೊಂಡ ಕಾದಂಬರಿಗಳ ಮೂಲಕ ತಿಳಿಯಬಹುದಾಗಿದೆ. ಮೊದಲ ಹಂತದಲ್ಲಿ ಕನ್ನಡಕ್ಕೆ ಅನುವಾದಗೊಂಡ ಸ್ತ್ರೀಪ್ರಧಾನ ಕಾದಂಬರಿಗಳು ಈ ಕೆಳಗಿನಂತಿವೆ:

ಬಂಗಾಲಿಯಿಂದ ಕನ್ನಡಕ್ಕೆ ಬಂದ ಕಾದಂಬರಿಗಳು: 'ಪರಿಮಳಾ' [೨೦], ಕನ್ನಡಕ್ಕೆ ಅನುವಾದವಾದ ಪ್ರಥಮ ಪತ್ತೇದಾರಿ ಕಾದಂಬರಿ ಇದು. ನಂತರ 'ಮನೋರಮೆ'[೨೧], ಪ್ರಕಟವಾಯಿತು,. ಬಿ.ವೆಂಕಟಾಚಾರ್ಯರು ಅನುವಾದಿಸಿರುವ ಕಾದಂಬರಿಗಳು. 'ಅಡವಿಯ ಹುಡುಗಿ'[೨೨], 'ಲೀಲೆ'[೨೩], 'ರಜನೆ'[೨೪], 'ಮೃಣ್ಮಯಿ'[೨೫], 'ಶಾಂತಿ'[೨೬], 'ನಿರದ'[೨೭], 'ನೀಳಾಗೀತ' 'ಮೃಣಾಲಿನಿ'[೨೮], ಮತ್ತು 'ಮಾಲತಿ'. ಮಲಯಾಳಂ ಭಾಷೆಯ 'ಇಂದುಲೇಖಾ' ಮತ್ತು 'ಸುಕುಮಾರಿ'[೨೯], ಕನ್ನಡಕ್ಕೆ ಅನುವಾದವಾಗಿವೆ. ತೆಲುಗು ಭಾಷೆಯಿಂದ 'ವಿಮಲಾಬಾಯಿ'[೩೦], ಕನ್ನಡಕ್ಕೆ ಬಂದಿದೆ.

ಕನ್ನಡ ಸಣ್ಣಕತೆಗಳ ಮೊದಲ ಲೇಖಕರೆನಿಸಿದ ಪಂಜೆಯವರು ಪ್ರಕಟಿಸಿರುವ ನಾಲ್ಕು ಸಾಮಾಜಿಕ ಕತೆಗಳಲ್ಲಿ "ನನ್ನಚಿಕ್ಕತಾಯಿ" ೧೯೦೦ರಲ್ಲಿ 'ಸುವಾಸಿನಿ' ಪತ್ರಿಕೆಯಲ್ಲಿ ಬಂದ ಕನ್ನಡದ ಮೊದಲ ಕತೆಯಾಗಿದೆ[೩೧]. "ನನ್ನಚಿಕ್ಕತಾಯಿ" ವಸ್ತು ಸ್ತ್ರೀಪರವಾಗಿದೆ.

ಮೊದಲ ಹಂತದ ಬರಹಗಾರರೆನಿಸಿರುವ ಪಂಜೆಯವರು ಬರೆದ ನಾಲ್ಕು ಚಾರಿತ್ರಿಕ ಸಣ್ಣಕತೆಗಳು ಆಯಾ ಕತೆಗಳ

ನಾಯಕಿಯರಾಗಿರುವ ವೀರರಮಣಿಯರ ಹೆಸರನ್ನು ಹೊತ್ತಿವೆ. ಈ ಕತೆಗಳು ಚಾರಿತ್ರಿಕ ನಾಯಕಿಯರ ಧೈರ್ಯ, ಸಾಹಸ ಮತ್ತು ಆತ್ಮ ಬಲಿದಾನವನ್ನು ವಿವರಿಸುತ್ತವೆ. ೧೯೧೦-೧೧ರ ಸುಮಾರಿಗೆ ತಮ್ಮ ಸಣ್ಣಕತೆಗಳನ್ನು ಪ್ರಕಟಿಸಿದ ಮಾಸ್ತಿಕತೆಗಳಲ್ಲಿ ಹೆಣ್ಣನ್ನು ಕೇಂದ್ರವಾಗಿಟ್ಟು ಚಿತ್ರಿಸಿದ ಅನೇಕ ಕತೆಗಳಿವೆ.

'ಮೊಸರಿನ ಮಂಗಮ್ಮ' 'ವೇಲೂರಿನಲಕ್ಷಮ್ಮ' 'ಕೃಷ್ಣಮೂರ್ತಿಯ ಹೆಂಡತಿ' 'ವೆಂಕಟಿಗನ ಹೆಂಡತಿ' 'ಆಚಾರ್ಯರ ಪತ್ನಿ' 'ಚೆನ್ನಮ್ಮ' ನಿಜಗಲ್ಲಿನ ರಾಣಿ', 'ಚಿಕ್ಕವ್ವ' 'ಶೇಷಮ್ಮ'- ಮೊದಲಾದುವುಗಳು ಮಾಸ್ತಿಕತೆಗಳಿಗೆ ಉದಾಹರಣೆಗಳು. ೧೯೦೦-೧೯೨೫ ರವರೆಗಿನ ಕಥನ ಸಾಹಿತ್ಯದ ಮೊದಲ ಹಂತದ ಮೊದಲ ಭಾಗದ ರಚನೆಗಳಲ್ಲಿ ಸ್ತ್ರೀ ಕೇಂದ್ರಿತ ವಸ್ತು ಕಾಣಿಸಿಕೊಂಡಿರುವುದು ಈ ಹಂತದ ವೈಶಿಷ್ಟ್ಯವಾಗಿದೆ. 'ಸ್ತ್ರೀ ಉದ್ಧಾರದಿಂದ ಸಾಮಾಜಿಕ ಉದ್ಧಾರ' ಎನ್ನುವ ಪ್ರಣಾಳಿಕೆಯ ೧೯ನೇ ಶತಮಾನದ ಸುಧಾರಣಾಕ್ರಮಗಳ ಪ್ರಭಾವ ಈ ಹಂತದ ಲೇಖಕರ ಮೇಲೆ ನಡೆದಿರುವುದು ಸ್ಪಷ್ಟವಾಗಿದೆ. ಈ ಕಾದಂಬರಿಗಳಲ್ಲಿ ವ್ಯಕ್ತವಾಗಿರುವ ಸ್ತ್ರೀಶಿಕ್ಷಣದ ಆದ್ಯತೆ, ಬಾಲ್ಯವಿವಾಹ, ಕೇಶಮುಂಡನ, ಸತೀಪದ್ಧತಿಗಳ ನಿವಾರಣೆ ಅಥವಾ ರದ್ದತಿ, ವಯಸ್ಕ ವಿವಾಹ ಪದ್ಧತಿಗೆ ಪ್ರೋತ್ಸಾಹ, ವಿಧವೆಯರ ಮರುವಿವಾಹ ಅಥವಾ ವಿಧವೆಯರ ಪುರ್ನವಸತಿ, ಪರಿತ್ಯಕ್ತೆಯರ ಜೀವನ ಸುಧಾರಣೆ ಮುಂತಾದ ಕ್ರಮಗಳು ಸುಧಾರಣಾ ಪಂಥದವರು ನಡೆಸಿದ ಕಾರ್ಯಚರಣೆಗಳ ನೇರ ಪ್ರಭಾವದಿಂದ ಬಂದಿವೆ. ಮೊದಲ ಭಾಗದ ಕತಾಸಾಹಿತ್ಯದಲ್ಲಿ ಬಡತನ, ಅನಕ್ಷರತೆ ಮತ್ತು ಜಾತಿಸಮಸ್ಯೆಗಳಂತಹ ಸಾಮಾಜಿಕ ಅಂಶಗಳು ಕಾಣಿಸಿಕೊಂಡಿಲ್ಲ ಎನ್ನುವುದು ಗಮನಿಸಬಹುದಾದ ಅಂಶವಾಗಿದೆ. ತಿರುಮಲಾಂಬ, ಕಲ್ಯಾಣಮ್ಮ ಮೊದಲಾದ ಪ್ರಾಥಮಿಕ ಹಂತದ ಲೇಖಕಿಯರು ತಮ್ಮ ಕಾದಂಬರಿಗಳಲ್ಲಿ ವಾಸ್ತವಿಕ ಜೀವನದಲ್ಲಿ ಹೆಣ್ಣು ಎದುರಿಸುವ ಅನೇಕ ಸಮಸ್ಯೆಗಳನ್ನು ವಿವರವಾಗಿ ಚಿತ್ರಿಸಿದ್ದಾರೆ. ಹೆಣ್ಣು ಯಾವ ರೀತಿ ಜೀವನ ಕ್ರಮವನ್ನು ಆಯ್ಕೆ ಮಾಡಿಕೊಂಡರೆ ಅವಳ ಜೀವನ ಸುಗುಮವಾಗುತ್ತದೆ, ಎಂಬಿವೇ ವಿಚಾರಗಳಿಂದ ಕಾದಂಬರಿಯನ್ನು ನೀತಿಬೋಧೆಗೆ ತಿರುಮಲಾಂಬ ಬಳಸಿಕೊಂಡಿದ್ದಾರೆ. ಸ್ವತ: ಅನುಭವಿಸಿದ ಮತ್ತು ತಮ್ಮ ಸುತ್ತಲೂ ಬದುಕುವ ಹೆಂಗಸರ ಅನುಭವವನ್ನು ಕತೆಯ ರೂಪದಲ್ಲಿ ವಾಚಕರ ಎದುರಿಗಿಡುವ ಪ್ರಯತ್ನವನ್ನು ತಿರುಮಲಾಂಬ ಮಾಡುತ್ತಾರೆ. ನಿರ್ದಿಷ್ಟ ವಿಚಾರಗಳನ್ನಿಟ್ಟು, ನಿರ್ದಿಷ್ಟ ಕಥಾನಕವನ್ನು ರೂಪಿಸುವ ತಿರುಮಲಾಂಬ ಕೃತಿಗಳು ಅಪ್ಪಟ ರೀತಿಯಲ್ಲಿ ಸ್ತ್ರೀಪರವೆನಿಸುತ್ತವೆ.

೧೯೨೫-೧೯೫೦ರ ಅವಧಿಯ ಮೊದಲ ಹಂತದ ಎರಡನೇ ಭಾಗದ ಸಾಹಿತ್ಯ ರಚನೆಗಳನ್ನು ಮೊದಲಿನಂತೇ ಸ್ತ್ರೀಪರವೆಂದು ಪರಿಗಣಿಸುವುದು ಕಷ್ಟಸಾಧ್ಯವಾದರೂ, ಈ ಭಾಗದ ಸಾಹಿತ್ಯ ರಚನೆಗಳು ಸ್ತ್ರೀ ಪಾತ್ರಗಳಿಗೆ ಸಾಕಷ್ಟು ಅವಕಾಶಗಳನ್ನು ನೀಡಿರುವುದೂ ಇದೆ. ಕುವೆಂಪುರ ಮುಖ್ಯ ಕಾಳಜಿ ಭಿನ್ನವಾಗಿದ್ದರೂ, 'ಕಾನೂರುಹೆಗ್ಗಡಿತಿ' ಕಾದಂಬರಿಯಲ್ಲಿ ಅವರು ಪ್ರಧಾನ ಪುರುಷ ಪಾತ್ರಗಳಿಗೆ ಸಮಾನಾಂತರವಾಗಿಯೇ ಸ್ತ್ರೀಪಾತ್ರಗಳನ್ನು ನೋಡಿದ್ದಾರೆ. ಹೆಣ್ಣಿನ ಅಂತರಿಕ ಭಾವನೆಗಳನ್ನು ಸಮರ್ಥವಾಗಿ ಅನಾವರಣಗೊಳಿಸುವುದು ಈ ಕಾರಣದಿಂದಾಗಿ ಅವರಿಗೆ (ಕುವೆಂಪುಗೆ) ಸಾಧ್ಯವಾಗಿವೆ.

ಸ್ತ್ರೀ ಪುರುಷ ಸಮಾನತಾ ಧೋರಣೆಯುಳ್ಳ ಕೊಡಗಿನ ಗೌರಮ್ಮ ಮತ್ತು ಶಿವರಾಮಕಾರಂತರ ಬರವಣಿಗೆಗಳು ಸ್ತ್ರೀ ಮತ್ತು ಪುರುಷ ಪಾತ್ರಗಳಿಗೆ ಸಮಾನ ಅವಕಾಶಗಳನ್ನು ನೀಡಿವೆ. ಕಾರಂತರ 'ಸರಸಮ್ಮನ ಸಮಾಧಿ' ಕಾದಂಬರಿ

೧೯೩೭ ರಲ್ಲಿ ಪ್ರಕಟವಾಗಿದ್ದು, ಈ ಕಾದಂಬರಿ ಸಂಪೂರ್ಣವಾಗಿ ಸ್ತ್ರೀಕೇಂದ್ರಿತ ವಸ್ತುವನ್ನು, ಸ್ತ್ರೀಪರ ವಿಚಾರವನ್ನು ಒಳಗೊಂಡಿದೆ.

**ಎರಡನೇ ಹಂತದ ಕಥನ ಸಾಹಿತ್ಯ ಮತ್ತು ಸ್ತ್ರೀಪರ ದೃಷ್ಟಿ**

ಮೊದಲ ಹಂತಹ ಬರವಣಿಗೆಯಲ್ಲಿ ಕೇಂದ್ರಪಾತ್ರವನ್ನು ಅನುಸರಿಸಿ ಉಳಿದ ಸಾಮಾಜಿಕ ವಿಚಾರಗಳೂ ಕತೆಗಳಲ್ಲಿ ಅವಕಾಶವನ್ನು ಪಡೆಯುತ್ತಿದ್ದವು. ಶಿರ್ಷಿಕೆಯಿಂದ ಮಾತ್ರವಲ್ಲದೆ, ವಸ್ತುವಿನ ಆಯ್ಕೆಯಲ್ಲಿಯೂ ಮೊದಲ ಹಂತದ ಬರವಣಿಗೆ ಸ್ತ್ರೀಗೆ ಸಂಬಂಧಿಸಿದ ವಿಚಾರಗಳಿಗೆ ಹೆಚ್ಚಿನ ಆಧ್ಯತೆಗಳನ್ನು ನೀಡಿಯೂ ಲೇಖಕರ ಕಾಳಜಿ ವೈವಿಧ್ಯಪೂರ್ಣವಾಗಿದ್ದ ಕಾರಣದಿಂದ ಸ್ತ್ರೀಪ್ರಧಾನತೆಯು ಹೆಚ್ಚುಕಡಮೆ ವಿವಿಧ ಸಾಮಾಜಿಕ ಸಮಾಸ್ಯೆಗಳತ್ತ ಗಮನ ಸೆಳೆಯಲು ಬಳಕೆಯಾಗಿರುವುದು ಕಂಡು ಬರುತ್ತದೆ. ಕೆಲವು ಲೇಖಕರು ತಮ್ಮ ಕಾದಂಬರಿಗೆ ದ್ವಿಸ್ತರೀಯ ಶಿರ್ಷಿಕೆಯನ್ನು ನೀಡಿರುವುದು ಇದೇ ಕಾರಣವಾಗಿ. ಮೊದಲ ಹಂತದ ಕಾದಂಬರೀ ಸಾಮಾಜಿಕ ಸ್ವರೂಪವನ್ನು ಮತ್ತು ವಾಚಕರ ಅಭಿರುಚಿಯನ್ನು ಗಮನದಲ್ಲಿಟ್ಟು ಆಮೂರರು ಹೇಳಿರುವ ಮಾತುಗಳು ಇಲ್ಲಿ ಪ್ರಸ್ತುತವೆನಿಸುತ್ತವೆ: 'ಪಂಡಿತ ಪಾಮರರಿಬ್ಬರನ್ನು ರಂಜಿಸಲು ಹೊರಟ ಈ ಲೇಖಕರಿಗೆ ದ್ವಿಸ್ತರೀಯ ಶಿರ್ಷಿಕೆಗಳು ಅಗತ್ಯವಾದವು. ಸಮಾಜದ ನೈತಿಕಮಟ್ಟವನ್ನು, ಅಭಿರುಚಿಯನ್ನು ಮನರಂಜನದ ಆಸ್ಥೆಯನ್ನು ಸಂಸ್ಕರಿಸಬೇಕೆಂಬ ಆಸ್ಥೆ ಆ ಕಾಲದ ಲೇಖಕರಲ್ಲಿತ್ತಾದರೂ ವಾಚಕವರ್ಗದಿಂದ ಪ್ರತ್ಯೇಕೀಕರಣವನ್ನು ಅವರು ಬಯಸಲಿಲ್ಲ. ಈ ದೃಷ್ಟಿಯಿಂದ ಕಾದಂಬರಿ ಕಲೆಗೆ ಆ ಕಾಲದಲ್ಲಿ ಸಾಮಾಜಿಕ ಸ್ವರೂಪವಿತ್ತು ಎಂಬುದನ್ನು ಅಲ್ಲಗಳೆಯಲು ಆಗುವುದಿಲ್ಲ''[೨]. ದ್ವಿಸ್ತರೀಯ ಶಿರ್ಷಿಕೆಯುಳ್ಳ ಕೆಲವು ಕಾದಂಬರಿಗಳು.

೧. ಇಂದಿರಾಬಾಯಿ ಅಥವಾ ಸದ್ಧರ್ಮ ವಿಜಯವು

೨. ರೋಹಿಣಿ ಅಥವಾ ಸಾರಸ್ವತ ಮಂಡಳ

೩. ಕುಮುದಿನಿ ಅಥವಾ ಬಾಲಕ್ಕೆ ಬಡಿದಾಟ

೫೦ರ ದಶಕದಿಂದ ಪಾತ್ರಪ್ರಧಾನತೆಗೆ ಹೆಚ್ಚಿನ ಅವಕಾಶ ಮತ್ತು ಮನ್ನಣೆಸಂದ ಕಾರಣವಾಗಿ ನಾಯಕಿ ಪ್ರಧಾನ ಕಾದಂಬರಿಗಳು ಹೆಚ್ಚು ಸಂಖ್ಯೆಯಲ್ಲಿ ಪ್ರಕಟವಾದವು. ಲೇಖಕಿಯರು ಹೆಚ್ಚಿನ ಸಂಖ್ಯೆಯಲ್ಲಿ ಕಾದಂಬರಿ ರಚನೆಯಲ್ಲಿ ತೊಡಗಿಕೊಂಡ ಕಾರಣ ಸ್ತ್ರೀಪರ ಮಹಿಳಾ ಬರವಣಿಗೆ ವಿಶೇಷ ರೀತಿಯಲ್ಲಿ ಕತಾ ಸಾಹಿತ್ಯ ಪ್ರಕಾರವನ್ನು ತುಂಬಿತು. ೧೯೫೦ ರಿಂದ ೧೯೭೫ರ ವರೆಗಿನ ಲೇಖಕರ ಸ್ತ್ರೀ ಕೇಂದ್ರಿತ ವಸ್ತುವಿನ ಆಯ್ಕೆ, ಲೇಖಕಿಯರ ರಚನೆಗಳು, ಇವುಗಳಿಂದ ಕನ್ನಡ ಕಥನ ಸಾಹಿತ್ಯಕ್ಕೆ ಸ್ತ್ರೀಪರ ದೃಷ್ಟಿ ವಿಶೇಷವಾಗಿ ಈ ಹಂತದಲ್ಲಿ ಸಂದಿದೆ. ನಾಯಕಿ ಪ್ರಧಾನ ಕಾದಂಬರಿಗಳಿಗೆ ಕಥಾನಾಯಕಿಯ ಹೆಸರನ್ನು ಸೂಚಿಸುವ ಸಂಪ್ರದಾಯ ಇಲ್ಲಿ ಮರುಹುಟ್ಟನ್ನು ಪಡೆಯಿತು ಎನ್ನಬಹುದು. ಕೆಲವು ಉದಾಹರಣೆಗಳು:

ವಿ.ಎಂ. ಇನಾಂದಾರರ 'ಊರ್ವಶಿ' ಮತ್ತು 'ಮೋಹಿನಿ', ಚದುರಂಗರ 'ಸರ್ವಮಂಗಳಾ' ಎಂ.ಕೆ. ಇಂದಿರಾರ 'ತುಂಗ-ಭದ್ರ', 'ಫಣಿಯಮ್ಮ' ಮತ್ತು 'ತಗ್ಗಿನಮನೆ ಸೀತೆ', ಅನುಪಮಾರ 'ಮಾಧವಿ', ಶಂಕರಮೊಕಾಶಿ ಪುಣೇಕರರ 'ಗಂಗವ್ವಗಂಗಾಮಾಯಿ', ನಿರಂಜನರ 'ಬನಶಂಕರಿ', ಕೆ. ಸತ್ಯನಾರಾಯಣರ 'ಗೌರಿ', ರಂ. ಶ.ರ. 'ಸಾವಿತ್ರಿ':

ಎಚ್. ಎಸ್. ಕಾತ್ಯಾಯನಿಯವರ ಎರಡು ಸಂಕಲನಗಳ[೬೩] ಹದಿನಾರೂ ಕತೆಗಳು ಆಯಾ ಕತೆಗಳ ನಾಯಕಿ ಹೆಸರನ್ನೇ ಹೊತ್ತಿವೆ. ಉದಾ: ಕಾಳಿ, ಗೌರಿ, ರಂಗೂ, ಸಾವಿತ್ರೆ, ಮಾಲಾ ಇತ್ಯಾದಿ. ಕುವೆಂಪುರವರ ಎರಡು ಬೃಹತ್ ಕಾದಂಬರಿಗಳ ಹೆಸರು ಸ್ತ್ರೀವಾಚಕವಾದರೂ, 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳು ತಮ್ಮ ವಿಸ್ತಾರದಲ್ಲಿ ಸಮಗ್ರ ಗ್ರಾಮಿಣ ಬದುಕನ್ನು ಮತ್ತು ಸ್ಥಿತ್ಯಂತರಗೊಳ್ಳುತ್ತಿರುವ ಸಾಮಾಜಿಕ ಪರಿಸ್ಥಿತಿಯನ್ನು ಹಿಡಿದಿಟ್ಟುಕೊಳ್ಳುವ ಕೇಂದ್ರ ಆಸಕ್ತಿಯನ್ನು ಹೊಂದಿವೆ. ಕಥನ ಸಾಹಿತ್ಯದ ಸ್ತ್ರೀಪ್ರಧಾನತೆಯನ್ನು ಈ ಕೆಳಗಿನ ವರ್ಗೀಕರಣದ ಮೂಲಕ ಕಂಡುಕೊಳ್ಳಬಹುದು.

ಅ. ಸ್ತ್ರೀಕೇಂದ್ರಿತ ವಸ್ತುವನ್ನುಳ್ಳ ಕತೆ, ಕಾದಂಬರಿಗಳಲ್ಲಿ ಸ್ತ್ರೀ ಪ್ರಧಾನತೆ.

ಆ. ನಾಯಕಿ ಪ್ರಧಾನ ಕತೆ ಕಾದಂಬರಿಗಳಲ್ಲಿ ಸ್ತ್ರೀ ಪ್ರಧಾನತೆ

ಇ. ಮಹಿಳಾ ಬರವಣಿಗೆಯಲ್ಲಿ ಸ್ತ್ರೀ ಪ್ರಧಾನತೆ.

ಅ. ಸ್ತ್ರೀ ಕೇಂದ್ರಿತ ವಸ್ತು ಮತ್ತು ಸ್ತ್ರೀ ಪ್ರಧಾನತೆಯ ಕಥನ ಸಾಹಿತ್ಯ:

ಸ್ತ್ರೀಕೇಂದ್ರಿತ ವಸ್ತುವಿನಲ್ಲಿ ಸ್ತ್ರೀಪಾತ್ರಗಳು ಮತ್ತು ಸ್ತ್ರೀಪಾತ್ರಗಳ ಸಂಬಂಧಗಳ ನಿರೂಪಣೆ ಇರುತ್ತದೆ.

ಸ್ತ್ರೀ ಕೇಂದ್ರಿತ ವಸ್ತುವಿನಲ್ಲಿ ಸ್ತ್ರೀ ಬದುಕಿಗೆ ಸಂಬಂಧಿಸಿದ ವಿವರಗಳು ಇರುತ್ತವೆ. ಹೆಣ್ಣು ಅನುಭವಿಸುವ ವಿವಿಧ ಸಮಸ್ಯೆಗಳು, ಅವಳ ನೋವು - ನಿರಾಶೆಗಳು, ಬದುಕಲು ಅವಳು ನಡೆಸುವ ಪ್ರಯತ್ನಗಳು, ಮಾನವ ಸಂಬಂಧಿ ವಿಚಾರಗಳ ಉಲ್ಲೇಖಗಳು - ಮುಂತಾದುವು ಕಾಣಿಸಿಕೊಳ್ಳುತ್ತವೆ.

ವಿವಾಹ ಸಮಸ್ಯೆ, ವರ್ಗಸಮಸ್ಯೆ, ಲಿಂಗ ಅಸಾಮಾನತೆ, ಪುರುಷರಿಂದ, ಸಮಾಜದಿಂದ, ಇತರ ಮೂಲಗಳಿಂದ ಹೆಣ್ಣು ಅನುಭವಿಸುವ ಶೋಷಣೆಗಳು - ಈ ವಿವರಗಳಿಗೆ ಆದ್ಯತೆ ಇರುತ್ತದೆ. ಸ್ತ್ರೀಕೇಂದ್ರಿತ ವಸ್ತುವನ್ನುಳ್ಳ ಕತೆ, ಕಾದಂಬರಿಗಳು ಕನ್ನಡದಲ್ಲಿ ಈ ಶತಮಾನದ ಪ್ರಾರಂಭದಿಂದಲೇ ಕಾಣಿಸಿಕೊಂಡಿವೆ. ದೇಶದಾದ್ಯಂತ ಸುಧಾರಣಾ ಪಂಥದವರು ಕೈಗೆತ್ತಿಕೊಂಡ ಮಹಿಳಾ ಪ್ರಶ್ನೆಯಿಂದ ಪ್ರಭಾವಿತರಾಗಿ ಸಮಕಾಲೀನ ಲೇಖಕರೂ ಮಹಿಳಾ ಸಮಸ್ಯೆಗಳಿಗೆ ಕತೆಗಳಲ್ಲಿ ಮುಖ್ಯ ನೆಲೆಯನ್ನು ನೀಡಿದ್ದಾರೆ.

೧೮೯೯ ರಿಂದ ೧೯೨೫ ರವರೆಗಿನ ಅವಧಿಯ ರಚನೆಗಳಲ್ಲಿ ಈ ಪ್ರಭಾವವನ್ನು ನಿಚ್ಚಳವಾಗಿ ಕಾಣಬಹುದು. ಇಂದಿರಾಬಾಯಿ, ಇಂದಿರಾ, ರೋಹಿಣಿ, ಭಾಗೀರಥಿ, ಗೌರಿ, ಸುಶೀಲ, ನಭ, ಮಾಡಿದುಣ್ಣು ಮಹರಾಯ ಮೊದಲಾದ ಕಾದಂಬರಿಗಳಲ್ಲಿ ಪ್ರಸ್ತಾಪಿಸಲಾಗಿರುವ ವಿವಿಧ ಸಾಮಾಜಿಕ ಸಮಸ್ಯೆಗಳು ಸ್ತ್ರೀ ಬದುಕಿನ ವಿಶಿಷ್ಟಸಮಸ್ಯೆಗಳೇ ಆಗಿವೆ. ಈ ಕೃತಿಗಳಲ್ಲಿ ಪ್ರಸ್ತಾವಿಸಲಾಗಿರುವ ವಿಧವಾಸಮಸ್ಯೆ ಮತ್ತು ಬಾಲ್ಯವಿವಾಹದ ಅನಾಹುತದ ಚಿತ್ರಣಗಳು ಸಮಕಾಲೀನ ಸಾಮಾಜಿಕ ಸ್ಥಿತಿಯನ್ನು ಅರಿಯುವತ್ತ ನಮ್ಮ ಗಮನವನ್ನು ಸೆಳೆಯುತ್ತವೆ.

ಬಾಲ್ಯವಿವಾಹ, ವೈಧವ್ಯದ ಭವಣೆಗಳು ಸ್ತ್ರೀ ಬದುಕಿಗೇ ವಿಶಿಷ್ಟ ಸಮಸ್ಯೆಗಳಾಗಬಲ್ಲವು ಎಂಬುದನ್ನು ಎಲ್ಲಾ ಬರಹಗಾರರು ತಮ್ಮ ರಚನೆಗಳಲ್ಲಿ ಸಮರ್ಥಿಸಿಕೊಂಡಿದ್ದಾರೆ. ಇದೇ ರೀತಿ ವಯಸ್ಕ ವಿವಾಹ ಪದ್ಧತಿಗೆ ಅನುಮೋದನೆ ದೊರೆತ ಬಳಿಕ ಬಂದ ಕತೆ, ಕಾದಂಬರಿಗಳು ವರದಕ್ಷಿಣೆ ಸಮಸ್ಯೆಯನ್ನು ಪ್ರಮುಖವಾಗಿ ಚರ್ಚೆಗೆ ಕೈಗೆತ್ತಿಕೊಂಡಿವೆ.

ಕತೆ, ಕಾದಂಬರಿಗಳಲ್ಲಿ ಪದೇ ಪದೇ ಕಾಣಿಸುವ ವಿವಾಹ ಸಮಸ್ಯೆಗಳೂ ಹೆಣ್ಣಿನ ಬದುಕಿಗೆಷ್ಟೇ ಸೀಮಿತವಾಗಿರುವುದನ್ನು ಸ್ತ್ರೀಕೇಂದ್ರಿತ ವಸ್ತುಗಳೂ ಸ್ಪಷ್ಟಪಡಿಸುತ್ತವೆ.

ಋತುಮತಿಯಾಗುವ ಮೊದಲೇ ವಿವಾಹವಾಗಬೇಕಾಗಿರುವ ಅನಿವಾರ್ಯತೆ, ಗಂಡ ಸತ್ತರೆ ಸತಿಯಾಗುವುದು ಅಥವಾ ಕೇಶಮುಂಡನ ಪದ್ಧತಿ ಮೂಲಕ "ಮಡಿ" ಯಾಗುವುದು, ಲೈಂಗಿಕ ಭಾವನೆ ನಿಷಿದ್ಧವಾಗಿರುವ ವಿಧವೆ, ಈ ನಿಷೇಧವನ್ನು ಮೀರಿದಾಗ ಬಹಿಷ್ಕಾರದಂತಹ ಕ್ರೂರಕ್ರಮಗಳಿಗೆ ಒಳಪಡಬೇಕಾಗುವುದು, ಮನೆಯ ನಾಲ್ಕುಗೋಡೆಗಳ ನಡುವೆ ಸೀಮಿತ ಬದುಕನ್ನು ನಡೆಸಬೇಕಾಗಿರುವುದು, ವಿವಾಹವಾಗದ ಸ್ಥಿತಿಯಲ್ಲಿ ಆತ್ಮಹತ್ಯೆ, ಗಂಡನಾಶ್ರಯ ತಪ್ಪಿದಲ್ಲಿ ಸಮಾಜದ ದುಷ್ಟಶಕ್ತಿಗಳಿಗೆ, ಕಾಮುಕ ಪ್ರವೃತ್ತಿಗಳಿಗೆ ಬಲಿಯಾಗುವುದು, ಪರಂಪರೆ, ಸಂಪ್ರದಾಯದ ಹೆಸರಿನಲ್ಲಿ ವೇಶ್ಯಾ ಜೀವನದ ಅನಿವಾರ್ಯತೆ, ಬಂಜೆತನ, ತಾಯ್ತನದ ಜವಾಬ್ದಾರಿಗಳು, ಗೃಹಿಣಿಧರ್ಮದ ಅನುಸರಣೆ - ಹೆಣ್ಣಿನ ಬದುಕು ಮತ್ತು ವ್ಯಕ್ತಿತ್ವಕ್ಕೆ ಸಂಬಂಧಿಸಿದ ಬೇರೆ ಬೇರೆ ವಿಚಾರಗಳೂ ಕಥನ ಸಾಹಿತ್ಯದಲ್ಲಿ ವಸ್ತುವಿನ ರೂಪದಲ್ಲಿ ಬಳಕೆಯಾಗಿವೆ.

ವರ್ಗ ಸಮಸ್ಯೆ ಮತ್ತು ವರ್ಗ ಸಂಘರ್ಷವಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಲಿಂಗಾಧಾರಿತ ಅಸಮಾನತೆಯೂ ಸೇರಿಕೊಂಡಂತೆ ಶೋಷಿತನೆಲೆಯಲ್ಲಿ ಹೆಣ್ಣನ್ನು ಕತೆ, ಕಾದಂಬರಿಗಳು ಗುರುತಿಸಿವೆ.

ಸ್ತ್ರೀ ಕೇಂದ್ರಿತ ವಸ್ತುವನ್ನು ಆಧರಿಸಿ ಕತೆ, ಕಾದಂಬರಿ ರಚಿಸಿದ ಪ್ರಮುಖ ಲೇಖಕರು ಮತ್ತು ಕೃತಿಗಳು:

ಗುಲವಾಡಿ ವೆಂಕಟರಾಯರು, ಕೇರೂರು ವಾಸುದೇವಾಚಾರ್ಯ, ಎಂ.ಎಸ್ . ಪುಟ್ಟಣ್ಣ, ಗುಲವಾಡಿ ಅಣ್ಣಾಜಿರಾಯ, ಮೊದಲಾದ ಲೇಖಕರು ಸಮಕಾಲೀನ ಸಾಮಾಜಿಕ ಸಂದರ್ಭಗಳ ಮೂಲಕ ಪ್ರಭಾವಿತರಾಗಿ ವಿಧವಾಸಮಸ್ಯೆ, ವಯಸ್ಕ ವಿವಾಹ ಪದ್ಧತಿ, ಸತೀಪದ್ಧತಿಗೆ ತಮ್ಮ ಕಾದಂಬರಿಗಳಲ್ಲಿ ಅವಕಾಶ ನೀಡಿದರು.

ಮಾಸ್ತಿಯವರ 'ಕಾಮನ ಹಬ್ಬದ ಒಂದು ಕತೆ', 'ಪುತ್ರಕಾಮೇಷ್ಠಿ', 'ಕೃಷ್ಣಮೂರ್ತಿಯ ಹೆಂಡತಿ', 'ಚಿಕ್ಕವ್ವ', 'ಮೇಲೂರಿನ ಲಕ್ಷ್ಮಮ್ಮ', 'ಚೆನ್ನಮ್ಮ' , 'ನಿಜಗಲ್ಲಿನ ರಾಣಿ', 'ಗೌತಮಿ ಹೇಳಿದ ಕತೆ','ಚಂದ್ರವದನಾ', 'ಬೀದಿಯಲ್ಲಿ ಹೋಗುವ ನಾರಿ' ಮತ್ತು 'ಶೇಷಮ್ಮ' ಕತೆಗಳಲ್ಲಿ ವಿಭಿನ್ನ ಸ್ತ್ರೀ ಚಿತ್ರಗಳಿವೆ. ಮುಗುಳೀಯವರ 'ವಿತಂತು ವೇಶ್ಯೆ' ಮತ್ತು ಆನಂದರ 'ನಾನು ಕೊಂದ ಹುಡುಗಿ' ಕತೆಗಳಲ್ಲಿ ವೇಶ್ಯಾಜೀವನದ ಹಿನ್ನೆಲೆಯ ಸಾಮಾಜಿಕ ಚಿತ್ರ ಇದೆ. ಶಿವರಾಮ ಕಾರಂತರ ' ನಿರ್ಭಾಗ್ಯ ಜನ್ಮ', 'ಕನ್ಯಾಬಲಿ', 'ಹೆತ್ತಳಾತಾಯಿ', 'ಸರಸಮ್ಮನ ಸಮಾಧಿ', 'ಮೂಕಜ್ಜಿಯ ಕನಸುಗಳು', 'ಮೈಮನಗಳ ಸುಳಿಯಲ್ಲಿ', ಕಾದಂಬರಿಗಳಲ್ಲಿ ಸ್ತ್ರೀಕೇಂದ್ರಿತ ವಸ್ತುವಿದೆ.

೧೯೩೦ರೊಳಗೆ ಎರಡು ಕತಾ ಸಂಕಲನಗಳನ್ನು, ೧೯೩೪ರಲ್ಲಿ ಮೊದಲ ಕಾದಂಬರಿ ಪ್ರಕಟಿಸಿರುವ ಅನಕೃರವರ ಸಾಹಿತ್ಯ ಬಹುವಾಗಿ ಕೌಟುಂಬಿಕ ಜಗತ್ತು ಮತ್ತು ಕಲಾಜಗತ್ತನ್ನು ವಿವರಿಸುವ ಉದ್ದೇಶವನ್ನುಹೊಂದಿದೆ. ಜನಪ್ರಿಯ ಧಾಟಿ ಮತ್ತು ಪ್ರಗತಿಶೀಲ ಮನೋಧರ್ಮದ ಅ.ನ.ಕೃ ಕತೆಗಳಲ್ಲಿ ಸ್ತ್ರೀಪಾತ್ರಗಳು ಅಪಾರಸಂಖ್ಯೆಯಲ್ಲಿ ಕಾಣಸಿಗುತ್ತವೆ.

ವಿರಸ ದಾಂಪತ್ಯ, ಸ್ತ್ರೀ ಪುರುಷರ ನೈತಿಕ ಅದಃಪತನದ ಕತೆಗಳು, ಗೃಹಿಣಿಧರ್ಮವನ್ನು ಅನುಸರಿಸುವ ಸಾಧ್ವಿಯ ಜೀವನ, ವೇಶ್ಯೆಯರು, ಕಲಾವಿದೆಯರು, ಬಾಹ್ಯಾಡಂಬರಗಳಿಗೆ ಮನಸೋತು ದುರಂತವನ್ನು ತಂದುಕೊಂಡ ಸ್ತ್ರೀಯರು - ಹೀಗೆ ವಿಭಿನ್ನ ಸನ್ನಿವೇಶಗಳ ಮೂಲಕ ಅ.ನ.ಕೃ ಕಾದಂಬರಿಗಳು ಸ್ತ್ರೀ ವಿಚಾರಗಳಿಗೆ ಅವಕಾಶವನ್ನು ನೀಡುತ್ತವೆ. ಸ್ತ್ರೀಕೇಂದ್ರಿತ ವಸ್ತುವುಳ್ಳ ಅ.ನ.ಕೃ ಕಾದಂಬರಿಗಳು: ಗೃಹಲಕ್ಷ್ಮಿ(೧೯೫೩), ರುಕ್ಮಿಣಿ (೧೯೫೪), ತಾಯಿಮಕ್ಕಳು (೧೯೫೫), ಕಣ್ಣೀರು (೧೯೪೭), ಮುಡಿಮಲ್ಲಿಗೆ(೧೯೬೧), ಧರ್ಮಪತ್ನಿ(೧೯೬೦), ದೇವಪ್ರಿಯ (೧೯೬೧), ಮಂಗಳ ಸೂತ್ರ (೧೯೪೦), ಹೆಂಗರಳು (೧೯೫೮), ಹೆಣ್ಣುಜನ್ಮ (೧೯೬೧), ಶ್ರೀಮತಿ (೧೯೫೨), ಗೌರಿ (೧೯೫೮), ಕಸ್ತೂರಿ (೧೯೬೦), ಪಂಕಜ (೧೯೬೧), ಸಣ್ಣಕತೆಗಳು : ಅವಳ ಬಾಳು , ಮುಂದೇನು ಗತಿ, ಹಳದಿಬಾಗಿಲು, ಸಾವಿತ್ರಿ, ಸೌಭಾಗ್ಯ, ಜ್ವಾಲಾ ಮತ್ತು ಗಂಗಮ್ಮನ ಆಸೆ. ತ.ರಾ.ಸು ೭೦ ಕಾದಂಬರಿಗಳು, ೪ ಕಥಾಸಂಕಲನಗಳನ್ನು ಪ್ರಕಟಿಸಿರುವ ಜನಪ್ರಿಯ ಲೇಖಕರು. ಅಸಹಾಯಕ ಹೆಣ್ಣಿನ ದುರಂತ ಬದುಕಿನ ಚಿತ್ರಣವನ್ನು ತಮ್ಮ ಕತೆ, ಕಾದಂಬರಿಗಳಲ್ಲಿ ತ.ರಾ.ಸು ನೀಡಿದ್ದಾರೆ. ಸ್ತ್ರೀ ಕೇಂದ್ರಿತ ವಸ್ತುವನ್ನುಳ್ಳ ತ.ರಾ.ಸು ಕಾದಂಬರಿಗಳು : ಮನೆಗೆ ಬಂದ ಮಹಾಲಕ್ಷ್ಮಿ, ಬಿಡುಗಡೆಯ ಬೇಡಿ, ಮಸಣದ ಹೂವು, ಬೆಂಕಿಯ ಬಲೆ, ಹೆಣ್ಣು ಕಟ್ಟಿದ ಮನೆ, ಅಕ್ಕಮ್ಮನ ಭಾಗ್ಯ, ಗಾಳಿಮಾತು, ಕಾಮಾಕ್ಷಿ, ನಾಯಕಿ, ರಾಜೇಶ್ವರಿ, ಲಾವಣ್ಯವತಿ, ಸಾಕುಮಗಳು, ಶುಕ್ರವಾರದ ಲಕ್ಷ್ಮಿ, ಮತ್ತು ಪಂಜರದ ಪಕ್ಷಿ.

ನಿರಂಜನರದು ಪ್ರಗತಿಶೀಲ ಮನೋಧರ್ಮ ಮತ್ತು ಸ್ತ್ರೀಪರ ಧ್ವನಿ. ೧೯೪೫ ರಲ್ಲಿ ಮೊದಲ ಕತಾಸಂಕಲನ, ೧೯೫೩ರಲ್ಲಿ ಮೊದಲ ಕಾದಂಬರಿ ಪ್ರಕಟಿಸಿರುವ ನಿರಂಜನರ ಒಟ್ಟು ಕೃತಿಗಳು : ೨೫ ಕಾದಂಬರಿಗಳು (೧೯೫೩-೧೯೮೨) ಮತ್ತು ೧೧ ಕತಾಸಂಕಲನಗಳು (೧೯೪೫-೧೯೮೬).

## ನಿರಂಜನರ ಸ್ತ್ರೀ ಕೇಂದ್ರಿತ ವಸ್ತುವಿನ ಕಾದಂಬರಿಗಳು

ಬನಶಂಕರಿ (೧೯೫೪), ಅಭಯ (೧೯೫೪), ರಂಗಮ್ಮನ ವಠಾರ (೧೯೫೪), ಪಾಲಿಗೆ ಬಂದ ಪಂಚಾಮೃತ (೧೯೫೫), ಏಕಾಂಗಿನಿ (೧೯೫೫), ವಿಶಾಲಾಕ್ಷಿ (೧೯೫೮), ಮತ್ತು ಸ್ಮರಣೆಯೊಂದೇ ಸಾಲದೇ (೧೯೭೧), ಸಣ್ಣಕತೆ : ಕೊನೆಯ ಗಿರಾಕಿ, ಕೌಟುಂಬಿಕ ವಿರಸ, ಆರ್ಥಿಕ ಒತ್ತಡ, ಸಾಮಾಜಿಕ ಪರಿಸ್ಥಿತಿ - ಈ ಕಾರಣಗಳಿಂದ ಹೆಣ್ಣು ಅನುಭವಿಸುವ ವಿವಿಧ ಸಮಸ್ಯೆಗಳನ್ನು ನಿರಂಜನರು ಚರ್ಚಿಸಿದ್ದಾರೆ. ಸಮಸ್ಯೆಗಳಿಂದ ಬಿಡುಗಡೆ ಪಡೆದು ಸ್ವಸ್ಥಜೀವನ ನಡೆಸುವ ಆರೋಗ್ಯಪೂರ್ಣ ಚಿತ್ರವನ್ನು ಹೆಣ್ಣಿಗೆ ನೀಡಬಯಸುತ್ತಾರೆ, ನಿರಂಜನ.

ಕುವೆಂಪುರವರ 'ಕಾನೂರು ಹೆಗ್ಗಡತಿ' ಪಾಳೇಗಾರಿಕೆ ಮನೋಭಾವ ಮತ್ತು ಜೀವನ ವಿಧಾನವನ್ನು ರೂಢಿಸಿಕೊಂಡಿರುವ ಸಮುದಾಯದಲ್ಲಿ ಶೋಷಣೆಗೆ ಬಲಿಯಾಗುವ ಸ್ತ್ರೀ ಸಮೂಹದ ದುರಂತವನ್ನು ವಿವರಿಸುತ್ತದೆ. ಮಿರ್ಜಿ ಅಣ್ಣಾರಾಯರ 'ನಿಸರ್ಗ', ರಾವ್ ಬಹದ್ದೂರರ 'ಗ್ರಾಮಾಯಾಣ', ಕುವೆಂಪು ಅವರಂತೇ ಒಟ್ಟು ಸಮಾಜದ ನಿಯಂತ್ರಣದಲ್ಲಿ ಬದುಕುವ ಹೆಣ್ಣಿನ ನಿರ್ಬಂಧಿತ ಸ್ಥಿತಿಯನ್ನು ವಿವರಿಸುತ್ತದೆ.

ಶಂಕರ ಮೊಕಾಶಿಯವರ 'ಗಂಗವ್ವಗಂಗಾಮಾಯಿ' ಗಂಡ ಸತ್ತು ಬಡತನದ ಅಸಹಾಯಕ ಪರಿಸ್ಥಿತಿಯಲ್ಲಿದ್ದರೂ,

ಇತರರ ಬೆಂಬಲ ಮತ್ತು ವಿರೋಧ ಎರಡನ್ನೂ ಪಡೆದು ಮತ್ತು ಎದುರಿಸಿ ಬದುಕಲ್ಲಿ ತನ್ನ ಮಗನನ್ನು ಮನುಷ್ಯನನ್ನಾಗಿ ಮಾಡುವ ಬಯಕೆಯುಳ್ಳ ಹೆಣ್ಣಿನ ಬದುಕನ್ನು ವಿವರಿಸುತ್ತದೆ.

೧೯೫೦ ರಿಂದ ೧೯೯೮ ರವರೆಗೆ ಚದುರಂಗರು ಪ್ರಕಟಿಸಿರುವ ಕಾದಂಬರಿ ಸಂಖ್ಯೆ ೪, ಅವುಗಳಲ್ಲಿ ೩ ಕಾದಂಬರಿಗಳು ಸ್ತ್ರೀಯನ್ನು ಕೇಂದ್ರವಾಗಿಟ್ಟುಕೊಂಡು ಕತೆ ವಿವರಿಸುತ್ತವೆ. ಉಯ್ಯಾಲೆ, ಸರ್ವಮಂಗಳ ಮತ್ತು ವೈಶಾಖದ ಪ್ರಧಾನ ಪಾತ್ರಗಳು ಸ್ತ್ರೀಯರು. ಗ್ರಾಮೀಣ ಮತ್ತು ನಗರ, ಆಧುನಿಕತೆ ಮತ್ತು ಪರಂಪರೆ ಇವೆರಡನ್ನು ಜೊತೆಜೊತೆಯಾಗಿಟ್ಟುಕೊಂಡೇ ಚದುರಂಗರು ಹೆಣ್ಣಿನ ಬದುಕಿನ ವಿಶ್ಲೇಷಣೆಗೆ ತೊಡಗುತ್ತಾರೆ. ಸ್ತ್ರೀಸ್ವಾತಂತ್ರ್ಯವನ್ನು ವಸ್ತುನಿಷ್ಠವಾಗಿ ಪರಿಶೀಲನೆಗೆ ಒಳಪಡಿಸುವ ಚದುರಂಗರದು ಪ್ರಗತಿಪರ ಧೋರಣೆಯಾಗಿದೆ. ವ್ಯಾಸರಾಯ ಬಲ್ಲಾಳರ ಒಟ್ಟು ಕತಾ ಸಾಹಿತ್ಯ ೬ ಕಾದಂಬರಿಗಳು ಮತ್ತು ೪ ಕತಾಸಂಕಲನಗಳು. ಆರು ಕಾದಂಬರಿಗಳಲ್ಲಿ ನಾಲ್ಕು ಕಾದಂಬರಿಗಳು ಸ್ತ್ರೀ ಪ್ರಧಾನಗಳಾಗಿವೆ. ಅನುರಕ್ತೆ (೧೯೫೩), ಹೇಮಂತಗಾನ (೧೯೫೪), ವಾತ್ಸಲ್ಯಪಥ (೧೯೫೭) ಮತ್ತು ಉತ್ತರಾಯಾಣ (೧೯೬೩).

ಬಲ್ಲಾಳರು ನಗರಪ್ರಜ್ಞೆಯ ಲೇಖಕರು. ನಗರ ಬದುಕಿನ ವಿವಿಧ ಮುಖಗಳು,ವಿವಿಧ ಸಂಬಂಧಗಳು, ಸವಾಲುಗಳು,ಅವಕಾಶಗಳು - ಈ ಎಲ್ಲಾ ಅಂಶಗಳು ಮನುಷ್ಯಪ್ರಗತಿಗೆ ಪೂರಕವಾಗಿ ನಿಲ್ಲುವ ಸುಮುಖಕಲ್ಪನೆ, ಈ ಕಲ್ಪನೆಯಲ್ಲಿ ಸ್ವಾತಂತ್ರ್ಯ ಮತ್ತು ತಮ್ಮತನದ ಅರಿವನ್ನು ನಿಧಾನವಾಗಿ ಅಂತರ್ಗತಗೊಳಿಸುತ್ತಾ ಬೆಳೆಯುವ ಸ್ತ್ರೀವ್ಯಕ್ತಿತ್ವ ಇವು ಬಲ್ಲಾಳರ ಕಾದಂಬರಿ ಮುಖ್ಯ ಕೇಂದ್ರವಾಗಿವೆ. ಹೆಣ್ಣಿನ ಬದುಕಿನ ನೆಮ್ಮದಿಯ ಸಾಧ್ಯತೆಗಳನ್ನು ವಿವಿಧ ಆಯಾಮದ ಮೂಲಕ ಬಲ್ಲಾಳರ ಕಾದಂಬರಿಗಳು ಹುಡುಕಾಟ ನಡೆಸುತ್ತವೆ. ೧೯೬೪ ರಿಂದ ೧೯೯೮ ರವರೆಗೆ ಯಶವಂತ ಚಿತ್ತಾಲರು ಪ್ರಕಟಿಸಿರುವ ಕಾದಂಬರಿಗಳೂ ೫. ೪೦ಕ್ಕೂ ಮಿಕ್ಕಿ ಸಣ್ಣಕತೆಗಳನ್ನು ಬರೆದಿದ್ದಾರೆ. ಚಿತ್ತಾಲರ ಕಾದಂಬರಿ : ಮೂರು ದಾರಿಗಳು (೧೯೬೪) ಮತ್ತು ಸಣ್ಣಕತೆಗಳಾದ ಬೊಮ್ಮಿಯ ಹುಲ್ಲುಹೊರೆ, ಆಬೋಲಿನಾ, ಖಾಲಿಕೋಣೆ, ತಪ್ಪಿದಗುರಿ, ರಾಧಕ್ಕನ ಮನೊರಥ, ಉತ್ತುಮಿ ಮತ್ತು ಉದ್ಧಾರ - ಸ್ತ್ರೀ ಪ್ರಧಾನವಾಗಿವೆ. ಮುಗ್ಧತೆ, ಅಮಾಯಕತೆ ಮತ್ತು ಅಸಹಾಯಕತೆ ಹೇಗೆ ಹೆಣ್ಣಿಗೆ ದುರಂತವನ್ನು ತರುತ್ತವೆ ಎಂಬುದನ್ನು ವಿವರಿಸುವ ಈ ಕತೆಗಳು ಮಾನವೀಯತೆಯ ದೃಷ್ಟಿಯಿಂದ ಹೆಣ್ಣಿನ ಸಮಸ್ಯೆಗಳನ್ನು ವಿಶ್ಲೇಷಿಸುತ್ತವೆ.

ವೈಚಾರಿಕತೆಯನ್ನು ಪ್ರದಾನವಾಗಿಟ್ಟುಕೊಂಡಿರುವ ಭೈರಪ್ಪನವರ ಕಾದಂಬರಿಗಳಲ್ಲಿ ವಂಶವೃಕ್ಷ, ಗೃಹಭಂಗ, ಅಂಚು ಮತ್ತು ತಂತು ಹೆಣ್ಣಿನ ಜೀವನದಲ್ಲಿ ನಡೆಯುವ ವಿವಿಧ ಘಟನೆಗಳ ಮೂಲಕ ಅವಳ ಬದುಕು ನಿರ್ಧಾರಿತವಾಗುವ ಅಂಶದತ್ತ ಗಮನ ಸೆಳೆಯುತ್ತವೆ. ವಿ.ಎಂ. ಇನಾಂದಾರರ ೧೬ ಕಾದಂಬರಿಗಳಲ್ಲಿ (೧೯೪೬-೧೯೮೬) ೮ ಕಾದಂಬರಿಗಳು ನಾಯಕಿಪ್ರಧಾನವಾಗಿವೆ. ಕನಸಿನ ಮನೆ, ಕಟ್ಟಿದ ಮನೆ, ಬಾಡಿದ ಹೂವು, ಕತ್ತಲೆಯ ಕಡಲು, ಶಾಪ, ಸ್ವರ್ಗದ ಬಾಗಿಲು, ಚಿತ್ರಲೇಖಾ, ಊರ್ವಶಿ. ಸ್ತ್ರೀ ಬದುಕಿನ ವಿವರಗಳು, ಅವಳ ಸ್ವಂತ ಆಸೆ, ಆಕಾಂಕ್ಷೆ, ಸ್ವಾತಂತ್ರ್ಯಪ್ರಿಯತೆ, ಸ್ತ್ರೀ-ಪುರುಷ ಭಾವನಾತ್ಮಕ ಸಂಬಂಧಗಳು ಇನಾಂದರರೆ ಕಾದಂಬರಿಗಳ ವೈಶಿಷ್ಟವಾಗಿದೆ.

ಇವುಗಳಲ್ಲದೆ ಲಂಕೇಶರ 'ಅಕ್ಕ', ಪೂರ್ಣಚಂದ್ರ ತೇಜಸ್ವಿಯವರ 'ಕಿರಗೂರಿನ ಗಯ್ಯಾಳಿಗಳು', ಶಾಂತಿನಾಥ

ದೇಸಾಯಿಯವರ 'ಕ್ಷಿತಿಜ' ಮತ್ತು ದೇವನೂರು ಮಹಾದೇವರ 'ಒಡಲಾಳ' ಸ್ತ್ರೀ ಬದುಕಿನ, ವ್ಯಕ್ತಿತ್ವದ ವಿವರಗಳನ್ನುಳ್ಳ ವಸ್ತುವಿರುವ ಕತೆಗಳಾಗಿವೆ. ಬಹುತೇಕ ಲೇಖಕಿಯರ ರಚನೆಗಳ ಕೇಂದ್ರ ಹೆಣ್ಣು. ಆದುದರಿಂದ ವಸ್ತು ಸ್ತ್ರೀಕೇಂದ್ರಿತವಾಗಿರುವುದು ಸಹಜವಾಗಿದೆ. ನಾಯಕಿಪ್ರಧಾನ ಕತೆ, ಕಾದಂಬರಿಗಳು, ಸ್ತ್ರೀಗೆ ಸಂಬಂಧಿಸಿದ ವಿಚಾರಗಳಿಗೇ ಪ್ರಾಮುಖ್ಯತೆ ನೀಡುತ್ತವೆ. ಸ್ತ್ರೀ ಕೇಂದ್ರಿತ ವಸ್ತುವಿನ ಆಯ್ಕೆಯಲ್ಲಿ ಬರಹಗಾರರ ಒಲವನ್ನು ಈಕೆಳಗಿನ ಕಾರಣಗಳಿಂದಾಗಿ ಗುರುತಿಸಬಹುದು.

೧. ಕತಾ ಮಾಧ್ಯಮದಲ್ಲಿ ಸ್ತ್ರೀ ಬದುಕಿನ ವಿವರಗಳನ್ನು ನೀಡುವುದರ ಮೂಲಕ ಓದುಗರನ್ನು ಸಮೀಪಿಸುವುದು ಸಾಧ್ಯ ಎನ್ನುವ ಮನೋಭಾವ.

೨. ಕೃತಿರಚನೆ ಕಾಲದಲ್ಲಿ ಸಮಕಾಲೀನ, ಸಾಮಾಜಿಕ ಪರಿಸರದಲ್ಲಿ, ಪ್ರಚಲಿತವಾಗಿದ್ದ ಸ್ತ್ರೀ ಸುಧಾರಣಾ ಕ್ರಮಗಳು, ಸ್ತ್ರೀಪರ ಚಳುವಳಿಗಳು, ಚರ್ಚೆಗಳು - ಇವುಗಳು ಲೇಖಕರು ಗಮನವನ್ನು ಸೆಳೆದಿರಬಹುದು.

೩. ಸ್ತ್ರೀಪರ ಕಾಳಜಿ ಬರಹಗಾರರಲ್ಲಿಯೇ ಇರಬಹುದಾದ ಸಾಧ್ಯತೆಗಳು.



**ಆ : ನಾಯಕಿ ಪ್ರಧಾನ ಕಥನ ಸಾಹಿತ್ಯ**

ಕಥಾನಾಯಕಿಯು ಕೇಂದ್ರಪಾತ್ರವಾಗಿದ್ದು, ಕತೆಯಲ್ಲಿ ನಡೆಯುವ ಘಟನೆಗಳು, ಕಾಣಿಸಿಕೊಳ್ಳುವ ವಿವರಗಳು, ಮನುಷ್ಯಸಂಬಂಧಗಳು, ಈ ಕೇಂದ್ರಪಾತ್ರದೊಡನೆ ಸಂಬಂಧವಿರಿಸಿಕೊಂಡಿದ್ದರೆ - ಈ ರಚನೆಗಳು ನಾಯಕಿ ಪ್ರಧಾನ ರಚನೆಗಳಾಗುತ್ತವೆ. ನಾಯಕಿ ಪ್ರಧಾನ ರಚನೆಗಳಲ್ಲಿ ನಾಯಕಿ ಪಾತ್ರಕ್ಕೆ ಹೆಚ್ಚಿನ ಅವಕಾಶವಿರುತ್ತದೆ. ಅವಳ ಬದುಕಿನ ವಿವರಗಳಿಗೆ ಮೊದಲ ಆದ್ಯತೆ ಸಲ್ಲುತ್ತದೆ.



ಈ ಶತಮಾನದ ಮೊದಲ ಭಾಗದಲ್ಲಿ, ಬಂದ ಮಾಸ್ತಿಕತೆಗಳು ನಾಯಕಿ ಪ್ರಧಾನ ರಚನೆಗಳ ಸಂಕ್ಷಿಪ್ತ ಚಿತ್ರಗಳಾಗಿವೆ. ಇದೇ ಅವಧಿಯ ತಿರುಮಲಾಂಬರ ಕಾದಂಬರಿಗಳೂ ಅದೇ ರೀತಿಯ ರಚನೆಗಳು, ತಿರುಮಲಾಂಬ ತಮ್ಮಕಾದಂಬರಿಯ ಕೇಂದ್ರಪಾತ್ರದಲ್ಲಿ ಹೆಣ್ಣನ್ನು ಇಟ್ಟು, ಈ ನಾಯಕಿ ಪಾತ್ರಕ್ಕೆ ಹೆಚ್ಚಿನ ಅವಕಾಶಗಳನ್ನು ನೀಡಿದರಾದರೂ ಕಾದಂಬರಿಯ ಮೂಲ ಉದ್ದೇಶವು ಬೇರೆಯಾಗಿರುವ ಕಾರಣ ಲೇಖಕಿಯ ಗಮನ ಈ ಉದ್ದೇಶ ನಿರ್ವಹಣೆಗಾಗಿ ಹೆಚ್ಚು ಭಾಗ ಸರಿದಿದೆ. 'ವಾಗ್ದೇವಿ' ಕಾದಂಬರಿಯ ಅಪವಾದ ಬಿಟ್ಟರೆ 'ಇಂದಿರೆ', 'ಇಂದಿರಾಬಾಯಿ' ಮೊದಲಾದ ಕಾದಂಬರಿಗಳಲ್ಲಿ ತಿರುಮಲಾಂಬರಂತೇ ಕಾದಂಬರಿ ಉದ್ದೇಶವನ್ನೇ ಪ್ರಧಾನವಾಗಿಟ್ಟು ನೋಡಿದ ಕಾರಣ ಈ ರಚನೆಗಳನ್ನು ನಾಯಕಿ ಪ್ರಧಾನವೆನ್ನುವುದು ಸ್ವಲ್ಪ ಕಷ್ಟವೆನಿಸುತ್ತದೆ.

೫೦ರ ದಶಕದ ನಂತರ ಬಂದ ಕಾದಂಬರಿಗಳು ನಾಯಕಿಪ್ರಧಾನತೆಯ ಪ್ರಮುಖ ಲಕ್ಷಣಗಳನ್ನು ಪಡೆದಿವೆ. ಈ ಅವಧಿಯ ಮುಖ್ಯ ಆಕರ್ಷಣೆಯೇ ನಾಯಕಿ ಪ್ರಧಾನ ಕಾದಂಬರಿಗಳು. ಲೇಖಕಿಯರು ಅತಿ ಹೆಚ್ಚು ಸಂಖ್ಯೆಯಲ್ಲಿ ನಾಯಕಿಪ್ರಧಾನ ಕಾದಂಬರಿಗಳನ್ನು ಪ್ರಕಟಿಸಿದ್ದಾರೆ. ತ್ರಿವೇಣಿಯವರ ೨೦ ಕಾದಂಬರಿಗಳಲ್ಲಿ ೧೯ ನಾಯಕಿಪ್ರಧಾನವಾಗಿವೆ. ಅನುಪಮಾ ನಿರಂಜನರ ೨೩ ಕಾದಂಬರಿಗಳಲ್ಲಿ ೧೧ ಕಾದಂಬರಿಗಳು ನಾಯಕಿ ಪ್ರಧಾನಗಳಾಗಿವೆ.

ಇತರ ನಾಯಕಿ ಪ್ರಧಾನ ಕಾದಂಬರಿಗಳು

ಎಂ.ಕೆ. ಇಂದಿರಾರ 'ತುಂಗಭದ್ರ', 'ಗೆಜ್ಜೆಪೂಜೆ', 'ಫಣಿಯಮ್ಮ', ಮತ್ತು 'ತಗ್ಗಿನ ಮನೆ ಸೀತ' ಸಾರಾ ಅಬೂಬಕರರ 'ಚಂದ್ರಗಿರಿಯ ತೀರದಲ್ಲಿ' ಮತ್ತು 'ಸಹನಾ'. ವಿ.ಎಂ.ಇನಾಂದಾರರ 'ಶಾಪ', 'ಸ್ವರ್ಗದ ಬಾಗಿಲು', 'ಮೋಹಿನಿ', 'ಊರ್ವಶಿ' ಮತ್ತು 'ಚಿತ್ರಲೇಖಾ'. ಚದುರಂಗರ 'ಸರ್ವಮಂಗಳಾ' ಮತ್ತು 'ಉಯ್ಯಾಲೆ'.

ನಿರಂಜನರ 'ಬನಶಂಕರಿ', 'ಪಾಲಿಗೆ ಬಂದ ಪಂಚಾಮೃತ', 'ಏಕಾಂಗಿನಿ' ಮತ್ತು 'ವಿಶಾಲಾಕ್ಷಿ' ವ್ಯಾಸರಾಯ ಬಲ್ಲಾಳರ 'ಅನುರಕ್ತೆ', 'ವಾತ್ಸಲ್ಯಪಥ' ಮತ್ತು 'ಉತ್ತರಾಯಣ' ಭೈರಪ್ಪನವರ 'ಅಂಚು', ದೊಡ್ಡೇರಿ ವೆಂಕಟಗಿರಿರಾವರ 'ರತ್ನಿಯಮಗಳು', 'ರಂಶಾರ 'ಸಾವಿತ್ರಿ', ಕೆ. ಸತ್ಯನಾರಾಯಣರ ' ಗೌರಿ ' ಮೊದಲಾದುವುಗಳು.

ಇ. ಮಹಿಳಾ ಬರವಣಿಗೆ ಮತ್ತು ಸ್ತ್ರೀ ಪ್ರಧಾನತೆ

ಮಹಿಳೆಯರ ಬರವಣಿಗೆಯ ಕೇಂದ್ರ ಹೆಣ್ಣು. ಲೇಖಕಿಯರು ಬರೆದ ಕತೆ, ಕಾದಂಬರಿಗಳಲ್ಲಿ ಬಹುತೇಕವಾಗಿ ಹೆಣ್ಣಿನ ಬದುಕಿನ ವಿವರಗಳೇ ಪ್ರಧಾನವಾಗಿ ಇವೆ. ಕನ್ನಡದ ಸಂದರ್ಭದಲ್ಲಿ ಲೇಖಕಿಯರು ಸಣ್ಣಕತೆ ಮತ್ತು ಕಾದಂಬರಿಗಳಲ್ಲಿ ಅಧಿಕಸಂಖ್ಯೆಯಲ್ಲಿ ಕೃತಿರಚನೆ ಮಾಡಿದ್ದಾರೆ. ಕನ್ನಡದ ಮೊದಲ ಲೇಖಕಿ ತಿರುಮಲಾಂಬರ ಕಾದಂಬರಿಗಳು ೧೯೧೩ ರಿಂದಲೇ ಪ್ರಕಟವಾಗಿವೆ. ತಿರುಮಲಾಂಬರಿಗಿಂತ ಮೊದಲು ಶಾಂತಾಬಾಯಿ ನೀಲಗಾರ ಎಂಬ ಲೇಖಕಿ ಕೃತಿಯೊಂದನ್ನು ಪ್ರಕಟಿಸಿರುವುದು ಇತ್ತೀಚಿಗೆ ತಿಳಿದುಬಂದಿದೆ.[೨೪] ಹೀಗೆ ಈ ಶತಮಾನದ ಮೊದಲ ದಶಕದಿಂದ ಲೇಖಕಿಯರು ಕಥನಸಾಹಿತ್ಯದಲ್ಲಿ ಪಾಲುಗೊಂಡಿದ್ದಾರೆ.

ಲೇಖಕಿ ತನ್ನ ಅನುಭವದ ಮೂಲಕ ಗೃಹಿಸಿಕೊಂಡಿರುವುದನ್ನು ಕೃತಿಮೂಲಕ ಅಭಿವ್ಯಕ್ತಿಸುವ ಕ್ರಮದಲ್ಲಿಮಹಿಳಾ ಬರಣಿಗೆಯ ಅಥವಾ ಮಹಿಳಾಸಾಹಿತ್ಯದ ಸ್ವರೂಪವಿದೆ. ಹೆಣ್ಣಿನ ಅನುಭವ ಮತ್ತು ಹೆಣ್ಣಿನ ಭಾವನೆಗಳನ್ನು ಹೆಣ್ಣು ಗ್ರಹಿಸಿ ಒದಗಿಸುವ ನೋಟವು ಮಹಿಳಾ ಬರವಣಿಗೆಯಲ್ಲಿ ಗೋಚರಿಸುತ್ತದೆ. ವಸ್ತುನಿಷ್ಠತೆಯಿಂದ ತನ್ನನ್ನು ತಾನು ಕಂಡುಕೊಳ್ಳುವ ಮತ್ತು ವಿಮರ್ಶೆಗೆ ಒಳಪಡಿಸುವ ಪ್ರಯತ್ನವೂ ಇದಾಗಿರುತ್ತದೆ. ಅನುಭವಗಳನ್ನು ಗ್ರಹಿಸುವ ಮತ್ತು ಮಾಧ್ಯಮವೊಂದರ ಮೂಲಕ ಅಭಿವ್ಯಕ್ತಿಸುವ ಈ ವಿಧಾನದಲ್ಲಿ ಸ್ತ್ರೀವ್ಯಕ್ತಿತ್ವದ ಎಲ್ಲಾ ಆಯಾಮಗಳೂ ಸಂಭವನೀಯ ನೆಲೆಯಲ್ಲಿ ತೆರೆದುಕೊಳ್ಳುತ್ತವೆ. ಮಹಿಳಾ ಬರವಣಿಗೆಯಲ್ಲಿರುವ ಸ್ತ್ರೀಪ್ರಧಾನತೆಯು ಸಾಹಿತ್ಯಕ್ಕೆ ಮಹಿಳಾ ದೃಷ್ಟಿಕೋನವನ್ನು ನೀಡುವುದಕ್ಕೆ ಸಹಕಾರಿಯಾಗಿದೆ. ಕಥನ ಸಾಹಿತ್ಯದ ಪ್ರಾಥಮಿಕ ಹಂತದಲ್ಲಿ ಬರವಣಿಗೆಯನ್ನು ಪ್ರಾರಂಭಿಸಿರುವ ಲೇಖಕಿಯರು ಸ್ತ್ರೀಜಗತ್ತಿನ ಅನಾವರಣವನ್ನು ಸ್ತ್ರೀದೃಷ್ಟಿಕೋನದ ಮೂಲಕವೇ ತೋರಿಸಿಕೊಟ್ಟಿದ್ದಾರೆ.

ಆಯಾಕಾಲದ ಒಪ್ಪಿತ ಮೌಲ್ಯಗಳನ್ನು ಅನುಸರಿಸಿ ಬರೆದವರು, ಮೌಲ್ಯಗಳನ್ನು ವಿರೋಧಿಸಿ ಬರೆದವರು, ಪ್ರತಿಭಟನೆ ಮತ್ತು ಪ್ರತಿರೋಧಗಳನ್ನು ಕೃತಿ ಮೂಲಕ ವ್ಯಕ್ತ ಪಡಿಸಿದವರು, ಜನಪ್ರಿಯ ಧಾಟಿ ಬರವಣಿಗೆಗೆ ಸೀಮಿತವಾಗಿದ್ದವರು - ಹೀಗೆ ಕನ್ನಡದಲ್ಲಿ ವಿವಿಧ ರೀತಿಯ ಬರವಣಿಗೆಯಲ್ಲಿ ತೊಡಗಿಕೊಂಡಿರುವ ಲೇಖಕಿಯರು ಕಾಣಿಸಿಕೊಳ್ಳುತ್ತಾರೆ. ಹೆಚ್ಚು ಕಡಿಮೆ ಎಲ್ಲಾ ಲೇಖಕಿಯರದು ಸ್ತ್ರೀಪರ ನಿಲುವು ಆಗಿದೆ. ಹೊಸಗನ್ನಡ ಸಾಹಿತ್ಯ

ಚರಿತ್ರೆಯಲ್ಲಿ ಸುಮಾರು ೫೦೦ ಲೇಖಕಿಯರು ಕಾಣಿಸಿಕೊಳ್ಳುತ್ತಾರೆ.[೩೫] ಲೇಖಕಿಯರ ಬರಹಗಳಲ್ಲಿ ಮುಖ್ಯವಾಗಿ ೨ ಕವಲುಗಳನ್ನು ಗುರುತಿಸಬಹುದು.

ಮೊದಲ ಕವಲಿಗೆ ಸೇರಿದ ಬರಹಗಳಲ್ಲಿ ಸ್ತ್ರೀ ವಿಶಿಷ್ಟತೆ, ಸ್ತ್ರೀ ಪ್ರಜ್ಞೆ, ಸ್ತ್ರೀ ಪರ ನಿಲುವು ಮತ್ತು ಸ್ತ್ರೀ ಪರ ಕಾಳಜಿ ಬರವಣಿಗೆಯ ಮುಖ್ಯ ಲಕ್ಷಣಗಳಾದರೆ, ಎರಡನೇ ಕವಲಿನ ಬರಹದಲ್ಲಿ ಜನಪ್ರಿಯಧಾಟಿ ಬರವಣಿಗೆ ಮುಖ್ಯಲಕ್ಷಣವಾಗಿದೆ. ರಮ್ಯತೆ, ಕನಸುಗಾರಿಕೆ ಮತ್ತು ಕಲ್ಪನಾ ವಿಲಾಸಗಳು ಪ್ರಧಾನವಾಗಿ ಗೋಚರಿಸುವ ಜನಪ್ರಿಯ ಧಾಟಿಯಲ್ಲಿರುವ ಕತೆ ಕಾದಂಬರಿಗಳಲ್ಲಿ ವಸ್ತು ವೈವಿದ್ಯತೆ ಇರುತ್ತದೆ. ಜನಪ್ರಿಯ ಧಾಟಿಯ ಲೇಖಕಿಯರು ಸ್ತ್ರೀ ಕೇಂದ್ರಿತ ವಸ್ತುವಿಗಿಂತಲೂ ಹೆಚ್ಚಾಗಿ ಇತರ ಮನರಂಜನಾ ವಿಚಾರಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡುತ್ತಾರೆ. ಸಂಖ್ಯೆ ದೃಷ್ಟಿಯಿಂದ ಈ ರಚನೆಗಳು ಮಹತ್ವ ಪಡೆಯುತ್ತವೆ.

ಸ್ತ್ರೀ ಪ್ರಜ್ಞೆಯ ಕೃತಿಗಳಲ್ಲಿ ಸ್ತ್ರೀ ಸಂಬಂಧಿಸಿದ ವಿಚಾರಗಳೇ ವಸ್ತುವಾಗಿ ಆಯ್ಕೆಯಾಗುತ್ತವೆ. ಲೇಖಕಿಯರು ಸಮಕಾಲೀನ ಸಮಾಜದ ಪರಿಸರದಿಂದ ಆಯ್ಕೆಮಾಡಿ ಕೃತಿಮೂಲಕ ಚರ್ಚಿಸಿದ ಸ್ತ್ರೀ ಸಮಸ್ಯೆಗಳ ನಿರ್ವಹಣೆ ಅದೇ ಕಾಲದ ಪುರುಷ ರಚನೆಗಳಲ್ಲಿ (ಸ್ತ್ರೀಕೇಂದ್ರಿತ ವಸ್ತುವನ್ನುಳ್ಳ ಪುರುಷ ರಚನೆಗಳಲ್ಲಿ) ಗೋಚರಿಸುವ ಸ್ತ್ರೀ ಸಮಸ್ಯೆಗಳ ನಿರ್ವಹಣೆಗಿಂತ ಹೆಚ್ಚು ಭಿನ್ನವೆನಿಸುವುದಿಲ್ಲ. ಪ್ರಾಥಮಿಕ ಹಂತದ ಕೃತಿಕಾರರಾಗಿರುವ ತಿರುಮಲಾಂಬ, ಕಲ್ಯಾಣಮ್ಮ ಮೊದಲಾದವರ ಬರವಣಿಗೆಯಲ್ಲಿ ಇದು ಸ್ಪಷ್ಟವಾಗಿಯೇ ಇದೆ. ಆದರೆ ಸಮಸ್ಯೆಯ ಆಯ್ಕೆ, ಮತ್ತು ಸಮಸ್ಯೆಯ ನಿರ್ವಹಣೆ ಹೆಣ್ಣಿನ ಮೂಲಕ ದಾಖಲಿಸುವ ಪ್ರಯತ್ನಗಳಾಗಿ ಇದು ಮಹತ್ವದಾಗುತ್ತದೆ.

ಮಹಿಳಾ ಬರವಣಿಗೆಯ ವಸ್ತು: ಸ್ತ್ರೀ ಎದುರಿಸುವ ಕೌಟುಂಬಿಕ ಮತ್ತು ಸಾಮಾಜಿಕ ಸಮಸ್ಯೆಗಳು. ಹೆಣ್ಣಾಗಿ ಹುಟ್ಟಿದ ಕಾರಣವಾಗಿ ಮತ್ತು ವಿವಾಹ ಸಂಸ್ಥೆಯ ಮೂಲಕ ಈ ಸಮಸ್ಯೆಗಳು ವ್ಯಾಖ್ಯಾನಿಸಲ್ಪಟ್ಟಿವೆ. ಸಾಮಾನ್ಯ ತಿಳುವಳಿಕೆಯಲ್ಲಿರುವ ''ಹೆಣ್ಣಿನ ಬದುಕಿನ ಕೇಂದ್ರ ಮತ್ತು ಗುರಿ ವಿವಾಹ'' ಎನ್ನುವ ಮನೋಭಾವವು ಹೇಗೆ ಹೆಣ್ಣಿನ ಬದುಕಿನಲ್ಲಿ ವಿಧವಿಧವಾದ ಸಮಸ್ಯೆಗಳನ್ನು ಹುಟ್ಟುಹಾಕುತ್ತದೆ ಎನ್ನುವುದನ್ನು ಲೇಖಕಿಯರು ಮಹತ್ವದ ಪ್ರಶ್ನೆಯಾಗಿ ಕೈಗೆತ್ತಿಕೊಳ್ಳುತ್ತಾರೆ.

ಮಹಿಳಾ ಬರವಣಿಗೆಯ ವಸ್ತು : ವಿವಾಹಸಮಸ್ಯೆ, ವೇಶ್ಯಾಸಮಸ್ಯೆ, ವರ್ಗಸಮಸ್ಯೆ ಉದ್ಯೋಗ ಕ್ಷೇತ್ರದ ಸಮಸ್ಯೆಗಳು, ವೈಧವ್ಯ, ಅತಂತ್ರ ಸ್ಥಿತಿ, ಲಿಂಗಾಧಾರಿತ ನೀತಿ ಕಾರಣದಿಂದ ಕುಟುಂಬ ಮತ್ತು ಸಮಾಜದಲ್ಲಿ ಗೋಚರಿಸುವ ಅಸಮಾನತಾ ಕಲ್ಪನೆಗಳು ಮತ್ತು ಸ್ತ್ರೀ ಶೋಷಣಾ ನೆಲೆಗಳು. ವಿಧವಾ ಸಮಸ್ಯೆ ಮತ್ತು ವೇಶ್ಯಾಸಮಸ್ಯೆ ಮೊದಲ ಭಾಗದ ಬಹುತೇಕ ಕಾದಂಬರಿಗಳಲ್ಲಿ ಮತ್ತು ಸಣ್ಣ ಕತೆಗಳಲ್ಲಿ ವಸ್ತು ರೂಪದಲ್ಲಿ ಕಾಣಿಸಕೊಂಡಿದೆ.

ವೈಧವ್ಯದ ಬವಣೆಗಳನ್ನು, ಪರಿತ್ಯಕ್ತೆಯರ ದುಃಖದುಮ್ಮಾನಗಳನ್ನು ತಿರುಮಲಾಂಬ ಮತ್ತು ಆರ್ . ಕಲ್ಯಾಣಮ್ಮ ತಮ್ಮ ಕಾದಂಬರಿಗಳಲ್ಲಿ ವಿವರಿಸಿದ್ದಾರೆ. ಅಸಹಾಯಕ ಹೆಣ್ಣಿನ ಬದುಕಿನ ವಿವರಗಳನ್ನು ಕೊಡುವ ತಿರುಮಲಾಂಬ ತಮ್ಮ ಕೃತಿಮೂಲಕ ಈ ರೀತಿ ಬದುಕಿನ ಸಾಧಕ ಬಾಧಕಗಳನ್ನು ನೈತಿಕ ಚೌಕಟ್ಟಿನೊಳಗೆ ಚರ್ಚಿಸುತ್ತಾರೆ.

ವಿಧವಾ ಸಮಸ್ಯೆಗೆ ಪರಿಹಾರವನ್ನು ಲೇಖಕಿಯರು ಬಾಲ್ಯವಿವಾಹ ನಿಷೇಧ, ಸ್ತ್ರೀ ಶಿಕ್ಷಣಕ್ಕೆ ಆದ್ಯತೆ,

ವಯಸ್ಕವಿವಾಹ ಪದ್ಧತಿಗೆ ಅನುಮೋದನೆ, ವಿಧವೆಯ ಮರುವಿವಾಹದ ಸಾಧ್ಯತೆಗಳ ಮೂಲಕ ವ್ಯಕ್ತಪಡಿಸುತ್ತಾರೆ. ಕೊಡಗಿನ ಗೌರಮ್ಮ ಮತ್ತು ಎಚ್.ವಿ.ಸಾವಿತ್ರಮ್ಮನವರ ಸಣ್ಣಕತೆಗಳು ಈ ವಿಚಾರಗಳನ್ನೇ ವಸ್ತುವಾಗಿ ಸ್ವೀಕರಿಸಿವೆ.ವರದಕ್ಷಿಣೆ ಸಮಸ್ಯೆಯನ್ನು ವಿವಾಹ ಸಮಸ್ಯೆಯಾಗಿ ಪರಿಗಣಿಸಿ ಕತೆ ಮೂಲಕ ಖಂಡಿಸಿದವರು ಆರ್.ಕಲ್ಯಾಣಮ್ಮ ಮತ್ತು ಸರಸ್ವತಿಬಾಯಿ ರಾಜವಾಡೆ. ೧೯೩೦ರ ನಂತರದ ಮಹಿಳಾ ಬರವಣಿಗೆಯಲ್ಲಿ ವಸ್ತುನಿಷ್ಠತೆ ಹೆಚ್ಚು ಹೆಚ್ಚು ಸ್ಪಷ್ಟವಾಗಿ ಕಾಣಿಸಿಕೊಳ್ಳತೊಡಗಿದೆ. ಸ್ತ್ರೀ ದೃಷ್ಟಿಕೋನದಿಂದ ವಸ್ತು ಮತ್ತು ಪಾತ್ರಗಳನ್ನು ವಿವೇಚಿಸುವ ಕ್ರಮವನ್ನು ಈ ಹಂತದ ಬರಹಗಳಲ್ಲಿ ನೋಡಬಹುದು.

ಕೊಡಗಿನ ಗೌರಮ್ಮ, ಸರಸ್ವತಿಬಾಯಿ ರಾಜವಾಡೆ, ಶ್ಯಾಮಲಾದೇವಿ ಬೆಳಗಾವಂಕರ್, ಸಾವಿತ್ರಮ್ಮ ಎಚ್.ವಿ. ಮೊದಲಾದವರ ಬರಹಗಳು ಇದಕ್ಕೆ ಉದಾಹರಣೆಗಳು. ಸಾಮಾಜಿಕ ಸಂಪ್ರದಾಯಗಳನ್ನು ಪ್ರಶ್ನಿಸುತ್ತ ಸುಧಾರಣಾ ದಾರಿಯನ್ನು ಸೂಚಿಸುವ ಮನೋಭಾವವಿರುವ ಈ ಲೇಖಕಿಯರ ಕೃತಿಗಳು ಪ್ರೇಮವಿವಾಹ, ಅಂತರ್ಜಾತೀಯ ವಿವಾಹ, ಪುನರ್ವಿವಾಹಗಳಿಗೆ, ಆದ್ಯತೆ ನೀಡುತ್ತ ಗಂಡಿಗೆ ಸಾಧ್ಯವಾಗುವುದಾದರೆ ಹೆಣ್ಣಿಗೇಕೆ ಸಾಧ್ಯವಾಗುವುದಿಲ್ಲ ಎನ್ನುವ ಪ್ರಶ್ನೆ ಮೂಲಕ ಲಿಂಗಾಧಾರಿತ ಅಸಮಾನತೆ ವಿರುದ್ಧ ಧ್ವನಿ ಸೂಚಕ ರಚನೆಗಳನ್ನು ನೀಡಿದ್ದಾರೆ. ಸಣ್ಣಕತೆಗಳನ್ನು ಬರೆದ ಮೊದಲ ಕತೆಗಾರ್ತಿ ಎಂದು ಗುರುತಿಸಲಾಗಿರುವ ಕೊಡಗಿನ ಗೌರಮ್ಮ ಈ ಹಿನ್ನೆಲೆಯಿಂದಲೇ ತಮ್ಮ ಕಥಾವಸ್ತುವನ್ನು ನಿರ್ವಹಿಸುತ್ತಾರೆ.

೧೯೩೩ ರಿಂದ ೧೯೩೯ ರವರೆಗೆ ಕೃತಿ ರಚನೆ ಮಾಡಿದ ಗೌರಮ್ಮನವರ ಸಣ್ಣಕತೆಗಳಲ್ಲಿ, ಸ್ತ್ರೀ ಕೇಂದ್ರಿತ ವಸ್ತುವಿನ ದೃಷ್ಟಿಯಿಂದ 'ವಾಣಿಯ ಸಮಸ್ಯೆ', 'ಆಹುತಿ', 'ಪುನರ್ವಿವಾಹ', 'ಮನುವಿನ ರಾಣಿ', 'ನನ್ನ ಮದುವೆ', 'ಒಂದು ಪುಟ್ಟಚಿತ್ರ', 'ಅಪರಾಧಿಯಾರು?', 'ಮರದ ಬೊಂಬೆ', 'ಅವಳ ಭಾಗ್ಯ','ಹೋಗಿಯೇ ಬಿಟ್ಟಿದ್ದ', ಮುಖ್ಯ ಕತೆಗಳು. ಕೊಡಗಿನ ಗೌರಮ್ಮನವರ (೧೯೧೨-೧೯೩೯) ಒಟ್ಟು ಕತೆಗಳ ಸಂಖ್ಯೆ ೨೧.

ತಿರುಮಲಾಂಬಾ ರೀತಿಯಲ್ಲಿಯೇ ವೈಧವ್ಯ ಮತ್ತು ವೈವಾಹಿಕ ಬದುಕಿನ ಚಿತ್ರ ನೀಡಿರುವ ಆರ್. ಕಲ್ಯಾಣಮ್ಮ (೧೮೯೪-೧೯೬೫) ವಿಧವೆಯರ ಯಾತನೆ, ವರದಕ್ಷಿಣೆ ಸಮಸ್ಯೆ, ಸುಗಮ ದಾಂಪತ್ಯದ ಆಶಯವನ್ನು ಸ್ತ್ರೀ ಬದುಕಿನಲ್ಲಿ ವಿವರಿಸಿದ್ದಾರೆ. ಕಲ್ಯಾಣಮ್ಮನವರ ಮೊದಲ ಕಾದಂಬರಿ ಪ್ರಿಯಂವದಾ 'ವರದಕ್ಷಿಣೆ'ಯ ಕುರಿತು ಸಮಸ್ಯೆಯನ್ನು, 'ಇಂದಿರೆ' ಅಥವಾ ನಿಭಾಗ್ಯವನಿತೆ ವಿಧವೆಯರ ಸಮಸ್ಯೆಯನ್ನು 'ಸುಖಲತ' ವೃದ್ಧ ವಿವಾಹವನ್ನು ವಸ್ತುವಾಗಿ ಪಡೆದಿದೆ.

ಸರಸ್ವತಿಬಾಯಿ ರಾಜವಾಡೆ (೧೯೧೩-೧೯೮೯) ವಾಸಂತಿಬಾಯಿ ಪಡುಕೋಣೆ (೧೯೦೮-೧೯೭೫), ಶ್ಯಾಮಲಾದೇವಿ ಬೆಳಗಾಂವಕರ್ (೧೯೧೩-೧೯೪೩) ಮೊದಲ ಹಂತಹ ಲೇಖಕಿಯರು. ಎರಡು ಸಂಕಲನಗಳಲ್ಲಿ ೨೦ ಕತೆಗಳನ್ನು ಪ್ರಕಟಿಸಿರುವ ಶ್ಯಾಮಾಲಾದೇವಿಯವರಲ್ಲಿ ಹೆಣ್ಣಿನ ಮೇಲೆ ನಡೆಯವ ಶೋಷಣೆಯೇ ಮುಖ್ಯ ವಸ್ತುವಾಗಿದೆ.

ರಾಜವಾಡೆಯವರು ಕೆಳವರ್ಗದ ಸ್ತ್ರೀಯರ ಮೇಲೆ ನಡೆಯುವ ಶೋಷಣೆಯನ್ನು ತಮ್ಮ ಕೃತಿಗಳಲ್ಲಿ ಗುರುತಿಸಿದರೆ, ಶ್ಯಾಮಾಲಾದೇವಿ ಮುಖ್ಯವಾಗಿ ಸ್ತ್ರೀ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವ ಕೌಟುಂಬಿಕ ಮತ್ತು

ಸಾಮಾಜಿಕ ಒತ್ತಡವನ್ನು ವಿವರಿಸುತ್ತಾರೆ. ಲೈಂಗಿಕ ಶೋಷಣೆಗೆ ಒಳಗಾಗುವ, ವೇಶ್ಯಾ ಜೀವನಕ್ಕೆ ಒತ್ತಾಯಪೂರ್ವಕವಾಗಿ ಸೆಳೆಯಲ್ಪಡುವ ಹೆಣ್ಣುಗಳ ಜೀವನ ಇವರ ಕತೆಗಳ ಮುಖ್ಯ ವಸ್ತುವಾಗಿದೆ. ೧೯೩೪ರಲ್ಲಿ ತಮ್ಮ ಮೊದಲ ಕತೆ ಪ್ರಕಟಿಸಿರುವ ಶ್ಯಾಮಲಾದೇವಿ ಅದುವರೆಗೆ ಮಹಿಳೆಯರ ರಚನೆಗಳಲ್ಲಿ ನಿರಂತರವಾಗಿ ಕಾಣಿಸಿಕೊಳ್ಳುತ್ತಿದ್ದ ವಿಧವೆಯರ ಸಮಸ್ಯೆಯನ್ನು ಆಯ್ಕೆ ಮಾಡಿಕೊಳ್ಳದೆ, ವೇಶ್ಯಾಸಮಸ್ಯೆಯತ್ತ ಹೆಚ್ಚಿನ ಗಮನ ಹರಿಸಿದ್ದಾರೆ.

ವೇಶ್ಯಾಸಮಸ್ಯೆಯನ್ನು ಮೊದಲ ಸಲ ವಿವರವಾಗಿ ಸ್ತ್ರೀ ಪರ ದೃಷ್ಟಿಯಿಂದ ಕಂಡ ಲೇಖಕಿಯಾಗಿ ಶ್ಯಾಮಲಾದೇವಿಯವರ ಕತೆಗಳಿಗೆ ಮಹತ್ವವಿದೆ. ಈ ಲೇಖಕಿಯ 'ಕರುಳ ಕತ್ತರಿ','ತಾಯಿ ಮಾತಾಯಿ', 'ಕಂತಿಯ ದೇಶಾಂತರ', 'ವಸಂತರಾಯನ ಮದುವೆ', 'ನೀಲೆಯ ಸಂಸಾರ', 'ದೊಡ್ಡಮ್ಮ ನೋಡಿದ ವರ', 'ಸವತಿಯರು' ವಸ್ತುವಿನ ದೃಷ್ಟಿಯಿಂದ ಗಮನಾರ್ಹ ಕತೆಗಳಾಗಿವೆ. ಹೆಣ್ಣಿನ ಅತಂತ್ರ ಬದುಕು ನೀಡುವ ನೋವಿನ ಚಿತ್ರಣವನ್ನು ಸರಸ್ವತಿದೇವಿಗೌಡರ (೧೯೨೩-೧೯೭೩) ಕತೆಗಳು ವಿವರಿಸುತ್ತವೆ. ಸರಸ್ವತಿದೇವಿಯವರ ೨೩ ಕತೆಗಳು ವಿವಿಧ ಸ್ತ್ರೀ ಸಮಸ್ಯೆಗಳನ್ನು ಚರ್ಚಿಸುತ್ತವೆ. ವೈಧವ್ಯ, ಅಸಫಲ ದಾಂಪತ್ಯ, ಬಂಜೆತನ ಮೊದಲಾದ ಹೆಣ್ಣಿನ ಭವಣೆಗಳು ಅವರ ಕತೆಗಳ ಮುಖ್ಯ ವಸ್ತುಗಳಾಗಿವೆ. 'ಅವಳು ವಿಧವೆ', 'ಹಾಲು ಉಕ್ಕಿತು' ಗಮನಿಸಬಹುದಾದ ಕತೆಗಳು.

ಪುರಾಣ ವಸ್ತುವನ್ನು ಉಪಯೋಗಿಸಿಕೊಂಡು ಸಂಸ್ಕೃತಿ ಜನ್ಯ ಮೌಢ್ಯತೆಯನ್ನು ಹೋಗಲಾಡಿಸುವ ಪ್ರಯತ್ನ ಮಾಡುವ ಎಚ್.ವಿ. ಸಾವಿತ್ರಮ್ಮನವರ ಕತೆಗಳು (೧೯೧೩-೧೯೯೫) ಸಂಪ್ರದಾಯಕತೆಯಿಂದ ಬಿಡಿಸಿಕೊಂಡು ಬದುಕನ್ನು ಕೈಯಾರೆ ನಿರ್ಮಿಸುವ ಸ್ತ್ರೀ ವ್ಯಕ್ತಿತ್ವ ವಿವರಣೆಯನ್ನು ವಸ್ತುವಾಗಿ ಪಡೆದಿವೆ. ಈ ಲೇಖಕಿಯ 'ಸೀತೆ-ರಾಮರಾವಣ', 'ವಿಮುಕ್ತಿ', ಕಾದಂಬರಿಗಳು, 'ದಮಯಂತಿ', 'ನಿರಾಶ್ರಿತೆ', 'ಪಾತುಕತೆ', 'ಸರಿದಬೆರಳು', 'ಮಣ್ಣಿನಕರೆ' ಮೊದಲಾದ ಸಣ್ಣಕತೆಗಳು ಗಮನಿಸುವಂತಿವೆ.

ತ್ರಿವೇಣಿ, ಅನುಪಮಾನಿರಂಜನ, ವಾಣಿ, ಎಂ.ಕೆ. ಜಯಲಕ್ಷ್ಮಿ, ಆರ್ಯಾಂಬ ಪಟ್ಟಾಭಿ, ಗೀತಾಕುಲಕರ್ಣಿ ಮೊದಲಾದ ಲೇಖಕಿಯರು ಕೌಟುಂಬಿಕ ಚೌಕಟ್ಟಿನೊಳಗೆ ಹೆಣ್ಣು ಅನುಭವಿಸುವ ಲೈಂಗಿಕ ದಾಸ್ಯ, ತಾಯ್ತನದ ಜವಾಬ್ದಾರಿ ಮತ್ತು ಅತಂತ್ರ ಸ್ಥಿತಿಯನ್ನು ವಸ್ತುವಾಗಿಸಿಕೊಂಡು ಸ್ತೀ ಸ್ವಾತಂತ್ರ್ಯದ, ಸ್ತ್ರೀ ಸ್ವಾವಲಂಬನದ ವಿವಿಧ ನೆಲೆಗಳನ್ನು ಹುಡುಕುವ ಪ್ರಯತ್ನ ನಡೆಸಿದ್ದಾರೆ. ತ್ರಿವೇಣಿ ಪ್ರಸ್ತುತ ಅಧ್ಯಯನದ ಪ್ರಾತಿನಿಧಿಕ ಬರಹಗಾರರಾಗಿರುವುದರಿಂದ ಅವರ ಕೃತಿವಿವರಗಳನ್ನು ಅಧ್ಯಾಯ :೫ ರಲ್ಲಿ ಪ್ರಸ್ತಾಪಿಸಲಾಗಿದೆ. ಅನುಪಮಾ ನಿರಂಜನರ 'ಆಳ', 'ಮಾಧವಿ', 'ಎಳೆ', 'ಪೋಷ', 'ಮುಕ್ತಿಚಿತ್ರ' ಕಾದಂಬರಿಗಳು ಸ್ತ್ರೀಕೇಂದ್ರಿತ ವಸ್ತುವನ್ನು ಹೊಂದಿವೆ.

ಎಂ.ಕೆ. ಇಂದಿರಾರ 'ತುಂಗಭದ್ರ', 'ಫಣಿಯಮ್ಮ', 'ತಗ್ಗಿನ ಮನೆ ಸೀತೆ', ' ಗೆಜ್ಜೆಪೂಜೆ' ನಾಯಕಿ ಪ್ರಧಾನ ಕಾದಂಬರಿಗಳಾಗಿ ನಿರ್ದಿಷ್ಟ ಉದ್ದೇಶವೊಂದರ ಹಿನ್ನೆಲೆಯಲ್ಲಿ ವಸ್ತುವನ್ನು ಪಡೆದಿವೆ. ಸ್ತ್ರೀಕೇಂದ್ರಿತ ವಸ್ತುವನ್ನುಳ್ಳ ಕಾದಂಬರಿಗಳು 'ಸದಾನಂದ' 'ಮುಸುಕು', 'ಮಧುವನ'. ಹೆಣ್ಣಿನ ಬದುಕಿನ ವೈಯಕ್ತಿಕ ವಿವರಗಳಿಗೆ ಹೆಚ್ಚಿನ ಅವಕಾಶವನ್ನು ಕಲ್ಪಿಸುವ ವೀಣಾ ಶಾಂತೇಶ್ವರರ ಕತೆ ಮತ್ತು ಕಾದಂಬರಿಗಳು ಹೆಣ್ಣು ಎದುರಿಸುವ ಸಂಘರ್ಷ, ಸಂಕಷ್ಟ ಮತ್ತು ಅವಳ ಮಾನಸಿಕ ವಿಪ್ಲವಗಳನ್ನು ವಸ್ತುವಾಗಿ ಪಡೆದಿವೆ. ಹೆಣ್ಣಿನ ಬಂಡಾಯ ಮನೋಭಾವವನ್ನು,

ಅವಳ ಬದುಕಿನ ಶೋಷಣಾ ನೆಲೆಗಳನ್ನು ಅನಾವರಣಗೊಳಿಸುವ ವಸ್ತುವನ್ನು ವೀಣಾ ಶಾಂತೇಶ್ವರ, ಗೀತಾನಾಗಭೂಷಣ ಮತ್ತು ಸಾರಾ ಅಬೂಬಕರ ಅವರ ಕೃತಿಗಳು ಒಳಗೊಂಡಿವೆ.

ವೀಣಾರವರ 'ಗಂಡಸರು', 'ಬಂಡಾಯ, ಶೋಷಣೆ ಇತ್ಯಾದಿ' ಕಾದಂಬರಿಗಳು 'ಕವಲು', 'ಅವಳ ಸ್ವಾತಂತ್ರ್ಯ', 'ತಿರುಗಿ ಹೋದವಳು', 'ಮುಳ್ಳುಗಳು', 'ಅತಿಥಿ' ಕತೆಗಳು, ಗೀತಾನಾಗಭೂಷಣರ ದಲಿತಬದುಕಿನ ಚಿತ್ರಣವಿರುವ 'ಮಾಪುರ ತಾಯಿಯ ಮಕ್ಕಳು' ,'ಹಸಿಮಾಂಸ ಮತ್ತು ಹದ್ದುಗಳು', 'ಚಿಕ್ಕಿಯ ಹರೆಯದ ದಿನಗಳು', ಕಾದಂಬರಿಗಳು ಮತ್ತು 'ಜ್ವಲಂಗ', 'ಗರ್ಭ', 'ಅಮ್ಮ', 'ಸಂಘರ್ಷ','ಕಿಚ್ಚು' ಕತೆಗಳು. ಸಾರಾ ಅಬೂಬಕರ ಅವರ 'ಚಂದ್ರಗಿರಿಯ ತೀರದಲ್ಲಿ', 'ಸಹನ','ವಜ್ರಗಳು', ಕಾದಂಬರಿಗಳು ಮತ್ತು 'ಚಪ್ಪಲಿಗಳು', 'ಪಯಣ ಮತ್ತು ಇತರ ಕತೆಗಳು' ಸಂಕಲನದ ಕತೆಗಳು ಸ್ತ್ರೀಕೇಂದ್ರಿತ ವಸ್ತುವನ್ನೇ ಪ್ರಧಾನವಾಗಿ ಒಳಗೊಂಡಿವೆ.

ಸ್ವಾತಂತ್ರ್ಯಪೂರ್ವ ಘಟ್ಟದ ಮಹಿಳಾ ಬರವಣಿಗೆಯಲ್ಲಿ ಹೆಣ್ಣಿನ ಬದುಕಿಗೆ ಸಂಬಂಧಿಸಿದ ಶಿಕ್ಷಣದ ಅಭಾವ, ಬಾಲ್ಯವಿವಾಹ, ಸತಿಪದ್ಧತಿ, ಕೇಶಮುಂಡನ, ವೈಧವ್ಯ, ವಿವಾಹ ಸಮಸ್ಯೆ - ಈ ವಿಚಾರಗಳಿಗೆ ಸಂಬಂಧಿಸಿದ ವಸ್ತುವಿದ್ದರೆ, ಸ್ವಾತಂತ್ರ್ಯೋತ್ತರ ಘಟ್ಟದ ಮಹಿಳಾ ಬರವಣಿಗೆಯಲ್ಲಿ ಬಡತನ, ವರ್ಗಸಮಸ್ಯೆ, ಉದ್ಯೋಗಸಮಸ್ಯೆ, ಸಾಮಾಜಿಕ ಮತ್ತು ಕೌಟುಂಬಿಕ ಹಿಂಸಾಪ್ರಕರಣಗಳು, ವೇಶ್ಯಾಸಮಸ್ಯೆ, ದಾಂಪತ್ಯವಿರಸಗಳು ಮತ್ತು ಪರಾವಲಂಬನದಂತಹ ವಿಚಾರಗಳು ವಸ್ತುವಾಗಿವೆ.

ಲೇಖಕಿಯರ ವೈಯಕ್ತಿಕ ಪ್ರಕಟಣೆಗಳೊಂದಿಗೆ ಪಾತಿನಿಧಿಕ ಸಂಕಲನಗಳ ರೂಪದಲ್ಲಿ ಲೇಖಕಿಯರ ಕತಾ ಸಂಕಲನಗಳು ೧೯೩೭ ರಿಂದಲೇ ಪ್ರಕಟವಾಗಿವೆ. ಈ ರೀತಿಯಲ್ಲಿ ಬಂದ ಕೆಲವು ಸಂಕಲನಗಳು ಹೀಗಿವೆ. ರಂಗವಲ್ಲಿ[೩೬], ಆರತಿ[೩೭], ಪುಣ್ಯಸ್ಮೃತಿ[೪೧], ಕಥಾಪಲ್ಲವ[೪೨], ಲೇಖಕಿಯರ, ಸಣ್ಣಕತೆಗಳು[೩೮], ಲೇಖಕಿಯರ ಕಥಾಸಂಕಲನ[೩೯] ಮತ್ತು ಬೆಳ್ಳಿಬಾಗಿನ.[೪೦]

**ಅಡಿಟಿಪ್ಪಣಿಗಳು**

೧. ನಾಗರಾಜರಾವ್ ಸಿ.ಕೆ., ಅವರ **'ಪಟ್ಟಮಹಾದೇವಿ ಶಾನ್ತಲದೇವಿ'** (೧೯೭೮) ಮತ್ತು ಅಯ್ಯರ್ ಕೆ. ವಿ. ಯವರ 'ಶಾಂತಲಾ' (೧೯೫೪).

೨. ವೆಂಕಟರಾಯ, ಗುಲವಾಡಿ (೧೮೯೯) **ಇಂದಿರಾಬಾಯಿ ಅಥವಾ ಸದ್ಧರ್ಮ ವಿಜಯ,** ಬಾಸೆಲ್ ಮಿಶನ್ ಮಂಗಳೂರು ಮರು ಮುದ್ರಣಗಳು: ಕನ್ನಡ ಪ್ರಪಂಚ ಪ್ರಕಾಶನ, ಮಂಗಳೂರು ೧೯೬೨, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.೧೯೮೫.

೩. ಮೇನೋನ್. ಓ. ಚಂದು (೧೮೮೯), **ಇಂದುಲೇಖಾ,** ರಾಘವನ್. ಸಿ. (ಅನು) ನ್ಯಾಶನಲ್ ಬುಕ್ ಟ್ರಸ್ಟ್ ಇಂಡಿಯಾ, ನವ ದೆಹಲಿ, ೧೯೯೫.

೪. ರುಸ್ವಾ, ಹಾಜೀ ಮಹಮ್ಮದ್ (೧೮೯೯) ಉಮ್ರಾವ್ ಜಾನ್.

೫. ಬಾಬಾಪದಮಂಜೀ (೧೮೫೭) **ಯಮುನಾ ಪರ್ಯಟನ್** ಮರುಮುದ್ರಣ ೧೮೯೨, ಸೊಲುಮನ್, ಭಾಸ್ಕರ (ಅನು) ಯಮುನೆಯ ಸಂಚಾರ, ಬಾಸೆಲ್ ಮಿಶನ್, ಮಂಗಳೂರು, ೧೮೬೯.

೬. ರಾಜಮ್ (೧೮೯೩) **ಕಮಲಾಂಬಾಳ್ ಚರಿತಂ.**

೭. ರಾವ್, ಬಾಬು ಬೋಳಾರ (೧೯೦೫) **ವಾಗ್ದೇವಿ**: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ೧೯೮೫. (ಮ.ಮು.)

೮. ರಾವ್ ಅಣ್ಣಾಜಿ ಗುಲವಾಡಿ(೧೯೦೭) **ರೋಹಿಣಿ ಅಥವಾ ಸಾರಸ್ವತ ಮಂಡಳ**, ಕಲ್ಲಿಕೋಟೆ.

೯. ವಾಸುದೇವಾಚಾರ್ಯ, ಕೆರೂರು (೧೯೦೮) **ಇಂದಿರಾ**: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. ೧೯೮೫,(ಮ.ಮು.)

೧೦. ನೀಲಗಾರ ಶಾಂತಾಬಾಯಿ (೧೯೦೮) **ಸದ್ಗುಣಿ ಕೃಷ್ಣಾಬಾಯಿ**, ಉಲ್ಲೇಖ : ದಬ್ಬೆ, ವಿಜಯಾ, ನಾರಿದಾರಿ ದಿಗಂತ.

೧೧. ಗಳಗನಾಥ (೧೯೧೦) **ಕುಮುದಿನಿ ಅಥವಾ ಬಾಲಕ್ಕೆ ಬಡಿದಾಟ.**

೧೨. ಎಂ.ಆರ್.ಶ್ರೀ (೧೯೧೨) **ಸಾವಿತ್ರಿ.**

೧೩. ತಿರುಮಲಾಂಬಾ ನಂಜನಗೂಡು, (೧೯೧೩) **ಸುಶೀಲೆ**, ಹಿತೈಷಿಣೀ ಗ್ರಂಥಮಾಲೆ, ನಂಜನಗೂಡು.

೧೪. ಅದೇ ಲೇಖಕಿ(೧೯೧೪) **ನಭ**, ಪ್ರಕಾಶಕರು: ಮೇಲೆ ಉಲ್ಲೇಖಿಸಿದವರು.

೧೫. ಅದೇ ಲೇಖಕಿ(೧೯೧೬) **ಮಾತೃನಂದಿನಿ**, ಪ್ರಕಾಶಕರು: ಮೇಲೆ ಉಲ್ಲೇಖಿಸಿದವರು.

೧೬. ಅದೇ ಲೇಖಕಿ(೧೯೧೫) **ವಿರಾಗಿಣಿ**, ಪ್ರಕಾಶಕರು: ಮೇಲೆ ಉಲ್ಲೇಖಿಸಿದವರು.

೧೭. ಅದೇ ಲೇಖಕಿ(೧೯೧೪) **ವಿದ್ಯುಲ್ಲತಾ**, ಪ್ರಕಾಶಕರು: ಮೇಲೆ ಉಲ್ಲೇಖಿಸಿದವರು.

೧೮. ಗುಲವಾಡಿ, ವೆಂಕಟರಾಯ, (೧೯೦೦) **ಭಾಗಿರಥಿ.**

೧೯. ಅಣ್ಣಾಜಿರಾವ್ ಎಂ.ಅರ್.(೧೯೦೮) **ಗೌರಿ** ಐರಿಷ್ ಪ್ರೆಸ್, ಬೆಂಗಳೂರು.

೨೦. ಪಾಂಚಕೂಡಿದೆ, **ಪರಿಮಳಾ**, ವೆಂಕಟಾಚಾರ್ಯ ಬಿ. (ಅನು) ೧೯೦೨.

೨೧. ಪಾಂಚಕೂಡಿದೆ, **ಮನೋರಮೆ** ವೆಂಕಟಾಚಾರ್ಯ ಬಿ. (ಅನು) ೧೯೦೭.

೨೨. ಚಟ್ಟೋಪಾಧ್ಯಯ, ಯೋಗೀಂದ್ರನಾಥ, **ಅಡವಿಯ ಹುಡುಗಿ**, ವೆಂಕಟಾಚಾರ್ಯ.ಬಿ. (ಅನು),೧೮೯೮.

೨೩. ಚಟ್ಟೋಪಾಧ್ಯಾಯ, ಯೋಗೀಂದ್ರನಾಥ, **ಲೀಲೆ**, ವೆಂಕಟಾಚಾರ್ಯ.ಬಿ. (ಅನು),೧೮೯೮.

೨೪. ಚಟ್ಟೋಪಾಧ್ಯಾಯ, ಯೋಗೀಂದ್ರನಾಥ, **ರಜನಿ**, ವೆಂಕಟಾಚಾರ್ಯ.ಬಿ. (ಅನು),೧೮೯೮.

೨೫. ಮುಖ್ಯೋಪಾಧ್ಯಾಯ, ದಾಮೋದರ್, **ಮೃಣ್ಮಯಿ**, ವೆಂಕಟಾಚಾರ್ಯ.ಬಿ. (ಅನು).

೨೬. ಮುಖ್ಯೋಪಾಧ್ಯಾಯ, ದಾಮೋದರ್, **ಶಾಂತಿ**, ವೆಂಕಟಾಚಾರ್ಯ.ಬಿ.(ಅನು).

೨೭. ಮುಖ್ಯೋಪಾಧ್ಯಾಯ, ದಾಮೋದರ್, **ನಿರದ**, ವೆಂಕಟಾಚಾರ್ಯ.ಬಿ.(ಅನು).

೨೮. ಬಂಕಿಂಚಂದ್ರ, **ಮೃಣಾಲಿನಿ**, ವೆಂಕಟಾಚಾರ್ಯ. ಬಿ.(ಅನು).

೨೯. ಮುಳಿಯಲ್, ಜೋಸೆಫ್ (೧೮೯೯)' ಸುಕುಮಾರಿ,' ರಾಬಟ್ ಎಚ್. (ಅನು)ಬಾಸೆಲ್ ಮಿಶನ್, ಮಂಗಳೂರು ೧೮೯೯.

೩೦. ಶರ್ಮಾ ಟಿ.ಎನ್.,'ವಿಮಲಾಬಾಯಿ,' ಮೂರ್ತಿ ನಾರಾಯಣ. ಬಿ.(ಅನು).

೩೧. ಸುವಾಸಿನಿ ಪತ್ರಿಕೆಯಲ್ಲಿ ೧೯೦೦ ರಲ್ಲಿ ಪಂಜೆಯವರು ಪ್ರಕಟಿಸಿದ ನಾಲ್ಕು ಕತೆಗಳಲ್ಲಿ ನನ್ನ ಚಿಕ್ಕತಾಯಿಯೂ ಸೇರಿದೆ. ಉಳಿದ ಕತೆಗಳು: 'ಕಮಲಪುರದ ಹೋಟ್ಲಿನಲ್ಲಿ', 'ಭಾರತ ಶ್ರವಣ', ಮತ್ತು 'ನನ್ನ ಚಿಕ್ಕತಂದೆಯವರ ಉಯಿಲ್ '.

೩೨. ಆಮೂರ್.ಜಿ. ಎಸ್., **'ಆಧುನಿಕ ಕನ್ನಡ ಕಾದಂಬರಿಯ ಬೆಳವಣಿಗೆ ಒಂದು ನೋಟ'** ಅರ್ಥಲೋಕ ಸ್ನೇಹ ಪ್ರಕಾಶನ ಬೆಂಗಳೂರು, ೧೯೮೮ ಪುಟ:೬.

೩೩. ಕಾತ್ಯಾಯನಿ ಎಚ್.ಎಸ್. **'ಮಾಲಾ ಮತ್ತು ಇತರ ಕತೆಗಳು'**, 'ಗೌರಿ ಮತ್ತು ಇತರ ಕತೆಗಳು'.

೩೪. '೧೯೧೩ಕ್ಕೆ ಹಿಂದಿನಿಂದಲೂ ಕಾದಂಬರಿಗಳನ್ನು ಬರೆದ ತಿರುಮಲಾಂಬ ಅವರು ಅಧುನಿಕ ಕನ್ನಡದ ಮೊದಲ ಕಾದಂಬರಿಕಾರ್ತಿಯೆಂದು ೧೯೧೩ ರಲ್ಲಿ ಪ್ರಕಟವಾದ ಈ ಲೇಖಕಿಯ 'ಸುಶೀಲೆ'ಯ ಮೊದಲ ಕಾದಂಬರಿಯೆಂದೂ ತಿಳಿದಿದ್ದೆವು ಆದರೆ ೧೯೦೮ ರಲ್ಲಿಯೇ ಪ್ರಕಟವಾದ ಶಾಂತಾಬಾಯಿ ನೀಲಗಾರ ಅವರ 'ಸದ್ಗುಣಿ ಕೃಷ್ಣಾಬಾಯಿ', ದೊರೆತಾಗ ನಮ್ಮ ತಿಳುವಳಿಕೆಯನ್ನು ತಿದ್ದಿಕೊಳ್ಳುವ ಸಂದರ್ಭ ಒದಗಿತು' ದಬ್ಬೆ, ವಿಜಯಾ, 'ಅಧುನಿಕತೆಯ ಹೊಸ್ತಿಲಲ್ಲಿ ಕನ್ನಡಿತಿ' ಪುಟ.೧೪೮-೧೫೬, ನಾರಿ: ದಾರಿ-ದಿಗಂತ.

೩೫. **'ಆಧುನಿಕ ಕನ್ನಡ ಲೇಖಕಿಯರು ಸಂಪುಟ ೧'** ಸಮನ್ವಿತಾ ೧೯೯೩; ಈ ಪುಸ್ತಕದಲ್ಲಿ ೪೫೮+೧೯ ಲೇಖಕಿಯರ ಉಲ್ಲೇಖವಿದೆ.

೩೬. ಮೇವುಂಡಿ, ಮಲ್ಹಾರಿ, ಕುಲಕರ್ಣಿ ದತ್ತಾತ್ರೇಯ (ಸಂ) **ರಂಗವಲ್ಲಿ**, ಮನೋಹರ ಗ್ರಂಥ ಭಂಡಾರ, ಧಾರವಾಡ ೧೯೩೭.

೩೭. ಮೇವುಂಡಿ, ಮಲ್ಹಾರಿ, ಕುಲಕರ್ಣಿ ದತ್ತಾತ್ರೇಯ (ಸಂ) **ಆರತಿ**, ಮನೋಹರ ಗ್ರಂಥ ಭಂಡಾರ, ಧಾರವಾಡ ೧೯೩೭.

೩೮. ಪಾರ್ವತಿ ಎಚ್.ಎಸ್. (ಸಂ) **ಲೇಖಕಿಯರ ಸಣ್ಣಕತೆಗಳು**, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು, ೧೯೮೯.

೩೯. ಶಾಂತೇಶ್ವರ, ವೀಣಾ (ಸಂ) **ಲೇಖಕಿಯರ ಕಥಾಸಂಕಲನ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೩.

೪೦. ಕಮಲಮ್ಮ (ಸಂ) **ಚೆಳ್ಳಿಬಾಗಿನ**, ಕನ್ನಡ ಸಂಘ, ಜ್ಯೋತಿನಿವಾಸ, ಕಾಲೇಜು, ಬೆಂಗಳೂರು, ೧೯೯೦.

೪೧. ೧೯೫೩ ರಲ್ಲಿ ಪ್ರಕಟವಾಯಿತು. ೧೨ ಲೇಖಕಿಯರ ಕತೆಗಳಿವೆ.

೪೨. ಎಚ್.ಆರ್. ಇಂದಿರಾ (ಸಂ) ೧೯೬೮ ರಲ್ಲಿ ಪ್ರಕಟವಾಯಿತು. ೭೭ ಲೇಖಕಿಯರ ಕತೆಗಳ ಸಂಕಲನ.

# ಅಧ್ಯಾಯ ೪

## ಕಥನ ಸಾಹಿತ್ಯದಲ್ಲಿ ಸ್ತ್ರೀ ಅಭಿವ್ಯಕ್ತಿ

ನೂರು ವರ್ಷದ ಚರಿತ್ರೆಯುಳ್ಳ ಕನ್ನಡ ಕಥನ ಸಾಹಿತ್ಯ ಪ್ರಕಾರದಲ್ಲಿ ಉಳಿದ ಸಾಹಿತ್ಯ ಪ್ರಕಾರಗಳಿಗಿಂತ ಅಧಿಕ ಸಂಖ್ಯೆಯಲ್ಲಿ ಕೃತಿಗಳು ಪ್ರಕಟವಾಗಿವೆ. ೧೮೯೯ ರಲ್ಲಿ ಕನ್ನಡದ ಮೊದಲ ಸ್ವತಂತ್ರ ಸಾಮಾಜಿಕ ಕಾದಂಬರಿ ಮತ್ತು ೧೯೦೦ ರಲ್ಲಿ ಕನ್ನಡದ ಮೊದಲ ಸಣ್ಣಕತೆ ಪ್ರಕಟವಾಯಿತು. ಪಂಜೆಯವರ ನಾಲ್ಕುಕತೆಗಳು, ಸುಹಾಸಿನಿ ಪತ್ರಿಕೆಯಲ್ಲಿ ೧೯೦೦ ರಲ್ಲಿ ಪ್ರಕಟವಾದವು.[೧] ಮಾಸ್ತಿಯವರ ಮೊದಲ ಕತಾಸಂಕಲನ 'ಕೆಲವು ಸಣ್ಣಕತೆಗಳು' ೧೯೧೦-೧೧ರ ಸುಮಾರಿಗೆ ಪ್ರಕಟವಾಯಿತು. ಈ ಸಂಕಲನದಲ್ಲಿ ಹತ್ತು ಕತೆಗಳಿದ್ದವು. ೧೯೦೦ ರಿಂದ ೧೯೪೬ರವರೆಗಿನ ೬೦ ಕತೆಗಳ ಎರಡು ಪ್ರಾತಿನಿಧಿಕ ಸಂಕಲನಗಳು ೧೯೫೮ ರಲ್ಲಿ ಪ್ರಕಟವಾಗಿವೆ[೨].

೧೯೨೦ಕ್ಕೆ ಮೊದಲು ಬಂದ ಕಾದಂಬರಿಗಳು: 'ಇಂದಿರಾಬಾಯಿ', 'ರೋಹಿಣಿ', 'ವಾಗ್ದೇವಿ', 'ಮಾಡಿದುಣ್ಣೊ ಮಹಾರಾಯ', 'ಇಂದಿರ', 'ಭಾಗಿರಥಿ', 'ಗೌರಿ', 'ಸಾವಿತ್ರಿ', 'ಕುಮುದಿನಿ', 'ಸುಶೀಲೆ', 'ನಭ', 'ವಿಧ್ಯುಲ್ಲತಾ', 'ವಿರಾಗಿಣಿ', 'ದಕ್ಷಕನ್ಯಾ' ಮತ್ತು 'ಮಾತೃನಂದಿನಿ'[೨]. "೧೯೨೦ರಿಂದ ೧೯೪೦ರ ಅವಧಿಯಲ್ಲಿ ಎಂಭತ್ತು ಕಾದಂಬರಿಗಳು, ೧೯೪೫ ರಿಂದ ೧೯೬೫ ಅವಧಿಯಲ್ಲಿ ಇನ್ನೂರಕ್ಕೂ ಹೆಚ್ಚು ಕಾದಂಬರಿಗಳು ಪ್ರಕಟವಾಗಿವೆ."[೩].

ಲೇಖಕರ ಕತೆಗಳಿರುವ "ಕಾಮನಬಿಲ್ಲು" ಸಂಕಲವನ್ನು ಅ.ನ.ಕೃ. ಮತ್ತು ಲೇಖಕಿಯರ ಕತೆಗಳಿರುವ ಎರಡು ಕತಾಸಂಕಲನಗಳನ್ನು ದ.ಬಾ ಕುಲಕರ್ಣಿಯವರ ಸಂಪಾದಕತ್ವದಲ್ಲಿ ಅನುಕ್ರಮವಾಗಿ ೧೯೩೪, ೧೯೩೬ ಮತ್ತು ೧೯೪೧ ರಲ್ಲಿ ಹೊರತರಲಾಗಿದೆ. ಇವುಗಳಲ್ಲದೆ ಬರಹಗಾರರ ವೈಯಕ್ತಿಕ ಸಂಕಲನಗಳು ಪ್ರಕಟವಾಗಿವೆ. ಮೊದಲ ೫ ದಶಕಗಳಲ್ಲಿ ಸುಮಾರು ನೂರು ಮಂದಿ ಬರಹಗಾರರು ಹೊಸಗನ್ನಡದಲ್ಲಿ ಕಾಣಿಸಿಕೊಂಡರೆ ಐವತ್ತರ ದಶಕದ ನಂತರ ಬರಹಗಾರರ ಸಂಖ್ಯೆ ಹೆಚ್ಚಿತು. ಜನಪ್ರಿಯ ಧಾಟಿಯ ಬರವಣಿಗೆಗೆ ಸಿಕ್ಕಿರುವ ಪ್ರೋತ್ಸಾಹದಿಂದ ಅಪಾರ ಸಂಖ್ಯೆಯ ಸಣ್ಣಕತೆಗಳು, ಕಾದಂಬರಿಗಳೂ, ಬೆಳಕು ಕಂಡವು. ಅ.ನ.ಕೃ ಕಾದಂಬರಿ ಸಂಖ್ಯೆ ೧೧೦, ಮಾಸ್ತಿ ೧೦೦ ಸಣ್ಣಕತೆಗಳನ್ನು ಬರೆದಿದ್ದಾರೆ. ೫೦ ಕ್ಕೂಮಿಕ್ಕಿ ಕಾದಂಬರಿಗಳನ್ನು ರಚಿಸಿರುವ ಲೇಖಕಿಯರು ಕನ್ನಡದಲ್ಲಿ ಹಲವರು ಇದ್ದಾರೆ. ಕಥನ ಸಾಹಿತ್ಯದಲ್ಲಿ ಪೌರಾಣಿಕ ಐತಿಹಾಸಿಕ ಮತ್ತು ಸಾಮಾಜಿಕ ವಸ್ತುವಿರುತ್ತದೆ. ಇವುಗಳಲ್ಲಿ ಸಾಮಾಜಿಕ ವಸ್ತುವನ್ನಾಧಾರಿಸಿದ ಕತೆಗಳ ಸಂಖ್ಯೆ ಹೆಚ್ಚು. ಸಾಮಾಜಿಕ ವಸ್ತುವುಳ್ಳ ಕಥನ ಸಾಹಿತ್ಯದಲ್ಲಿ ಸ್ತ್ರೀ ಅಭಿವ್ಯಕ್ತಿಯು ಸಾಹಿತ್ಯ ಪಡೆದ ಪ್ರಭಾವ ಮತ್ತು ಪ್ರೇರಣೆಗಳ ಮೂಲಕ ಸ್ವಾತಂತ್ರ್ಯಪೂರ್ವ ಕಾಲಾವಧಿ ಮತ್ತು ಸ್ವಾತಂತ್ರ್ಯೋತ್ತರ ಕಾಲಾವಧಿಯ ಸಾಹಿತ್ಯದಲ್ಲಿ ವ್ಯಕ್ತವಾಗಿರುವ ಕ್ರಮವನ್ನು ಇಲ್ಲಿ ಅವಲೋಕಿಸಲಾಗಿದೆ. ಕಥನ ಸಾಹಿತ್ಯದಲ್ಲಿರುವ ಸ್ತ್ರೀ ಅಭಿವ್ಯಕ್ತಿ ಮಾದರಿಯು ಸ್ತ್ರೀ ನಿರ್ವಚನದ ಮಾದರಿಯನ್ನು ಅನುಸರಿಸಿಕೊಂಡು ಇರುತ್ತದೆ. ಕಥನಸಾಹಿತ್ಯದಲ್ಲಿ ಸ್ತ್ರೀ ಅಭಿವ್ಯಕ್ತಿಯನ್ನು ೩ ಭಾಗಗಳ ವರ್ಗೀಕರಣಗಳ ಮೂಲಕ ಇಲ್ಲಿ ವಿವರಿಸುವ ಪ್ರಯತ್ನ ನಡೆಸಲಾಗಿದೆ:

೧. ಸಮಕಾಲೀನ ಸಾಮಾಜಿಕ ಸಂದರ್ಭ ಮತ್ತು ಕಥನ ಸಾಹಿತ್ಯ.

೨. ಸಾಹಿತ್ಯದಲ್ಲಿ ಸ್ತ್ರೀ ಅಭಿವ್ಯಕ್ತಿ - ಅ. ಸ್ವಾತಂತ್ರ್ಯ ಪೂರ್ವ ಸಾಹಿತ್ಯ ಮತ್ತು ಸ್ತ್ರೀ ಅಭಿವ್ಯಕ್ತಿ,

ಆ. ಸ್ವಾತಂತ್ರ್ಯೋತ್ತರ ಸಾಹಿತ್ಯ ಮತ್ತು ಸ್ತ್ರೀ ಅಭಿವ್ಯಕ್ತಿ

೩. ಪಾತ್ರ ಚಿತ್ರಣ ಮತ್ತು ಸ್ತ್ರೀ ಅಭಿವ್ಯಕ್ತಿ.

**ಸಮಕಾಲೀನ ಸಾಮಾಜಿಕ ಸಂದರ್ಭ ಮತ್ತು ಕಥನ ಸಾಹಿತ್ಯ**

ಸಾಹಿತ್ಯ ಮತ್ತು ಸಮಾಜದ ಸಂಬಂಧ ವಿಶಿಷ್ಟವಾದುದು. ತಾನು ಬದುಕುವ ಪರಿಸರದ ಒಂದು ಅಂಗವಾಗಿರುವ ಸಾಹಿತಿಯು ಸಮಾಜದ ಪ್ರತಿಕೃತಿ ರೂಪದಲ್ಲಿಯೇ ತನ್ನ ಬರವಣಿಗೆಯನ್ನು ನಡೆಸುತ್ತಾನೆ. ಕನ್ನಡದಲ್ಲಿ ಕಥನಸಾಹಿತ್ಯವು ಸ್ಪಷ್ಟ ಸ್ವರೂಪವನ್ನು ಕಂಡುಕೊಳ್ಳುವ ಮೊದಲು ದೇಶದಲ್ಲಿ ವಸಾಹತು ಆಡಳಿತದ ವಿರುದ್ಧ ಮತ್ತು ದೇಶೀ ಸಂಸ್ಕೃತಿಯ ಪುನುರುತ್ಥಾನದ ಹಿನ್ನಲೆಯಲ್ಲಿ ಕೆಲವು ಸುಧಾರಣಾ ಕಾರ್ಯಕ್ರಮಗಳು ದೇಶದಾದ್ಯಂತ ಪ್ರಚಾರದಲ್ಲಿದ್ದವು. ಈ ಕಾರ್ಯಕ್ರಮಗಳಲ್ಲಿ ಮಹಿಳೆಯರಿಗೆ ಪ್ರವೇಶ ದೊರಕಿದುದು ಮಾತ್ರವಲ್ಲದೆ ಮಹಿಳಾ ಪ್ರಶ್ನೆಯನ್ನು ಪ್ರಧಾನವಾಗಿಟ್ಟುಕೊಂಡ ಅನೇಕ ಸುಧಾರಣಾ ಕಾರ್ಯಕ್ರಮಗಳು ಆಗಲೇ ಪ್ರಾರಂಭವಾಗಿದ್ದವು. ರಾಷ್ಟ್ರೋತ್ಥಾನ ಚಳುವಳಿಯು ಕ್ರಿಯಾಶೀಲವಾಗಿದ್ದ ಕಾಲ ೧೮೨೦ ರಿಂದ ೧೮೮೫ಯವರೆಗೆ. ಈ ಚಳುವಳಿಯ ಮುಂಚೂಣಿಯಲಿದ್ದ ಹಲವು ಸಮಾಜಸುಧಾರಕ ಸಂಸ್ಥೆಗಳು ವಿಧವಾ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಿದವು. ದೇಶದಾದ್ಯಂತ ನಡೆದ ಹಲವು ಪ್ರಯತ್ನಗಳ ಫಲವಾಗಿ ಮಹಿಳೆಯರ ಬದುಕಿಗೆ ನೆರವಾಗಬಲ್ಲ ಹಲವು ವಿಚಾರಗಳು ಕಾನೂನಿಗೆ ವ್ಯಾಪ್ತಿಗೆ ಒಳಪಟ್ಟು ಮಹಿಳೆಯರಿಗೆ ರಕ್ಷಣೆಯನ್ನು ಒದಗಿಸಿದ್ದವು.

ಸತಿಪದ್ಧತಿ ೪, ದಶಂಬರ್ ೧೮೨೯ರಲ್ಲಿ ಕಾನೂನಿನ್ವಯ ನಿಷೇಧಕ್ಕೆ ಒಳಗಾಯಿತು. ವಿಧವೆಯ ಮರುವಿವಾಹಕ್ಕೆ ೨೬, ಜುಲೈ ೧೮೫೬ ರಲ್ಲಿ ಕಾನೂನಿನ ಸಮ್ಮತಿ ದೊರೆಯಿತು. ದೇಶದಲ್ಲಿ ಮೊದಲು ದಾಖಲಾದ ವಿಧವಾ ಮರುವಿವಾಹ ೭, ದಿಶಂಬರ್ ೧೮೫೬ರಲ್ಲಿ ನಡೆಯಿತು. ಬಾಲ್ಯವಿವಾಹ ಪದ್ಧತಿಯನ್ನು ಹೋಗಲಾಡಿಸುವ ದಿಕ್ಕಿನಲ್ಲಿ ಕಾಲಾನುಕ್ರಮದಲ್ಲಿ ವಿವಾಹಯೋಗ್ಯ ಕನ್ಯೆಯ ವಿವಾಹದ ವಯಸ್ಸಿನಲ್ಲಿ ಬದಲಾವಣೆಯನ್ನು ತರಲಾಯಿತು. ೧೮೬೦ ರಲ್ಲಿ ವಿವಾಹ ಸಮ್ಮತಿಯ ಕಾನೂನು ಜಾರಿಗೆ ಬಂದು ೧೦ ವರ್ಷ ವಯೋಮಾನದ ಮೊದಲು ಬಾಲಕಿಯನ್ನು ವಿವಾಹಮಾಡಿ ಕೊಡುವುದು ಅಪರಾಧವೆಂದು ತಿಳಿಯಲಾಯಿತು. ೧೮೯೨ರಲ್ಲಿ ಕನ್ಯೆಯ ವಿವಾಹಯೋಗ್ಯ ವಯಸ್ಸನ್ನು ೧೨ಕ್ಕೆ ಏರಿಸಲಾಯಿತು. ಅದೇ ರೀತಿ ಅನುಕ್ರಮವಾಗಿ ೧೯೨೫ರಲ್ಲಿ ೧೩ಕ್ಕೆ, ೧೯೨೯ರಲ್ಲಿ ೧೪ ಕ್ಕೆ ಮತ್ತು ೧೯೭೮ರಿಂದ ೧೮ಕ್ಕೆ ನಿಗದಿಪಡಿಸಲಾಯಿತು. ವಯಸ್ಕ ವಿವಾಹ ಪದ್ಧತಿಗೆ ಅನುಮೋದನೆಯನ್ನು ಹಂತಹಂತವಾಗಿ ಪಡೆಯಲಾಯಿತು. ಅದೇ ರೀತಿ ಅಂತರ್ಜಾತಿ ವಿವಾಹಕ್ಕೆ ಸಮ್ಮತಿಯನ್ನು ದೊರೆಕಿಸಲಾಯಿತು.

೧೮೭೨ರಲ್ಲಿ ದೇಶೀಯ ವಿವಾಹ ಅಧಿನಿಯಮದ ಪ್ರಕಾರ ೧೪ ವಯಸ್ಸಿನ ಯಾವುದೇ ಕನ್ಯೆ ೧೮ವರ್ಷ ವಯಸ್ಸಿನ ಯಾವುದೇ ವರನನ್ನು ಧಾರ್ಮಿಕ ಕ್ರಿಯೆಗಳಿಲ್ಲದೆ ಕಾನೂನಿನ ಪ್ರಕಾರ ವಿವಾಹವಾಗಲು ಅವಕಾಶ ನೀಡಲಾಯಿತು. ವಿವಾಹ ಸಮಸ್ಯೆ ಪರಿಹಾರವಾದಂತೆ ಸ್ತ್ರೀ ಶಿಕ್ಷಣಕ್ಕೂ ಅವಕಾಶ ದೊರಕಿಸುವ ಪ್ರಯತ್ನ ನಡೆಯಿತು.

ಸುಮಾರು ಒಂದು ಶತಮಾನಗಳವರೆಗೆ (೧೮೨೦ ರಿಂದ ೧೯೨೦ ರವರೆಗೆ) ಮುಂದುವರೆದ ಸುಧಾರಣಾ ಕಾರ್ಯಕ್ರಮಗಳಲ್ಲಿ ಆದ್ಯತೆ ಪಡೆದ ' ಮಹಿಳಾಪ್ರಶ್ನೆ' ಯು ಆ ಕಾಲದ ಲೇಖಕರನ್ನು ಪ್ರಭಾವಿಸಿದೆ ಎಂಬ ವಿಚಾರವು ಮೊದಲು ಹಂತದಲ್ಲಿ ಪ್ರಕಟವಾಗಿರುವ ಕಾದಂಬರಿಗಳಿಂದ ವ್ಯಕ್ತವಾಗುತ್ತದೆ. ಸುಮಾರು ೧೯೩೦ ರವರೆಗೆ ಬಂದ ಕತೆ, ಕಾದಂಬರಿಗಳು ವಿಧವಾ ಸಮಸ್ಯೆಗೆ ಮೊದಲ ಅದ್ಯತೆಯನ್ನು ನೀಡಿವೆ. ವಿಧವೆಯ ಮರುವಿವಾಹ ಅಥವಾ ಪುನರ್ವಸತಿ, ಕೇಶಮುಂಡನ, ಸತಿಪದ್ಧತಿಗಳ ರದ್ಧತಿ, ಸ್ತ್ರೀ ಶಿಕ್ಷಣಕ್ಕೆ ಆದ್ಯತೆ ಮತ್ತು ವಯಸ್ಕವಿವಾಹ ಪದ್ಧತಿಗೆ ಪ್ರೋತ್ಸಾಹ ಈ ಅವಧಿಯ ಸಾಹಿತ್ಯ ಕೃತಿಗಳಲ್ಲಿ ವಸ್ತುವಿನ ರೂಪದಲ್ಲಿ ಕಾಣಿಸಿಕೊಂಡಿದೆ. ಹೆಣ್ಣಿನ ಬದುಕಿಗೆ ನಿರ್ಣಾಯಕವೆನಿಸುವ ಈ ಮೇಲೆ ತಿಳಿಸಿದ ಅಂಶಗಳ ಕುರಿತು ಪರ ಮತ್ತು ವಿರುದ್ಧ ನಿಲುವು ಎರಡೂ ಕಥನ ಸಾಹಿತ್ಯದ ಮೂಲಕ ವ್ಯಕ್ತವಾಗಿದೆ. ಮೊದಲು ಹಂತದ ಬರಹಗಾರರಲ್ಲಿದ್ದ ಧಾರ್ಮಿಕ ಮನೋಭಾವ, ಸನಾತನಮೌಲ್ಯದ ಆದರಣೆ, ಭಾರತೀಯತೆಯಲ್ಲಿರುವ ವಿಶ್ವಾಸ ಮತ್ತು ಪೂರ್ವ ಸಂಸ್ಕೃತಿ ಮತ್ತು ಸನಾತನ ಧರ್ಮದಲ್ಲಿರುವ ಗಾಢವಾದ ವಿಶ್ವಾಸವು ಇದೇ ಹಿನ್ನೆಲೆಯ ಹೆಣ್ಣಿನ ಚಿತ್ರಣವನ್ನು ನೀಡುವುದಕ್ಕೆ ಸಹಕಾರಿಯಾಗಿವೆ. ೧೯೨೦ರವರೆಗೆ ಬಂದಿರುವ ಕಾದಂಬರಿಗಳಲ್ಲಿ ಸಮಕಾಲೀನ ಸಾಮಾಜಿಕ ಸಂದರ್ಭಗಳ ಪ್ರಭಾವವಿರುವುದು ನಿಜವಾದರೂ ನೀತಿಬೋಧೆ ಮತ್ತು ಗೃಹನೆಮ್ಮದಿಯ ಆಶಯ ಬಲವಾಗಿರುವ ಲೇಖಕರಲ್ಲಿ ಇದರ ಪ್ರಭಾವ ಸ್ತ್ರೀ ಅಭಿವ್ಯಕ್ತಿಯ ಮೇಲೆ ಹೆಚ್ಚಾಗಿ ಕಾಣಿಸಿಕೊಂಡಿಲ್ಲ. ಕೆರೂರರ 'ಇಂದಿರಾ ಮತ್ತು ಎಂ. ಎಸ್. ಪುಟ್ಟಣ್ಣರ 'ಮಾಡಿದುಣ್ಣೊ ಮಾಹರಾಯ'ದ ಸ್ತ್ರೀ ಪಾತ್ರಗಳು ಇದಕ್ಕೆ ಉತ್ತಮ ಉದಾಹರಣೆಗಳು.

ಸಾಮಾಜಿಕ ಪರಿವರ್ತನೆ ಮತ್ತು ಪಾಶ್ಚಾತ್ಯ ಪ್ರಭಾವದಿಂದ ಚಿಂತನೆಯನ್ನು ಬೆಳೆಸಿ, ಪ್ರಗತಿಪರ ಧೋರಣೆಯಲ್ಲಿ ಕಾದಂಬರಿ ರಚಿಸಿದ ಲೇಖಕರೂ ಇಲ್ಲಿ ಕಾಣಿಸಿಕೊಂಡಿದ್ದಾರೆ. ಈ ಲೇಖಕರಿಗೆ ಭಿನ್ನರೀತಿಯಲ್ಲಿ ಹೆಣ್ಣಿನ ಬದುಕನ್ನು ಚಿತ್ರಿಸುವುದು ಸಾಧ್ಯವಾಯಿತು. ಗುಲವಾಡಿ ವೆಂಕಟರಾಯರ 'ಇಂದಿರಾಬಾಯಿ' ಇದಕ್ಕೆ ಉದಾಹರಣೆಯಾಗಿದೆ. ೧೯೨೦ರ ನಂತರ ದೇಶದಲ್ಲಿ ಸ್ವದೇಶೀ ಚಳುವಳಿ ಜಾಗೃತವಾದ ಹಿನ್ನೆಲೆಯಲ್ಲಿ ಗಾಂಧಿವಾದದ ಪ್ರಭಾವ ದೇಶದಾದ್ಯಂತ ಕಾಣಿಸಕೊಂಡಂತೆ ಸಾಹಿತ್ಯವು ಅದರ ಪ್ರಭಾವಕ್ಕೆ ಒಳಗಾಯಿತು. ಪ್ರಾದೇಶಿಕತೆ ಸಾಹಿತ್ಯದ ಮುಖ್ಯ ಲಕ್ಷಣವಾಯಿತು. ಪರಿವರ್ತನಾಶೀಲ ಸಮಾಜದ ಚಿತ್ರಣವನ್ನು ಈ ಅವಧಿಯ ಲೇಖಕರು ಚಿತ್ರಿಸಿದರು. ಕರ್ನಾಟಕ ವಿಭಿನ್ನ ಪ್ರಾದೇಶಿಕ ವಿವರಗಳು, ಅಯಾ ಪ್ರದೇಶದ ಜನರ ಬದುಕು ಬವಣೆಗಳು ಸ್ಥಿತ್ಯಂತರ ಸ್ಥಿತಿಯಲ್ಲಿ ಮೌಲ್ಯಗಳಲ್ಲಿ ಉಂಟಾಗುವ ಸಂಘರ್ಷ ಇವುಗಳನ್ನೆಲ್ಲ ಕತಾಸಾಹಿತ್ಯ ದಾಖಲಿಸಿದೆ.

ಮಾನವ ಕೇಂದ್ರಿತ ವಿಚಾರದಾರೆಯ ಸ್ವೀಕೃತಿಯಿಂದ ಹೊಸ ಅನುಭವಗಳಿಗೆ ಮತ್ತು ಸ್ವಾತಂತ್ರ್ಯ ತುಡಿತಕ್ಕೆ ದೊರೆತ ಅವಕಾಶವಿರುವ ಸಮಾಜದ ಚಿತ್ರಣವನ್ನು ಕತೆ, ಕಾದಂಬರಿಗಳೂ ನೀಡಿವೆ. ಕುವೆಂಪುರವರ ' ಕಾನೂರು ಹೆಗ್ಗಡತಿ' ಮತ್ತು ಕಾರಂತರ 'ಮರಳಿಮಣ್ಣಿಗೆ' ಈ ಸಮಾಜ ಚಿತ್ರಣದ ಉತ್ತಮ ನಿದರ್ಶನಗಳು. ಗ್ರಾಮೀಣ ಪರಿಸರದಲ್ಲಿ ಬದುಕುವ, ಜೀವನದಲ್ಲಿ ಆಸಕ್ತಿ ಇರುವ, ಮನೆಗಿಂತಲೂ ಸಾಮಾಜಿಕ ಪರಿಸರದೊಡನೆ ಗುರುತಿಸಲ್ಪಡುವ ಸ್ತ್ರೀಯರು ಈ ಕಾದಂಬರಿಗಳಲ್ಲಿ ಕಾಣಿಸಿಕೊಂಡಿದ್ದಾರೆ.

೧೯೪೭ರ ನಂತರದ ಅವಧಿ ದೇಶಕ್ಕೆ ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವ (೫೦ರ ನಂತರ) ದೊರಕಿದ ಅವಧಿ.

ಸಮತಾವಾದದ ಪ್ರಭಾವ ಮತ್ತು ಪ್ರಜಾಪ್ರಭುತ್ವದ ಆಶಯಗಳು ಸಾಮಾಜಿಕ ಬದಲಾವಣೆಗಳಿಗೆ ಕಾರಣವೆನಿಸಿದವು. ಅರ್ಥಶಾಸ್ತ್ರ, ನ್ಯಾಯಶಾಸ್ತ್ರ ಮತ್ತು ತತ್ವಶಾಸ್ತ್ರಗಳಂತಹ ಅಧ್ಯಯನ ಕ್ರಮಗಳು ಸಾಮಾಜಿಕ ಪ್ರಗತಿಗೆ ಪೂರಕನೆಲೆಯನ್ನು ಒದಗಿಸಿದವು. ಪ್ರಜಾಪ್ರಭುತ್ವದ ಅವಧಿಯ ಸಾಹಿತ್ಯರಚನೆಗಳಲ್ಲಿ ರಾಷ್ಟ್ರೀಯ ನೆಲೆಯಲ್ಲಿ ಮನುಷ್ಯ ಜೀವನ ಮಟ್ಟವನ್ನು ಸುಧಾರಿಸುವ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ರಾಜಕೀಯ ಮತ್ತು ಆರ್ಥಿಕ ಕ್ರಮಗಳ ಪ್ರಭಾವ ಸ್ಪಷ್ಟವಾಗಿ ಕಾರ್ಯವೆಸಗಿದೆ. ೧೯೪೭ರ ನಂತರದ ಸಾಹಿತ್ಯದಲ್ಲಿ ಸಮಾಜ ಪರಿವರ್ತನೆಯ ಪ್ರಭಾವವನ್ನು ಈ ಕೆಳಗಿನ ಅಂಶಗಳಲ್ಲಿ ಗುರುತಿಸಬಹುದಾಗಿದೆ.

೧. ಹಳೆ ಮೌಲ್ಯಗಳ ಸ್ಥಾನದಲ್ಲಿ, ಹೊಸಮೌಲ್ಯಗಳ ಸ್ಥಾಪನೆ, ೨. ಮಾನವ ಕೇಂದ್ರಿತ ವಸ್ತುವಿಗೆ ಪ್ರಾಮುಖ್ಯತೆ, ೩. ವಿವಿಧ ವಾದ ಮತ್ತು ಸಿದ್ಧಾಂತಗಳ ಪರಿಚಯ, ೪. ಸಾಹಿತ್ಯಪ್ರಕಾರಗಳಲ್ಲಿ ವೈವಿಧ್ಯತೆ, ೫.ಸಾಹಿತ್ಯದಲ್ಲಿ ಸಾಮಾಜಿಕ ಕಳಕಳಿ ಪ್ರವೇಶ, ೬ ಸಾಹಿತ್ಯ ಜೀವನಮುಖಿವಾಗಿ ಪರಿವರ್ತನೆ ಹೊಂದಿರುವುದು. ಸ್ವಾತಂತ್ರ್ಯದೊರೆತ ಪರಿಣಾಮವೆಂದರೆ ಸಾಂಸ್ಕೃತಿಕ ಪುನರುಜ್ಜೀವನಯುಗದ ಮುಕ್ತಾಯ ಮತ್ತು ಆದರ್ಶಯುಗವೂ ಮುಗಿದಂತಾಯಿತು.

ಸ್ವಾತಂತ್ರ್ಯೋತ್ತರ ಸಾಹಿತ್ಯದ ಪ್ರಮುಖ ಲಕ್ಷಣವೆಂದರೆ ವೈಚಾರಿಕತೆ ಮತ್ತು ಕೇಂದ್ರಪ್ರಜ್ಞೆ. ವೈಚಾರಿಕತೆಯ ಫಲವೆಂದರೆ ಹಳೆಯ ಮೌಲ್ಯಗಳಲ್ಲಿ ಅಪನಂಬಿಕೆ ಮತ್ತು ಹೊಸಮೌಲ್ಯಗಳ ಹುಡುಕಾಟ. ಇದನ್ನೇ ಆಧುನಿಕ ಯುಗದ ಪ್ರಾರಂಭವೆಂದೂ ಗುರುತಿಸಲಾಯಿತು.

ಆಧುನಿಕ ಪೂರ್ವ ಭಾರತವು ಪಾಶ್ಚಾತ್ಯಚಿಂತನೆಗೆ ಭೌತಿಕ ಮಟ್ಟದಲ್ಲಿ ಮಾತ್ರ ಸ್ಪಂದಿಸಿದರೆ ಸ್ವಾತಂತ್ರ್ಯೋತ್ತರ ಅವಧಿಯಲ್ಲಿ ಮಾನಸಿಕವಾಗಿಯೂ ಪಾಶ್ಚಾತ್ಯ ಚಿಂತನೆಗೆ ಸ್ಪಂದಿಸುವ ಮನೋಭಾವ ತೋರಿದೆ. ಈ ಬದಲಾವಣೆ ಪರಿಣಾಮವೆಂದರೆ ಮನೋ ವೈಜ್ಞಾನಿಕ ಅರಿವಿನಿಂದ ಸತ್ಯಶೋಧನೆಗೆ ಅವಕಾಶ ದೊರೆತಿರುವುದು. ಸಾಹಿತ್ಯದಲ್ಲಿ ಎಡಪಂಥೀಯ ಧೋರಣೆ ಪ್ರಭಾವದಿಂದ ಸಾಮಾಜಿಕ ಅಸಮಾನತೆಯ ಅರಿವು ಮತ್ತು ವರ್ಗಪ್ರಜ್ಞೆಗಳು ಮುಖ್ಯವಾಗಿ ಕಾಣಿಸಿಕೊಂಡವು. ಸಾಮಾಜಿಕ ಪ್ರಜ್ಞೆಯ ಈ ಬರಹಗಳಲ್ಲಿ ಹೆಣ್ಣನ್ನು ಸಾಮಾಜಿಕ ನೆಲೆಯಲ್ಲಿ ಗುರುತಿಸುವ ಪ್ರಯತ್ನ ನಿರಂತರವಾಗಿ ನಡೆಯಿತು.

## ಸ್ವಾತಂತ್ರ್ಯಪೂರ್ವ ಸಾಹಿತ್ಯ ಮತ್ತು ಸ್ತ್ರೀ ಅಭಿವ್ಯಕ್ತಿ (೧೯೪೫ ರಿಂದ ೧೯೪೭ರ ಅವಧಿ)

(೧೯೦೦ ರಿಂದ ೧೯೨೫ರವರೆಗೆ ಬಂದಿರುವ ಕತೆ, ಕಾದಂಬರಿಗಳಲ್ಲಿ ಸಾಂಪ್ರದಾಯಿಕ ಸ್ತ್ರೀ ಮಾದರಿಯನ್ನು ಗುರುತಿಸುವುದು ಸಾಧ್ಯವಿದೆ. ಈ ಅವಧಿಯ ಸಾಹಿತ್ಯದಲ್ಲಿ ಅಭಿವ್ಯಕ್ತಗೊಂಡಿರುವ ಸ್ತ್ರೀ ಸಾಂಪ್ರದಾಯಕವಾಗಿರುವ ಕೆಲವು ಮೌಲ್ಯಗಳನ್ನು ತನ್ನಲ್ಲಿ ಪಡೆದಿದ್ದಾಳೆ. ಪತಿನಿಷ್ಠೆ, ಸೇವಾಮನೋಭಾವ, ಸಹನೆ, ತ್ಯಾಗ, ಬಲಿದಾನ, ಪಾತಿವ್ರತ್ಯ ಮತ್ತು ಮಾತೃತ್ವ - ಈ ಉದಾತ್ತ ಗುಣಗಳಿರುವ ಸ್ತ್ರೀಪಾತ್ರಗಳನ್ನು ಮಾಸ್ತಿ, ಆನಂದ, ಕೆರೂರು ವಾಸುದೇವಚಾರ್ಯ, ಎಂ.ಎಸ್. ಪುಟ್ಟಣ್ಣ ಮೊದಲಾದವರ ಕತೆ, ಕಾದಂಬರಿಗಳು ಚಿತ್ರಿಸಿವೆ. ಕನ್ನಡದ ಮೊದಲ ಲೇಖಕಿ ತಿರುಮಲಾಂಬ ಮತ್ತು ಆರ್. ಕಲ್ಯಾಣಮ್ಮನವರ ಕಾದಂಬರಿಗಳು ಇದೇ ರೀತಿ ಪಾತ್ರ ಚಿತ್ರವನ್ನು ನೀಡಿವೆ. ಈ ಸಾಂಪ್ರದಾಯಕ ಸ್ತ್ರೀ ಮಾದರಿಯನ್ನು ಅನುಸರಿಸಿಕೊಂಡು ನಂತರದ ಲೇಖಕರಾದ ಅ.ನ.ಕೃ., ಕೃಷ್ಣಮೂರ್ತಿ ಪುರಾಣಿಕ ಮತ್ತು ಶಿವರಾಮ ಕಾರಂತರಂತಹ ಲೇಖಕರು ಆದರ್ಶ ಗೃಹಿಣಿಯರ ಪಾತ್ರಗಳನ್ನು ಸೃಷ್ಟಿಸಿದರು.)

ಪ್ರಾಥಮಿಕ ಹಂತದ ಸಾಹಿತ್ಯವು ತನ್ನ ಸ್ತ್ರೀ ಅಭಿವ್ಯಕ್ತಿಯಲ್ಲಿ ಆದರ್ಶವನ್ನು ಪ್ರಧಾನ ನೆಲೆಯಲ್ಲಿ ಪರಿಗಣಿಸಿತು. ಆದರ್ಶ ಕಲ್ಪನೆಯಲ್ಲಿ ಸಾಹಿತ್ಯವು ಹೆಂಡತಿ ಮತ್ತು ತಾಯಿ ಸ್ಥಾನದಲ್ಲಿರುವ ಹೆಣ್ಣಿಗೆ ಕೆಲವು ನಿರ್ದಿಷ್ಟ ಗುಣಶೀಲಗಳ ನಿರ್ದೇಶನವನ್ನು ನೀಡಿತು. ಉದಾತ್ತತೆ, ಉದಾರತೆ ಮತ್ತು ತ್ಯಾಗಪರತೆಯನ್ನು ಸ್ತ್ರೀಧರ್ಮದ ಮುಖ್ಯ ಆಶಯವನ್ನಾಗಿ ರೂಪಿಸಿಕೊಂಡು ಈ ವರ್ತುಲದೊಳಗೆ ಹೆಂಡತಿ ಮತ್ತು ತಾಯಿ ಪಾತ್ರವನ್ನು ನಿರ್ವಚಿಸುವ ವಿಧಾನವನ್ನು ಸಾಹಿತ್ಯವು ಕಂಡುಕೊಂಡಿತು.

ಹೆಣ್ಣನ್ನು ಅವಳಲ್ಲಿರುವ ತಾಯ್ತನದ ಹಿರಿಮೆಯಿಂದ ಪ್ರತ್ಯೇಕಿಸಿ ನೋಡುವುದು ಲೇಖಕರಿಗೆ ಸಾಧ್ಯವಾಗದೆ ಹೋದುದರಿಂದ ತಾಯ್ತನವನ್ನು ವೈಭವೀಕರಿಸುವ ಮತ್ತು ತಾಯ್ತನದ ಹಿರಿಮೆಯನ್ನು ಕೊಂಡಾಡುವ ವಿಚಾರಗಳು ಪದೇ ಪದೇ ಕತೆಗಳಲ್ಲಿ ಕಾಣಿಸಿಕೊಂಡಿವೆ. ಮಾತೃತ್ವದ ಹಂಬಲಿಕೆ ಮತ್ತು ಮಾತೃತ್ವದ ಸಾರ್ಥಕತೆಗೆ ಅವಕಾಶವನ್ನು ಹೆಚ್ಚಾಗಿ ನೀಡಿರುವ ಸಾಹಿತ್ಯವು ಹೆಣ್ಣಿನ ಸಾಮಾಜಿಕ ಪಾತ್ರಕ್ಕೆ ಹೆಚ್ಚಿನ ಮನ್ನಣೆಯನ್ನು ನೀಡಿದೆ.

ತಾಯಿಯಾದವಳು ಉದಾರ ಮನಸ್ಸು, ತ್ಯಾಗಪರ ಜೀವನ, ಮಮತಾಮಯಿ ಹೃದಯ ಮತ್ತು ಸ್ವಾರ್ಥರಹಿತ ಬುದ್ಧಿ ಇರುವ ಹೆಣ್ಣಾಗಿರುತ್ತಾಳೆ. ಪತ್ನಿಯು ಧರ್ಮಶೀಲಳೂ, ನೀತಿವಂತಳೂ, ದೈವಭಕ್ತಳೂ ಆಗಿರುವ ಹೆಣ್ಣಾಗಿರುತ್ತಾಳೆ. ಸಾಂಪ್ರದಾಯಿಕ ಸ್ತ್ರೀ ಮಾದರಿಯಲ್ಲಿ ಸಮರ್ಪಣಭಾವವು ಸ್ಥಾಯಿಯಾಗಿರುತ್ತದೆ. ತನ್ನ ಬದುಕು ಇನ್ನೊಬ್ಬರಿಗಾಗಿ ಎನ್ನುವ ಕೇಂದ್ರ ಪ್ರಜ್ಞೆ ಈ ಪಾತ್ರಗಳಲ್ಲಿ ಆಳವಾಗಿರುತ್ತದೆ. ಪುರುಷಪರ ವಿಚಾರಗಳಿಂದ ಪ್ರಭಾವಿತವಾಗಿರುವ ಈ ಸ್ತ್ರೀ ವ್ಯಕ್ತಿತ್ವವು ಅಪ್ರಜ್ಞಾಪೂರ್ವಕ ನೆಲೆಯಲ್ಲಿ ಜೀವವಿರೋಧಿ ಭಾವದ ಮೂಲಕ ತನ್ನನ್ನು ತಾನು ಗುರುತಿಸಿಕೊಳ್ಳುವ ಹಂತವನ್ನು ಮುಟ್ಟಿರುತ್ತದೆ.

'ಜೀವನದಲ್ಲಿ ಎದುರಿಸಬೇಕಾದ ಸಮಸ್ಯೆಗಳನ್ನು ತ್ಯಾಗ, ಸಹನೆ ಮತ್ತು ಪ್ರೇಮಭಾವಗಳ ಮೂಲಕ ಸ್ವೀಕರಿಸುವ ಮನೋಭಾವವನ್ನು ರೂಢಿಸಿರಬೇಕು, ತನ್ನ ಮೇಲೆ ಅನ್ಯಾಯ ನಡೆಯುವ ಸಂದರ್ಭದಲ್ಲಿ ಅನ್ಯಾಯದ ವಿರುದ್ಧ ಧ್ವನಿ ಎತ್ತದೆ ಸಹನೆಯಿಂದಿರಬೇಕು. ಸಹಿಸಲಸಾಧ್ಯವಾದ ಸ್ಥಿತಿಯಲ್ಲಿ ಆತ್ಮಬಲಿದಾನಕ್ಕೆ ಸಿದ್ಧವಾಗಿರಬೇಕು' ಎಂದು ನಿಲುವನ್ನು ಆದರ್ಶ ಕಲ್ಪನೆಯಲ್ಲಿ ಮೂಡುವ ಸ್ತ್ರೀ ಪಾತ್ರಗಳಿಗೆ ಆರೋಪಿಸಲಾಗಿದೆ.

ಕೆರೂರರ ಕಾದಂಬರಿಯ ನಾಯಕಿ ಇಂದಿರೆ ಸ್ತ್ರೀತ್ವದ ಆದರ್ಶ ಪ್ರತೀಕವಾಗಿದ್ದು ಅವಳು ಸುಶಿಕ್ಷಿತಳಾಗಿದ್ದರೂ, ಆಧುನಿಕ ವಿಚಾರಗಳಿಗೆ ಬಲುದೂರವಿರುತ್ತಾಳೆ. ಸ್ತ್ರೀ ಸ್ವಾತಂತ್ರವನ್ನು ಕುರಿತು ಇಂದಿರೆಗೆ ನಂಬಿಕೆ ಇಲ್ಲ. 'ನಾವು ಯಾರಿಂದ ಸ್ವತಂತ್ರರಾಗಿರಬೇಕು? ತಮ್ಮ ಪ್ರಾಣಕ್ಕಿಂತಲೂ ಹೆಚ್ಚಾಗಿ ನಮ್ಮನ್ನು ಸಂರಕ್ಷಿಸುವ ಪ್ರಾಣೇಶ್ವರರ ಕೂಡ ಹುಚ್ಚೆಂದು ಜಗಳವಾಡುವುದು ಸ್ವಾತಂತ್ರ್ಯವೇನು'?[೪] ಎನ್ನುವ ವಾದವನ್ನು ಮುಂದಿಡುವ ಇಂದಿರೆಗೆ ವಿಧವೆಯನ್ನು ಮದುವೆಯಾಗುವುದೆಂದರೆ ಹೀನ ಕೆಲಸವೆಂಬ ಭಾವನೆ.

ಸನಾತನ ಧರ್ಮದ ಮೂಲಕವೇ ಸಮಾಜದ ಸ್ಥಿರತೆಯನ್ನು ಕಾಪಾಡುವುದು ಸಾಧ್ಯ. ಆಧುನಿಕ ವಿಚಾರಗಳಾಗಲೀ ಪ್ರಗತಿಪರ ಯೋಚನೆಗಳಾಗಲೇ ಸ್ವಸ್ಥ ಸಮಾಜಕ್ಕೆ ಅಪಾಯಕಾರಿ ಎನ್ನುವ ನಿಲುವನ್ನು ಇಂದಿರಾ ಕಾದಂಬರಿ ಪ್ರಕಟಿಸುತ್ತದೆ. ಈ ಕಾರಣವಾಗಿ ವಿಧವೆಯರ ಮರುವಿವಾಹ, ಸ್ತ್ರೀಶಿಕ್ಷಣ, ಸ್ತ್ರೀಸ್ವಾವಲಂಬನಕ್ಕಾಗಿ ದುಡಿಯುವ

ರಾಧಾಬಾಯಿ, ವಿಧವೆಯಾಗಿ ಮರು ವಿವಾಹವಾಗಲು ಸಿದ್ಧಳಾದ ಕಮಲೆ ಕಾದಂಬರಿಯಲ್ಲಿ ಟೀಕೆಗೆ ಒಳಗಾಗುತ್ತಾರೆ. ಸಾಂಪ್ರದಾಯಕ ಮೂಲ್ಯಗಳನ್ನು ಆದರಿಸುವ ಇಂದಿರೆ ಮತ್ತು ಕಲೆಗಾಗಿ ತನ್ನ ಬಾಳನ್ನು ಮುಡಿಪಾಗಿಟ್ಟುಕೊಂಡು ವಿರಾಗಿಣಿ ಜೀವನ ನಡೆಸುವ ವಿಧವೆ ದೇವಯಾನಿ ಕಾದಂಬರಿಯಲ್ಲಿ ಆದ್ಯತೆ ಪಡೆಯುತ್ತಾರೆ. 'ಸ್ತ್ರೀಯರು ಉಚ್ಚಶಿಕ್ಷಣವನ್ನು ಹೊಂದುವುದು ಆವಶ್ಯ. ಆದರೆ ಸ್ವಾತಂತ್ರ್ಯಾತಿಶಯವು ಮಾತ್ರ ನನಗೆ ಸಲ್ಲದು''.[8] ಎನ್ನುವ ಕಾದಂಬರಿ ನಾಯಕ ರಮಾಕಾಂತ, ಇಂದಿರೆಯನ್ನೇ ವಿವಾಹವಾಗುವ ಮನಸ್ಸು ಮಾಡುತ್ತಾನೆ. ಇಂದಿರೆ ಕಾದಂಬರಿ ಪ್ರಕಟವಾದ ಸಂದರ್ಭದಲ್ಲಿ ವಿಧವಾ ಮರುವಿವಾಹ, ಸ್ತ್ರೀ ಶಿಕ್ಷಣ ಮತ್ತು ಸ್ತ್ರೀ ಸ್ವಾತಂತ್ರ್ಯದಂತಹ ವಿಚಾರಗಳು ಅಂದಿನ ಸಮಾಜದಲ್ಲಿ ಚರ್ಚೆಗೆ ಒಳಪಟ್ಟಿದ್ದವು, ಎನ್ನುವುದು ತಿಳಿದ ವಿಚಾರ. ಸುಧಾರಣೆಗಳು ಸಾಂಪ್ರದಾಯಿಕತೆಯನ್ನು ನಿರಾಕರಿಸುವುದಾದರೆ ಅಂತಹ ಸುಧಾರಣೆಗಳು ಸಮಾಜದ ಆರೋಗ್ಯದೃಷ್ಟಿಯಿಂದ ಹಿತಕರವಾಗಿರುವುದಿಲ್ಲ ಎಂಬ ಧೋರಣೆಯನ್ನು ಕಾದಂಬರಿಕಾರ ತನ್ನ ಸ್ತ್ರೀ ಪಾತ್ರಗಳ ಮೂಲಕ ಸ್ಪಷ್ಟವಾಗಿಸಿದ್ದಾರೆ. ಗಂಡಿನ ಆಳುವ ಮನೋಧರ್ಮವನ್ನು ಪ್ರಿಯವೆಂದು ನಂಬುವ ಇಂದಿರೆ ಮತ್ತು ವಿರಾಗಿಣಿ ಬದುಕನ್ನು ಕಲೆಗಾಗಿ ಮುಡಿಪಾಗಿಡುವ ದೇವಯಾನಿ ಕಾದಂಬರಿಯಲ್ಲಿ ಮೆಚ್ಚುಗೆ ಪಡೆದಿರುವುದು ಲೇಖಕನ ಅಪೇಕ್ಷಿತ ಮಾದರಿ ಒಂದನ್ನು ಸ್ಪಷ್ಟಪಡಿಸುವ ಕಾರಣಗಳಿಂದಾಗಿ. ಆಧುನಿಕ ವಿಚಾರಗಳಿಗಾಗಿ ಹೋರಾಡುವ, ಭಾಷಣ ಬಿಗಿಯುವ ರಾಧಾಬಾಯಿ, ಕಮಲೆ ಪಾತ್ರಗಳನ್ನು ಇದೇ ಕಾರಣದಿಂದ ವೈರುಧ್ಯಭಾವದಿಂದ ಕಾಣಲಾಗಿದೆ. ಎಂ. ಎಸ್. ಪುಟ್ಟಣ್ಣರ 'ಮಾಡಿದುಣ್ಣೊ ಮಹಾರಾಯ' ಕಾದಂಬರಿ ಪುರಾಣ ಪ್ರತಿಮೆಯನ್ನು ಸೀತಮ್ಮನ ಪಾತ್ರದ ಮೂಲಕ ಬಳಸಿಕೊಳ್ಳುವ ಕತೆ ಪಡೆದಿದೆ.

ಸಂಜವಾಡಿಯೆನ್ನುವ ಗ್ರಾಮೀಣ ಪ್ರದೇಶದ ಸದಾಶಿವದೀಕ್ಷಿತರ ಸೊಸೆ ಸೀತಮ್ಮನ ಬದುಕಿನಲ್ಲಿ ನಡೆಯುವ ಘಟನೆಗಳು ಕಾದಂಬರಿಯಲ್ಲಿ ಮುಖ್ಯಭಾಗವಾಗಿಯೇ ಬರುತ್ತವೆ. ಮಹಾಸತಿ ಅರುಂಧಮ್ಮನ ಆದರ್ಶದಲ್ಲಿ ಬದುಕುವ ಸೀತಮ್ಮ ಸಹನಾಶೀಲೆ. ಅತ್ತೆಮನೆಯಲ್ಲಿ ಅತ್ತೆಕಾಟ ಅವಿರತವಿದ್ದರೂ ಮೂಕವಾಗಿ ಸಹಿಸಿಕೊಂಡು ಇರುವಾಕೆ.

ವಿಧೇಯತೆ, ಸೇವಾಮನೋಭಾವ, ಪಾತಿವ್ರತ್ಯ ಮತ್ತು ಸಹನಾರುಪಿಯಾಗಿದ್ದ ಸೀತಮ್ಮನ ಮೇಲೆ ಗುಡಿಪುಜಾರಿ ಅಪ್ಪಾಜಿಯ ಕೆಟ್ಟದೃಷ್ಟಿ ಬೀಳುತ್ತದೆ. ತನ್ನ ಪಾಡಿಗೆ ಬದುಕಿದ್ದ ಸೀತಮ್ಮ ಅಪ್ಪಾಜಿಯ ಅಭಿಚಾರದ ಕಾರಣವಾಗಿ ಸಾಯುವಂತಾಗುತ್ತದೆ. ಸತ್ತಳೆಂದು ತಿಳಿದು ಸ್ಮಶಾನ ಪ್ರವೇಶ ಮಾಡಿದರೂ ಅಗ್ನಿಸ್ಪರ್ಶದಿಂದ ಸೀತಮ್ಮ ಸಾಯದೆ ಆನಂದ ಭಾವಾಜಿ ಕೃಪೆಯಿಂದ ಮತ್ತೆ ಬದುಕಿ ಬರುತ್ತಾಳೆ. ಸೀತಮ್ಮ ಬದುಕಿ ಬಂದ ಬಳಿಕ ಊರಿನಲ್ಲಿ ನಡೆಯುತ್ತಿದ್ದ ಅನ್ಯಾಯ, ಅನಾಚಾರಗಳು ಕಡಿಮೆಯಾಗುತ್ತವೆ.

ಅರುಂಧಮ್ಮನ ಮಹಾಸತಿ ಪ್ರಸಂಗ ಮತ್ತು ಸೀತಮ್ಮನ ಅಗ್ನಿದಿವ್ಯಗಳು ಪಾತಿವ್ರತ್ಯಮೌಲ್ಯವಿರುವ ಸ್ತ್ರೀ ಪ್ರತೀಕಗಳ ಸೃಷ್ಟಿಗೆ ಸಹಾಯಕವಾಗಿವೆ. ಆತ್ಮಬಲಿದಾನಗಳು ಈ ಎರಡು ಸ್ತ್ರೀ ಪಾತ್ರಗಳಲ್ಲಿ ಅಮರತ್ವದ ಆದರ್ಶವನ್ನು ತುಂಬಿಕೊಟ್ಟಿವೆ.

೧೯೧೧ರ ನಂತರ ಪ್ರಕಟವಾಗತೊಡಗಿರುವ ಮಾಸ್ತಿಕತೆಗಳಲ್ಲಿರುವ ಸ್ತ್ರೀಯು ಇದೇ ಆದರ್ಶಕಲ್ಪನೆಯಿಂದ ಪ್ರೇರಣೆ ಪಡೆದವಳಾಗಿದ್ದಾಳೆ. ಪುರಾಣ ಕಲ್ಪನೆಗಳು ಮತ್ತು ಸಾಂಪ್ರದಾಯಕ ನಿಲುವು ಮಾಸ್ತಿ ಚಿತ್ರಿಸಿರುವ

ಸ್ತ್ರೀಪಾತ್ರಗಳನ್ನು ರೂಪಿಸಿದೆ. ಸನಾತನ ಮೌಲ್ಯಗಳನ್ನು ಸ್ತ್ರೀಯರಲ್ಲಿ ಆರೋಪಿಸುವುದು, ದೈವಿಕತೆ, ಮಾತೃತ್ವಗಳಂತಹ ಭಾವಪೂರ್ಣ ವಿಚಾರಗಳ ಮೂಲಕ ಸ್ತ್ರೀವ್ಯಕ್ತಿತ್ವದ ಹಿರಿಮೆಯನ್ನು ಕಂಡುಕೊಳ್ಳುವುದು ಮಾಸ್ತಿಕತೆಗಳಲ್ಲಿ ಕಂಡುಬರುವ ಮುಖ್ಯ ಅಂಶಗಳಾಗಿವೆ. ಮಾಸ್ತಿಕತೆಗಳಲ್ಲಿ ಬರುವ ಸಾವಿತ್ರಮ್ಮ, ಸೀತಮ್ಮ, ಚೆನ್ನಮ್ಮ, ಚಿಕ್ಕವ್ವ ಲಕ್ಷಮ್ಮ, ಮಂಗಮ್ಮ, ಮಾಲಿನಿ, ನೀಲಾಸಾನಿ, ಮೊದಲಾದ ಸ್ತ್ರೀಪಾತ್ರಗಳು ಮೇಲೆ ತಿಳಿಸಿದ ಅಂಶಗಳನ್ನೇ ಅಂತರ್ಗತಗೊಳಿಸಿದ ಆದರ್ಶ ಪಾತ್ರಗಳಾಗಿದ್ದಾರೆ.

'ಕಾಮದ ಹಬ್ಬದ ಒಂದು ಕತೆ'ಯ ಸಾವಿತ್ರಮ್ಮನಿಗೆ ಚಿಕ್ಕಂದಿನಿಂದಲೇ ವಿವಾಹವಾಗಿರುತ್ತದೆ. ಆದರೆ ಗಂಡ ದೇಶಾಂತರ ಹೋಗಿರುತ್ತಾನೆ. ಯಾರಿಂದಲೋ ಗಂಡ ಸತ್ತ ಎನ್ನುವ ಸುದ್ದಿ ತಿಳಿದು, ಸಾವಿತ್ರಮ್ಮ ಹರೆಯದಲ್ಲಿಯೇ ಸ್ವ ಇಚ್ಛೆಯಿಂದ ಮಡಿಯಾಗುತ್ತಾಳೆ. ಈ ಬದುಕಿನಲ್ಲಿ ದೊರಕಿಸಲಾಗದ ದಾಂಪತ್ಯಸುಖವನ್ನು ಮುಂದಿನ ಜನ್ಮದಲ್ಲಿ ಪಡೆಯುವ ಇಚ್ಛೆಯಿಂದ ಸಾವಿತ್ರಮ್ಮ ಕಾಮನ ಹಬ್ಬದ ದಿನ ಹುಡುಗರಿಂದ ಬೂದಿ ಎರಚಿಸಿಕೊಳ್ಳುವ ಪದ್ಧತಿಯನ್ನು ಅನುಸರಿಸುತ್ತಿರುತ್ತಾಳೆ. ಕಾಮನ ಹಬ್ಬದ ಒಂದು ದಿನ ಸಾವಿತ್ರಮ್ಮನ ಗಂಡನೇ ಊರಿಗೆ ಮರಳಿದಾಗ ಹೆಂಡತಿ ಬೂದಿ ಎರಚಿಸಿಕೊಳ್ಳುವುದನ್ನು ಕಣ್ಣಾರೆ ನೋಡುವಂತಾಗುತ್ತದೆ. ಅವಳ ಶ್ರದ್ಧೆ ಮತ್ತು ಅನುಸರಣೆಗಳು ಸತ್ತುಹೋಗಿರುವನೆಂದು ತಿಳಿದ ಗಂಡನನ್ನು ಈ ಜನ್ಮದಲ್ಲಿಯೇ ಮರಳಿ ಪಡೆಯುವಂತೆ ಮಾಡುತ್ತದೆ. ಸಾವಿತ್ರಮ್ಮನ ನಂಬಿಕೆ ಫಲಿಸುತ್ತದೆ. ಸಾವಿತ್ರಮ್ಮನ ಹೆಸರು ಇಲ್ಲಿ ಧ್ವನಿಪೂರ್ಣವಾಗಿದೆ. 'ಪುತ್ರಕಾಮೇಷ್ಠಿ' ಕತೆಯ ಸೀತೆ ಹರೆಯದ ಹೆಣ್ಣು. ವಯಸ್ಸಾದವನೊಡನೆ ಅವಳ ವಿವಾಹ ನಡೆಯುತ್ತದೆ. ಅವರಿಗೆ ಮಕ್ಕಳಾಗಿರುವುದಿಲ್ಲ. ಸನ್ಯಾಸಿಯೊಬ್ಬನು ನಡೆಸುವ ಧಾರ್ಮಿಕ ವಿಧಿ ಮೂಲಕ ಸಂತಾನ ಪಡೆಯುವ ಪ್ರಯತ್ನವನ್ನು ಗಂಡ ಹೆಂಡತಿ ನಡೆಸುತ್ತಾರೆ. ಸೀತೆಗೆ ಗಂಡನಲ್ಲಿ ಪ್ರೇಮ, ಶ್ರದ್ಧೆಗಳು ಇವೆ; ಅದೇ ರೀತಿ ಆಕೆ ಜಾಣೆಯೂ, ಬುದ್ಧಿವಂತೆಯೂ ಆಗಿರುತ್ತಾಳೆ. ಸಂನ್ಯಾಸಿಯ ಧಾರ್ಮಿಕ ಮನಸ್ಸಿನ ಹಿಂದೆ ಅಡಗಿದ ಕಪಟತನದ ಅರಿವು ಅವಳ ಗಂಡ ಶಾಮಣ್ಣನಿಗಿಂತಲೂ ತೀವ್ರವಾಗಿ ಸೀತೆಗೆ ತಿಳಿದುಬಿಡುತ್ತದೆ. ಕಪಟಸನ್ಯಾಸಿಯ ಬಯಕೆಗೆ ಬಲಿಬೀಳದ ಸೀತೆ ತನ್ನನ್ನು ತಾನು ರಕ್ಷಿಸಿಕೊಳ್ಳುತ್ತಾಳೆ. ತನ್ನ ಗಂಡನ ಚಾರಿತ್ರ್ಯವನ್ನು ಕಾಪಾಡುತ್ತಾಳೆ. ಸೀತೆಯ ಹೆಸರು ಇಲ್ಲಿ ಧ್ವನಿಪೂರ್ಣವಾಗಿದೆ.

'ಕೃಷ್ಣಮೂರ್ತಿಯ ಹೆಂಡತಿ' ಕತೆಯಲ್ಲಿ ದಂಪತಿಗಳು ಪರಸ್ಪರ ಅನುರಾಗ, ಪ್ರೀತಿಯುಳ್ಳವರಾಗಿರುತ್ತಾರೆ. ಹಿರಿಯರ ಮನಸ್ತಾಪದ ಕಾರಣವಾಗಿ ಗಂಡಹೆಂಡತಿ ಅಗಲಿರಬೇಕಾದ ಪ್ರಸಂಗ ಒದಗುತ್ತದೆ. ಕೃಷ್ಣಮೂರ್ತಿ ಹೆಂಡತಿ ತನ್ನ ಗಂಡನ ಬರುವಿಕೆಗಾಗಿ ಸದಾಕಾಲ ತನ್ನ ತಾಯಿಯೊಡನೆ ಕಷ್ಟದ ಬದುಕನ್ನು ಸಾಗಿಸುತ್ತ, ನಿರೀಕ್ಷೆಯಲ್ಲಿ ಕಳೆಯುತ್ತಾಳೆ. ಅಕಸ್ಮಾತ್ತಾಗಿ ಒಂದು ದಿನ ನೆರೆಯವನಿಂದ ತನ್ನ ಗಂಡ ಸತ್ತು ಹೋದ ಸಮಾಚಾರ ಕಿವಿಗೆ ಬೀಳುತ್ತದೆ. ಅದೇ ರಾತ್ರಿ ಕೃಷ್ಣಮೂರ್ತಿ ಹೆಂಡತಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಗಂಡನಿಲ್ಲದ ಪರಿಸ್ಥಿತಿಯ ಬದುಕು ಅವಳಿಗೆ ಅಸಹನೀಯವಾಗುತ್ತದೆ.

'ಚಿಕ್ಕವ್ವ' ಕತೆಯ ಚಿಕ್ಕವ್ವ ವಯಸ್ಸಿನಿಂದ ಚಿಕ್ಕವಳು. ಪ್ರಾಯಸಂದ ಹಿರಿಯ ವ್ಯಕ್ತಿಯೊಡನೆ ಅವಳ ವಿವಾಹ ನಡೆಯುತ್ತದೆ. ವಯಸ್ಸಾದ ಗಂಡ, ಸವತಿಯ ಮಕ್ಕಳು, ಮನೆಕೆಲಸ - ಎಲ್ಲವನ್ನು ಅತೀಶ್ರದ್ಧೆಯಿಂದ ಚಿಕ್ಕವ್ವ ಅನುಸರಿಸುತ್ತಿರುತ್ತಾಳೆ. ಮನೆಯಲ್ಲಿ ಅವಳಿಗೆ ಮಲಮಗನ ಮೋಹ ಕಾಡಲು ಪ್ರಾರಂಭವಾಗುತ್ತದೆ. ತನ್ನ ಸತೀತ್ವವನ್ನು ಉಳಿಸಲು ಚಿಕ್ಕವ್ವ ಸಾವನ್ನು ಆಯ್ಕೆ ಮಾಡುತ್ತಾಳೆ. ವೈಯಕ್ತಿಕ ನೋವು ಕೈ ಮೀರುವ ಪ್ರಸಂಗದಲ್ಲಿ ನೈತಿಕತೆಯನ್ನು ಉಳಿಸುವ ಸಲುವಾಗಿ ಚಿಕ್ಕವ್ವನಿಗೆ ಆತ್ಮಹತ್ಯೆ ಅನಿವಾರ್ಯವಾಗುತ್ತದೆ. 'ವೇಲೂರಿನ ಲಕ್ಷ್ಮಮ್ಮ'ನ

ಬದುಕು ತುಂಬಾ ಕಷ್ಟ ಪರಂಪರೆಗಳೇ. ಲಕ್ಷ್ಮಮ್ಮ ಹುಟ್ಟುಕುರುಡಿ. ಅವಳಿಗೆ ಹುಟ್ಟಿದ ಹೆಣ್ಣುಮಗುವು ಕುರುಡಾಗಿರುತ್ತದೆ. ಈ ಕುರುಡುತನದ ಕಾರಣದಿಂದ ಅತ್ತೆಯನಿಂದೆ, ಗಂಡನ ಅಸಡ್ಡೆಗಳನ್ನು ಅವಳು ದಿನಾ ಅನುಭವಿಸಬೇಕಾಗುತ್ತದೆ. ಹೊಟ್ಟೆಯಲ್ಲಿ ಹುಟ್ಟಿದ ಮಗ ತಂದೆ ಸಿಟ್ಟಿನಿಂದ ಕೊಟ್ಟ ಪೆಟ್ಟಿಗೆ ಸಾವನ್ನಪ್ಪಿದಾಗ, ನಂತರ ಮಗಳು ಬಾವಿಗೆ ಬಿದ್ದು ಆತ್ಮಹತ್ಯೆ ಮಾಡಿದಾಗ, ಈ ಕಾರಣಗಳಿಗಾಗಿ ಗಂಡ ದೇಶಾಂತರ ಹೋದಾಗ ಲಕ್ಷ್ಮಮ್ಮ ಬದುಕಿನಲ್ಲಿ ಒಂಟಿಯಾಗುತ್ತಾಳೆ. ಹೆಣ್ಣಾಗಿ ಹುಟ್ಟಿ ಕಷ್ಟದ ಪರಂಪರೆಗಳನ್ನೆ ಅನುಭವಿಸಿದ ಲಕ್ಷ್ಮಮ್ಮ ಕೊನೆಗೆ ಮತಿಭ್ರಾಂತ ಸ್ಥಿತಿಯನ್ನು ತಲುಪುತ್ತಾಳೆ.

'ಚೆನ್ನಮ್ಮ' ಕತೆಯ ಚೆನ್ನಮ್ಮನ ಗಂಡ ದುರಾಚಾರದವನು. ಹೆಂಡತಿ ಕುರಿತು ಅವನಿಗೆ ಗೌರವದ ಬಾವನೆಗಳು ಇರುವುದಿಲ್ಲ. ತಾನು ಮಾಡಿದ ಸಾಲಕ್ಕಾಗಿ ಹೆಂಡತಿಯನ್ನು ವ್ಯಭಿಚಾರಕ್ಕೆ ತೊಡಗಿಸಲೂ ಆತನು ಹಿಂತೆಗೆಯುವುದಿಲ್ಲ. ಗಂಡನ ಎಲ್ಲ ದುರ್ಗುಣಗಳು ಪರಿಚಯ ಇರುವ ಚೆನ್ನಮ್ಮನಿಗೆ ಗಂಡನ ವಿಷಯದಲ್ಲಿ ಅಸಮಾಧಾನ ಪಟ್ಟುಕೊಳ್ಳಲು ಇಷ್ಟವಿರುವುದಿಲ್ಲ. ಗಂಡನನ್ನು ಮುಂದೆ ಎಂದಾದರೂ ತಿದ್ದಬಲ್ಲೆ ಎನ್ನುವ ಸಹನಾಸ್ವಬಾವ ಅವಳದು. ಆದರೆ ಗಂಡನ ವರ್ತನೆ ಮಿತಿಮೀರಿದ ಪ್ರಸಂಗದಲ್ಲಿ ಗಂಡನ ಬಿಟ್ಟು ಊರು ಸೇರುವ ಪ್ರಯತ್ನ ಮಾಡುತ್ತಿರುವಾಗಲೇ ಗಂಡ ಸತ್ತುಹೊಗುತ್ತಾನೆ. ಗಂಡನನ್ನು ಬಿಟ್ಟವಳು ಎಂಬ ಪ್ರಸಂಗ ಚೆನ್ನಮ್ಮನನ್ನು ಕಾಡುವುದು ತಪ್ಪಿಹೋಗುತ್ತದೆ.

'ಗೌತಮಿ ಹೇಳಿದ ಕತೆ'ಯ ಮಾಲಿನಿ ಭಾರದ್ವಾಜನನ್ನು ಮದುವೆ ಆಗಲಿರುವವಳು. ಆದರೆ ಭಾರದ್ವಾಜ ಅಕಸ್ಮಾತ್ತಾಗಿ ನೀರಿಗೆ ಬಿದ್ದು ಜೀವ ಕಳೆದಾಗ, ಮಾಲಿನಿ ತಾನೂ ನೀರಿನಲ್ಲಿ ಜೀವ ಕಳೆಯುವ ಪ್ರಯತ್ನ ನಡೆಸುತ್ತಾಳೆ. ಆದರೆ ಮಾಲಿನಿ - ಭಾರದ್ವಾಜರ ಗೆಳೆಯನೂ, ಆತ್ಮೀಯನೂ ಆಗಿರುವ ದತ್ತ ಮಾಲಿನಿಯನ್ನು ಬದುಕಿಸುತ್ತಾನೆ. ಕಾಲಾನುಕ್ರಮದಲ್ಲಿ ತನ್ನ ನೋವನ್ನು ಮರೆತ ಮಾಲಿನಿ ದತ್ತನಲ್ಲಿ ತನ್ನ ಪ್ರೇಮವನ್ನು ನಿವೇದಿಸಿಕೊಳ್ಳುತ್ತಾಳೆ. ಹಠದಿಂದ ಅವನನ್ನು ಪಡೆಯುವ ಯತ್ನವನ್ನು ನಡೆಸುತ್ತಾಳೆ. ದತ್ತನಿಗೆ ಮಾಲಿನಿಯನ್ನು ಸ್ವೀಕರಿಸುವುದು ಸಾಧ್ಯವಾಗುವುದಿಲ್ಲ. ಮಾಲಿನಿಯ ಕಾಲು ಹಿಡಿದು ದತ್ತ ಬೇಡಿಕೊಳ್ಳುತ್ತಾನೆ:

"..ನೀನು ನನ್ನನ್ನು ಕಾಪಾಡಬೇಕು ಪರೀಕ್ಷೆ ಮಾಡಬೇಡ. ನೀನು ಹೆಣ್ಣು, ಆದಿಶಕ್ತಿ. ನಿನಗೆ ಪತನವೆಂಬುವುದಿಲ್ಲ. ನಾನು ಹೆಣ್ಣಲ್ಲ, ನನಗೆ ನಿನಗಿರುವ ಆತ್ಮಶುದ್ಧಿಯಿಲ್ಲ. ನೀನು ಅನುಗ್ರಹಿಸಿದರೆ ನಾನು ಮುಂದುಗಾಣುತ್ತೇನೆ. ಹಠ ಹಿಡಿದೆಯೇ ನಾನು ಬಟ್ಟೆಗೆಟ್ಟೆ..." 'ತನ್ನ ಆಸೆಯನ್ನು ಸಹಿಸಬಲ್ಲ ಹಿರಿಯನೆಂದು ಕಂಡಿದ್ದ ದತ್ತ ಅವಳಿಗೆ ಆ ಕ್ಷಣ ತನ್ನ ಸಹಾಯದಿಂದ ಮಾತ್ರ ಬದುಕಬಲ್ಲ ನಿಸ್ಸಹಾಯಕ ಬಾಲಕನಾಗಿ ಕಂಡನು.'

ಹೆಣ್ಣಿನ ಹಿರಿಮೆಯನ್ನು ಮತ್ತು ಅವಳ ಮಾತೃ ಪೋಷಕಗುಣಗಳನ್ನು ಕೊಂಡಾಡಿ, ವಾಸ್ತವಿಕತೆಯನ್ನು ತಿರಸ್ಕರಿಸಿದ ದತ್ತನಲ್ಲಿ ಮುಂದೆ ಪ್ರೇಮಭಾವ ತಾಳುವುದು ಮಾಲಿನಿಗೆ ಸಾಧ್ಯವಾಗುವುದಿಲ್ಲ. ನಂತರ ಮಾಲಿನಿ ಅವನತ್ತ ಹರಿಸುವ ಪ್ರೀತಿ ಮಾತೃಸ್ವರೂಪದ್ದಾಗಿರುತ್ತದೆ.

'ಚಂದ್ರವದನಾ' ಕತೆಯ ನಾಯಕಿ ವೇಶ್ಯೆಯಾದರೂ ಅದಮ್ಯ ತಾಯ್ತನದ ಬಯಕೆಯನ್ನು ಪಡೆದ ಯುವತಿ. ತಾಯ್ತನದ ಕಾರಣದಿಂದ ದೇಹದ ಅಂದಕೆಟ್ಟು, ವರಮಾನ ಅಥವಾ ಅದಾಯ ನಿಂತುಹೋಗುವ ಅತಂಕದಿಂದ

ಅವಳ ಮಾವ ಸೂರಪ್ಪ ಅಡ್ಡಿಪಡಿಸಿದರೂ ಅವಳು ತನ್ನ ಹಂಬಲವನ್ನು ಬಿಟ್ಟುಕೊಡುವುದಿಲ್ಲ. ತಾಯ್ತನದ ತನ್ನ ಮೂಲಸ್ವಭಾವವನ್ನು ಉಳಿಸಲು ವೇಶ್ಯಾವೃತ್ತಿಯಲ್ಲಿದ್ದರೂ ಆಕೆ ಅವಿರತವಾಗಿ ಹೋರಾಡುತ್ತಾಳೆ.

'ಶೇಷಮ್ಮ' ಕತೆಯ ಶೇಷಮ್ಮನದು ಹೋರಾಟದ ಬದುಕು. ತಂದೆ, ತಾಯಿ, ಗಂಡನ ಅನುಪಸ್ಥಿತಿಯಲ್ಲಿ ತನ್ನ ಮನೆ, ತನ್ನ ಮಕ್ಕಳು ಎಂಬ ಜವಾಬ್ದಾರಿಯಲ್ಲಿ ಅವಳ ಜೀವನದ ಗುರಿ ನಿರ್ಧರಿಸಲ್ಪಡುತ್ತದೆ. ತನ್ನ ಮಕ್ಕಳನ್ನು ತಿದ್ದಿ ಅವರ ಬದುಕನ್ನು ರೂಪಿಸಬೇಕೆಂಬ ಒಂದೇ ಉದ್ದೇಶದಿಂದ ಅವಳು ಕಷ್ಟವನ್ನು ಸಹಿಸಿಕೊಳ್ಳುತ್ತಾಳೆ. ಚಂದ್ರಮತಿಯಂತೆ ನಿರಂತರವಾಗಿ ಕಷ್ಟದ ಪರಂಪರೆಯನ್ನು ಎದುರಿಸುವ ಶೇಷಮ್ಮ ತನ್ನ ಸಾಧ್ವಿತ್ವದ ಕಾರಣವಾಗಿ 'ಸೀತೆ'ಯೆಂದೂ ಕರೆಯಲ್ಪಡುತ್ತಾಳೆ.

'ನೀಲಾಸಾನಿ' ಮಾಸ್ತಿಯವರ 'ಸುಬ್ಬಣ್ಣ' ಕಾದಂಬರಿಯಲ್ಲಿ ಬರುವ ಒಂದು ಪಾತ್ರ 'ಲಲಿತಮ್ಮ' ಸುಬ್ಬಣ್ಣನ ಹೆಂಡತಿ. ಸುಬ್ಬಣ್ಣನ ಸಂಗೀತ ಸಾಧನೆಯಿಂದಾಗಿ, ಒಂಟಿಯಾಗಿದ್ದು ಬದುಕಿನ ಕಷ್ಟಗಳನ್ನೆಲ್ಲಾ ಎದುರಿಸಿ ಬದುಕಬೇಕಾದವಳು. ನೀಲಾಸಾನಿ ಸುಬ್ಬಣ್ಣನ ಸಾಧನೆಗೆ ತನ್ನ ಕೈಲಾದಷ್ಟು ಸೇವೆ ಸಲ್ಲಿಸಿ, ತನ್ನ ಬದುಕನ್ನು ಸಾರ್ಥಕಗೊಳಿಸುವವಳು. ನೀಲಾಸಾನಿಗೆ ಸುಬ್ಬಣ್ಣನೆಂದರೆ ದೇವರ ಸಮಾನ. ಅವನಲ್ಲಿ ಅವಳಿಗೆ ಅರಾಧನಾ ಭಾವ. ಹಗಲೆಲ್ಲಾ ತನ್ನ ಮನೆಯಲ್ಲಿ ಕಳೆಯುವ ಸುಬ್ಬಣ್ಣನ ಬೇಕುಬೇಡಗಳನ್ನು ನೋಡಿಕೊಳ್ಳುವುದು ತನ್ನ ಕರ್ತವ್ಯವೆಂಬ ಭಾವನೆ ಅವಳದು. ಅವನ ಮುಗ್ಧತೆ ಕಂಡು ನೀಲಾಸಾನಿಗೆ ವಾತ್ಸಲ್ಯಭಾವ. ಸುಬ್ಬಣ್ಣ ನೀಡುವ ಹಣವನ್ನು ಕೈಯಿಂದ ಮುಟ್ಟದೆ ದೇವರ ಪೆಟ್ಟಿಗೆಯಲ್ಲಿಟ್ಟು ಪೂಜಿಸುವ ನೀಲಸಾನಿಗೆ ವೇಶ್ಯೆಯಾಗಿದ್ದು, ಅವಳ ಮತ್ತು ಸುಬ್ಬಣ್ಣನ ಸಂಬಂಧದಲ್ಲಿ ಸ್ತ್ರೀ ಪುರುಷ ಸಂಬಂಧಕ್ಕಿಂತಲೂ ಹೆಚ್ಚಾದ ಭಾವನಾತ್ಮಕ ಸಂಬಂಧವಿದೆ. ಅದರ್ಶೀಕರಣದ ಹಿನ್ನೆಲೆಯಲ್ಲಿ ಬಂದಿರುವ ಮಾಸ್ತಿಕತೆಗಳ ಸ್ತ್ರೀ ಚಿತ್ರಣವು ಸ್ವಭಾವದ ಉನ್ನತೀಕರಣದ ಪ್ರಕ್ರಿಯೆಯ ಕಾರಣದಿಂದ ವಾಸ್ತವಿಕತೆಯನ್ನು ಮೀರಿ ನಿಲ್ಲುತ್ತವೆ.

ಕಷ್ಟಗಳ ಸರಮಾಲೆಯನ್ನು ಎದುರಿಸುವ, ಸಾಮಾಜಿಕ ಅನ್ಯಾಯಗಳನ್ನು ಅನುಭವಿಸುತ್ತಾ ಕಾಲ ಕಳೆಯುವ ಈ ಪಾತ್ರಗಳ ಧೀರೋದಾತ್ತತೆ ಅಪೂರ್ವ ರೀತಿಯದು. ವೈಯಕ್ತಿಕ ನೋವು ಕೈ ಮೀರುವ ಪ್ರಸಂಗದಲ್ಲಿ ಸಾವನ್ನು ಎದುರಿಸಲು ಈ ಹೆಣ್ಣಗಳು ಸ್ವಲ್ಪವೂ ಹಿಂಜರಿಯುವುದಿಲ್ಲ ಬದುಕಿನ ವೈಪರೀತ್ಯಗಳನ್ನು ಎದುರಿಸುವ ಈ ಸ್ತ್ರೀಗುಣದ ಕುರಿತು ಎನ್. ಗಾಯಿತ್ರಿ ಹೇಳುವ ಮಾತುಗಳು ಇಲ್ಲಿ ಪ್ರಸ್ತುತವೆನಿಸುತ್ತವೆ.

".....ಈ ಗುಣಗಳು ಆ ಪಾತ್ರಗಳ ವ್ಯಕ್ತಿತ್ವ ವಿಶೇಷಣಗಳೆನಿಸಿಕೊಳ್ಳುವುದಕ್ಕಿಂತ ಹೆಚ್ಚಾಗಿ ಮನುಷ್ಯ ಜೀವನ ನಡೆಯುವುದು ದೇವರಿಚ್ಛೆ, ದೈವ ನಿಯಮದಂತೆ ಎಂಬ ತಾತ್ತ್ವಿಕ ನಿಲುವಿನಿಂದ ಬದುಕನ್ನು ಪರಿಭಾವಿಸುವ ಮಾಸ್ತಿಯವರ ಜೀವನ ದರ್ಶನವು ಕಾರಣವಾಗುತ್ತದೆ.[೬]" ಗಾಯತ್ರಿಯವರ ಮಾತನ್ನು ಮಾಸ್ತಿಯವರ ಹೇಳಿಕೆಯ ಮೂಲಕ ಸ್ಪಷ್ಟಪಡಿಸುವುದು ಸಾಧ್ಯವಿದೆ.

ಮಾಸ್ತಿ ತಮ್ಮ ಕತೆಗಳ ಕುರಿತು - "ನನ್ನ ಕತೆಗಳನ್ನುಬರೆಯುವಲ್ಲಿ ನನ್ನ ಉದ್ದೇಶ ಒಂದೇ ಒಂದು. ಜೀವನ ನನಗೆ ನೀಡಿರುವ ದರ್ಶನವನ್ನು ವಿವರಿಸುವ ಚಿತ್ರಣವನ್ನು ಕೊಡುವುದು"[೭] ಎಂದಿದ್ದಾರೆ. ಮಾಸ್ತಿಯವರ ದರ್ಶನದ

ವ್ಯಾಪ್ತಿಯೊಳಗೆ ಅವರ ಪಾತ್ರಸೃಷ್ಟಿಯೂ ನಡೆದಿದೆ. ಮಾಸ್ತಿ ಸೃಷ್ಟಿಸಿರುವ ಸ್ತ್ರೀ ಪಾತ್ರಗಳು ಅವರ ಶುಚಿತ್ವದ ಕಲ್ಪನೆಯಿಂದ ಮೂಡಿದವರಾಗಿದ್ದಾರೆ.

'ಮಾತೃಸ್ವರೂಪರಾಗಿ, ಪತ್ನಿಧರ್ಮವನ್ನು ಅನುಸರಿಸಿ ಬದುಕುವ ಈ ಸ್ತ್ರೀಯರಿಗೆ ಸಾಮಾಜಿಕ ನೆಲೆಯನ್ನು ಕಲ್ಪಿಸಿಕೊಡುವುದು, ಮಾಸ್ತಿಕತೆಗಳಿಗೆ ಸಾಧ್ಯವಾಗಿಲ್ಲ' ಎಂಬ ಗಿರಡ್ಡಿಯವರ ಮಾತನ್ನು ನಾವು ಒಪ್ಪಬೇಕಾಗುತ್ತದೆ. ಯಾಕೆಂದರೆ ವೈಯಕ್ತಿಕ ಸಂಬಂಧಗಳಲ್ಲಿಯೇ ಸ್ತ್ರೀ ಪುರುಷ ಸಮಸ್ಯೆಗಳನ್ನು ವಿವರಿಸುವ ಮಾಸ್ತಿ ಪಾತ್ರಗಳ ಸಾಮಾಜಿಕ ಹಿನ್ನೆಲೆಯನ್ನಾಗಲೀ, ವಾಸ್ತವಿಕ ವಿವರಗಳನ್ನಾಗಲೀ, ಹೆಚ್ಚಿನ ರೀತಿಯಲ್ಲಿ ಗಣನೆಗೆ ತಂದುಕೊಳ್ಳುವುದಿಲ್ಲ. ಪಾತ್ರಗಳು ನೈತಿಕತೆಯ ಚೌಕಟ್ಟನ್ನು ಮೀರದಂತೆ ನೋಡಿಕೊಳ್ಳುವ ಮಾಸ್ತಿಕತೆಯಲ್ಲಿ ಪರಂಪರಾಗತ ನಂಬಿಕೆಗೆ ಅನುಗುಣವಾಗಿ, ಸಂಯಮದ ನಡವಳಿಕೆ ಮತ್ತು ಪರಿಶುದ್ಧ ಚಾರಿತ್ರ್ಯದ ಸ್ತ್ರೀ ಚಿತ್ರಣವಿದೆ. ಮಾಸ್ತಿಕತೆಗಳಲ್ಲಿ ಬರುವ 'ಕುಲೀನ ಸ್ತ್ರೀ' ಮಾದರಿ ತಿರುಮಲಾಂಬರ ಕಾದಂಬರಿಗಳಲ್ಲಿಯೂ ಕಾಣಸಿಗುತ್ತಾರೆ.

ಶುದ್ಧ ಚಾರಿತ್ರ್ಯ, ಸಂಯಮದ ನಡುವಳಿಕೆ, ಪತ್ನಿಯಾಗಿದ್ದರೆ ಗೃಹಿಣಿಧರ್ಮವನ್ನು, ವಿಧವೆಯಾಗಿದ್ದರೆ ವೈರಾಗ್ಯದ ಜೀವನವನ್ನು ಅನುಸರಿಸುವ ಸ್ತ್ರೀಯರು ತಿರುಮಲಾಂಬಾರ ಕಾದಂಬರಿಗಳಲ್ಲಿದ್ದಾರೆ. 'ಸುಶೀಲೆ' ಕಾದಂಬರಿಯ ಸುಶೀಲೆ ಆದರ್ಶಗಳ ಸಾಕಾರಮೂರ್ತಿ, ವಿದ್ಯಾವತಿ. ಕೌಟುಂಬಿಕ ಕಾರಣಗಳಿಂದ ಪಡಬಾರದ ಕಷ್ಟವನ್ನು ಅವಳು ಅನುಭವಿಸುತ್ತಾಳೆ. ಸುಶೀಲೆ ಪತಿಭಕ್ತಿ, ಸತೀತ್ವದ ಮಾದರಿ, ಹಲವು ರೀತಿ ಕಷ್ಟ ಪರಂಪರೆಗಳನ್ನು ಎದುರಿಸಿ ಗಂಡನನ್ನು ಸರಿದಾರಿಗೆ ತರಲು ಪ್ರೇರಣೆ ನೀಡಿದವಳಾಗಿ ಕೊನೆಗೆ ಸುಶೀಲೆ ಗೆಲುವನ್ನು ಸಾಧಿಸುತ್ತಾಳೆ. ಕಾದಂಬರಿ ಸ್ತ್ರೀ ವಿದ್ಯಾಭ್ಯಾಸಕ್ಕೆ ಮನ್ನಣೆ ನೀಡುತ್ತಾದರೂ ಸತೀತ್ವದ ಕಲ್ಪನೆಯನ್ನು ವೈಭವೀಕರಿಸುತ್ತದೆ. 'ನಭ' ಮತ್ತು 'ವಿರಾಗಿಣಿ' ಕಾದಂಬರಿಯಲ್ಲಿ ವಿಧವೆಯಾಗಿ, ವೈರಾಗ್ಯದ ಬದುಕನ್ನು ಸಾಗಿಸಿದ ಯುವತಿಯೋರ್ವಳ ಕತೆ ಇದೆ.

ತಂದೆ, ತಾಯಿ, ಗಂಡ ಎಲ್ಲರನ್ನು ಕಳೆದುಕೊಂಡ ನಭ ಬಂಧುಗಳಿಂದ ಕಿರುಕುಳಕ್ಕೆ ಒಳಗಾಗುತ್ತಾಳೆ. ಆದರೆ ಉಳಿದವರ ಬೆಂಬಲದಿಂದ ತನ್ನ ಬದುಕನ್ನು ನೇರವಾಗಿಸುತ್ತಾಳೆ. ನಭ ತನ್ನ ವೈಧವ್ಯದ ಕಾರಣವಾಗಿ ಪ್ರೀತಿಗೆ ಅವಕಾಶವಿಲ್ಲ ಎಂಬ ಭಾವದಿಂದ ತನ್ನಲ್ಲಿ ಅನುರಕ್ತನಾದ ರಾಜಶೇಖರನೆಂಬ ಯುವಕನ ಪ್ರೀತಿಯನ್ನು ನಿರಾಕರಿಸುತ್ತಾಳೆ. ಕಾದಂಬರಿಯು ನಿಲುವೂ ವಿಧವೆಯ ವೈರಾಗ್ಯಜೀವನದ ಕಡೆಗೆ ಇರುವುದರಿಂದ, ನಭೆಯು ತನ್ನ ಉಳಿದ ಜೀವನವನ್ನು ತ್ಯಾಗಮಯಿಯಾಗಿ ಒಂಟಿಯಾಗಿಯೇ ಕಳಿಯುತ್ತಾಳೆ. ಅವರ ಸತೀತ್ವವು ಅಬಾಧಿತವಾಗಿಯೇ ಉಳಿಯುತ್ತದೆ.

'ಮಾತೃನಂದಿನಿ' ಕಾದಂಬರಿಯು ಕೇಂದ್ರ ಪಾತ್ರ ನಂದಿನಿ 'ಆದರ್ಶದ ಕಲ್ಪನೆಯಲ್ಲಿ' ಮೂಡಿಬಂದ ಸ್ತ್ರೀ. ನಂದಿನಿ ಆದರ್ಶವ್ಯಕ್ತಿಯಾಗಿ ತನ್ನ ಪರಿಸರದ ಮೇಲೆ ಪ್ರಭಾವವನ್ನು ಉಂಟುಮಾಡಬಲ್ಲ ವ್ಯಕ್ತಿಯಾಗಿರುತ್ತಾಳೆ. ಈ ಪಾತ್ರದ ಮೂಲಕ ಸನಾತನ ಮೌಲ್ಯಗಳನ್ನು ಕಟುವಾಗಿ ವಿಮರ್ಶಿಸುತ್ತ ಸ್ತ್ರೀಗೆ ದೊರಕಬೇಕಾದ ಅವಕಾಶಗಳು, ಅವಳು ಎದುರಿಸುವ ಸವಾಲುಗಳನ್ನು ಲೇಖಕಿ ಮುಂದಿಡುತ್ತಾರೆ. ತಿರುಮಲಾಂಬ ಕಾದಂಬರಿಗಳಲ್ಲಿ ಬರುವ ಸ್ತ್ರೀ ಪಾತ್ರಗಳು ಪೂರ್ವಸಂಸ್ಕೃತಿಯಲ್ಲಿ ವಿಶ್ವಾಸವನ್ನು ಇಟ್ಟುಕೊಂಡವರೂ, ಸತೀತ್ವದ ಕಲ್ಪನೆಯನ್ನು ಆದರ್ಶವಾಗಿ ಅಂತರ್ಗತಗೊಳಿಸಿದವರೂ ಆಗಿದ್ದಾರೆ. ಆದರೆ ಹೆಣ್ಣಿನ ಸ್ಥಿತಿಗತಿಗಳ ಕುರಿತು, ಅವಳು ಎದುರಿಸುವ ಕೆಲವು ಸಮಸ್ಯೆ

ಮತ್ತು ಸವಾಲುಗಳನ್ನು ಕಾದಂಬರಿ ಚರ್ಚೆಗೆ ಅವಕಾಶಕೊಡುವುದರ ಮೂಲಕ ಈ ಪಾತ್ರಕಲ್ಪನೆಯಲ್ಲಿ ಬದಲಾವಣೆಯನ್ನು ನಿರೀಕ್ಷಿಸಲಾಗಿದೆ ಎಂಬ ಭಾವನೆ ಬರುತ್ತದೆ.

೧೯೦೦ ರಿಂದ ೧೯೨೫ರವರೆಗಿನ ಮೊದಲ ಹಂತದ ಮೊದಲ ಭಾಗದ ಕಥನ ಸಾಹಿತ್ಯದಲ್ಲಿ ಸ್ತ್ರೀ ಅಭಿವ್ಯಕ್ತಿಯು ಪುರಾಣಕಲ್ಪನೆಯನ್ನು ಆಧರಿಸಿದ ಸ್ತ್ರೀ ಪ್ರತೀಕದ ಸ್ವರೂಪವನ್ನು ಪಡೆದಿತ್ತು. ಕೆರೂರು, ಎಂ.ಎಸ್ . ಪುಟ್ಟಣ್ಣ, ಮಾಸ್ತಿ, ತಿರುಮಲಾಂಬ ಕತೆ ಕಾದಂಬರಿಗಳಲ್ಲಿ ಬರುವ ಸ್ತ್ರೀ ಪಾತ್ರಗಳು ಈ ಸ್ವರೂಪದ ಲಕ್ಷಣವನ್ನು ಪಡೆದಿವೆ. ಈ ಹಿನ್ನೆಲೆಯಲ್ಲಿ ೧೯೨೫ರ ನಂತರ ೧೯೪೬ರವರೆಗೆ ಬಂದ ಕತೆಕಾದಂಬರಿಗಳಲ್ಲಿ ಸ್ತ್ರೀ ಅಭಿವ್ಯಕ್ತಿಯನ್ನು ವಿವೇಚನೆಗೆ ಒಳಪಡಿಸಲಾಗಿದೆ. ಈ ಅವಧಿಯಲ್ಲಿ ಬಂದ ಕತೆ ಕಾದಂಬರಿಗಳಲ್ಲಿ ಕಾಣಿಸಿಕೊಂಡ ಮುಖ್ಯ ಸ್ತ್ರೀಯರೆಂದರೆ ಗೃಹಿಣಿಯರು ಮತ್ತು ವೇಶ್ಯೆಯರು.

ಶಿವರಾಮ ಕಾರಂತ, ಅ.ನ.ಕೃ, ತ.ರಾ.ಸು., ಕೃಷ್ಣಮೂರ್ತಿ ಪುರಾಣಿಕ ಮತ್ತು ಬಸವರಾಜ ಕಟ್ಟೀಮನಿಯವರ ಸಾಹಿತ್ಯದಲ್ಲಿ ಈ ಪಾತ್ರಗಳು ಪ್ರಧಾನ ನೆಲೆಯಲ್ಲಿ ಕಾಣಿಸಿಕೊಂಡಿವೆ. ಕಾರಂತರ ಮೊದಲ ಸಾಮಾಜಿಕ ಕಾದಂಬರಿ 'ನಿರ್ಭಾಗ್ಯ ಜನ್ಮ' ೧೯೨೫ರಲ್ಲಿ ಪ್ರಕಟವಾಯಿತು. ಅನುಕ್ರಮವಾಗಿ ನಂತರ ಬಂದ ಕಾದಂಬರಿಗಳು : ಕನ್ಯಾಬಲಿ (೧೯೩೨), ಚೋಮನದುಡಿ ೧೯ (೩೩), ಸರಸಮ್ಮನ ಸಮಾಧಿ (೧೯೩೭), ಮರಳಿಮಣ್ಣಿಗೆ (೧೯೪೧), ಮತ್ತು ಹೆತ್ತಳಾತಾಯಿ(೧೯೪೫), ಸ್ತ್ರೀ ಕೇಂದ್ರಿತ ವಸ್ತುವನ್ನುಳ್ಳ ಕಾದಂಬರಿಗಳನ್ನು ಮಾತ್ರ ಇಲ್ಲಿ ಗಣನೆಗೆ ತಂದು ಕೊಳ್ಳಲಾಗಿದೆ. ಅ.ನ.ಕೃ ಸಾಹಿತ್ಯದಲ್ಲಿ ೧೯೩೦ ರಿಂದ ೧೯೪೫ರವರೆಗಿನ ಕಾದಂಬರಿಗಳಲ್ಲಿ ಪರಂಪರಾಗತ ಜೀವನ ಮೌಲ್ಯಗಳಿಗೆ ಹೆಚ್ಚಿನ ಆದರವು ಸಂದಿದೆ.

ಈ ಕಾಲಾವಧಿಯ ಕಾದಂಬರಿಗಳಲ್ಲಿ ಪುರಾಣ ಕಲ್ಪನೆಯನ್ನಾಧಾರಿಸಿದ ಸ್ತ್ರೀ ಪ್ರತೀಕಗಳು ಕಡಿಮೆ ಕಾಣಿಸಿಕೊಳ್ಳುತ್ತವೆ. ಇಲ್ಲಿ ಮುಖ್ಯವಾಗಿರುವುದು, ಸತೀಧರ್ಮವನ್ನು ಅನುಸರಿಸುವ ಗೃಹಿಣಿಯರು.'ಗೃಹಲಕ್ಷ್ಮಿ', 'ಮಹಾಲಕ್ಷ್ಮಿ', 'ದೇವಿ' ಮುಂತಾದ ಉತ್ಪ್ರೇಕ್ಷೆಗಳಿಂದ ಈ ಗೃಹಿಣಿಯರನ್ನು ವಿವರಿಸಲಾಗಿದೆ. ಕೌಟುಂಬಿಕ ಜಗತ್ತನ್ನು ಕಥಾವಸ್ತುವಾಗಿಸಿಕೊಂಡ ಕತೆಗಳಲ್ಲಿ ಕೌಟುಂಬಿಕ ವಿರಸಗಳು, ಕಲಹಗಳು, ಗಂಡಸಿನ ಬೇಜವಬ್ದಾರಿ ವರ್ತನೆಗಳು, ಸೋಮಾರಿತನ, ದೇಶಾಂತರ ಹೋಗುವ ನಡವಳಿಕೆ ಮುಖ್ಯವಾಗಿ ವರ್ಣಿತವಾಗಿದೆ. ಗಂಡಸಿನ ಈ ವರ್ತನೆಗಳಿಂದ ತೊಂದರೆಗೆ ಒಳಪಡುವವರು ಸ್ತ್ರೀಯರು, ಪತ್ನಿಸ್ಥಾನದಲ್ಲಿ ಇರುವವರು. ಗೃಹಸ್ವಾಸ್ಥ್ಯವನ್ನು, ಮನೆ, ಮಕ್ಕಳು, ಬಂಧುವರ್ಗ-ಇವುಗಳನ್ನೆಲ್ಲ ನೋಡಿಕೊಳ್ಳುವ ಜವಾಬ್ದಾರಿ ಆಗ ಗೃಹಿಣಿ ಸ್ಥಾನದಲ್ಲಿರುವ ಪತ್ನಿಯ ಪಾಲಿಗೆ ಬರುತ್ತದೆ.

ಸ್ವಂತ ಆಸೆ ಆಕಾಂಕ್ಷೆಗಳನ್ನು ಪ್ರಕಟಿಸದೆ ಮನೆಯನ್ನು ಕಟ್ಟಿ ಬೆಳೆಸುವ ಕರ್ತವ್ಯದಲ್ಲಿ ನಿರತರಾಗಿ, ಇತರರ ಏಳಿಗೆಯಲ್ಲಿ ತನ್ನ ಬದುಕಿನ ಗುರಿಯನ್ನು ನಿಶ್ಚಿಯಿಸಿಕೊಂಡ ಗೃಹಿಣಿಯರು ಇಲ್ಲಿರುವವರು. ತಾನಿರುವ ಸ್ಥಿತಿಯಲ್ಲಿ ತಾನು ಏನಾಗಿರುವೆನೋ ಅದುವೇ ತನ್ನ ನಿಜವಾದ ಸ್ಥಿತಿ ಎಂದು ನಂಬುವ ಸ್ತ್ರೀಮಾದರಿಗಳು ಈ ಹಂತದಲ್ಲಿ ಕಾಣಿಸಿಕೊಳ್ಳುತ್ತಾರೆ. ಕಾರಂತರ 'ನಿರ್ಭಾಗ್ಯಜನ್ಮ' ಪತ್ನಿ ಭಾಗ್ಯಲಕ್ಷ್ಮಿ ತನ್ನ ಸನ್ನಡತೆಯಿಂದ ಗಂಡನ ಮನೆಯಲ್ಲಿ ಆದರವನ್ನು ಪಡೆದಿರುತ್ತಾಳೆ. ಗಂಡ ಕೆಟ್ಟ ಸಹವಾಸದಲ್ಲಿ ಬಿದ್ದು ಮನೆಯ ಸಂಪತ್ತನ್ನೆಲ್ಲಾ ಕರಗಿಸಿದಾಗ ಅದು

ತನ್ನ 'ಅದೃಷ್ಟ'ವೆಂದು ಭಾವಿಸಿ ಗಂಡನನ್ನು ಪ್ರತಿಭಟಿಸದೆ ಕಷ್ಟವನ್ನು ಅನುಭವಿಸುತ್ತಾಳೆ. ದುಷ್ಟವ್ಯಕ್ತಿಯೊಬ್ಬನ ಕುಟಿಲತೆ ಪರಿಣಾಮವಾಗಿ ಅವಳು ಕಾಡಿನ ಪ್ರದೇಶದಲ್ಲಿ ಒಂಟಿಯಾಗಿ ಜೀವನ ಕಳೆಯಬೇಕಾಗುತ್ತದೆ. ಅವಳ ಕಷ್ಟಸಹಿಷ್ಣುತೆ, ತ್ಯಾಗದ ಜೀವನ ಮನೋರಮೆಯಂತಹ ವೇಶ್ಯಾ ಮನಸ್ಸನ್ನು ಕರಗಿಸಿ, ಅವಳ ಮನಃಪರಿವರ್ತನೆಗೆ ಕಾರಣವಾಗುತ್ತದೆ. ಕಳೆದುಹೋದ ಹೆಂಡತಿಯನ್ನು ಎಲ್ಲವನ್ನು ಕಳೆದ ಪರಿಸ್ಥಿತಿಯಲ್ಲಿದ್ದ ಗಂಡ ಮರಳಿಪಡೆದಾಗ, ಅವಳ ತ್ಯಾಗಮಯೀ ಜೀವನದಿಂದ ಅವಳು ಅವನ ಮಾತಿನಿಂದ 'ದೇವಿ' ಎನಿಸಿಕೊಳ್ಳುತ್ತಾಳೆ.

'ಮರಳಿಮಣ್ಣಿಗೆ' ಕಾದಂಬರಿಯ ಸರೋಸತಿ, ಪಾರೋತಿಯರಿಗೆ ಬದುಕಿನಲ್ಲಿ ಯಾವ ಸುಖವೂ ಇರುವುದಿಲ್ಲ. ದುಡಿಮೆಯನ್ನು ಬದುಕನ್ನಾಗಿ ಮಾಡಿದ ಸ್ತ್ರೀಯರು ಇವರಿಬ್ಬರು. ಈ ಕಾದಂಬರಿಯುಸತ್ಯಭಾಮೆ, ನಾಗವೇಣಿಯರೂ ದುಃಖಿತರೇ.

ಸತ್ಯಭಾಮೆಯ ಮಗ, ನಾಗವೇಣಿಯ ಗಂಡ ಲಚ್ಚ ಹೆಂಡತಿ ಮಕ್ಕಳನ್ನು ನಿರ್ಗತಿಕರನ್ನಾಗಿ ಮಾಡಿ ಊರುಬಿಟ್ಟಾಗ, ಮನೆಯ ಹೆಂಗಸರು ಪಡಬಾರದ ಕಷ್ಟಕ್ಕೆ ಗುರಿಯಾಗುತ್ತಾರೆ. ಮನೆ ಜವಾಬ್ದಾರಿ ಮನೆಯವರ ಆರೈಕೆ, ಮಗುವಿನ ಪೋಷಣೆ ಮೊದಲಾದ ಜವಾಬ್ದಾರಿಗಳಿಂದ ನಾಗವೇಣಿಯ ಬದುಕು ಒಂಟಿತನದಲ್ಲಿಯೇ ಕಳೆಯುತ್ತದೆ. ಒಂಟಿತನ , ದುಡಿಮೆ ಮತ್ತು ಕರ್ತವ್ಯಗಳು ಸ್ತ್ರೀವ್ಯಕ್ತಿತ್ವದ ಒಂದು ಭಾಗವಾಗಿಯೇ ಕಾದಂಬರಿಯುದ್ದಕ್ಕೂ ನಿರೂಪಿಸಲ್ಪಟ್ಟಿದೆ.

'ಕನ್ಯಾಬಲಿ'ಯ ಮಾಲತಿ ಮತ್ತು 'ಹೆತ್ತಾಳಾತಾಯಿ'ಯ ಕುಸುಮ ವಿವಾಹೇತರ ಸಂಬಂಧವನ್ನು ಇಟ್ಟುಕೊಳ್ಳುವ ಸ್ತ್ರೀಯರು. ಮಾಲತಿ ವಿಧವೆ. ಬಾಲವಿಧವೆಯಾಗಿ, ಮದುವೆಗೆ ಆತುರಪಟ್ಟು ಬಯಕೆ ಈಡೇರದಾಗ ಉದರ ನಿರ್ವಹಣೆಗೆ ವೇಶ್ಯೆಯಾಗಿ, ತನ್ನಿಂದ ಯಾರಿಗೂ ತೊಂದರೆಯಾಗಬಾರದೆಂಬ ಬಯಕೆಯಿಂದ ಎಲ್ಲಾ ಸಂಬಂಧಗಳನ್ನೂ ಕಳದುಕೊಂಡು ಕೊನೆಗೆ ಮಾಲತಿ ತನ್ನ ಬದುಕಿಗೆ ಹೇಸಿ ಜೀವ ಕಳೆದುಕೊಳ್ಳುತ್ತಾಳೆ ವಿಧವೆಯಾದ ಮಾಲತಿ ಗರತಿತನವನ್ನು ಮತ್ತೆ ಪಡೆಯುವ ಹಂಬಲದಲ್ಲಿ ಸೋತುಹೋಗುತ್ತಾಳೆ. ಹುಟ್ಟಿದ ಮಗುವಿಗೆ ಸಮಾಜದಲ್ಲಿ ಸ್ಥಾನ ಕಲ್ಪಿಸಲು ಸೋತುಹೋಗುತ್ತಾಳೆ. ಕುಸುಮ ಗಂಡನಿದ್ದೂ ಸ್ನೇಹಿತನ ಸಹಕಾರದಿಂದ ಮಕ್ಕಳನ್ನು ಪಡೆಯುತ್ತಾಳೆ.ಅಧುನಿಕ ಮನೋಭಾವವನ್ನು ಬೆಳೆಸಿಕೊಂಡ ಕುಸುಮ ಗಂಡನ ಕೊನೆಕಾಲದಲ್ಲಿ ತನ್ನ ವರ್ತನೆಗೆ ಹೇಸಿಕೊಂಡು, ಪಶ್ಚಾತ್ತಾಪಪಟ್ಟುಕೊಂಡು ಗಂಡನ ಸೇವೆಯಲ್ಲಿ ನಿರತಳಾಗಿ ಅವರ ಪಾದಸೇವೆ ಮಾಡುತ್ತಾಳೆ. ಗಂಡನ ಸಾವು ಅವಳಿಗೆ ಅಘಾತಕರವಾಗುತ್ತದೆ. ಕಾರಂತರ ಕಾದಂಬರಿಗಳ ಭಾಗ್ಯಲಕ್ಷ್ಮಿ, ಮನೋರಮೆ, ಕುಸುಮ, ನಾಗವೇಣಿ, ಪಾರೋತಿ, ಸರಸೋತಿ, ಸತ್ಯಭಾಮೆ, ಮಾಲತಿ ಮುಂತಾದವರು ಕಷ್ಟಸಹಿಷ್ಣತೆ ಮತ್ತು ಸಹನಾಶೀಲತೆಯನ್ನು ಜೀವನದಲ್ಲಿ ರೂಢಿಸಿಕೊಂಡವರು. ಸೇವೆ ಮತ್ತು ತ್ಯಾಗದ ಮೂಲಕ ತಮ್ಮ ಬದುಕನ್ನು ಇನ್ನೊಬ್ಬರಿಗಾಗಿ ಮುಡಿಪಾಗಿಡುವವರು. ತಾಯ್ತನ ಮತ್ತು ವಿಧೇಯ ಪತ್ನಿತ್ವ ಇವರ ಮೂಲಗುಣಗಳು.ಅ.ನ.ಕೃ ಕಾದಂಬರಿಗಳಲ್ಲಿಯೂ ಗೃಹಿಣಿಯರ ಸ್ವರೂಪವು ಮೇಲಿನ ಅಂಶಗಳನ್ನೇ ರೂಢಿಸಿಕೊಂಡಿದೆ.

ಗಂಡ, ಮನೆ, ಮಕ್ಕಳನ್ನು ತನ್ನ ಜೀವನದ ಕೇಂದ್ರವಾಗಿಟ್ಟು ಸಮರ್ಪಣಾಭಾವದಿಂದ ಬದುಕುವ ಗೃಹಿಣಿಗೆ ಇವರ ಕಾದಂಬರಿ ಪ್ರಧಾನ ಸ್ಥಾನವನ್ನು ನೀಡಿದೆ. ಗೃಹವನ್ನು ಕಟ್ಟಿ ಬೆಳೆಸುವಲ್ಲಿ ತನ್ನ ಸಾಧನೆಯನ್ನು ಗುರುತಿಸುವ ಹೆಣ್ಣು ಇವರಿಗೆ ಮುಖ್ಯರಾಗುತ್ತಾರೆ. 'ದೈವಭಕ್ತಿ ಮತ್ತು ಸಾತ್ವಿಕ ಮನೋಧರ್ಮದ ಹೆಣ್ಣು ನಿಜವಾದ ಹೆಣ್ಣಾಗಿದ್ದಾಳೆ'

ಎಂಬ ಭಾವನೆಯನ್ನು ಅ.ನ.ಕೃ ಕಾದಂಬರಿಯ ಪಾತ್ರಚಿತ್ರಣ ವಿವರಿಸುತ್ತದೆ. ೧೯೪೦ರಲ್ಲಿ ಪ್ರಕಟವಾದ 'ಮಂಗಳ ಸೂತ್ರ' ಕಾದಂಬರಿಯಿಂದ ಹಿಡಿದು ನಂತರದ ಎರಡು ದಶಕಗಳಲ್ಲಿ ಬಂದಿರುವ ಬಹುತೇಕ ಕಾದಂಬರಿಗಳಲ್ಲಿ 'ಗೃಹಿಣಿ'ಯ ಚಿತ್ರಣವಿದೆ. ಹೆಣ್ಣಿನ ಗೃಹಿಣಿ ಜೀವನದ ಶ್ರದ್ಧೆ, ಕರುಣೆ, ವಿಶ್ವಾಸ ಮತ್ತು ಪ್ರಾಮಾಣಿಕತೆಗಳಂಥ, ಮೌಲ್ಯಗಳ ಸಮಷ್ಟಿತನದ ಪರಿಪೂರ್ಣ ಚಿತ್ರವನ್ನು 'ಗೃಹಲಕ್ಷ್ಮಿ' ನೀಡುತ್ತದೆ. ದೈವಿಕತೆ ಮತ್ತು ಗೃಹಕರ್ತವ್ಯಗಳನ್ನು ಹೆಣ್ಣಿಗೆ ಆರೋಪಿಸಿರುವ ಅ.ನ.ಕೃ ಹೆಣ್ಣನ್ನು ಅಧ್ಯಾತ್ಮಿಕತೆಯ ಪ್ರತೀಕವಾಗಿ ಕಾಣುತ್ತಾರೆ. ಕಷ್ಟನಷ್ಟಗಳಿಗೆ, ದುರಂತ-ದುಃಖಗಳಿಗೆ ಈಡಾಗುವ, ಶೋಷಣೆಯ ನೋವನ್ನು ಅನುಭವಿಸುವ ನೂರಾರು ಸ್ತ್ರೀಯರು ಅ.ನ.ಕೃ ಕಾದಂಬರಿಗಳಲ್ಲಿ ಕಾಣುತ್ತಾರೆ. ಮಾತೆ, ಮಾಡದಿ, ಪ್ರೇಯಸಿ ಮತ್ತು ವೇಶ್ಯೆಯರ ಸಾಮಾಜಿಕ ಪಾತ್ರವನ್ನು ಈ ಸ್ತ್ರೀಯರು ಪ್ರತಿನಿಧಿಸುತ್ತಾರೆ.

ಪುರುಷನ ಸಾಧನೆಗೆ, ಸಿದ್ಧಿಗಳಿಗೆ, ಪ್ರಯತ್ನಗಳಿಗೆ ನೆರವಾಗುವ ವಾತಾವರಣವನ್ನು ಕಲ್ಪಿಸುವ, ಗೃಹಶಾಂತಿಯನ್ನು ಕಾಪಾಡುವ ಈ ಹೆಂಗಸರು ಪುರುಷಪರ ನಿಲುವನ್ನು ಎತ್ತಿ ಹಿಡಿಯುತ್ತಾರೆ. ಸ್ತ್ರೀ ವ್ಯಕ್ತಿತ್ವದ ಒಂದು ಮುಖವನ್ನಷ್ಟೇ ಕಾಣಿಸುವ ಅ.ನ.ಕೃ ಹೆಣ್ಣಿನ ಇನ್ನೊಂದು ಮುಖದ ಕುರಿತು ದಿವ್ಯವಾದ ನಿರಾಸಕ್ತಿಯನ್ನು ತೋರಿಸುತ್ತಾರೆ. ಕಲಾವಿದರನ್ನು ಅಪಾರವಾದ ಶ್ರದ್ಧೆ ಮತ್ತು ಕಾಳಜಿಪೂರ್ವಕವಾಗಿ ಚಿತ್ರಿಸುವ ಅ.ನ.ಕೃ ಕಲಾವಿದೆಯರ ಜೀವನ ಚಿತ್ರಣದಲ್ಲಿ ಪೂರ್ಣತೆಯನ್ನು ಸಾಧಿಸಲು ಅಸಮರ್ಥರಾಗುತ್ತಾರೆ. 'ಉದಯರಾಗ', 'ಸಂಧ್ಯಾರಾಗ'ದ ಪರಿಪೂರ್ಣತೆ 'ಭುವನಮೋಹಿನಿ' ಮತ್ತು 'ಹೊನ್ನೇಮೊದಲು' ಕಾದಂಬರಿ ಪಡೆದಿಲ್ಲ.

ಹೆಣ್ಣು ಗೃಹಲಕ್ಷ್ಮಿಯಾಗಿರುವ ತನಕ ಆಕೆಯ ಶೀಲ, ಪಾತಿವ್ರತ್ಯಕ್ಕೆ ರಕ್ಷೆ, ಕಲಿತ ಅಥವ ಸಾಧನಾ ನಿರತಳಾಗಿ ಅಕೆ ಹೊಸಿಲು ದಾಟಿದರೆ ಅವಳ ಶೀಲ, ಪಾವಿತ್ರ್ಯತೆಗೆ ಕಳಂಕ ತಗಲುವುದು ಖಂಡಿತ ಎನ್ನುವ ಖಚಿತ ನಿಲುವನ್ನು 'ಹೊಸಲು ದಾಟಿದ ಹೆಣ್ಣು' ವಿವರಿಸುತ್ತದೆ. ವಿವಿಧ ಕೌಟುಂಬಿಕ ಸ್ಥಾನಗಳ ಪ್ರತೀಕವಾಗಿರುವ ತಾಯಿ, ಅತ್ತೆ, ಪತ್ನಿ, ಗೃಹಿಣಿ, ಮಗಳು ಮುಂತಾದ ಸ್ತ್ರೀಯರಿಗೆ ಅ.ನ.ಕೃ ಕಾದಂಬರಿ ಅವಕಾಶ ನೀಡಿದೆ. ಅದರ್ಶ ಸತೀತ್ವದ ಮಾದರಿ ಈ ಎಲ್ಲ ಪಾತ್ರಚಿತ್ರಣದ ಹಿನ್ನೆಲೆಯಲ್ಲಿ ಕಾರ್ಯವೆಸಗುತ್ತದೆ.

ಸರಸ್ವತಿ ರಾಜವಾಡೆ, ಶ್ಯಾಮಲದೇವಿ ಬೆಳ್ ಗಾವಂಕರ್‌ರ ಸಣ್ಣಕತೆಗಳು, ಕುವೆಂಪುರವರ 'ಕಾನೂರುಹೆಗ್ಗಡತಿ', ಕಾರಂತರ 'ಚೋಮನದುಡಿ', ಪರಿಸ್ಥಿತಿಯ ಕೈಗೊಂಬೆಯಾಗಿ ಅಸಹಾಯಕ ಸ್ಥಿತಿಯಲ್ಲಿರುವ ಕೆಳವರ್ಗದ ಮತ್ತು ಕೆಳಜಾತಿಯ ಹೆಣ್ಣುಗಳ ಚಿತ್ರಣವನ್ನು ನೀಡುತ್ತವೆ. ಪಾರಂಪರಿಕ ಮೌಲ್ಯದ ಆರೋಪಣ ಇಲ್ಲವಾದರೂ ಪಾರಂಪರಿಕ ಯಜಮನ - ಸಂಸ್ಕೃತಿಯ ನಿರ್ಬಂಧದಲ್ಲಿ ಅಸಹಾಯಕರಾಗಿರುವ ಈ ಹೆಣ್ಣುಗಳು ತಾವು ಹೆಣ್ಣೆಂಬ ಕಾರಣದಿಂದಲೇ ನೋವನ್ನು ಅನುಭವಿಸುತ್ತಾರೆ.

ಸರಸ್ವತಿಬಾಯಿ ರಾಜವಾಡೆಯವರ 'ಅಹುತಿ ಇತ್ಯಾದಿ ಕತೆಗಳು', 'ಸಂಕಲನದ ಕತೆಗಳು', ಶ್ಯಾಮಲಾದೇವಿಯವರ 'ಕಂತಿಯದೇಶಾಂತರ', 'ತಾಯಿಮತಾಯಿ', 'ಕರುಳಕತ್ತರಿ', 'ದೊಡ್ಡಮ ನೋಡಿದ ವರ' ಮೊದಲಾದ ಕತೆಗಳಲ್ಲಿ ಆರ್ಥಿಕವಾಗಿ ಮತ್ತು ಲೈಂಗಿಕವಾಗಿ ಶೋಷಣೆಗೆ ಒಳಗಾಗುವ ಸ್ತ್ರೀಯರು ಇದ್ದಾರೆ. 'ಕಾನೂರು ಹೆಗ್ಗಡಿತಿಯ' ಸುಬ್ಬಮ್ಮ ಹರೆಯದ ಹೆಣ್ಣು. ಅವಳಿಗೆ ಪ್ರಾಯಕ್ಕೆ ತಕ್ಕ ಸುಖದ ಕಲ್ಪನೆಗಳು ಮೊಳೆಯುತ್ತಿರುವ ಸಂದರ್ಭದಲ್ಲಿಯೇ

ಚಂದ್ರಯ್ಯನಂತಹ ವಯಸ್ಸಾದವನೊಡನೆ ವಿವಾಹವಾಗುತ್ತದೆ. ಬಡತನ ಮತ್ತು ಅಸಹಾಯಕತೆಯಿಂದ ಮೂರನೇ ಹೆಂಡತಿಯಾದ ಸುಬ್ಬಮ್ಮ, ಕೌಟುಂಬಿಕ ಕಲಹ, ಲೈಂಗಿಕ ದಾಸ್ಯ ಮತ್ತು ದೈಹಿಕ ಹಿಂಸೆಗಳನ್ನು ದಾಂಪತ್ಯಜೀವನದಲ್ಲಿ ಪಡೆಯಬೇಕಾಗುತ್ತದೆ. ತಾನಿರುವ ಸ್ಥಿತಿಯಿಂದ ಪಲಾಯನ ಪಡೆದರೂ, ಮತ್ತೆ ಅದೇ ಬದುಕಿಗೆ ಅವಳು ಹಿಂತಿರುಗುವಂತಾಗುತ್ತದೆ. ಸುಬ್ಬಮ್ಮನನ್ನು ಲೈಂಗಿಕವಾಗಿ ಶೋಷಣೆಗೆ ಒಳಪಡಿಸುವ ಚಂದ್ರಯ್ಯ,ಶೇರೆಗಾರರಂತಹವರು, ಮೂಕಸಾಕ್ಷಿಯಾಗಿ ನಿಂತುಕೊಳ್ಳುವ ರಾಮಯ್ಯ, ಹೂವಯ್ಯ, ಅವಳನ್ನು ಈ ಪರಿಸ್ಥಿತಿಗೆ ಈಡು ಮಾಡಿದ ಅವಳು ಹೆತ್ತವರು,ಅವಳ ಬದುಕಿದ ಪರಿಸರ ಎಲ್ಲವೂ ಕೂಡಿ ಅವಳ ದುರಂತಕ್ಕೆ ಕಾರಣವಾಗುತ್ತಾರೆ. 'ಚೋಮನದುಡಿ'ಯ ಬೆಳ್ಳಿಯೂ ತಾನು ಕೆಳವರ್ಗದಲ್ಲಿ ಹುಟ್ಟಿದ ಕಾರಣದಿಂದ ಮತ್ತು ಬಡತನ ಮತ್ತು ಹೆಣ್ಣಾದ ಅಸಹಾಯಕಸ್ಥಿತಿಯಿಂದ ಮಿಂಗಿಲದೊರೆ, ಮನವೇಲ ಮೇಸ್ತ್ರೀಯಂತಹ ಆರ್ಥಿಕವಾಗಿ ಸಬಲವರ್ಗವೆನಿಸುವವರಿಂದ ಅತ್ಯಾಚಾರಕ್ಕೆ ಒಳಗಾಗುತ್ತಾಳೆ. ಪರಿಸ್ಥಿತಿಯ ಅರಿವು ಮೂಡಿ ಪಲಾಯನ ಮಾಡಿದರೂ ಮನವೇಲನಂತಹವರು ಅವಳನ್ನು ಬೇಟೆಯಾಡಲು ಹೊಂಚು ಹಾಕಿಕೊಂಡೇ ಇರುತ್ತಾರೆ.

ವಿವಿಧ ರೀತಿಯ ಶೋಷಣೆಗೆ ಒಳಪಡುವ ಈ ಲೈಂಗಿಕ ಮಾದರಿಗಳಲ್ಲಿ ಪಲಾಯನವನ್ನು ಬಿಟ್ಟರೆ ಅನ್ಯ ಪ್ರತಿಭಟನಾ ಮಾರ್ಗಗಳನ್ನು ಸಾಹಿತ್ಯ ಸೂಚಿಸುವುದಿಲ್ಲ.

ನಿರ್ದಿಷ್ಟ ಮೌಲ್ಯಗಳನ್ನು ಮತ್ತು ನಿರ್ದಿಷ್ಟ ಗುಣಗಳನ್ನು ಪ್ರತಿನಿಧಿಸುವ ಸ್ತ್ರೀ ಮಾದರಿಯನ್ನು ಹೊರತು ಪಡಿಸಿ ಈ ಅವಧಿಯಲ್ಲಿ ಬಂದಿರುವ ಕೆಲವು ಕಾದಂಬರಿಗಳು ಸ್ವತಂತ್ರ ಪ್ರವೃತ್ತಿ ಮತ್ತು ವ್ಯಕ್ತಿತ್ವ ವಿಕಾಸದತ್ತ ತುಡಿಯುವ ಕೆಲವು ಪಾತ್ರಗಳನ್ನು ಸೃಷ್ಟಿಸಿವೆ. ಗುಲವಾಡಿಯವರ 'ಇಂದಿರಾಬಾಯಿ', ಕಾರಂತರ 'ಸರಸಮ್ಮನ ಸಮಾಧಿ' ಮತ್ತು ಬೋಳಾರರ 'ವಾಗ್ದೇವಿ' ಕಾದಂಬರಿಯ ಸ್ತ್ರೀಪಾತ್ರಗಳು ಪರಂಪರಾಗತ ಮೌಲ್ಯಗಳಿಗಿಂತ ಭಿನ್ನ ಸ್ವಭಾವದವರಾಗಿದ್ದಾರೆ.

ಗುಲವಾಡಿಯವರ 'ಇಂದಿರಾಬಾಯಿ' ಕಾದಂಬರಿಯ ಇಂದಿರೆ ಬಾಲವಿಧವೆ. ಎಂಟು ವರ್ಷದವಳಿದ್ದಾಗಲೇ ವಿವಾಹವಾದ ಇಂದಿರೆ ಗಂಡ ವಿಷಯಲಂಪಟನಾಗಿ ಅಕಾಲ ಮರಣವನ್ನು ಹೊಂದುತ್ತಾನೆ. ಸಂಪ್ರದಾಯಸ್ಥ ಮನೋಭಾವದ ತಂದೆ ತಾಯಿ ಇಂದಿರೆಯ ಮನಸ್ಸನ್ನು ಅಧ್ಯಾತ್ಮಕತೆಯತ್ತ ಸೆಳೆಯಲು ಪ್ರಯತ್ನಿಸುತ್ತಾರೆ. ಪುರಾಣ ಪ್ರವಚನಗಳನ್ನು ನಡೆಸಿ ಮಗಳ ಮನಸ್ಸನ್ನು ಧಾರ್ಮಿಕ ವಿಚಾರಗಳತ್ತ ಸೆಳೆಯಲು ಪ್ರಯತ್ನಿಸುತ್ತಾರೆ.

ಆಧುನಿಕ ವಿಚಾರಗಳನ್ನು ತಿಳಿದುಕೊಂಡ ಇಂದಿರೆ ಓದಿನಲ್ಲಿ ಆಸಕ್ತಳಾಗುತ್ತಾಳೆ. ವ್ಯಕ್ತಿತ್ವ ವಿಕಾಸಕ್ಕೆ ಓದು ಸಹಕಾರಿ ಎನ್ನುವ ಭಾವದ ಇಂದಿರೆ ತನ್ನ ಓದಿಗೆ ಅಡ್ಡಿಪಡಿಸಿದ ತಾಯಿ ಅಂಬಾಬಾಯಿಯೊಡನೆ ವಾದ ಮಾಡುತ್ತಾಳೆ. ಸಂತಮಂಡಳಿ ನಾಯಕ ಅತ್ಯಾಚಾರಕ್ಕೆ ಮುಂದುವರಿದಾಗ ತಪ್ಪಿಸಿಕೊಂಡ ಇಂದಿರೆ, ಅಮೃತರಾಯ ದಂಪತಿಗಳ ಆಶ್ರಯ ಪಡೆದು, ನಂತರ ದೂರದ ಸತಾರಾದಲ್ಲಿ ಪಂಡಿತ ಆನಂದಿಬಾಯಿಯ ಸರಸ್ವತಿ ಮಂದಿರದಲ್ಲಿದ್ದು ಓದು ಮುಂದುವರಿಸುತ್ತಾಳೆ. ವಿದ್ಯಾವಂತ ಯುವಕ ಭಾಸ್ಕರನೊಡನೆ ಅವಳ ವಿವಾಹವೂ ನಡೆಯುತ್ತದೆ.

ಇಂದಿರೆಯಲ್ಲಿರುವ ಆಧುನಿಕ ಮನೋಬಾವ, ಜ್ಞಾನದ ಅರಿವಿನ ಕುರಿತು ತಿಳುವಳಿಕೆ, ವೈಧವ್ಯವನ್ನು ಸಹಜವಾಗಿ ಸ್ವೀಕರಿಸುವ ವಾಸ್ತವ ಪ್ರಜ್ಞೆ ಮತ್ತು ತಾನಿದ್ದ ಪರಿಸ್ಥಿತಿಯ ಗಂಭೀರತೆಯನ್ನು ಅರಿತಾಗ ಪಾರಾಗುವ ಸಮಯಪ್ರಜ್ಞೆ

- ಇವುಗಳ ಮೂಲಕ ಇಂದಿರೆ ಪಾತ್ರವು ಸ್ವತಂತ್ರ ವ್ಯಕ್ತಿತ್ವರೂಪವನ್ನು ತಾಳಿದೆ. ಬಾಬುರಾವ್ ಬೋಳಾರರ 'ವಾಗ್ದೇವಿ' ಪಾತ್ರ ವಿಭಿನ್ನ ರೀತಿಯದು.

ವಾಗ್ದೇವಿ ಸಮಾಜದ ಮೇಲುಜಾತಿಗೆ ಸೇರಿದ ಹೆಣ್ಣು, ವಿವಾಹಿತೆ, ತಂದೆತಾಯಿ, ಗಂಡನೊಡನೆ ಬಡತನದ ಬದುಕನ್ನು ಸವೆಸುತ್ತಿದ್ದವಳು. ವಾಗ್ದೇವಿ ಗಂಡ ನಿಷ್ಪ್ರಯೋಜಕ ವ್ಯಕ್ತಿ. ಉಣ್ಣುವುದಲ್ಲದೆ ಅವನಿಗೆ ಇತರ ವಿಚಾರಗಳ ಕಡೆ ಗಮನವಿರುವುದಿಲ್ಲ. ವಾಗ್ದೇವಿ ಸೌಂದರ್ಯಕ್ಕೆ ಮೋಹಿತರಾದ ಮಠಾಧೀಶ ಚಂಚಲನೇತ್ರರು ಅವಳಲ್ಲಿ ಸಂಬಂಧಕ್ಕೆ ಆಸಕ್ತರಾಗುತ್ತಾರೆ. ಬಡತನ ಮತ್ತು ದಾಂಪತ್ಯದ ಅಸುಖದ ಕಾರಣದಿಂದ ವಾಗ್ದೇವಿ ಚಂಚಲನೇತ್ರರ ಸಂಬಂಧವನ್ನು ಒಪ್ಪಿಕೊಳ್ಳುತ್ತಾಳೆ. ವಾಗ್ದೇವಿ ಮಠಾಧಿಪತಿಯೊಡನೆ ನಡೆಸುವ ಸಂಧಾನ, ಭವಿಷ್ಯದ ಕುರಿತು ಅವಳಿಗಿರುವ ದೂರಾಲೋಚನೆಗಳು, ನಂತರ ನಡೆಯುವ ಅನೇಕ ಘಟನೆಗಳು ಅವಳ ವ್ಯಕ್ತಿತ್ವದ ಎಲ್ಲಾ ಆಯಮಗಳನ್ನು ತೆರೆಯುತ್ತಾ ಹೋಗುತ್ತದೆ. ವಾಗ್ದೇವಿ ತನ್ನ ಸ್ತ್ರೀತನದ ಮೂಲಕವೇ ತನಗೆದುರಾದ ಸಮಸ್ಯೆಗಳನ್ನೆಲ್ಲಾ ಬಿಡಿಸುತ್ತಾ ಹೋಗುತ್ತಾಳೆ. ಹಲವು ರೀತಿಯ ಕಷ್ಟನಷ್ಟಗಳಿಗೆ ಒಳಗಾದರೂ ವಾಗ್ದೇವಿ ಕೊನೆಯವರೆಗೆ ಹೋರಾಟವನ್ನೇ ನಡೆಸುತ್ತಿರುತ್ತಾಳೆ. ನೆಲೆತಪ್ಪಿದರೂ, ಕಾದಂಬರಿ ಕೊನೆಗೆ ಅವಳು ಮಗನನ್ನು ಸೇರಿ ನೆಮ್ಮದಿ ಪಡೆಯುತ್ತಾಳೆ.

'ಕಾನೂರು ಹೆಗ್ಗಡಿತಿ'ಯ ಸೀತೆ ಅಮಾಯಕಳು. ಗ್ರಾಮೀಣ ಪರಿಸರದಲ್ಲಿ ಕೌಟುಂಬಿಕ ಚೌಕಟ್ಟಿನೊಳಗೆ ಬೆಳೆದ ಸೀತೆಗೆ ಹೊರಗಿನ ಪ್ರಪಂಚದ ಅರಿವು ಇರುವುದಿಲ್ಲ. ಹೂವಯ್ಯನ ಮೂಲಕವೇ ಅಷ್ಟಿಷ್ಟು ತಿಳುವಳಿಕೆಯನ್ನು ಪಡೆದ ಸೀತೆಯ ಬಾಳಿನಲ್ಲಿ ಅವಳ ಇಷ್ಟಕ್ಕೆ ವಿರುದ್ಧವಾಗಿ ಅನೇಕ ಘಟನೆಗಳು ನಡೆಯುತ್ತವೆ. ಕೃಷ್ಣೇಗೌಡ, ರಾಮಯ್ಯನಂತಹ ವ್ಯಕ್ತಿಗಳೊಡನೆ ಅವಳ ವಿವಾಹ ಸಂಬಂಧ ಕೂಡಿಬರುತ್ತದೆ. ತನ್ನ ಮನಸ್ಸಿಗೆ ವಿರೋಧವಾಗಿ ನಡೆಯುವ ಘಟನೆಗಳಿಗೆ ಪ್ರತಿರೋಧ ವ್ಯಕ್ತಪಡಿಸಲು ಅಸಮರ್ಥಳಾದ ಸೀತೆ ದೈಹಿಕವಾಗಿ ಮಾನಸಿಕವಾಗಿ ಅಸ್ವಸ್ಥಳಾಗುವ ಮೂಲಕ ತನ್ನ ಮನಸ್ಸಿನ ಭಾವಗಳಿಗೆ ಮೂರ್ತಸ್ವರೂಪ ನೀಡುತ್ತಿರುತ್ತಾಳೆ. ಚಂದ್ರಯ್ಯನಂತಹ ಪಾಳೆಗಾರಿಕೆ ವ್ಯಕ್ತಿತ್ವವನ್ನು ಎದುರಿಸಿ ಕೊನೆಗೆ ವಿವಾಹವಾದ ಗಂಡ ಸತ್ತಾಗಲೂ ಧೃತಿಗೆಡದೆ ತನ್ನ ಮನಸ್ಸಿಗೆ ಸರಿಬಂದಂತೆ ಹೂವಯ್ಯನ ಮನೆ ಸೇರಿ ಮುಂದಿನ ದಿನಗಳನ್ನು ಕಳೆಯುವ ವಿಚಾರ ತಳೆಯುತ್ತಾಳೆ.

ಇಂದಿರೆ, ವಾಗ್ದೇವಿ, ಸೀತೆಯಂತಹ ಕೆಲವು ಅಪವಾದಗಳನ್ನು ಬಿಟ್ಟರೆ ಮೊದಲ ಭಾಗದ ಸಾಹಿತ್ಯ ರಚನೆಗಳು ಸ್ತ್ರೀ ಅಭಿವ್ಯಕ್ತಿಯನ್ನು ಪರಂಪರಾಗತ ಚೌಕಟ್ಟಿನೊಳಗೆ ಸೃಷ್ಟಿ ಮಾಡಿವೆ. ಕಾರಂತರ 'ಸರಸಮ್ಮನ ಸಮಾಧಿ'ಯ ಸುನಾಲಿನಿ, ಭಾಗೀರಥಿ, ಸರಸಮ್ಮ ಈ ಚೌಕಟ್ಟನ್ನು ಭೇದಿಸುವ ಮಾದರಿಗಳಾಗಿ ಕಾಣಿಸಿಕೊಳ್ಳುತ್ತಾರೆ.

**ಸ್ವಾತಂತ್ರ್ಯೋತ್ತರ ಸಾಹಿತ್ಯದಲ್ಲಿ ಸ್ತ್ರೀ ಅಭಿವ್ಯಕ್ತಿ:** (೧೯೪೭ ರಿಂದ ಇತ್ತೀಚಿಗಿನವರೆಗಿನ ಕಾಲಾವಧಿ) ಮೊದಲ ಐದು ದಶಕಗಳ ಸಾಹಿತ್ಯವು ಸೃಷ್ಟಿಸಿರುವ ಸ್ತ್ರೀ ಅಭಿವ್ಯಕ್ತಿಗಿಂತ ಭಿನ್ನ ರೀತಿಯಲ್ಲಿರುವ ಸ್ತ್ರೀ ಅಭಿವ್ಯಕ್ತಿಯನ್ನು ಸ್ವಾತಂತ್ರ್ಯೋತ್ತರ ಅವಧಿಯ ಸಾಹಿತ್ಯ ರಚನೆಯಲ್ಲಿ ಕಾಣುತ್ತೇವೆ. ಈ ಕಾಲಾವಧಿಯಲ್ಲಿ ಪ್ರಕಟವಾಗಿರುವ ಬಹುತೇಕ ಕತೆ, ಕಾದಂಬರಿಗಳು ಸ್ತ್ರೀಸ್ವಾತಂತ್ರ್ಯಕ್ಕೆ ಮನ್ನಣೆ ನೀಡಿವೆ. ಸ್ತ್ರೀಸ್ವಾತಂತ್ರ್ಯದಲ್ಲಿ ವೈಯಕ್ತಿಕ ಬಿಡುಗಡೆಯ ಅಂಶಕ್ಕೆ ಆದ್ಯತೆಯನ್ನು ನೀಡಲಾಗಿದ್ದು ವ್ಯಕ್ತಿತ್ವದಲ್ಲಿ ಸ್ವಾಯತ್ತತೆಯನ್ನು ಪಡೆಯುವ ಅಂಶಗಳತ್ತ ಹೆಚ್ಚಿನ ಗಮನ ಹರಿದಿದೆ.

ಮೊದಲ ಎರಡು ದಶಕಗಳಲ್ಲಿ ಬಂದ ಕತೆ ಮತ್ತು ಕಾದಂಬರಿಗಳಲ್ಲಿ ಮಧ್ಯಮವರ್ಗಕ್ಕೆ ಸೇರಿದ, ಮಹತ್ವಾಕಾಂಕ್ಷೆ ಇರುವ ವಿದ್ಯಾವಂತ ಯುವತಿಯರ ಚಿತ್ರಣವಿದೆ. ಹೆಚ್ಚಿನವರು ಅವಿವಾಹಿತೆಯರು. ತಮ್ಮ ಭವಿಷ್ಯವನ್ನು ತಾವೇ ರೂಪಿಸಿಕೊಳ್ಳುವುದರ ಕಡೆ ಗಮನವಿಟ್ಟವರು. ಸ್ವತಂತ್ರ ಬದುಕಿನ ಹಂಬಲ ಇವರಲ್ಲಿ ಮುಖ್ಯವಾಗಿರುತ್ತದೆ. ಕೌಟುಂಬಿಕ ಚೌಕಟ್ಟಿನೊಳಗೆ ಕಾಡುವ ನೋವನ್ನು ನುಂಗಿ ಬಾಳುವುದಕ್ಕಿಂತ ಈ ನೋವನ್ನು ಮೆಟ್ಟಿ, ತನ್ನನ್ನು ತಾನು ಸ್ವತಂತ್ರಗೊಳಿಸುವುದರ ಮೂಲಕ ನೆಮ್ಮದಿ, ಮತ್ತು ಶಾಂತಿಯನ್ನು ಪಡೆಯುವ ಆಶಯ ಇಲ್ಲಿಯದು. ಜೀವನವನ್ನು ಭಾವುಕ ನೆಲೆಯಿಂದ ಗ್ರಹಿಸುವುದಕ್ಕಿಂತ ಹೆಚ್ಚಾಗಿ ವಸ್ತುನಿಷ್ಠವಾಗಿ ಕಾಣುವ ದೃಷ್ಟಿ ಈ ಸ್ತ್ರೀ ಪಾತ್ರಗಳಲ್ಲಿ ಪ್ರಧಾನವಾಗಿದೆ.

ಸ್ವಪ್ರಜ್ಞೆ ಜಾಗೃತವಾಗಿರುವ ಈ ಸ್ತ್ರೀಯರಲ್ಲಿ ವೈಯಕ್ತಿಕ ಬದುಕಿನ ಮೇಲೆ ಹಿಡಿತವಿದೆ. ಬದುಕಿನ ನಿರ್ಧಾರವನ್ನು ಸ್ವತಂತ್ರವಾಗಿ ತೆಗೆದುಕೊಳ್ಳುವ, ಸ್ವಂತಿಕೆಯ ಮೇಲೆ ಭರವಸೆ ಇರುವ ಈ ಸ್ತ್ರೀಯರು ತಮ್ಮ ಬದುಕಿಗೆ ತಾವೇ ಜವಾಬ್ದಾರಿ ಎಂದು ತಿಳಿಯುತ್ತಾರೆ. ಸ್ವಾತಂತ್ರ್ಯೋತ್ತರ ಸಾಹಿತ್ಯದ ಸ್ತ್ರೀ ಅಭಿವ್ಯಕ್ತಿಯ ಮುಖ್ಯ ಲಕ್ಷಣಗಳೆಂದರೆ:

ಆರ್ಥಿಕವಾಗಿ ಸ್ವತಂತ್ರರಾಗುವುದು, ಕುಟುಂಬವ್ಯವಸ್ಥೆ ತೊಡಕಾದರೆ, ಅದನ್ನು ಮೀರಿ ಬಿಡುಗಡೆ ಪಡೆಯುವುದು, ವಿವಾಹ ಬಂಧನವೆನಿಸಿದರೆ ತಿರಸ್ಕರಿಸುವುದು, ಸಂಗಾತಿ ಆಯ್ಕೆಯಲ್ಲಿ ಹೆಚ್ಚಿನ ಸ್ವಾತಂತ್ರ್ಯ, ಮಾನವೀಯ ಸಂಬಂಧಗಳ ಸೂಕ್ಷ್ಮಗ್ರಹಿಕೆ, ತಾಯ್ತನ, ಪತ್ನಿತ್ವವನ್ನು ಪ್ರಕೃತಿ ಸಹಜ ಭಾವದ ಮೂಲಕ ಸ್ವಾಗತಿಸುವುದು ಅಥವಾ ನಿರಾಕರಿಸುವುದು - ಈ ವೈಚಾರಿಕ ಹಿನ್ನಲೆಯಲ್ಲಿ ಸ್ತ್ರೀಪಾತ್ರಗಳನ್ನು ಚಿತ್ರಿಸಲಾಗಿದೆ. ಪುರುಷ ಸ್ವಾಮಿತ್ವದ ಉದ್ಯೋಗಕ್ಷೇತ್ರದ ಪ್ರವೇಶ ಆರ್ಥಿಕ ಕಾರಣಗಳಿಗಿಂತ ಸ್ವಪ್ರಜ್ಞೆಯ ಜಾಗೃತಿ ಮತ್ತು ಸ್ವಾವಲಂಭನ ಜೀವನದ ಹಂಬಲದ ರೂಪದಲ್ಲಿ ಈ ಸ್ತ್ರೀಯರನ್ನು ಕಾಡಿದೆ ಎನ್ನುವುದನ್ನು ಅನೇಕ ಕಾದಂಬರಿಗಳು ವಿವರಿಸುತ್ತವೆ.

ಕೌಟುಂಬಿಕ ಚೌಕಟ್ಟಿನ ಹೊರಗೆ ಹೆಣ್ಣು ತನ್ನ ಸಂಬಂಧಗಳನ್ನು, ಜೀವನ ವಿಧಾನಗಳನ್ನು ಕಂಡುಕೊಳ್ಳುವ ಸಾಧ್ಯತೆಗಳನ್ನು ಈ ಕಾದಂಬರಿಗಳು ಹಲವು ರೀತಿಯಲ್ಲಿ ಅಭಿವ್ಯಕ್ತ ಪಡಿಸಿವೆ. ವಿಮೋಚಿತ ಸ್ತ್ರೀ ಪರಿಕಲ್ಪನೆಯನ್ನು ಕಥನ ಸಾಹಿತ್ಯದ ಐವತ್ತರ ದಶಕದ ನಂತರದ ರಚನೆಗಳು ಕಟ್ಟಿಬೆಳಸಿವೆ ಎಂದು ತಿಳಿಯುವುದು ಸಾಧ್ಯವಿದೆ.

ಸಾಂಸ್ಕೃತಿಕ ಹಿಂಜರಿಕೆಗಳ ಮತ್ತು ಭಾವನಾತ್ಮಕ ಹಿಂತೆಗೆತಗಳ ಮೂಲಕ ಪರಂಪರೆಯನ್ನು ಕಾಯ್ದು ಕೊಂಡು ಬರುವಲ್ಲಿ ನೆಮ್ಮದಿ ಇದೆ ಎಂಬ ಭಾವ ಅನೇಕ ಕೃತಿಗಳಲ್ಲಿ ಸೂಚಿತವಾಗಿದ್ದರೂ, ಅವುಗಳನ್ನು ಮೀರುವುದರಲ್ಲಿ, ಇಲ್ಲವಾಗಿಸುವಲ್ಲಿ ಬಿಡುಗಡೆ ಇದೆ, ಸ್ವಾತಂತ್ರ್ಯ ಇದೆ ಎನ್ನುವ ಕಲ್ಪನೆಯೇ ಇಲ್ಲಿ ಮುಖ್ಯವಾಗುತ್ತದೆ. ಸೀಮೋಲ್ಲಂಘನೆ ಇಲ್ಲಿಯ ಕೆಲವು ಸ್ತ್ರೀಪಾತ್ರಗಳಿಗೆ ಅತ್ಯಂತ ಸಹಜವಾಗಿ ಕಂಡಿದೆ. ಸ್ವಾತಂತ್ರ್ಯೋತ್ತರ ಕಾಲಾವಧಿಯ ಸಾಹಿತ್ಯದಲ್ಲಿ ಕಂಡುಬಂದಿರುವ ಸ್ತ್ರೀ ಪಾತ್ರಗಳ ಮನೋಧರ್ಮವು ಈ ರೀತಿಯದಾಗಿದೆ.

೧. ಸಾಂಪ್ರದಾಯಿಕತೆಯಿಂದ ಬಿಡಿಸಿಕೊಂಡು ವೈಯಕ್ತಿಕ ಸ್ವಾತಂತ್ರ್ಯದ ಮೂಲಕ ಸ್ವ-ಅಭಿವ್ಯಕ್ತಿಗೆ ಅವಕಾಶ ನೀಡುವಿಕೆ.

೨. ಸಾಂಪ್ರದಾಯಿಕತೆಯಿಂದ ಬಿಡಿಸಿಕೊಂಡು ವೈಯಕ್ತಿಕ ಸ್ವಾತಂತ್ರ್ಯವನ್ನು ಪಡೆದರೂ ತಾನು ಬದುಕುವ ಪರಿಸರ ಮತ್ತು ಮಾನವ ಸಂಬಂಧಗಳಲ್ಲಿ ಹೊಂದಾಣಿಕೆಯಲ್ಲಿರುವುದು.

ಈ ಎರಡು ಮನೋಧರ್ಮಕ್ಕೆ ಭಿನ್ನ ರೀತಿಯದಾದ ರೂಢಿಗತ ಮೌಲ್ಯಗಳೊಂದಿಗೆ ಅನುಸಂಧಾನ ಮಾಡಿಕೊಂಡು

ಇರುವ ಮನೋಧರ್ಮದ ಸ್ತ್ರೀಯರೂ ಇಲ್ಲಿ ಇದ್ದಾರೆ. 'ಹೆಣ್ಣಿಗೆ ತನ್ನದೇ ಆದ ಬದುಕು ಮತ್ತು ಭವಿಷ್ಯಜೀವನವಿದೆ. ಅವಳು ಎಲ್ಲರಂತೆ ಆಸೆ, ಆಕಾಂಕ್ಷೆಗಳನ್ನು ವ್ಯಕ್ತ ಪಡಿಸಬಲ್ಲಳು, ಮನಸ್ಸಿನ ಭಾವನೆಗಳಿಗೆ ಅವಕಾಶ ನೀಡಬಲ್ಲಳು, ತನ್ನ ಬದುಕಿನ ಕುರಿತು ನಿರ್ಧಾರವನ್ನು ತೆಗೆದುಕೊಳ್ಳುವ ಹಕ್ಕು ಮತ್ತು ಸ್ವಾತಂತ್ಯ ಪುರುಷನಿಗಿರುವಷ್ಟೇ ಸ್ತ್ರೀಗೂ ಇದೆ'-ಎನ್ನುವ ವೈಚಾರಿಕ ನಿಲುವಿನ ಆಧಾರದಲ್ಲಿ ತನ್ನನ್ನು ತಾನು ಅಭಿವ್ಯಕ್ತಿಸಬಲ್ಲ ಸ್ತ್ರೀ ಮಾದರಿಯನ್ನು ೫೦ರ ದಶಕದ ನಂತರದ ಅನೇಕ ಕತೆ ಕಾದಂಬರಿಗಳು ಚಿತ್ರಿಸಿವೆ. ಪರಂಪರೆ ಮತ್ತು ಸಂಪ್ರದಾಯದ ಆವರಣವನ್ನು ಕಳಚಿಕೊಂಡು ತನ್ನನ್ನು ತಾನು ನಿರ್ವಚಿಸಿಕೊಳ್ಳುವ ಈ ಸ್ತ್ರೀಯು ಎದುರಿಸಬೇಕಾದ ವಿವಿಧ ರೀತಿಯ ಆತಂಕದ ಪರಿಸ್ಥಿತಿಯನ್ನು ಈ ಕತೆಗಳು ವಿವೇಚನೆಗೆ ಗುರಿಪಡಿಸುತ್ತವೆ. ಮನಶ್ಶಾಸ್ತ್ರೀಯ ನೆಲೆಯಲ್ಲಿಯೂ ಹೆಣ್ಣನ್ನು ವಿವರಿಸುವ ಪ್ರಯತ್ನ ಇಲ್ಲಿದೆ. ವಿಮೋಚಿತ ಕಲ್ಪನೆಯನ್ನಾಧರಿಸಿ ಬಂದ ಕೆಲವು ಸ್ತ್ರೀಪಾತ್ರಗಳು ಹೀಗಿವೆ:

ವಿ.ಎಂ. ಇನಾಂದಾರರ 'ಮೋಹಿನಿ' ಕಾದಂಬರಿಯ 'ಮೋಹಿನಿ', ವ್ಯಾಸರಾಯ ಬಲ್ಲಾಳರ 'ಅನುರಕ್ತೆಯ' 'ಸುಮಿತ್ರ', ವಾತ್ಸಲ್ಯಪಥ'ದ' 'ಯಶೋದ' 'ಉತ್ತರಾಯಣದ' ಹೇಮ, ಹೇಮಂತಗಾನ 'ಇಂದಿರೆ', ತ.ರಾ.ಸು.ರವರ 'ಬಿಡುಗಡೆಯಬೇಡಿ'ಯ 'ಪ್ರಭಾವತಿ', ನಿರಂಜನರ 'ಏಕಾಂಗಿನಿ'ಯ 'ಸುನಂದ', ಬೈರಪ್ಪನವರ 'ಅಂಚು'ವಿನ 'ಅಮೃತಾ', 'ತಂತುವಿನ' 'ಕಾಂತಿ'.

ತ್ರಿವೇಣಿಯವರ 'ಮುಕ್ತಿ'ಯ 'ಅಮೃತ', ಅನುಪಮಾರ 'ಆಳದ ಮಾಲಿನಿ', 'ಮಾಧವಿ'ಯ 'ಮಾಧವಿ' 'ಮುಕ್ತಿಚಿತ್ರ'ದ 'ಅಲಕಾ', ಎಂ.ಕೆ. ಇಂದಿರಾರ 'ಫಣಿಯಮ್ಮ'ದ 'ದಾಕ್ಷಾಯಣಿ', ವೀಣಾ ಶಾಂತೇಶ್ವರರ 'ಗಂಡಸರು'ವಿನ ನಾಯಕಿ. ಆಂಶಿಕವಾಗಿ ಈ ಪರಿಕಲ್ಪನೆಯಲ್ಲಿ ಕಾಣಿಸಿಕೊಂಡವರು:

ಚದುರಂಗರ 'ಉಯ್ಯಲೆ'ಯ 'ರಾಧೆ', ಯಶವಂತ ಚಿತ್ತಾಲರ 'ಮೂರುದಾರಿಗಳು'ವಿನ 'ನಿರ್ಮಲ', ಇನಾಂದಾರರ ಶಾಪದ 'ಸರೋಜಿನಿ', ತ್ರಿವೇಣಿಯವರ 'ಅಪಸ್ವರ' - 'ಅಪಜಯ'ದ 'ಮೀರಾ' ವೀಣಾಶಾಂತೇಶ್ವರ 'ಶೋಷಣೆ - ಬಂಡಾಯ ಇತ್ಯಾದಿ'. ಕಾದಂಬರಿ ಸ್ತ್ರೀಪಾತ್ರಗಳು, 'ತಿರುಗಿ ಹೊದವಳು' ವಿನ ಲಕ್ಷ್ಮಿ, 'ಅವಳ ಸ್ವಾತಂತ್ರ್ಯ'ದ 'ವಿಮಲ'.

— ಈ ಪಾತ್ರಗಳು ಆಧುನಿಕ ವಿಚಾರಗಳಿಂದ ಪ್ರಭಾವ ಪಡೆದರೂ ಸಂಪ್ರದಾಯವನ್ನು ಬಿಡಲಾಗದೆ ಬದುಕಿನೊಡನೆ ಹೊಂದಾಣಿಕೆ ಮಾಡಿಕೊಂಡ ಪಾತ್ರಗಳಾಗಿವೆ. ಸ್ತ್ರೀಸ್ವಾತಂತ್ರ್ಯವನ್ನು ಪ್ರತಿಪಾದಿಸುವ ವಿವಿಧ ಕತೆಗಳು ಹೆಣ್ಣಿನ ಸ್ವತಂತ್ರ ವ್ಯಕ್ತಿತ್ವಕ್ಕೆ ಅವಕಾಶ ನೀಡುವ ವಿವಿಧ ರೀತಿಯ ಸಂದರ್ಭಗಳನ್ನು ಸೃಷ್ಟಿಸಿವೆ. ಸ್ತ್ರೀ ಸ್ವಾತಂತ್ರ್ಯವು ಈ ಕೆಳಗಿನ ಸಂದರ್ಭಗಳ ಮೂಲಕ ಅಭಿವ್ಯಕ್ತವಾಗಿದೆ.

೧. ತಾನು ಹುಟ್ಟಿ ಬೆಳೆದ ಪರಿಸರದಿಂದ ದೂರವಾಗಿ, ಹೊಸ ಜಾಗವೊಂದರಲ್ಲಿ ತನ್ನತನವನ್ನು ಹುಡುಕುವ ಪ್ರಯತ್ನ.

೨. ಕೌಟುಂಬಿಕ ಸಂಬಂಧಗಳನ್ನು ತ್ಯಜಿಸಿ ಒಂಟಿಯಾಗಿ ಸ್ವತಂತ್ರವಾಗಿ ಬದುಕುವ ಹಂಬಲ.

೩. ದಾಂಪತ್ಯ ಬದುಕನ್ನು ತೊರೆದು ಹೊಸ ರೀತಿಯ ಬದುಕಿನ ಅವಕಾಶ ಹುಡುಕುವ ಪ್ರಯತ್ನ.

೪. ತನ್ನ ಬದುಕು ತನ್ನದು. ತನ್ನ ಇಚ್ಛೆಗೆ ಅನುಗುಣವಾಗಿ ತನಗೆ ಬದುಕುವ ಸ್ವಾತಂತ್ರ್ಯವಿದೆ ಎಂಬ ಕಲ್ಪನೆಯ ಆಧಾರದಲ್ಲಿ ನಿರ್ಧಾರ ತಳೆಯುವಿಕೆ.

ವಿಮೋಚಿತ ಕಲ್ಪನೆಯಲ್ಲಿ ಬಂದಿರುವ ಅನೇಕ ಸ್ತ್ರೀಪಾತ್ರಗಳು ಹುಟ್ಟೂರಿನಿಂದ ದೂರವಾಗಿ ಬೆಂಗಳೂರು, ಮುಂಬೈ ಅಥವಾ ದೆಹಲಿಯಂಥ ಮಹಾನಗರವನ್ನು ಪ್ರವೇಶ ಮಾಡುತ್ತವೆ. ಪ್ರಭಾವತಿ ಮತ್ತು ಸುನಂದ ತಮ್ಮ ಭವಿಷ್ಯ ಜೀವನಕ್ಕೆ ಬೆಂಗಳೂರನ್ನು ಆರಿಸಿದರೆ, ಮೋಹಿನಿ, ಸುಮಿತ್ರೆ, ಯಶೋದಾ, ಇಂದಿರೆಯರಿಗೆ ಮುಂಬೈ ನಗರದ ಮಿಶ್ರ ಸಂಸ್ಕೃತಿ ಸೂಕ್ತ ವೇದಿಕೆಯೆನಿಸಿದೆ. ಮಹತ್ವಾಕಾಂಕ್ಷೆಯ ಕಾಂತಿ ದೆಹಲಿಯಲ್ಲಿ, ಅಮೃತ ಮೈಸೂರಿನಲ್ಲಿ ತಮ್ಮ ಭವಿಷ್ಯದ ಜೀವನವನ್ನು ನಿರ್ಧರಿಸುತ್ತಾರೆ. ಮೋಹಿನಿ, ಕಾಂತಿಯರಿಗೆ ದಾಂಪತ್ಯದಲ್ಲಿ ಹುಸಿಯಾದ ನಂಬಿಕೆಗಳ ಕಾರಣದಿಂದ ಒಂಟಿ ಬದುಕು ಪ್ರಿಯವಾಗಿದೆ. ಸುಮಿತ್ರೆ, ಯಶೊದಾ, ಪ್ರಭಾವತಿ ತಮ್ಮ ಬದುಕನ್ನು ತಾವೇ ರೂಪಿಸಿಕೊಳ್ಳುವ ಹಂಬಲವನ್ನು ಹೊತ್ತು ನಡೆದವರು.

ಗ್ರಾಮೀಣ ಬದುಕನ್ನು ಕೇಂದ್ರವಾಗಿಟ್ಟುಕೊಂಡು ಬರೆದ ಕಾದಂಬರಿಗಳ ನಾಯಕಿಯರು ಕೂಡಾ ತಮ್ಮತನದ ಅರಿವನ್ನು ಮೂಡಿಸುವ ಆತ್ಮವಿಶ್ವಾಸದ ನಡವಳಿಕೆ ತೋರಿಸುತ್ತಾರೆ. ನಿರಂಜನರ 'ಬನಶಂಕರಿಯ' 'ಬನಶಂಕರಿ', ಮಿರ್ಜಿ ಅಣ್ಣಾರಾಯರ ನಿಸರ್ಗದ 'ತಾರಾ' ಮತ್ತು ಚದುರಂಗರ ಸರ್ವಮಂಗಳಾದ 'ಮಂಗಳ' ವೈಶಾಖದ 'ರುಕ್ಮಿಣಿ' ಕೆಲವು ಉದಾಹರಣೆಗಳು. ಪ್ರಕೃತಿ ಸ್ವರೂಪರಾಗಿಯೂ ಈ ಸ್ತ್ರೀಯರು ವಿವಾಹ ಸಂಸ್ಥೆಯನ್ನು ತ್ಯಜಿಸಲು ಅಥವಾ ನಿರಾಕರಿಸಲು ಹಿಂದುಮುಂದು ನೋಡುವುದಿಲ್ಲ. ಸ್ತ್ರೀ ಸ್ವಾತಂತ್ರ್ಯ ಕಲ್ಪನೆಯ ಪರಿಪೂರ್ಣ ಚಿತ್ರವನ್ನು ಇನಾಂದಾರರ ಕಾದಂಬರಿ 'ಮೋಹಿನಿ' ನೀಡುತ್ತದೆ.

ಪರಂಪರೆ ಮತ್ತು ಆಧುನಿಕತೆ ಎರಡನ್ನೂ ಎದುರಿಸುತ್ತ ತನ್ನತನವನ್ನು ಬೆಳೆಸುವ ಹಠದಿಂದ ತನ್ನ ಬಾಳಿನುದ್ದಕ್ಕು ವ್ಯಕ್ತಿ ಸ್ವಾತಂತ್ರ್ಯವನ್ನು ಬಲಿಕೊಡದೆ ಎಚ್ಚರವಾಗಿದ್ದು ದೀರ್ಘ ಹೊರಾಟ ನಡೆಸಿದ ಮೋಹಿನಿಯ ಜೀವನ ವೃತ್ತಾಂತ ಈ ಕಾದಂಬರಿಯ ವಸ್ತು. ಮೋಹಿನಿ ಚೆಲುವೆ ಮತ್ತು ಸ್ವಾಭಿಮಾನಿ, ಕೈಹಿಡಿದ ಗಂಡನಿಂದ ಅವಳಿಗೆ - ದಾಂಪತ್ಯದಲ್ಲಿ ಆಸಕ್ತಿ ಉಳಿಯವುದಿಲ್ಲ.

"ನನಗೆ ಈ ನರಪಶುವಿನ ಹೆಂಡತಿಯಾಗಿ ಬಾಳುವುದಕ್ಕಿಂತ, ಗಂಡನಿಲ್ಲದಿದ್ದರೂ ಪರಿವೆ ಇಲ್ಲ. ಮನುಷ್ಯ ಪ್ರಾಣಿಯಾಗಿ, ಮನುಷ್ಯರಂತೆ ಬದುಕ ಬೇಕಾಗಿದೆ. ಅವನಿಲ್ಲದೆ ನನಗೆ ಸಮಾಜದಲ್ಲಿ ಸ್ಥಾನವಿರಲಿಕ್ಕಿಲ್ಲ. ನಿಸ್ಸಂದೇಹವಾಗಿ ಗತಿ ಇದೆ."[೮]

ಸಂಸಾರದಲ್ಲಿ ಒಂದೇ ವ್ಯಕ್ತಿಯ ಸ್ವಾಮಿತ್ವವಿರಬೇಕೆಂದು ನಂಬುವ ಆನಂದನ ಮಡದಿಯಾಗಿರುವುದನ್ನು ನಿರಾಕರಿಸಿ ಮೋಹಿನಿ ದಾಂಪತ್ಯದಿಂದ ಹೊರ ನಡೆಯುತ್ತಾಳೆ. ಶಿಕ್ಷಣ ಮತ್ತು ವೃತ್ತಿ ಮೂಲಕ ಸ್ವಾವಲಂಬಿ ಜೀವನ ಅವಳದಾಗುತ್ತದೆ. ಮತ್ತೆ ಗಂಡ ಕರೆದಾಗಲೂ ಅವಳಿಗೆ ಹೋಗಬೇಕೆಂಬ ಮನುಸ್ಸು ಇರುವುದಿಲ್ಲ. ಮೋಹಿನಿ ಮುಂದೆ ಕಲಾವಿದೆಯಾಗಿ ರೂಪುಗೊಂಡು ಧನ, ಕೀರ್ತಿ, ಸ್ವಾತಂತ್ರ್ಯವೆಲ್ಲವನ್ನೂ ಪಡೆಯುತ್ತಾಳೆ. ಆದರೆ ನ್ಯಾಯದ ದೃಷ್ಟಿಯಿಂದ ಅವಳಿಗೆ ಗಂಡನಿಂದ ವಿಚ್ಛೇದನ ದೊರಕುವುದಿಲ್ಲ. ತನ್ನ ದೇಹ ಮತ್ತು ಮನಸ್ಸಿನ ಮೇಲೆ

ಪ್ರಭುತ್ವವನ್ನು ಸಾಧಿಸಲು ಗಂಡಸು ಪ್ರಯತ್ನಿಸಿದಾಗಲೆಲ್ಲ ಸಿಡಿದೇಳುವ ಮೋಹಿನಿ ಕಾದಂಬರಿ ಕೊನೆಭಾಗದಲ್ಲಿ ಮಾನವ ಸಂಬಂಧಗಳಿಗಾಗಿ ತುಡಿಯುವ ಚಿತ್ರವಿದೆ.

ಮೋಹಿನಿ ಕನ್ನಡ ಕಾದಂಬರಿ ಜಗತ್ತು ಕಂಡ ಒಂದು ಸಶಕ್ತ ಪಾತ್ರ. ಸ್ವಾತಂತ್ರ್ಯ ಮತ್ತು ಸ್ವಾಯತ್ತತೆಯನ್ನು ಪಡೆಯುವ ಮನುಷ್ಯ ಪ್ರಯತ್ನದ ರೂಪಕವಾಗಿ ಮೋಹಿನಿ ಪಾತ್ರಾಭಿವ್ಯಕ್ತಿಯು ಕಾಣಿಸಿಕೊಳ್ಳುತ್ತದೆ.

ವ್ಯಾಸರಾಯ ಬಲ್ಲಾಳರ ಕಾದಂಬರಿ ನಾಯಕಿಯರು ಮೂಲತಃ ಸಣ್ಣ ಪುಟ್ಟ ಊರಿನಿಂದ ಬಂದವರಾಗಿರುತ್ತಾರೆ. ತಾವು ಹುಟ್ಟಿದ ಪರಿಸರದಲ್ಲಿ ಸುತ್ತಲಿನ ಜನ ಸಮುದಾಯದ ನಡವಳಿಕೆ ಕಾರಣವಾಗಿ ವ್ಯಕ್ತಿತ್ವ ಮುದುಡಿ ಹೋಗುವ ಪ್ರಸಂಗ ಹೆಚ್ಚು ಎಂಬ ತಿಳುವಳಿಕೆ ಮೂಡಿದಾಗ ಈ ಪರಿಸರವನ್ನು ತ್ಯಜಿಸಿ ಮುಂಬೈ ಮಹಾನಗರವನ್ನು ಸೇರಿ, ಹೊಸ ರೀತಿಯ ಸ್ವತಂತ್ರ ಬದುಕಿಗೆ ತೆರೆದುಕೊಳ್ಳುತ್ತಾರೆ. ಊರುಮನೆಗಳಲ್ಲಿ ಉಸಿರುಗಟ್ಟಿಸುವ ವಾತಾವರಣದಲ್ಲಿ ಕೀಳರಿಮೆಯಿಂದ ಬದುಕುವ ಪ್ರಸಂಗವನ್ನು ಅನುಭವಿಸಿರುವ ಸುಮಿತ್ರೆ, ಯಶೊದಾ, ಭಾರತಿಯರಿಗೆ ನಗರದಲ್ಲಿ ದೊರೆತ ಹೊಸ ಐಡೆಂಟಿಟಿ ಹೊಸ ಅನುಭವವನ್ನು ಕೊಡುತ್ತದೆ. ಮುಂಬೈಯಲ್ಲಿಯೇ ಹುಟ್ಟಿ, ಬೆಳೆದು ಹೊಂದಿಕೊಂಡ ಇಂದಿರೆ, ಹೇಮರಿಗೆ ಸ್ವತಂತ್ರ ವ್ಯಕ್ತಿತ್ವ ರೂಢಿಸಿಕೊಂಡು ಬಂದುದಾಗಿದೆ. ಹೇಮಾ ವಿವಾಹಿತೆಯಾಗಿದ್ದು ವಿವಾಹ ಸಂಸ್ಥೆಯಲ್ಲಿ ನಂಬಿಕೆ ಇಟ್ಟುಕೊಳ್ಳದವಳು. ಅವಳಿಗೆ ತನ್ನ ನಡತೆಯಾಗಲಿ, ತಾನು ಬದುಕುವ ರೀತಿಯಾಗಲಿ ಕೀಳರಿಮೆಗೆ ಕಾರಣವಾಗಿಲ್ಲ. ತನ್ನ ಬದುಕು ತನ್ನದು ಎಂಬ ತತ್ತ್ವವನ್ನಾಧಾರಿಸಿ ಬದುಕುವ ಛಲ ಹೇಮಾಳದು. ಇಂದಿರೆ ವಿಧವೆ. ಆದರೆ ಅವಳ ಕೈಯಲ್ಲಿ ಗಂಡನ ಆದರ್ಶದ ಕೆಲಸವನ್ನು ಮುಂದುವರಿಸುವ ಜವಾಬ್ದಾರಿಗಳಿವೆ. ತಾತ್ಕಾಲಿಕ ಸಂಬಂಧ, ಆಮಿಷಗಳು ಅವಳ ವ್ಯಕ್ತಿತ್ವವನ್ನು ತಟ್ಟಲಾರವು. ಧೈರ್ಯ ಮತ್ತು ಧೈರ್ಯದ ಆಧಾರದಲ್ಲಿ ಫಲ ತುಂಬಿದ ಬದುಕನ್ನು ನಡೆಸುವಾಕೆ ಇಂದಿರೆ. ಇದೇ ರೀತಿ ಛಲದ ಹೆಣ್ಣು 'ಬಂಡಾಯ'ದ ಯಾಮಿನಿ. ಗಂಡನ ಅಸ್ವಸ್ಥತೆ, ಹಿಂಸ್ರನಡವಳಿಕೆಗೆ ಬಲಿಯಾಗಿ ಮುದುಡಿ ಹೋಗಬಹುದಾದ ಹೆಣ್ಣು ಯಮಿನಿ ರಾಜೀವನ ಪರಿಚಯದ ಮೂಲಕ ತೆರೆದುಕೊಂಡ ಶೋಷಣಾಜಗತ್ತಿನಲ್ಲಿ ತನ್ನನ್ನು ತಾನು ಗುರುತಿಸಿಕೊಳ್ಳುತ್ತ, ರಾಜಿವ ಸತ್ತಾಗ ಅವನ ಸ್ಥಾನವನ್ನು ಪಡೆಯುವಷ್ಟು ಗಟ್ಟಿಗತನವನ್ನು ಪಡೆಯುತ್ತಾಳೆ.

ಒಂದು ನಿರ್ದಿಷ್ಟ ಹಂತದವರಗೆ ಸಾಮಾನ್ಯ ನಡವಳಿಕೆ ತೋರುವ ವ್ಯಾಸರಾಯ ಬಲ್ಲಾಳರ ಕಾದಂಬರಿಗಳ ನಾಯಕಿಯರು ನಗರ ಸ್ಪರ್ಶದಿಂದ ಆತ್ಮವಿಶ್ವಾಸದ ಪ್ರತೀಕಗಳಾಗಿ ಪರಿವರ್ತನೆ ಹೊಂದುತ್ತಾರೆ. ಆರ್ಥಿಕವಾಗಿ ಸ್ವತಂತ್ರರಾಗುವ ಮೂಲಕ ತಮ್ಮ ಜೀವನದ ನಿರ್ಧಾರವನ್ನು ತೆಗೆದುಕೊಳ್ಳುವ ಸಂದರ್ಭದಲ್ಲಿ ವಿವೇಕಪೂರ್ಣವಾಗಿ ನಡೆದುಕೊಳ್ಳುತ್ತಾರೆ.

ಗೃಹಜಗತ್ತನ್ನು ನಂಬಿದವರೂ ತಮ್ಮ ಸ್ವಭಾವ ಮತ್ತು ನಡನುಡಿಗಳಿಂದ ಗಟ್ಟಿಗರೆನಿಸಿದ ಪಾತ್ರಗಳೂ ಬಲ್ಲಾಳರ ಕಾದಂಬರಿಗಳಲ್ಲಿವೆ. ವಾತ್ಸಲ್ಯಪಥದ ರಾಧಾಬಾಯಿ, ಮಾಲಿನಿ, ಅನುರಕ್ತೆಯ ಶೀಲಾ, ಪದ್ಮಾವತಿ, ಉತ್ತರಾಯಣದ ಭಾರತಿ ಮೊದಲಾದವರು. ಬಡತನ, ವಿಧಿಕೈವಾಡ, ಸಾಮಾಜಿಕ ದುಷ್ಟಶಕ್ತಿಗಳ ಕಾರಣದಿಂದ ಬದುಕಿನಲ್ಲಿ ಪಡಬಾರದ ಕಷ್ಟಗಳನ್ನು ಅನುಭವಿಸುತ್ತ, ಹೆಣ್ಣಾಗಿ ಹುಟ್ಟಿದ ಕಾರಣವಾಗಿಯೇ ನೋವನ್ನುಣ್ಣುವ ಅನೇಕ ಸ್ತ್ರೀಯರ ಚಿತ್ರಣವು ತ.ರಾ.ಸು. ಕಾದಂಬರಿಗಳಲ್ಲಿ ಇದೆ.

ಮೂಲಾನಕ್ಷತ್ರದಲ್ಲಿ ಹುಟ್ಟಿ, ಬಡತನ, ವೈಧವ್ಯ, ತಾಯ್ತನದ ಜವಾಬ್ದಾರಿ, ಸುತ್ತಲಿನವರ ಕುಹಕ ನಿಂದನೆಗಳಿಗೆ ಬಲಿಯಾಗಿ, ತನ್ನ ಬದುಕನ್ನು ಸುತ್ತಲಿನವರ ಬಯಕೆಗನುಣವಾಗಿ ರೂಪಿಸಿಕೊಳ್ಳುತ್ತ ದುರಂತವಾದ 'ಚಂದನದಗೊಂಬೆ'ಯ ರತ್ನಮ್ಮ, ವೇಶ್ಯಾಸಮಸ್ಯೆಯ 'ಮಸಣದ ಹೂವು', ಮಧ್ಯಮವರ್ಗದ ಹೆಣ್ಣಿನ ಈಡೇರದ ಆಸೆ ಆಕಾಂಕ್ಷೆಗಳ ' ಪಂಜರದ ಪಕ್ಷಿ', ತಾತ್ವಿಕ ವ್ಯವಹಾರದಲ್ಲಿ ಆಸಕ್ತಿ ಕಳಕೊಂಡ ರಾಮದಾನಿಗಳ ಮನೆ ಸಂಸಾರವನ್ನು ಉಳಿಸಿದ ಅವರ ಪತ್ನಿ ಸರಸಮ್ಮನ ಕತೆ ಇರುವ 'ಹೆಣ್ಣುಕಟ್ಟಿದ ಮನೆ'. ಇದೇ ರೀತಿಯ ವಸ್ತುವಿರುವ 'ಮನೆಗೆ ಬಂದ ಮಹಾಲಕ್ಷ್ಮಿ', 'ಶುಕ್ರವಾರದ ಲಕ್ಷ್ಮಿ', 'ಅಕ್ಕಮ್ಮನ ಭಾಗ್ಯ' ಮೊದಲಾದ ಕಾದಂಬರಿಗಳ ಸ್ತ್ರೀಪಾತ್ರಗಳು - ತ.ರಾ.ಸು. ಸಾಂಪ್ರದಾಯಿಕ ಚೌಕಟ್ಟಿನೊಳಗೆ ತ್ಯಾಗ, ಸಹನೆ ಮತ್ತು ಪಾತಿವ್ರತ್ಯ ಮೌಲ್ಯಗಳನ್ನು ಅಂತರ್ಗತಗೊಳಿಸಿದ ಸ್ತ್ರೀಯರನ್ನು ವಿವರಿಸಿದ್ದಾರೆ.

ತ.ರಾ.ಸುರವರ 'ಬಿಡುಗಡೆಯ ಬೇಡಿ' ಕಾದಂಬರಿಯಲ್ಲಿ ಬರುವ ಸ್ತ್ರೀಪಾತ್ರಗಳು ಮೇಲೆ ತಿಳಿಸಿರುವ ಅಂಶಗಳಿಗೆ ಭಿನ್ನ ಸ್ವಭಾವದವರಾಗಿದ್ದಾರೆ. ಪ್ರಭಾವತಿ, ಲೀಲಾವತಿ, ಶಾಲಿನಿ ಮತ್ತು ಫ್ಲೋರಾರಂತಹ ವಿವಿಧ ಸ್ವಭಾವದ ಸ್ತ್ರೀಯರ ಬದುಕಿನ ರೀತಿಗಳ ಮೂಲಕ ಸ್ತ್ರೀಸ್ವಾತಂತ್ರ್ಯವನ್ನು ವಿವರಿಸುವ ಪ್ರಯತ್ನ ತ.ರಾ.ಸು. ಮಾಡಿದ್ದಾರೆ.

ಪ್ರಭಾವತಿ ಪುರುಷ ದ್ವೇಷಿಯಾದರೂ ಶಾಂತಾರಾಮನನಲ್ಲಿ ಅನುರಕ್ತಳಾಗಿ, ಆತ್ಮವಿಶ್ವಾಸವನ್ನು ಮೆಟ್ಟಿ ಅವನೊಟ್ಟಿಗೆ ಬಾಳುವ ನಿರ್ಧಾರ ತಳೆದು ಮುಂಬೈ ಸೇರುತ್ತಾಳೆ. ಸಮಾಜದಲ್ಲಿ ಬಾಳಬೇಕಾದರೆ ಮಂಗಳಸೂತ್ರದ ರಕ್ಷೆ ಬೇಕು ಎಂದು ಅವಳನ್ನು ನಂಬಿಸಲಾಗುತ್ತದೆ. ಆದರೆ ಶಾಂತಾರಾಮನ ದಬ್ಬಾಳಿಕೆ, ಸ್ವಾರ್ಥಪರತೆಗಳಿಂದ ಪ್ರಭಾವತಿಯಲ್ಲಿದ್ದ ಪುರುಷದ್ವೇಷ ಮತ್ತಷ್ಟು ಹೆಚ್ಚಾಗುತ್ತದೆ. ಪ್ರಭಾವತಿ ದಾಂಪತ್ಯ ಕೊನೆಗೊಂಡುದರ ಸಂಕೇತವಾಗಿ ಮಂಗಳಸೂತ್ರ ಹರಿದು ಸಂಬಂಧವನ್ನು ಕಳಚಿಕೊಂಡು ವಿದಾಯ ಹೇಳಿ, ಹೊರನಡೆಯುತ್ತಾಳೆ. ಪ್ರಭಾವತಿಯಲ್ಲದೆ ಕಾದಂಬರಿಯಲ್ಲಿ ಆದರ್ಶಗೃಹಿಣಿಯ ಪರಂಪರಾಗತ ಗುಣಗಳನ್ನು ಪ್ರತಿನಿಧಿಸಿದ ಲೀಲಾವತಿ, ಸ್ವೇಚ್ಛಾಚಾರದಿಂದ ಬದುಕುವ ಫ್ಲೋರಾ, ಕೌಟುಂಬಿಕ ಕಲಹಗಳಿಂದ ಮನೆಯೊಳಗೆ ಸಿಗದ ಶಾಂತಿನೆಮ್ಮದಿಗಳನ್ನು ರಾಜಕೀಯ ಚಟುವಟಿಕೆಗಳಲ್ಲಿ ಹುಡುಕುವ ಶಾಲಿನಿ ಪಾತ್ರವಿದೆ. ಸ್ತ್ರೀ ಸ್ವಾತಂತ್ರ್ಯವನ್ನು ಪುರುಷ ದ್ವೇಷದ ಮೂಲಕ ಪ್ರತಿಪಾದಿಸುವ ತ.ರಾ.ಸು. ಪ್ರಭಾವತಿಯ ಭ್ರಮನಿರಸನಗಳು, ಫ್ಲೋರಾಳ ಸ್ವೈರತನದ ಸ್ವಭಾವದ ಮೂಲಕ ಅವರ ಮಿತಿಯನ್ನು ಸೂಚ್ಯವಾಗಿ ಕಥಾನಕದಲ್ಲಿ ಬಳಸಿಕೊಳ್ಳುತ್ತಾರೆ.

ನಿರಂಜನರ ಕಾದಂಬರಿಗಳಲ್ಲಿ ಅಸಹಾಯಕತೆ ಎನ್ನುವುದು ವ್ಯಕ್ತಿ ಸ್ವಭಾವದ ದೌರ್ಬಲ್ಯವೆಂದು ಪರಿಗಣಿತವಾಗದೆ, ಸಮಾಜದ ನೆಲೆಯಲ್ಲಿ ಹೆಣ್ಣನ್ನು ಕಾಡುತ್ತಿರುವ ಒಂದು ಸಮಸ್ಯೆಯ ರೂಪದಲ್ಲಿ ಇದೆ. ತಮ್ಮ ಸ್ತ್ರೀ ಕೇಂದ್ರಿತ ವಸ್ತುವುಳ್ಳ ಎಂಟು ಕಾದಂಬರಿಗಳಲ್ಲಿ ಈ ಸಮಸ್ಯೆಯನ್ನೇ ಅವರು ಪುನರಾವರ್ತನೆಗೊಳಿಸುತ್ತಾರೆ.

ಬನಶಂಕರಿಯ 'ಬನಶಂಕರಿ', ಅಭಯದ 'ತುಂಗಮ್ಮ', 'ಸ್ಮರಣೆಯೊಂದೇ ಸಾಲದೆ'ಯ 'ಮೀನಾಕ್ಷಿ' 'ವಿಶಾಲಾಕ್ಷಿಯ' 'ವಿಶಾಲಾಕ್ಷಿ', 'ಹೆಣ್ಣಾಗಿ ಕಾಡಿತ್ತುಮಾಯೆ'ಯ 'ದೇವಕಿ', 'ಪಾಲಿಗೆ ಬಂದ ಪಂಚಾಮೃತ' ಮತ್ತು 'ಏಕಾಂಗಿನಿಯ' 'ಸುನಂದ' - ತಾವು ಬದುಕುವ ಪರಿಸರದಲ್ಲಿಯೇ ಸ್ವ-ಅಭಿವ್ಯಕ್ತಿ ಪಡೆಯಲು ಪ್ರಯತ್ನಿಸುತ್ತಿರುತ್ತಾರೆ.

ಸುನಂದ ಕೌಟುಂಬಿಕ ಹಿಂಸೆ ಮತ್ತು ಅಸಫಲ ದಾಂಪತ್ಯದಿಂದ ನೊಂದ ಹೆಣ್ಣು. ಅವಳ ಗಂಡ ಪುಟ್ಟಣನದು

ವಿಕೃತ ಮನಸ್ಸು. ಸುನಂದ ಎಲ್ಲ ರೀತಿಯಿಂದಲೂ ಗಂಡನೊಡನೆ ಹೊಂದಿಕೊಂಡಿರಲು ಪ್ರಯತ್ನ ನಡೆಸುತ್ತಾಳೆ. ಆದರೆ ಗಂಡನಿಂದ ಉತ್ತೇಜನವಾಗಲಿ, ಸಹಕಾರವಾಗಲೀ ಅವಳಿಗೆ ದೊರೆಯುವುದಿಲ್ಲ. ಕೊನೆಗೆ ಗಂಡನಿಂದ ಬೇರ್ಪಟ್ಟು ವಿವಾಹವಿಚ್ಛೇದನಕ್ಕೆ ಮನಸ್ಸು ಮಾಡುತ್ತಾಳೆ. ಸುನಂದ ತೆಗೆದುಕೊಳ್ಳುವ ನಿರ್ಧಾರಕ್ಕೆ ಅವಳ ತಂದೆ. ಭಾವ, ಗೆಳತಿಯರು, ಎಲ್ಲರೂ ಬೆಂಬಲ ನೀಡುತ್ತಾರೆ. ಮಾನಸಿಕ ಮತ್ತು ದೈಹಕವಾಗಿ ಹಿಂಸೆ ಸ್ವರೂಪದಲ್ಲಿದ್ದ ದಾಂಪತ್ಯದಿಂದ ಹೊರನಡೆದು, ಸುನಂದ ನೌಕರಿ ಪಡೆದು ತಂದೆ ಮತ್ತು ಮಗುವಿನೊಂದಿಗೆ ಸ್ವತಂತ್ರ ಬದುಕನ್ನು ನಡೆಸುತ್ತಾಳೆ. ಬಾಲವಿಧವೆ ಅಮ್ಮಿ ಬನಶಂಕರಿಯಾಗಿ ಪರಿವರ್ತನೆ ಹೊಂದಿ ಸಂಪ್ರದಾಯಸ್ಥ ಸಮಾಜದಲ್ಲಿ ಬಹಿಷ್ಕಾರದ ಬೆದರಿಕೆಗೆ ಒಳಗಾಗಿಯೂ ಧೈರ್ಯದಲ್ಲಿ ಬದುಕಿದ ಹೆಣ್ಣಿನ ಕತೆ 'ಬನಶಂಕರಿ', ಕಾದಂಬರಿಯಲ್ಲಿ ಇದೆ.

ಹನ್ನೊಂದನೇ ವಯಸ್ಸಿಗೆ ಮದುವೆಯಾಗಿ, ೧೩ನೇ ವಯಸ್ಸಿನಲ್ಲಿ ವಿದವೆಯಾಗಿ, ಗಂಡ ಸತ್ತ ಆರು ತಿಂಗಳಿಗೆ ಮೈನೆರೆದ ಬನಶಂಕರಿ ಕೇಶಮುಂಡನ ಮಾಡಿಕೊಳ್ಳುವುದಿಲ್ಲ. ಬದುಕಿನಲ್ಲಿ ಒಂಟಿಯಾದರೂ ಊರಿನವರ ಪ್ರೀತಿಸಹಕಾರ, ಪಾರುಪತ್ಯದಾರ ನಾರಾಯಣರ ಆಸರೆ - ಸಾಂಗತ್ಯ ಅವಳಿಗೆ ಲಭಿಸಿದರೂ, ಅವಳನ್ನು ಒಲಿಸಲು ಪ್ರಯತ್ನ ಪಟ್ಟು ಸೋತ ಮಂದಿಯ ಕುಹಕದ ಕಾರಣವಾಗಿ ಬಹಿಷ್ಕಾರಕ್ಕೆ ಒಳಪಟ್ಟು ಜಾತಿಬಾಹಿರಳಾಗುತ್ತಾಳೆ ಬನಶಂಕರಿ.

ಬನಶಂಕರಿಯಲ್ಲಿ ದೈರ್ಯ, ವಿಶ್ವಾಸ ತುಂಬಿದ ಸುಂದರಮ್ಮನಂತಹ ಸಂಪ್ರದಾಯಿಗಳೇ ಬನಶಂಕರಿಯಲ್ಲಿ ಆಧುನಿಕ ಮನೋಭಾವವನ್ನು. ಅತ್ಮವಿಶ್ವಾಸವನ್ನು ತುಂಬುತ್ತಾರೆ. "ಇನ್ನೊಂದು ಮದುವೆ ಪಾಪವಲ್ಲ ಬನೂ ಖಂಡಿತ ಪಾಪವಲ್ಲ. ಧರ್ಮಶಾಸ್ತ್ರದ ಹೆಸರಲ್ಲಿ ನಿನಗೆ ಹಿಂಸೆ ಕೊಡೋದಿದೆಯಲ್ಲ ಅದು ಪಾಪ. ಗಂಡ್ಸು ಎರಡನೇ ಮೂರನೇ ಮದುವೆ ಮಾಡಿಕೊಳ್ಳುವಾಗ ಹೆಂಗಸು ವಿಧವೆ - ಮತ್ತೊಮ್ಮೆ ಮದುವೆಯಾಗುವುದು ಪಾಪವಲ್ಲ."

ವಿರಾಮದ ವೇಳೆಯಲ್ಲಿನ ಓದು, ಗೆಳತಿಯರ ಸಾಂತ್ವನದ ನುಡಿಗಳಿಂದ ಪ್ರೇರಿತಳಾಗಿ ಬನಶಂಕರಿ ಜೀವನಾಭಿಮುಖಳಾಗಿ ನಡೆಯುತ್ತಾಳೆ. ಆರ್ಥಿಕ ಬಲ ಇಲ್ಲದ ಬನಶಂಕರಿ ತನ್ನ ಛಲ ಮತ್ತು ನಿಷ್ಠೆಗಳಿಂದ ಎರಡು ಮಕ್ಕಳೊಂದಿಗೆ ಸಾಹಸದ ಬದುಕು ಬಾಳುತ್ತಾಳೆ.

೧೯೭೦ರ ನಂತರದ ಸಾಹಿತ್ಯರಚನೆಗಳಲ್ಲಿ ಕೆಳಮಧ್ಯಮವರ್ಗದ, ಕೆಳವರ್ಗದ ಮತ್ತು ಉಪೇಕ್ಷಿತ ಸಮುದಾಯಕ್ಕೆ ಸೇರಿದ ಬದುಕಿನ ಚಿತ್ರಣವಿರುವುದರಿಂದ ಇಲ್ಲಿರುವ ಅನೇಕ ಸ್ತ್ರೀಯರು ಉಪೇಕ್ಷಿತ ಸಮುದಾಯದವರಾಗಿದ್ದಾರೆ. ಸಾಮಾಜಿಕ ಪ್ರಜ್ಞೆಯನ್ನು ಕೇಂದ್ರವಾಗಿಟ್ಟು ಬರೆದ ಈ ರಚನೆಗಳಲ್ಲಿ ಸ್ತ್ರೀಯರ ಶೋಷಿತ ಜೀವನದ ವಿವರಗಳು, ನೊವುನಿರಾಶೆಗಳು ಅವಕಾಶ ಪಡೆದಿವೆ.

ಈ ಸಾಹಿತ್ಯದಲ್ಲಿರುವ ಸ್ತ್ರೀ ಅಸಹಾಯಕಳು, ಸಾಮಾಜಿಕ ದಿಗ್ಬಂಧನದಲ್ಲಿರುವವಳು. ಸಾಮಾಜಿಕ, ಆರ್ಥಿಕ ಮತ್ತು ಲೈಂಗಿಕ ನೆಲೆಯಿಂದ ಶೋಷಣೆಯನ್ನು ಅನುಭವಿಸುತ್ತಿರುವ ಈ ಸ್ತ್ರೀಗೆ ಬಿಡುಗಡೆ ಬೇಕಾಗಿದೆ. ವೈಯಕ್ತಿಕ ನೆಲೆಯಿಂದ ಮತ್ತು ಸಾಮಾಜಿಕ ನೆಲೆಯಿಂದ ಕೂಡ. ಪ್ರತಿಭಟನೆ ಮತ್ತು ಪ್ರಧಾನ ಸಂಸ್ಕೃತಿಯ ನಿರಾಕರಣೆಯನ್ನು

ಮುಖ್ಯಗುರಿಯಾಗಿಸಿ-ಕೊಂಡ ಈ ಸಾಹಿತ್ಯವು ಸ್ತ್ರೀ ಪಾತ್ರಗಳ ಮೂಲಕವೇ ತನ್ನ ಧ್ಯೇಯವನ್ನು ವ್ಯಕ್ತಪಡಿಸಿರುವುದು ಕುತೂಹಲಕರ ವಿಚಾರವಾಗಿದೆ. ಪರಂಪರೆ ಮತ್ತು ಸಂಪ್ರದಾಯದ ವಿರುದ್ಧ ಪ್ರತಿಭಟನೆ ಮತ್ತು ಬಂಡಾಯ ಮನೋಧರ್ಮ ಸೂಚಿಸಿದ ಸ್ತ್ರೀಯರು ಮಹಿಳಾ ಬರವಣಿಗೆಯಲ್ಲಿ ಪ್ರಧಾನವಾಗಿ ಕಾಣಿಸಿಕೊಂಡಿದ್ದಾರೆ.

ಮಧ್ಯಮ ವರ್ಗದ ಮಹಿಳೆಯರ ಆಶೋತ್ತರಗಳು, ಕನಸುಗಳು, ಬಯಕೆಗಳು, ವಿವಾಹಸಂಸ್ಥೆಯಲ್ಲಿ ಹುಸಿಯಾಗತೊಡಗಿದ ನಂಬಿಕೆಗಳು, ಆಸೆ ನಿರಾಶೆಗಳು, ಶಿಥಿಲಗೊಳ್ಳುತಿರುವ ಸ್ತ್ರೀ ಪುರುಷ ಸಂಬಂಧಗಳು - ಈ ಎಲ್ಲಾ ವಿಚಾರಗಳನ್ನು ಲೇಖಕಿಯರು ತಮ್ಮ ಕಾದಂಬರಿ ಮೂಲಕ ಅಭಿವ್ಯಕ್ತಿಸಿದ್ದಾರೆ. ವಿದ್ಯಾವಂತ, ನಗರಪ್ರಜ್ಞೆಯ ಮಹಿಳೆಯರಿಂದ ಹಿಡಿದು ಕೆಳವರ್ಗದ, ಕೆಳಜಾತಿಯ ಮಹಿಳೆಯರವರೆಗೆ ಎಲ್ಲ ಸಮುದಾಯದವರನ್ನು ನಾಯಕಿ ಸ್ಥಾನದಲ್ಲಿಟ್ಟು ಈ ಲೇಖಕಿಯರು ವಿವರಿಸಿದ್ದಾರೆ.

ಐವತ್ತರ ದಶಕದ ನಂತರ ಬಂದ ಕಥನ ಸಾಹಿತ್ಯವು ಪ್ರತಿಭಟನೆ, ಬಂಡಾಯ, ಮತ್ತು ಸ್ವಾತಂತ್ರ್ಯ, ಈ ಸ್ವಾತಂತ್ರ್ಯದ ಸಾಧಕ ಬಾಧಕಗಳು - ಈ ಕ್ರಮದಲ್ಲಿ ಹೆಣ್ಣಿನ ಜೀವನದ ವಿವರಗಳನ್ನು ನೀಡುತ್ತವೆ. ೧೯೬೨ ರಿಂದ ೧೯೭೫ರವರೆಗೆ ಜನಪ್ರಿಯ ಧಾಟಿಯ ಬರವಣಿಗೆಯಲ್ಲಿ ಸ್ತ್ರೀಪಾತ್ರಗಳನ್ನು ಸೃಷ್ಟಿಸುತ್ತಿದ್ದ ಅನುಪಮಾ ನಂತರ ಬಂಡಾಯಧೋರಣೆ ಮತ್ತು ಮಹಿಳಾವಾದಿ ವಿಚಾರಗಳ ಪ್ರಭಾವಕ್ಕೊಳಗಾಗಿ ಪ್ರತಿಭಟನೆ, ಸ್ವಚಿಂತನ ಮತ್ತು ಹೋರಾಟದ ವ್ಯಕ್ತಿತ್ವವುಳ್ಳ ಸ್ತ್ರೀಯರ ಚಿತ್ರವನ್ನು ಕೊಟ್ಟಿದ್ದಾರೆ.

ವ್ಯವಸ್ಥೆಯ ನಿರಾಕರಣೆ, ಸ್ವಪ್ರಜ್ಞೆಯ ಜಾಗೃತಿ ಮತ್ತು ಪ್ರತಿಭಟನಾ ಮನೋಧರ್ಮದ ಸ್ತ್ರೀಯರು ಇವರ 'ಆಳ','ಮುಕ್ತಿಚಿತ್ರ' ಮತ್ತು 'ಮಾಧವಿ', ಕಾದಂಬರಿಯಲ್ಲಿ ಕಾಣಸಿಗುತ್ತಾರೆ. 'ಮುಕ್ತಿ ಚಿತ್ರ'ದ ಲಲಿತಾ ತನ್ನ ವಿಚಾರಧಾರೆ, ಅನ್ಯಾಯದ ವಿರುದ್ಧ ಧ್ವನಿ ಎತ್ತುವ ಸ್ವಭಾವದ ಮೂಲಕ, ನಿರಂತರವಾಗಿ ಹಿಂಸೆಯನ್ನನುಭವಿಸುತ್ತಿದ್ದ ತಾಯಿ, ತನ್ನ ತಂದೆಯೆದುರು, ಶೋಷಣೆಯ ಮೂಲದ ವಿರುದ್ಧ ಬಂಡೇಳಲು ಪ್ರೇರಣೆ ನೀಡುತ್ತಾಳೆ. 'ಆಳ'ದ ಮಾಲಿನಿ ತಾಯ್ತನಕ್ಕಾಗಿ ಬೌಧಿಕತೆ ಮತ್ತು ವೃತ್ತಿಪರ ಜೀವನವನ್ನು ತ್ಯಾಗಮಾಡಲು ಸಿದ್ಧಳಿರದೆ ದಾಂಪತ್ಯದಿಂದ ಹೊರನಡೆಯುತ್ತಾಳೆ.

'ಮಾಧವಿ' ಶೊಷಣೆಯ ಹಾದಿಯಲ್ಲಿ ಸ್ವಪ್ರಜ್ಞೆ ಸಂಪಾದಿಸಿದ ಪಾತ್ರವಾಗಿ ಗಮನ ಸೆಳೆಯುತ್ತಾಳೆ. ಮಾಧವಿ ಪುರಾಣ ಪಾತ್ರ. ಈ ಪಾತ್ರದ ಪುನರ್ ವ್ಯಾಖ್ಯಾನದಲ್ಲಿ ಸ್ತ್ರೀ ಸ್ವಾತಂತ್ರ್ಯದ ಕಲ್ಪನೆಯನ್ನು, ಸ್ತ್ರೀಸಮಾನತಾ ವಿಚಾರಗಳನ್ನು ಲೇಖಕಿ ಉಪಯೋಗಿಸಿ ಕೊಂಡಿದ್ದಾರೆ. ಎಂ.ಕೆ. ಇಂದಿರಾರ ಕಾದಂಬರಿಯ ನಾಯಕಿಯರ ವ್ಯಕ್ತಿತ್ವ ವಿಕಾಸವು ಕಾದಂಬರಿ ಬೆಳವಣಿಗೆಗನುಸಾರವಾಗಿ ನಡೆಯುವ ಪರಿಕ್ರಮವನ್ನು ರೂಢಿಕೊಂಡಿದೆ. 'ತುಂಗಭದ್ರ'ದ 'ಕೃಷ್ಣವೇಣಿ', 'ತಗ್ಗಿನ ಮನೆ ಸೀತೆಯ', 'ಸೀತೆ', 'ಸದಾನಂದದ' 'ಗೌರಿ', 'ಕಮಲೆಯರು', 'ಫಣಿಯಮ್ಮ' ಮೊದಲಾದವರು ಸ್ವತಂತ್ರರಲ್ಲ. ಕೌಟುಂಬಿಕ ಚೌಕಟ್ಟಿನೊಳಗೆ ರೀತಿ ರೀವಾಜುಗಳಿಗನುಗುಣವಾಗಿ ಬಾಳಬೇಕಾದವರು, ಪರತಂತ್ರರು. ಆದರೆ ಪ್ರಕೃತಿ ಸಹಜ ಗುಣಗಳನ್ನು ಇವರಲ್ಲಿ ಮಾನವೀಯ ಅಂಶಗಳ ರೂಪದಲ್ಲಿ ಲೇಖಕಿ ನೀಡಿದ್ದಾರೆ. ಫಣಿಯಮ್ಮ ಕಾದಂಬರಿಯ ದಾಕ್ಷಾಯಣಿಯದು ಬಂಡಾಯದ ವ್ಯಕ್ತಿತ್ವ. ಆಚಾರ ವಿಚಾರ, ಸಂಪ್ರದಾಯ ಆಚರಣೆಗಳು ಹೆಣ್ಣಿನ ಬದುಕನ್ನು, ಅವಳ ರೀತಿ ನೀತಿ ನಡನುಡಿಗಳನ್ನು ನಿಯಂತ್ರಿಸುವ ಒಂದು ಸಾಮಾಜಿಕ

ವ್ಯವಸ್ಥೆಯಲ್ಲಿ ವ್ಯವಸ್ಥೆಗನುಗುಣವಾದ ರೀತಿಯಲ್ಲಿ ಬದುಕುವ ಫಣಿಯಮ್ಮ ಮತ್ತು ವ್ಯವಸ್ಥೆಯನ್ನು ನೇರವಾಗಿ ಖಂಡಿಸಿ ಬದುಕುವ ದಾಕ್ಷಾಯಣಿ - ಈ ಇಬ್ಬರು ಸ್ತ್ರೀಯರ ಚಿತ್ರಣದ ಮೂಲಕ ಲೇಖಕಿ ಪರಂಪರೆ ಮತ್ತು ಆಧುನಿಕತೆಯನ್ನು ಮುಖಾಮುಖಿಯಾಗಿ ನಿಲ್ಲಿಸುತ್ತಾರೆ. ಫಣಿಯಮ್ಮನಲ್ಲಿ ಬಾಲ್ಯದಿಂದ ರೂಢಿಸಿಕೊಂಡು ಬಂದಿರುವ ಸ್ಥಿತಪ್ರಜ್ಞತೆ, ತಾಳ್ಮೆ, ಮತ್ತು ವೈರಾಗ್ಯಗಳು, ಅವಳಂತೆ ವಿಧವೆಯಾಗಿರುವ ದಾಕ್ಷಾಯಣಿಯಲ್ಲಿ ಕಂಡುಬರುವುದು ಸಾಧ್ಯವಿಲ್ಲ.

ದಾಕ್ಷಾಯಣಿ ವಿಧವೆಯಾಗಿ ಕೇಶಮುಂಡನ, ಬಹಿಷ್ಕಾರಗಳಂತಹ ವಿಚಾರಗಳಿಗೆ ಪ್ರತಿಭಟನೆ ತೋರಿಸುತ್ತಾ ತನಗೆ ನಿಷಿದ್ಧವಾದ ಲೈಂಗಿಕ ಜೀವನವನ್ನು ನಡೆಸಿ, ತಾಯ್ತನವನ್ನು ಪಡೆಯುವುದರ ಮೂಲಕ ವ್ಯವಸ್ಥೆಗೆ ವಿರುದ್ಧವಾಗಿ ನಿಲ್ಲುತ್ತಾಳೆ.

ಸಂಘರ್ಷವನ್ನು ಎದುರಿಸುವಾಗ ಮಾನಸಿಕ ವಿಪ್ಲವಕ್ಕೆ ಒಳಗಾಗುವ ಅನೇಕ ಸ್ತ್ರೀಪಾತ್ರಗಳು ವೀಣಾ ಶಾಂತೇಶ್ವರರ ಕಾದಂಬರಿಗಳಲ್ಲಿ ಕಾಣಲು ಸಿಗುತ್ತವೆ. ನಿಷ್ಕಾಮ ಪ್ರೇಮದ ಹುಡುಕಾಟದಲ್ಲಿ ತೊಡಗಿ, ಹಲವು ಗಂಡಸರನ್ನು ಸಮೀಪಿಸಿ, ಯಾರಲ್ಲೂ ಈ ಪ್ರೇಮವನ್ನು ಕಾಣದೆ, ಪ್ರೀತಿಬಗ್ಗೆ, ಗಂಡಸರ ಬಗ್ಗೆ ಭ್ರಮನಿರಸನ ಹೊಂದಿದ ' ' ಗಂಡಸರು' ಕಾದಂಬರಿಯ ನಾಯಕಿ, 'ಮುಳ್ಳುಗಳು' ಕತೆಯ 'ಶಾಂತ', 'ಅತಿಥಿ'ಯ ಪ್ರೊ ಲೀಲಾವತಿ, 'ಕವಲು'ವಿನ 'ಮಿನಿ, 'ಅವಳ ಸ್ವಾತಂತ್ರ್ಯ'ದ 'ವಿಮಲ' ಮೊದಲಾದವರು ವ್ಯಕ್ತಿಸ್ವಾತಂತ್ರ್ಯಕ್ಕೆ ಮನಸ್ಸುಮಾಡಿದ ಸ್ತ್ರೀಯರು. ಸ್ವಾಭಿಮಾನ ಮತ್ತು ಸಹಕಾರದಿಂದ ಸ್ವಂತಿಕೆಯನ್ನು ಸಾಧಿಸಲು ಸಂಪ್ರದಾಯಗಳ ವಿರುದ್ಧ ಹೋರಾಡಿದ, ತಮಗಿಷ್ಟವಾದ, ಸರಿಕಂಡ ದಾರಿಯನ್ನು, ಜೀವನ ವಿಧಾನವನ್ನು ಆಯ್ಕೆ ಮಾಡಿದ ಅನೇಕ ಬಂಡುಗಾರ್ತಿ ಸ್ತ್ರೀಯರನ್ನು ವೀಣಾ ತಮ್ಮ ಕಾದಂಬರಿ, ಕತೆಗಳಲ್ಲಿ ಚಿತ್ರಿಸಿದ್ದಾರೆ. ವೀಣಾ ಕತೆಗಳಲ್ಲಿ ಬರುವ ಸ್ತ್ರೀಯರು ವ್ಯವಸ್ಥೆಯ ನಿರಾಕರಣೆ, ಸ್ವಪ್ರಜ್ಞೆ ಅರಿವು ಮತ್ತು ಸ್ವಂತಿಕೆಯ ವ್ಯಕ್ತಿತ್ವದವರಾಗಿದ್ದಾರೆ.

ಗೀತಾ ನಾಗಭೂಷಣವರ 'ಮಾಪುರ ತಾಯಿ ಮಕ್ಕಳು' ವಿನ ಸಿಂಗಾರಿ, 'ಜ್ವಲಂಗ'ದ 'ಸೀನಿಂಗಿ' 'ಅವ್ವ'ದ'ಗಂಗಾ', 'ಸಂಘರ್ಷ'ದ 'ಸಿದ್ಧಿ' ವ್ಯವಸ್ಥೆ ವಿರುದ್ಧ ಬಂಡೆದ್ದು ಬಂಡಾಯಕ್ಕೆ ನಾಂದಿ ಹಾಕಿದವರು. ಧಾರ್ಮಿಕ ಕಂದಾಚಾರ, ಮೌಢ್ಯ ಮತ್ತು ಬಡತನಗಳು ಹೆಣ್ಣಿನ ಬದುಕಿನಲ್ಲಿ ಉಂಟು ಮಾಡುವ ಅನಾಹುತಗಳನ್ನು ಸಾರಾ ಅಬೂಬಕರ್ ಕತೆಗಳು ವಿವರಿಸುತ್ತವೆ. ನಿರ್ದಿಷ್ಟ ಸಮುದಾಯದ ಧಾರ್ಮಿಕ ಕಟ್ಟಳೆಗಳು ಹೇಗೆ ಹೆಣ್ಣನ್ನು ಮನುಷ್ಯರಂತೆ ಕಾಣದೆ, ಅವಳನ್ನು ಒಂದು ವಸ್ತುವಿನಂತೆ, ಕಂಡು ವರ್ತಿಸುತ್ತವೆ ಎನ್ನುವುದನ್ನು ಮುಸ್ಲಿಂಸಂವೇದನಾ ಬರಹಗಳು ವಿವರಿಸುತ್ತವೆ. ಪುರುಷಕೇಂದ್ರಿತ ಕ್ರೌರ್ಯ, ಅರ್ಥಿಕ ಒತ್ತಡ ಮತ್ತು ಧರ್ಮದ ಕಟ್ಟಳೆಗಳ ಬಂಧನದಲ್ಲಿರುವ ಈ ಸ್ತ್ರೀ ಅಸಹಾಯಕಳು. ಸಮಾಜದ ಕ್ರೌರ್ಯ ಮತ್ತು ಪುರುಷವರ್ಗದ ಕ್ರೌರ್ಯಗಳಿಗೆ ಬಲಿಯಾಗಿ ದುರಂತವಾಗುವ ಸ್ತ್ರೀಯನ್ನು ಕಥನ ಸಾಹಿತ್ಯವು ಹಿಂದೆಯೂ ಚಿತ್ರಿಸಿದೆ.

'ಕಾನೂರು ಹೆಗ್ಗಡಿತಿ', 'ಚೋಮನ ದುಡಿ', ಕಾದಂಬರಿಗಳು , ಯಶವಂತ ಚಿತ್ತಾಲರ 'ಅಬೋಲಿನಾ', 'ಮೂರುದಾರಿಗಳು' ಕತೆಗಳು ಈ ಸ್ಥಿತಿಯ ಸ್ಪಷ್ಟ ಚಿತ್ರಣವನ್ನು ನೀಡಿವೆ. ವಿವಿಧ ಕಾದಂಬರಿಗಳಲ್ಲಿ ಬಂದಿರುವ ವೇಶ್ಯಾಚಿತ್ರಣದಲ್ಲಿಯೂ ಸಾಮಾಜಿಕ ಕ್ರೌರ್ಯದ ಚಿತ್ರಗಳಿವೆ. ಸಾರಾ ಅಬೂಬಕರರ 'ಚಂದ್ರಗಿರಿಯ ತೀರದಲ್ಲಿ'.ಯ

ನಾದಿರಾ, 'ವಜ್ರಗಳು' ವಿನ ನಫೀಸಾ, 'ಸಹನಾ'ದ ನಸೀಮ ಜೀವನದೊಡನೆ ಹೊಂದಿ ಬಾಳಲಾಗದೆ ದುರಂತವಾಗುವ ಪಾತ್ರಗಳು. ಪರಂಪರೆ ನಿರ್ದೇಶಿಸಿದಂತೆ ಬದುಕಲು ಅಸಮರ್ಥವಾಗುವ ಈ ಸ್ಥಿತಿಯಲ್ಲಿ ಬಿಡುಗಡೆ, ಬಂಡಾಯಗಳು ದೂರದ ಸ್ಥಿತಿ ಎನ್ನುವ ರೀತಿಯಲ್ಲಿದೆ.

ಸಾಮೂಹಿಕ ಬಂಡಾಯದ ಮೂಲಕ ವ್ಯವಸ್ಥೆಯ ವಿರುದ್ಧ ಬಂಡೇಳುವ ಸ್ತ್ರೀ ಸಮುದಾಯವನ್ನು ತೇಜಸ್ವಿಯವರ 'ಕಿರಗೂರಿನ ಗಯ್ಯಾಳಿಗಳು' ತೋರಿಸುವುದಾದರೂ, ಈ ಸಾಮೂಹಿಕ ಪ್ರಯತ್ನ ವೈಯಕ್ತಿಕನೆಲೆಯಲ್ಲಿ ಸೊತುಹೋಗುವುದನ್ನು ಅನೇಕ ಲೇಖಕರು ಮನಗಂಡಿದ್ದಾರೆ.

ಕೆ. ಸತ್ಯನಾರಾಯಣರ ಕಾದಂಬರಿಯ 'ಗೌರಿ', ರಂಶಾ ಕಾದಂಬರಿಯ 'ಸಾವಿತ್ರಿ' ದೊಡ್ಡೇರಿಯವರ 'ರತ್ನಿಯ ಮಗಳು' ಕಾದಂಬರಿಯ ರತ್ನ ಮತ್ತು ಗಂಗ, ನಿಸರ್ಗದ 'ತಾರ', ಸರ್ವಮಂಗಳದ 'ಮಂಗಳ' ದಾಂಪತ್ಯಜೀವನದಲ್ಲಿ ಮೂಡಿದ ಅತೃಪ್ತಿ, ಅಸಹನೆಗಳ ಕಾರಣದಿಂದ ಹೊಸ ಸಾಧ್ಯತೆಗಳನ್ನು ಹುಡುಕುವತ್ತ ಮುಖಮಾಡಿಕೊಂಡ ಪಾತ್ರಗಳು.

ಈ ಕಾಲಾವಧಿಯ ಮೊದಲ ಭಾಗದಲ್ಲಿಯೇ ಬಂದ ಸಾವಿತ್ರಮ್ಮ ಎಚ್.ವಿ.ಯವರ ಸಣ್ಣಕತೆಗಳು ಹೆಣ್ಣಿನ ಹೊಸ ವ್ಯಕ್ತಿತ್ವವನ್ನು ಕಾಣಿಸುವ ಮೊದಲ ಪ್ರಯತ್ನಗಳಾಗಿ ಗಮನಾರ್ಹವೆನಿಸುತ್ತವೆ. ಸಾವಿತ್ರಮ್ಮ ತಮ್ಮ ಕತೆಗಳಲ್ಲಿ ಸಂಪ್ರದಾಯಕತೆಯನ್ನು ಬಿಡಿಸಿಕೊಂಡು ತಮ್ಮ ಬದುಕನ್ನು ಕೈಯಾರೆ ನಿರ್ಮಿಸುವ ಸ್ತ್ರೀಪಾತ್ರಗಳ ಮೂಲಕ ಇಂಥ ಸಂಪ್ರದಾಯಕ್ಕೆ ನಾಂದಿ ಹಾಡಿದ್ದಾರೆ. ಶುಚಿತ್ವ, ಪಾತಿವ್ರತ್ಯ ಮೊದಲಾದ ಸಂಸ್ಕೃತಿಜನ್ಯ ಮೌಲ್ಯಗಳನ್ನು ಚಲಾವಣೆಗೆ ತರುವ ಕೆಲವು ಆದಿಮ ಪ್ರತಿಮೆಗಳಿರುವ ಪುರಾಣ ವಸ್ತುವನ್ನು ಪುನರ್ ವ್ಯಾಖ್ಯಾನಕ್ಕೆ ಒಳಪಡಿಸಿ, ಸ್ತ್ರೀ ಪಾತ್ರಗಳಲ್ಲಿ ಪ್ರತಿರೋಧ ಮತ್ತು ಪ್ರತಿಭಟನಾ ಧ್ವನಿಯನ್ನು ಮೂಡಿಸುವುದರಲ್ಲಿ ಸಾವಿತ್ರಮ್ಮನವರು ಮೇಲುಪಂಕ್ತಿ ಹಾಕಿದ್ದಾರೆ.

ಪುರಾಣ ಪಠ್ಯಗಳನ್ನು ಸಮಕಾಲೀನ ಚಿಂತನೆಗೆ ಅನುಗುಣವಾಗಿ ಪುನರ್ರಚಿಸುವ ಅನೇಕ ಲೇಖಕಿಯರು ತಮ್ಮ ಪ್ರಯತ್ನದಲ್ಲಿ ಅನೇಕ ಸ್ತ್ರೀ ಪಾತ್ರಗಳನ್ನು ಬಳಸಿಕೊಳ್ಳುತ್ತಾರೆ. ಸೀತೆ, ಕುಂತಿ, ದ್ರೌಪದಿ, ಊರ್ಮಿಳಾ, ಶಕುಂತಲೆ, ಮಾಧವಿ ಮತ್ತು ಕೈಕೆಯಿಯಂತಹ ಪಾತ್ರಗಳು, ಕನ್ನಡದಲ್ಲಿ ಪುರನ್ ವ್ಯಾಖ್ಯಾನಕ್ಕೆ ಒಳಪಟ್ಟ ಸ್ತ್ರೀ ಪಾತ್ರಗಳಾಗಿವೆ. ಮೂಲ ಪಠ್ಯದಲ್ಲಿ ವೈಭವೀಕರಣ ಮತ್ತು ಉನ್ನತೀಕಾರಣಕ್ಕೆ ಒಳಗಾದ ಸ್ತ್ರೀ ವ್ಯಕ್ತಿತ್ವವನ್ನು ಸಹಜತೆ ಮತ್ತು ವಾಸ್ತವಿಕತೆಯ ದೃಷ್ಟಿಯಿಂದ ಇಲ್ಲಿ ನೋಡಲಾಗಿದೆ.

ಒಮ್ಮುಖ ಅಭಿಪ್ರಾಯವನ್ನು ಹೊಮ್ಮಿಸುವ ಈ ಪುರಾಣ ಪ್ರತೀಕಗಳಲ್ಲಿ ಸಹಜ ದೌರ್ಬಲ್ಯ, ತುಮುಲಗಳನ್ನು ಮನಸ್ಸಿನ ವ್ಯಾಪಾರವನ್ನು, ಮಾತುಕತೆಗಳಲ್ಲಿ ಸಹಜ ಅಭಿವ್ಯಕ್ತಿಯನ್ನು ವ್ಯಕ್ತಪಡಿಸುತ್ತ ಸಮಗ್ರತೆಯನ್ನು ಕಾಣಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಪುರಾಣ ಪಾತ್ರಗಳ ಪುನರ್ ವ್ಯಾಖ್ಯಾನಗಳು ಲೇಖಕಿಯರ ಮೂಲಕ ನಡೆದಿರುವುದರಿಂದ ಸ್ತ್ರೀ ದೃಷ್ಟಿಕೋನದ ಮೂಲಕ ಈ ಕಲ್ಪನೆಯನ್ನು ಮರು ಓದಿಗೆ ಒಳಪಡಿಸಿದಂತಾಗಿದೆ.

ಸಂಪ್ರದಾಯ, ನಂಬಿಕೆಗಳನ್ನು ಅನುಸರಿಸಿ ಕುಟುಂಬವನ್ನು ಕೇಂದ್ರವಾಗಿಟ್ಟುಕೊಂಡು, ಮೌಲ್ಯಾಧಾರಿತ ಬದುಕನ್ನು ನಡೆಸುವ ಸ್ತ್ರೀಯರು ಇಲ್ಲಿಯೂ ಇದ್ದಾರೆ. ಅ.ನ.ಕೃ, ತ.ರಾ.ಸು, ಕಾರಂತ ಕಾದಂಬರಿಗಳಲ್ಲಿ ಬರುವ ಗೃಹಿಣಿಯರು,

ಲೇಖಕಿಯರ ಕಾದಂಬರಿಗಳ ನಾಯಕಿಯರು, ಈ ಪರಂಪರೆಯವರಾಗಿದ್ದಾರೆ. ಸಹನೆ, ತಾಳ್ಮೆ ಮತ್ತು ತ್ಯಾಗಮಯಿ ಜೀವನವನ್ನು ಈ ಸ್ತ್ರೀಯರು ಬದುಕುತ್ತಾರೆ.

ಎಂ.ಕೆ. ಇಂದಿರಾರ 'ಮನೆತುಂಬದ ಮಡದಿ', 'ಹೆಣ್ಣಿನ ಅಕಾಂಕ್ಷೆ', 'ಸದಾನಂದ'ದ ಸ್ತ್ರೀ ಪಾತ್ರಗಳು, ಅನುಪಮಾ ನಿರಂಜನರ 'ಸಂಕೋಲೆಯೊಳಗಿಂದ'ದ ವಿಜಯ, 'ಹಿಮದಹೂ' ವಿನ ಲಲಿತ, 'ಸ್ನೇಹಪಲ್ಲವಿ'ಯ ಸರಳ, 'ಋಣ'ದ 'ಗೋದಾವರಿ', 'ಎಳೆ'ಯ 'ಗಿರಿಜಾ' ಮೊದಲಾದವರು.

ಅನುಪಮಾರ ಈ ಕಾದಂಬರಿಗಳಲ್ಲಿ ಗಂಡಂದಿರು ಸ್ವೇಚ್ಛಾಚಾರಿಗಳಾಗಿದ್ದಾರೆ. ಗಂಡನ ದುಶ್ಚಟದ ಕಾರಣವಾಗಿಯೇ ಕಷ್ಟನಷ್ಟ, ರೋಗರುಜಿನಗಳನ್ನು ಪಡೆದು ಅಪಾರ ನೋವನ್ನು ಅನುಭವಿಸಿದರೂ, ಅಪಾರ ಸಹನೆಯಿಂದ ಮನೆ, ಅಸ್ತಿಗಳನ್ನು ಉಳಿಸುವ ಮಹಿಳೆಯರು ಈ ಕಾದಂಬರಿಗಳ ನಾಯಕಿಯರಾಗಿದ್ದಾರೆ. ತಮ್ಮ ಪರಿಸ್ಥಿತಿಯ ಅರಿವಿದ್ದರೂ, ಯಾರಿಂದಲೂ ನಿರೀಕ್ಷೆಯನ್ನು ಇಟ್ಟುಕೊಳ್ಳದೆ ಬದುಕುವ ಸಹನಾಮೂರ್ತಿಗಳು ಇವರು. ತ್ಯಾಗ ಇವರ ವ್ಯಕ್ತಿತ್ವದ ಒಂದು ಭಾಗವಾಗಿಯೇ ಬರುತ್ತದೆ. ದಾಂಪತ್ಯದ ಭಾವನಾತ್ಮಕ ಸಂಬಂಧಗಳಲ್ಲಿ ತಮ್ಮನ್ನು ಸಮರ್ಪಿಸಿಕೊಂಡು ಸುಖಿಸುವ ಪಾತ್ರಗಳು ಇಂದಿರಾ ಕಾದಂಬರಿಗಳಲ್ಲಿ ಕಾಣಸಿಗುತ್ತಾರೆ.

ಮಹಿಳಾ ಬರವಣಿಗೆಯಲ್ಲಿ ಕಾಣಿಸಿಕೊಳ್ಳುವ ಅತ್ತೆ, ಅಜ್ಜಿ, ಅಮ್ಮನ ಪಾತ್ರಗಳಲ್ಲಿರುವ ಸ್ತ್ರೀಯರು ಪಾರಂಪರಿಕ ಮೌಲ್ಯಗಳನ್ನು ಕುಟುಂಬದ ಕಿರಿಯ ಸದಸ್ಯರ ಮೂಲಕ ಮುಂದುವರಿಸುವ ಪ್ರಯತ್ನದಲ್ಲಿರುವುದನ್ನು ಗುರುತಿಸುವುದು ಅವಶ್ಯಕವಾಗಿದೆ. ಈ ಪ್ರಯತ್ನಗಳು ಸಮಾಜಸ್ವಾಸ್ಥ್ಯಕ್ಕೆ ಪರಂಪರೆಯ ಅವಶ್ಯಕತೆ ಇರುವುದನ್ನು ಸೂಚಿಸುತ್ತದೆ.

ಮಾತೃತ್ವದ ಹಿರಿಮೆಯನ್ನು ಸಾರುವ ದಿಕ್ಕಿನಲ್ಲಿ, ತಾಯ್ತನದ ಹಂಬಲಿಕೆಯ ಪರಿಪೂರ್ಣ ಚಿತ್ರವನ್ನು ಇನಾಂದಾರರ ಕಾದಂಬರಿ 'ಸ್ವರ್ಗದ ಬಾಗಿಲು' ವಿವರಿಸುತ್ತದೆ.

ಮಗುವಿನ ಹಂಬಲ ಫಲಿಸದಿದ್ದಾಗ, ತನ್ನ ಗಂಡನ ಭವಿಷ್ಯ ಜೀವನಕ್ಕಾಗಿ ಆತ್ಮಬಲಿದಾನ ಮಾಡಿದ ತ್ಯಾಗಮಯಿ ಹೆಣ್ಣೊಬ್ಬಳ ಕಥೆಯನ್ನು 'ಸ್ವರ್ಗದ ಬಾಗಿಲು' ವಿವರಿಸುತ್ತದೆ.

ತವರಿನ ಆಶ್ರಯವಿಲ್ಲದ ಕಾವೇರಿಗೆ ಮಕ್ಕಳಾಗದೆ ಅತ್ತೆಮನೆಯೂ ಮುಳ್ಳಾಗುತ್ತದೆ. ಮಕ್ಕಳಾದವರಿಗೆ ಮಾತ್ರ ಸ್ವರ್ಗದ ಬಾಗಿಲು ತೆರೆಯುತ್ತದೆ ಎಂಬ ಅತ್ತೆಯ ಮಾತಿನ ನಂಬಿಕೆ ಆಧಾರದಲ್ಲಿ ಶ್ರೀನಿವಾಸನ ಮರುಮದುವೆ ಪ್ರಯತ್ನ, ಕಾವೇರಿಯ ಆತ್ಮಹತ್ಯೆ ಪ್ರಯತ್ನಗಳು ನಡೆಯುತ್ತವೆ. ಕಾದಂಬರಿ 'ವಟಸಾವಿತ್ರಿ ವ್ರತ'ವನ್ನು ಕಾವೇರಿ ನಡೆಸುವುದರ ಮೂಲಕ ಅವಳನ್ನೂ, ಹೆಂಡತಿ ಸತ್ತಬಳಿಕ ಮರುಮದುವೆ ಅವಕಾಶವನ್ನು ನೀಡುವುದರ ಮೂಲಕ ಶ್ರೀನಿವಾಸನಿಗೂ ಸ್ವರ್ಗಕ್ಕೆ ಅವಕಾಶವನ್ನು ಕಲ್ಪಿಸುತ್ತದೆ. ಕಾವೇರಿಯ ಇಡೀ ಜೀವನ, ಅವಳ ದಿನನಿತ್ಯದ ವ್ಯವಹಾರಗಳು, ಮಾತುಕತೆಗಳು, ಕನಸು ವಾಸ್ತವಗಳು ತಾಯ್ತನದ ಕೇಂದ್ರದ ಸುತ್ತಲೂ ಸುತ್ತಿಕೊಂಡೇ ಇರುತ್ತವೆ.

'ಸ್ವರ್ಗದ ಬಾಗಿಲು' ವಿನ ಪೌರಾಣಿಕ ಕಲ್ಪನೆಯನ್ನು ಬಳಸಿಕೊಂಡು ಕಾವೇರಿಯ ಸತೀತ್ವವನ್ನು ಅವಳ ಆತ್ಮಾರ್ಪಣೆಯ ಕಾರ್ಯವನ್ನು ಕಾದಂಬರಿ ಸಮರ್ಥಿಸಿಕೊಳ್ಳುತ್ತದೆ. ಕಾವೇರಿಯ ಈ ಮನೋವೃತ್ತಿಯು

ಹಿನ್ನೆಲೆಯನ್ನು ವಿವರಿಸುವ ಇನಾಂದಾರರ ಈ ಕೆಳಗಿನ ಮಾತುಗಳು ಅವಳ ನಿಲುವನ್ನು ಸಮರ್ಥಿಸಿಕೊಳ್ಳುವ ಪ್ರಯತ್ನವೇ ಆಗಿದೆ.

"... ಈ ಮನೋವೃತ್ತಿ ಒಂದು ಸಂಸ್ಕೃತಿಯ ಪರಂಪರೆಯ ಪರಿಣಾಮವಾಗಿದೆ. ಒಂದು ಕಾಲದಲ್ಲಿ ಸಾಮಾಜಿಕ ಜೀವನದಲ್ಲಿ ಹೆಣ್ಣಿಗೆ ಇದ್ದ ಸ್ಥಾನದ ಮತ್ತು ಆ ಸ್ಥಾನದ ಪರಿಣಾಮವಾಗಿ ಹುಟ್ಟಿಕೊಂಡ ಮನೋವೃತ್ತಿಯ ಸಂಕೇತವಾಗಿದೆ." (ಇನಾಂದಾರ್,೧೯೯೩: ೨೦೦)

ಶಂಕರ್ ಮೊಕಾಶಿಯವರ 'ಗಂಗವ್ವ ಗಂಗಾಮಾಯಿ' ಮಗನಿಗಾಗಿ ಎಲ್ಲವನ್ನೂ ತನ್ನ ನಂಬಿಕೆಯನ್ನು ತ್ಯಾಗಮಾಡಿಕೊಂಡು ಹೋರಾಟದ ಬದುಕನ್ನು ಎದುರಿಸಿ, ಅತನನ್ನು ಮನುಷ್ಯನಾಗಿ ಮಾಡಿ ಧನ್ಯಳೆನಿಸಿದ ತಾಯಿಯ ಕತೆಯನ್ನು ವಿವರಿಸುತ್ತದೆ. ತಾಯ್ತನ ಮತ್ತು ಪತ್ನಿತ್ವದ ಮಾದರಿಗಳು ಈ ಅವಧಿಯ ರಚನೆಗಳಲ್ಲಿಯೂ ಕಾಣಿಸಿಕೊಂಡಿದೆ.

ವೇಶ್ಯೆಯರಲ್ಲಿ ತಾಯ್ತನದ ತುಡಿತಗಳನ್ನು ಸೂಚಿಸುವುದರ ಮೂಲಕ ಅವಳಲ್ಲಿರುವ ಹೆಣ್ತನವನ್ನು ವಿವರಿಸುವ ಪ್ರಯತ್ನಗಳು ನಡೆದಿವೆ. 'ಮೈಮನಗಳ ಸುಳಿಯಲ್ಲಿ'ನ ಮಂಜುಳ ಮತ್ತು ಮಾಸ್ತಿಯವರ 'ಚಂದ್ರವದನಾ' ಕತೆಯ ವೇಶ್ಯೆ ತಾಯ್ತನಕ್ಕಾಗಿ ವಿವಿಧ ರೀತಿ ಹಂಬಲಿಕೆಯನ್ನು ವ್ಯಕ್ತಪಡಿಸುತ್ತಾರೆ. 'ಗೃಹಭಂಗ'ದ ನರಸಿ ನಂಜಮ್ಮನ ಮಗನನ್ನು ತನ್ನ ಮಡಿಲಿಗೆ ಒಪ್ಪಿಸಿಕೊಂಡು ಅವನ ಅರೈಕೆ ನೋಡತ್ತಾಳೆ. 'ಉತ್ತುಮಿ'ಯ ನಡವಳಿಕೆ ನಿರೂಪಕನಿಗೆ ಮಾತೃತ್ವದ ಭಾವವಾಗಿ ಕಾಣುತ್ತದೆ. 'ಹೂವುಹಣ್ಣು' ಕಾದಂಬರಿಯ ರಮಾ ತನ್ನ ಮಗಳ ಭವಿಷ್ಯಕ್ಕಾಗಿ ಕೊನೆಯವರೆಗೆ ಹೋರಾಟ ನಡೆಸುತ್ತಾಳೆ. ಮಗಳಿಂದ ತಿರಸ್ಕೃತಳಾದಾಗ ಅವಳ ಮಮತೆ ಮೊಮ್ಮಗಳ ಸಲುವಾಗಿ ಹರಿಯುತ್ತದೆ. 'ಸುಬ್ಬಣ್ಣ'ದ ನೀಲಾಸಾನಿ ಸುಬ್ಬಣ್ಣನನ್ನು ಪೋಷಕಸ್ಥಾನದಲ್ಲಿ ನಿಂತು ಸಲಹುತ್ತಾಳೆ. ಆರೈಕೆ ಮಾಡುತ್ತಾಳೆ. ತಾನಾಗಿ ವೇಶ್ಯಾ ಜೀವನಕ್ಕೆ ಒಲಿಯುವ ಹೆಣ್ಣುಗಳ ಸ್ವಭಾವವನ್ನು ಈ ಕೆಳಗಿನ ಅಂಶಗಳ ಮೂಲಕ ಸಮರ್ಥಿಸಿಲಾಗಿದೆ.

೧. ಅತಿಕಾಮುಕತೆ ಮತ್ತು ಲೈಂಗಿಕ ಬಯಕೆಗಳು - ಅ.ನ.ಕೃ ಕಾದಂಬರಿಗಳು.

೨. ಆರ್ಥಿಕ ದುಸ್ಥಿತಿಯಿಂದ ಉದರ ನಿರ್ವಹಣೆಗಾಗಿ - ಹೂವುಹಣ್ಣು ಕಾದಂಬರಿ.

೩. ಸುಖಜೀವನದ ಕಲ್ಪನೆ - ಮುಕ್ತಿಯ ' ಸುಶೀಲ'.

೪. ಹರಕೆಗಾಗಿ - ನಾನು ಕೊಂದ ಹುಡುಗಿಯ ಚೆನ್ನಿ

ವೇಶ್ಯೆರನ್ನು ಉಪಭೋಗದ ಸಾಧನವಾಗಿ ಮಾತ್ರ ಸಾಹಿತ್ಯ ಕಂಡಿದೆ. ಅವಳ ಬದುಕಿನ ಇತರ ಸಾಧ್ಯತೆಗಳನ್ನು ನಿರಾಕರಿಸುವ ಮೂಲಕ ಸ್ತ್ರೀ ಅಧೀನ ಪರಿಕಲ್ಪನೆಗೆ ಸಹಕಾರವನ್ನು ನೀಡಿದೆ. ತಾಯ್ತನದ ಹಂಬಲಿಕೆ ಸಮಗ್ರ ವ್ಯಕ್ತಿತ್ವದ ವಿಕಾಸಕ್ಕೆ ಯಾವ ರೀತಿಯಿಂದಲೂ ಸಹಕಾರಿಯೆನಿಸುವುದಿಲ್ಲ.

## ಪಾತ್ರ ಚಿತ್ರಣ ಮತ್ತು ಸ್ತ್ರೀ ಅಭಿವ್ಯಕ್ತಿ

೧೯೪೮ ರಿಂದ ೧೯೯೯ ರವರೆಗಿನ ಕಥನ ಸಾಹಿತ್ಯದಲ್ಲಿ ಸ್ತ್ರೀ ಅಭಿವ್ಯಕ್ತಿ ಸಾಮಾಜಿಕ ಪಾತ್ರಗಳ ಮೂಲಕ

ಅಭಿವ್ಯಕ್ತಗೊಂಡಿದೆ. ಸಾಂಪ್ರದಾಯಿಕ ಗೃಹಿಣಿ, ವಿಧವೆ, ಮತ್ತು ವೇಶ್ಯೆ ಇಲ್ಲಿ ಕಾಣಸಿಗುವ ಮುಖ್ಯ ಪಾತ್ರಗಳು. ನಂತರ ಕಾಣಬರುವವರು, ಶೋಷಿತಸಮುದಾಯದ ಒಂದು ಭಾಗವಾಗಿ ಬದುಕುವ ಅಸಹಾಯಕ ಸ್ಥಿತಿಯಲ್ಲಿರುವ ಹೆಣ್ಣುಗಳು. ಇವರನ್ನು ಹೊರತು ಪಡಿಸಿದರೆ ವೈಚಾರಿಕ ನೆಲೆಯನ್ನು ಆಧರಿಸಿ ಕಾಣಿಸಿಕೊಂಡ ವಿಮೋಚಿತ ನೆಲೆಯ ಸ್ತ್ರೀಯರು ಮತ್ತು ಬದುಕಿನೊಂದಿಗೆ ರಾಜಿಮಾಡಿಕೊಂಡು ಇರುವ ಹೊಂದಾಣಿಕೆ ಮನೋಭಾವದ ಸ್ತ್ರೀಯರು. ಹೆಣ್ಣನ್ನು ನಿರ್ವಚಿಸುವ ಈ ವಿವಿಧ ನೆಲೆಗಳು ಅವಳ ವ್ಯಕ್ತಿತ್ವದ ಸಮಗ್ರತೆಯನ್ನು ತಿಳಿಯುವ ಪ್ರಯತ್ನಗಳಾಗಿ ಬಂದಿವೆ.

ಕಥನ ಸಾಹಿತ್ಯದಲ್ಲಿರುವ ಹೆಣ್ಣು ಬಹುತೇಕವಾಗಿ ಆರ್ಥಿಕವಾಗಿ ದುರ್ಬಲಸ್ಥಿತಿಯಲ್ಲಿರುವ ವ್ಯಕ್ತಿಯಾಗಿದ್ದಾಳೆ. ಕನ್ನಡದ ಬಹುಪಾಲು ಲೇಖಕರು ಮಧ್ಯಮವರ್ಗದಿಂದ ಬಂದವರಾಗಿರುವುದರಿಂದ ಮತ್ತು ಕೆಳವರ್ಗದ ಬದುಕಿನ ವಿಶ್ಲೇಷಣೆಯಲ್ಲಿ ಅಸಕ್ತಿ ಹೊಂದಿದವರಾಗಿರುವುದರಿಂದ ತಮ್ಮ ಕೃತಿಯಲ್ಲಿ ಆರ್ಥಿಕವಾಗಿ ಅಸಹಾಯಕ ಸ್ಥಿತಿಯಲ್ಲಿರುವ ಹೆಣ್ಣಿನ ಚಿತ್ರಣವನ್ನು ನೀಡಿದ್ದಾರೆ. ವಿದ್ಯೆ ಪಡೆದು, ಉದ್ಯೋಗದಲ್ಲಿರುವ ಸ್ತ್ರೀಯನ್ನು ಕೌಟುಂಬಿಕ ಜವಾಬ್ದಾರಿಗಳು, ಸಾಮಾಜಿಕ ಪರಿಸ್ಥಿತಿಗಳು, ನಿಯಂತ್ರಿಸುವುದನ್ನು ಚಿತ್ರಿಸಲಾಗಿದೆ.

ಈ ನಿರ್ಬಂಧಗಳಲ್ಲಿ ತಮ್ಮ ಅಸೆ ಅಕಾಂಕ್ಷೆಗಳನ್ನು ಈಡೇರಿಸಲಾಗದೆ, ಮಹತ್ವಾಕಾಂಕ್ಷೆ ಇದ್ದರೂ, ತನ್ನಮಿತಿಯನ್ನು ಅತಿಕ್ರಮಿಸದಂತೆ ಎಚ್ಚರವನ್ನು ಕಾಪಾಡುವ ಸ್ಥಿತಿಯಲ್ಲಿ,ಇರುವ ರೀತಿಯಲ್ಲಿಯೇ ಮುಂದುವರಿಯುವುದು ನೆಮ್ಮದಿಕರ ಎಂಬ ವಾತಾವರಣವನ್ನು ಇಲ್ಲಿ ಕಲ್ಪಿಸಲಾಗಿದೆ.

**ಸಾಂಪ್ರದಾಯಿಕ ಗೃಹಿಣಿ**

ಮನೆ, ಗಂಡ, ಮಕ್ಕಳು ಮತ್ತು ಬಂಧುಗಳನ್ನು ಬದುಕಿನ ಕೇಂದ್ರವೆಂಬ ಗ್ರಹಿಕೆಯಲ್ಲಿರುವ ಹೆಣ್ಣು, ಹೆಣ್ಣಾಗಿ ಹುಟ್ಟಿದ ಮೇಲೆ ಮನೆ, ಗಂಡ ಮತ್ತು ಮಕ್ಕಳ ಜವಾಬ್ದಾರಿ ತನ್ನ ಕರ್ತವ್ಯವೆಂಬ ಭಾವನೆಯುಳ್ಳವಳು. ಗಂಡಸು ಸೋಮಾರಿಯಾದಾಗ, ಮೈಗಳ್ಳನಾದಾಗ, ಬೈರಾಗಿಯಾದಾಗ, ಸಂನ್ಯಾಸ ಸ್ವೀಕರಿಸಿದಾಗ, ದುಶ್ಚಟಗಳಿಗೆ ದಾಸನಾದಾಗ ಅಥವಾ ಬೇಜವಾಬ್ದಾರಿಯಿಂದ ಮನೆಬಿಟ್ಟು ಹೊರನಡೆದಾಗ - ಅವನ ಅನುಪಸ್ಥಿತಿಯಲ್ಲಿ ಮನೆ ಕುಸಿಯದಂತೆ ನೋಡಿಕೊಂಡು, ಕಷ್ಟ ನಷ್ಟಗಳನ್ನು ಅನುಭವಿಸಿ, ನೋವನ್ನು ಮೌನವಾಗಿ ಸಹಿಸಿಕೊಂಡು ಮಕ್ಕಳ ಏಳಿಗೆಗಾಗಿ ಶ್ರಮ ಪಡುವವಳು. ಕೈಹಿಡಿದ ಗಂಡ ಕೆಟ್ಟವನಾಗಿದ್ದರೆ ಅವನನ್ನು ತಿದ್ದುವುದಾಗಲೀ, ವಿರೋಧಿಸುವುದಾಗಲೀ, ನಿರಾಕರಿಸುವುದಾಗಲೀ ಮಾಡದೆ, ಆತನ ಇಲ್ಲಾ ದುರ್ಗುಣಗಳನ್ನು ಸಹಿಸಿಕೊಂಡು, ಕ್ಷಮಿಸಿಕೊಂಡು ಉದಾರತೆ ತೋರುವವಳು.

'ಹೆಣ್ಣು ಇರುವುದರಿಂದಲೇ ಮನೆ' ಎಂಬ ಸಾಮೂಹಿಕ ಗ್ರಹಿಕೆಯಿಂದ ತನ್ನ ಕರ್ತವ್ಯವೆಂಬತೆ 'ಗೃಹ'ವನ್ನು ರಕ್ಷಿಸಿಕೊಳ್ಳುವವಳು ಸಾಂಪ್ರದಾಯಕ ಗೃಹಿಣಿ. ಉದಾ : ಮಾಸ್ತಿ, ಕಾರಂತ, ಅ.ನ.ಕೃ, ತ.ರಾ.ಸು ಕಾದಂಬರಿಗಳಲ್ಲಿಬರುವ ಗೃಹಿಣಿಯರು.

**ವೇಶ್ಯೆ:** ವೈವಾಹಿಕ ಚೌಕಟ್ಟಿಲ್ಲದ ಮುಕ್ತ ಲೈಂಗಿಕ ಜೀವನಕ್ಕೆ ಅವಕಾಶವಿರುವ ಹೆಣ್ಣು: ಅಸಾಂಪ್ರದಾಯಕವೆನಿಸುವ

ಈ ಜೀವನ ರೀತಿ ವಿವಿಧ ಕಾರಣಗಳಿಂದ ಒದಗಿಬಂದಿರಬಹುದು.

೧. ಕುಲವೃತ್ತಿಯಾಗಿ ಪಾರಂಪರಿಕವಾಗಿ ತಲೆಮಾರುಗಳ ಮೂಲಕ ಮುಂದುವರಿದ ಜೀವನ ವಿಧಾನ.

೨. ಸಂಪ್ರದಾಯ, ನಂಬಿಕೆ, ಮತ್ತು ಹರಕೆಗಳ ರೂಪದಲ್ಲಿ ಹೆಣ್ಣನ್ನು ಈ ಜೀವನ ವಿಧಾನಕ್ಕೆ ಒಪ್ಪಿಸಿಕೊಳ್ಳುವುದು.

೩. ಆರ್ಥಿಕ ದುಸ್ಥಿತಿ ಕಾರಣದಿಂದ ಲೈಂಗಿಕ ಶೋಷಣೆಯಿಂದ ಒತ್ತಾಯ ಪೂರ್ವಕವಾಗಿ ಈ ಜೀವನ ವಿಧಾನಕ್ಕೆ ಒಳಪಟ್ಟಿರಬಹುದು.

೪. ಸ್ವಇಚ್ಛೆಯಿಂದ ಸಾಂಪ್ರದಾಯಿಕ ಜೀವನವನ್ನು ಧಿಕ್ಕರಿಸಿ, ಸ್ವಂತ ಆಯ್ಕೆಯಾದ ಈ ಜೀವನ ವಿಧಾನವನ್ನು ಆರಿಸಿಕೊಂಡಿರಬಹುದು. ಪ್ರಾಚೀನ ಸಾಹಿತ್ಯದಲ್ಲಿಯೂ ವೇಶ್ಯೆಯರ ವಿವರಗಳು ದೊರೆಯುತ್ತವೆ. ಕಾವ್ಯದ ಅಷ್ಟಾದಶ ವರ್ಣನೆಗಳಲ್ಲಿ, ಶೃಂಗಾರ ಕಲ್ಪನೆಗಳಲ್ಲಿ, ತಪ್ಪದೆ ವೇಶ್ಯೆಯರ ಉಲ್ಲೇಖವಿದೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ವೇಶ್ಯೆಯರನ್ನು ಕಥಾನಾಯಕಿಯರನ್ನಾಗಿ ಮಾಡಿದ ಕತೆ, ಕಾದಂಬರಿಗಳು ಬಂದಿವೆ. ವೇಶ್ಯೆ ಸಮಾಜದಲ್ಲಿ ಲೈಂಗಿಕ ಉಪಭೋಗದ ಒಂದು ಸಾಧನವಾಗಿರುವುದನ್ನು ಕಾದಂಬರಿಗಳು ವಿವರಿಸುತ್ತವೆ. 'ನಾವು ಇರುವುದು ಮೈಮಾರುವುದಕ್ಕೆ, ಮನಸ್ಸನ್ನಲ್ಲ'[೧೦] ಎನ್ನುವ ಮಾತು ವೇಶ್ಯೆಯನ್ನು ನಿರ್ವಚಿಸುತ್ತದೆ. ಸಮಾಜ ವೇಶ್ಯೆಯನ್ನು ಗೃಹಿಣಿ ರೀತಿಯಲ್ಲಿಯೇ ನಿಯಂತ್ರಣದಲ್ಲಿಟ್ಟುಕೊಳ್ಳುತ್ತದೆ.

ವೇಶ್ಯೆ-ಸಮಾಜವನ್ನು ಸೃಷ್ಟಿಸಿ ಅದನ್ನು ಮುಂದುವರಿಸುವುದರಲ್ಲಿ ಆಸಕ್ತಿ ವಹಿಸಿರುವ ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆ, ವೇಶ್ಯೆ ಕುರಿತು ಅನೇಕ ನಿರೀಕ್ಷೆಗಳನ್ನು ಪುರುಷಪರವಾಗಿಯೇ ನಿರ್ಧರಿಸಿದೆ. ವೇಶ್ಯೆಯಾಗಿದ್ದ ಹೆಣ್ಣು ತನ್ನ ವೃತ್ತಿಯನ್ನು ತ್ಯಜಿಸಿ ಮರ್ಯಾದೆಯಿಂದ ಬದುಕನ್ನು ಸಾಗಿಸಬೇಕೆನ್ನುವ ಬಯಕೆ ವಿಫಲವಾಗುವುದನ್ನು ಕತೆಗಳು ಉದ್ದೇಶ ಪೂರ್ವಕವಾಗಿ ವಿವರಿಸುತ್ತವೆ. ವೇಶ್ಯೆಯರದು ಆಶ್ರಿತ ಬದುಕು. ವೇಶ್ಯಾಜೀವನದ ವಿವರಗಳನ್ನು ಒಳಗೊಂಡಿರುವ ಕೆಲವು ಕತೆ, ಕಾದಂಬರಿಗಳು_

ಕಾದಂಬರಿಗಳು: ನಿರಂಜನರ 'ಅಭಯ', ತ.ರಾ.ಸು ರವರ 'ಮಸಣದ ಹೂವು', ಇನಾಂದಾರರ 'ಶಾಪ', ಎಂ.ಕೆ. ಇಂದಿರಾರ 'ಗೆಜ್ಜೆಪೂಜೆ', ತ್ರಿವೇಣಿಯವರ 'ಹೂವುಹಣ್ಣು', ಅ.ನ.ಕೃರವರ 'ನಗ್ನಸತ್ಯ' ಕಾದಂಬರಿ ಭಾಗಗಳು, ಕಾರಂತರ 'ಕನ್ಯಾಬಲಿ', 'ಮೈಮನಗಳ ಸುಳಿಯಲ್ಲಿ', ನಿರ್ಭಾಗ್ಯಜನ್ಮ',

ಸಣ್ಣಕತೆಗಳು: ಮುಗಳಿಯವರ 'ವಿತಂತು ವೇಶ್ಯೆ', ಕೊಡಗಿನ ಗೌರಮ್ಮನ 'ಮನುವಿನ ರಾಣಿ', ಶ್ಯಾಮಲಾದೇವಿ ಬೆಳಗಾಂವಕರರ 'ಕರಳಕತ್ತರಿ', 'ತಾಯಿಮಾತಾಯಿ', 'ಸ್ನೇಹದರ್ಶನ', ಅನಂದರ ' ನಾನು ಕೊಂದ ಹುಡುಗಿ', ಚಿತ್ತಾಲರ 'ಉತ್ತುಮಿ', ಮಾಸ್ತಿಯವರ 'ಚಂದ್ರವದನಾ' ಮತ್ತು 'ಬೀದಿಯಲ್ಲಿ ಹೋಗುವ ನಾರಿ', ವೈದೇಹಿಯ 'ಚಂದಲೆ' ಮತ್ತು ನಿರಂಜನರ 'ಕೊನೆಯ ಗಿರಾಕಿ'. ವೇಶ್ಯೆ ಕುರಿತು ಪ್ರಸ್ತಾಪವಿರುವ ಕಾದಂಬರಿಗಳು: ಮಾಸ್ತಿಯವರ 'ಸುಬ್ಬಣ್ಣ' ಮತ್ತು ಭೈರಪ್ಪನವರ 'ಗೃಹಭಂಗ'.

ಕೆಲವು ವೇಶ್ಯಾಪಾತ್ರಗಳು

ಚೆನ್ನೀ (ನಾನುಕೊಂದ ಹೆಂಡತಿ), ಚಂದ್ರಿ (ಕರುಳ ಕತ್ತರಿ), ಉತ್ತುಮಿ (ಉತ್ತುಮಿ), ರಾಣಿ(ಕೊನೆಯಗಿರಾಕಿ)ರಂಗಾಸಾನಿ, (ಶಾಪ), ಸಂಗವ್ವ, ಅಪರ್ಣ(ಗೆಜ್ಜೆಪೂಜೆ), ನೀಲಾಸಾನಿ (ಸುಬ್ಬಣ್ಣ), ಮಂಜುಳ(ಮೈಮನಗಳ ಸುಳಿಯಲ್ಲಿ), ಸುಶೀಲೆ (ಮುಕ್ತಿ), ರಮ (ಹೂವುಹಣ್ಣು).

ಕಥನ ಸಾಹಿತ್ಯ ವೇಶ್ಯಾ ಸಮಸ್ಯೆಯನ್ನು ಸಾಮಾಜಿಕ ಸಮಸ್ಯೆಯಾಗಿ ಕಂಡಿದೆ. ಸಾಮಾಜಿಕ ಅಸಮಾನತಾ ಕಲ್ಪನೆಯಲ್ಲಿ ವೇಶ್ಯೆಯೂ ಸಮಾಜದ ಒಂದು ಭಾಗವಾಗಿ, ವೇಶ್ಯಾಸಮಾಜ ಸಾಮಾಜಿಕ ಶೋಷಿತ ಭಾಗವಾಗಿ ಅ.ನ.ಕೃ, ಕಟ್ಟಿಮನಿ, ನಿರಂಜನ, ತ.ರಾ.ಸು ಮೊದಲಾದ ಕಾದಂಬರಿಕಾರರಿಗೆ ಕಂಡಿದೆ. ವೇಶ್ಯಾಬದುಕಿನಲ್ಲಿ ಮಾನವೀಯ ಅಂಶಗಳಿಗೆ ಅವಕಾಶ ನೀಡಿದವರು ಕಾರಂತರು. ಲೇಖಕಿಯರು ವೇಶ್ಯೆಯನ್ನು ಸ್ತ್ರೀಪರದೃಷ್ಟಿಯಿಂದ ಕಂಡಿದ್ದಾರೆ. ವೇಶ್ಯಾ ಜೀವನಕ್ರಮವು ಬಾಹ್ಯ ಒತ್ತಡದ ಮೂಲಕ ಅನುಷ್ಠಾನಕ್ಕೆ ಬರುತ್ತದೆ, ಎನ್ನವುದನ್ನು ಸೂಚಿಸಲು ಕಾದಂಬರಿಗಳಲ್ಲಿ ಪರಂಪರಾಗತ ಒತ್ತಡದ ರೂಪದಲ್ಲಿ ಹಿರಿಯ ಹೆಂಗಸರ ಸೃಷ್ಟಿಯನ್ನು ಮಾಡಿದೆ.

'ಶಾಪ' ಕಾದಂಬರಿಯ ರಂಗಾಸಾನಿ ಮತ್ತು 'ಗೆಜ್ಜೆಪೂಜೆ'ಯ ಸಂಗವ್ವ ವೃತ್ತಿಗಿಳಿಯಲು ಒತ್ತಡ ತರುವ ಹಿರಿಯರು. ಶ್ಯಾಮಲಾದೇವಿ ಕತೆಗಳಲ್ಲಿ ಹೆತ್ತ ತಾಯಂದಿರು ಮಕ್ಕಳನ್ನು ಬಲವಂತವಾಗಿ ವೃತ್ತಿಗಿಳಿಸುವ ಪ್ರಯತ್ನ ನಡೆಸುತ್ತಾರೆ. ವಂಶಪಾರಂಪರ್ಯದ ವೃತ್ತಿಯನ್ನು, ಆಧುನಿಕ ಶಿಕ್ಷಣ ನೀಡಿದ ವೈಚಾರಿಕತೆಯ ಪ್ರಭಾವದಿಂದ ತಿರಸ್ಕರಿಸಿದ ಪ್ರಯತ್ನಗಳು ವಿಫಲವಾಗುವುದನ್ನು ಶಾಪ ಮತ್ತು ಗೆಜ್ಜೆಪೂಜೆ ಕಾದಂಬರಿಗಳು ವಿವರಿಸುತ್ತವೆ.

ಶಾಪದ ನಾಯಕಿ ಸರೋಜಿನಿಗೆ ತನ್ನ ಕುಲವೃತ್ತಿ ಕೀಳು ಎಂಬ ಭಾವನೆ ಇದೆ. ತನ್ನಂತೆ ಅಸಹಾಯಕರಾಗಿರುವ ಅನೇಕ ಹೆಣ್ಣುಗಳ ವಿಮೋಚನೆಯಾಗಬೇಕು ಎನ್ನುವ ಮನೋಭಾವವನ್ನು ಬೆಳೆಸುತ್ತಾಳೆ ಸರೋಜಿನಿ. ಕಾದಂಬರಿ ಸೃಷ್ಟಿಸುವ ಅಪೇಕ್ಷಿತ ಘಟನೆಗಳಿಂದ ಸರೋಜಿನಿಯ ಶೀಲಹರಣವಾಗುತ್ತದೆ. ಅವಳ ಮೈಯಲ್ಲಿ ಹರಿಯುವ ರಕ್ತ ಹೆತ್ತತಾಯಿಯ ಅಸ್ವಸ್ಥತೆ ಕಾರಣದಿಂದ ವಿಷಯುಕ್ತವಾಗುತ್ತದೆ. ಅವಳ ಪ್ರೇಮಿ ಸೋದರ ಸಂಬಂಧಿಯಾಗುತ್ತಾನೆ. ವಿವಾಹ ಸಾದ್ಯತೆಗಳ ಎಲ್ಲ ದ್ವಾರಗಳು ಸರೋಜಿನಿ ಪಾಲಿಗೆ ಮುಚ್ಚಿಬಿಡುತ್ತವೆ. ವೇಶ್ಯೆ ಮಗಳು ವೇಶ್ಯೆಯಾಗಿಯೇ ಉಳಿದುಬಿಡುತ್ತಾಳೆ. ವೃತ್ತಿಮೂಲಕವಾಗಿ ಅಲ್ಲದಿದರೂ ರಕ್ತಸಂಬಂಧದ ಕಾರಣಗಳಿಗಾಗಿ.

ಗೆಜ್ಜೆಪೂಜೆಯ ಚಂದ್ರಿಯ ಮನಸ್ಸು ವೈವಾಹಿಕ ಜೀವನದತ್ತ ಆಕರ್ಷಿತವಾಗುತ್ತದೆ. ಬಾಲ್ಯಗೆಳೆಯ ಸೋಮು, ಮತ್ತು ಸಂಪ್ರದಾಯಶೀಲರಾದ ಅವನ ತಂದೆಯ ವಾತ್ಸಲ್ಯಗಳು ಚಂದ್ರಿಯ ಮನಸ್ಸಿನಲ್ಲಿ ಹೊಸ ಆಲೋಚನೆಗಳನ್ನು ಮೂಡಿಸುತ್ತವೆ. ಆದರೆ ವಿವಾಹಿಬಾಹಿರ ಸಂಬಂಧದ ಫಲವಾಗಿ ಹುಟ್ಟಿ, ಸಂಗವ್ವನ ಆಶ್ರಯದಲ್ಲಿ ಬೆಳೆದ ಚಂದ್ರಿಯ ಉದ್ದೇಶ ಸಫಲಗೊಳ್ಳುವುದಿಲ್ಲ. ವಿವಾಹಸಂಬಂಧದೊಳಗೆ ಹುಟ್ಟಿದ ಅವಳ ತಂಗಿ ಸೋಮುವಿನ ಪತ್ನಿಯಾಗುತ್ತಾಳೆ. ಭ್ರಮನಿರಸನ ಹೊಂದಿದ ಚಂದ್ರಿ 'ಗೆಜ್ಜೆಪೂಜೆ' ಕೈಗೊಂಡು ಅನೈತಿಕ ಬದುಕನ್ನು ಬಾಳಲಾರದೆ 'ಅತ್ಮಹತ್ಯೆ' ಮಾಡಿಕೊಳ್ಳುತ್ತಾಳೆ. ಗೆಜ್ಜೆ ಕಟ್ಟಿದ ಹೆಣ್ಣಾಗಿಯೇ ಅವಳ ಬಾಳು ಸಮಾಪ್ತವಾಗುತ್ತದೆ.

**ವಿಧವೆ:** ವಿಧವೆ ಗಂಡ ಸತ್ತ ಹೆಣ್ಣು.

ವಿಧವೆಯಾದವಳು ಕೌಟುಂಬಿಕ ಸುರಕ್ಷತತೆಯ ಆಧಾರವಾಗಿದ್ದ ಗಂಡನ ಸಾವಿನೊಂದಿಗೆ ಅಸಹಾಯಕಳಾಗುತ್ತಾಳೆ - ಇದು ವಸ್ತುಸ್ಥಿತಿ. ವಿಧವೆಗೆ ಕೆಲವು ಸಂಪ್ರದಾಯಗಳನ್ನು ರೂಢಿರಿವಾಜುಗಳನ್ನು ಸಮಾಜ ಕಲ್ಪಿಸಿದೆ. ಈ ಪದ್ದತಿಗಳು ಸಾಮಾನ್ಯವಾಗಿ ಸಮಾಜದ ಉಚ್ಛವರ್ಗದ, ಸಂಪ್ರದಾಯಸ್ಥ ಸಮಾಜದಲ್ಲಿ ರೂಢಿಯಲ್ಲಿದೆ. ವಯಸ್ಸಿನ ಅಂತರವನ್ನು ಗಮನಿಸದೆ, ತನ್ನ ಗಂಡನೊಡನೆ ಅವಳು ಸಂಸಾರ ಮಾಡಿರಲಿ, ಮಾಡದೆ ಇರಲಿ, ಅವಳ ಗಂಡ ಸತ್ತು ಹೋದ ನಂತರ ಅವಳ ಮೇಲೆ ಕೆಲವು ನಿರ್ಬಂಧಗಳನ್ನು ಹಾಕಲಾಗುವುದು.

೧. ಗಂಡ ಸತ್ತೊಡನೆ ಅವಳಗಿಷ್ಟವಿರಲಿ,ಬಿಡಲಿ ಗಂಡನ ಚಿತೆಯಲ್ಲಿ ಅವಳನ್ನು ದಹಿಸುವ ಪದ್ಧತಿ ಮೊದಲನೆಯದು. 'ಸತೀಪದ್ಧತಿ' ಯಲ್ಲಿ ಸತಿಯಾದವಳು, ಮಹಾಸತಿಯಾಗಿ ಪೂಜಾರ್ಹಳು ಎಂಬ ಭಾವನೆ.

೨. ಬದುಕಿದ್ದರೆ ಅವಳನ್ನು 'ಮಡಿ' ಮಾಡಿಸುವುದು.

ಕೇಶ ಮುಂಡನ ಮತ್ತು ಅಲಂಕಾರಗಳ ನಿಷೇಧದ ಮೂಲಕ ವಿರೂಪಗೊಳಿಸುವುದು. ಈ ರೀತಿಯಿಂದ ಅವಳ ಭೌತಿಕ ಶರೀರದ ಮೇಲೆ ಅಧಿಕಾರ ಸ್ಥಾಪನೆ ಮಾಡುವುದು.

೩.ಸಾರ್ವಜನಿಕ ಜೀವನದಿಂದ ವಂಚಿತಗೊಳಿಸುವುದು. ಶುಭಕಾರ್ಯಗಳಿಲ್ಲಿ ಎದುರು ಕಾಣಿಸದಂತೆ, ಮಂಗಳಕಾರ್ಯದಲ್ಲಿ ಭಾಗವಹಿಸದಂತೆ ತಡೆಯುವುದು.

೪.ವಿಧವೆಗೆ ಲೈಂಗಿಕ ಜೀವನ ನಿಷಿದ್ಧ. ಲೈಂಗಿಕ ಸಂಬಂಧದಿಂದ ಗರ್ಭಿಣಿಯಾದರೆ ಬಹಿಷ್ಕಾರ, ಘಟಶ್ರಾದ್ಧ ಮುಂತಾದ ಕ್ರಮಗಳನ್ನು ಜಾರಿಗೊಳಿಸುವುದು ಹೀಗೆ ಹುಟ್ಟಿದ ಮಕ್ಕಳನ್ನು ಪ್ರತ್ಯೇಕವಾಗಿ ಪರಿಗಣಿಸುವುದು (ಮಾಲೇರ ಜಾತಿ)

೫.ಕಟ್ಟುನಿಟ್ಟಾದ ಜೀವನ ಕ್ರಮ. ಆಹಾರ, ಸ್ನಾನ, ನಿದ್ದೆ,ಮೊದಲಾದ ನಿತ್ಯಕ್ರಮಗಳಿಗೆ ವ್ರತನೇಮಗಳ ಹೆಸರಿನಲ್ಲಿ ಕಟ್ಟು ಪಾಡುಗಳು.

೬. ವಿಧವೆಯ ಜೀವನವನ್ನು ಆಧರಿಸಿ ಬಂದ ಕತೆಗಳು, ಕಾದಂಬರಿಗಳು: ಇಂದಿರೆ, ಇಂದಿರಾಬಾಯಿ, ನಭ, ಹೂವುಹಣ್ಣು, ದೂರದ ಬೆಟ್ಟ, ಹೆಣ್ಣೆಲೆಚಿಗುರಿದಾಗ, ವಂಶವೃಕ್ಷ, ವೈಶಾಖ, ಫಣಿಯಮ್ಮ, ಮೂಕಜ್ಜಿಕನಸುಗಳು, ಬನಶಂಕರಿ, ವಾಣಿಯ ಸಮಸ್ಯೆ, ಪಾತೂಕತೆ. ಸತೀಪದ್ದತಿಯನ್ನು ಮಾಡಿದುಣ್ಣೊಮಹರಾಯ ಮತ್ತು ಸರಸಮ್ಮನ ಸಮಾಧಿ ಕಾದಂಬರಿಗಳು ಉಲ್ಲೇಖಿಸಿವೆ. ಪುಟ್ಟಣ್ಣನವರು ಮಹಾಸತಿಯನ್ನು ಆದರ್ಶೀಕರಣಕ್ಕೆ ಒಳಪಡಿಸಿದರೆ ಕಾರಂತರು ವಿಡಂಬನೆಗೆ ಗುರಿಪಡಿಸುತ್ತಾರೆ.

ಕೇಶಮುಂಡನದ ಪ್ರಸಂಗಗಳು 'ನಭ', 'ಫಣಿಯಮ್ಮ', 'ಪಾತೂಕತೆ' , 'ಬನಶಂಕರಿ', 'ವಂಶವೃಕ್ಷ' ಮತ್ತು 'ವೈಶಾಖ' ಕಾದಂಬರಿಗಳಲ್ಲಿ ಇದೆ.

ಫಣಿಯಮ್ಮ ಪ್ರಾಯಕ್ಕೆ ಬಂದ ಹೊಸದರಲ್ಲಿಯೇ ಅತ್ಯಂತ ನೋವಿನಿಂದ 'ಮುಂಡನ'ಕ್ಕೆ ತಲೆ ಒಡ್ಡಿಕೊಂಡರೆ,

ಅದೇ ಕಾದಂಬರಿಯ ದಾಕ್ಷಾಯಣಿ ಪ್ರಬಲವಾಗಿಯೇ ಕೇಶಮುಂಡನವನ್ನು ವಿರೋಧಿಸುತ್ತಾಳೆ. ಅದರೆ ಅವಳ ವಿರೋಧಕ್ಕೆ ಅನುಮೋದನೆಯನ್ನು ಯಾರು ಕೊಡುವುದಿಲ್ಲ ಬಲವಂತವಾಗಿ ಅವಳನ್ನು ಮಡಿ ಮಾಡಿಸುತ್ತಾರೆ.

ಪಾತೂಕತೆಯ ಪಾತು ಮತ್ತು ವಂಶವೃಕ್ಷದ ನಾಗವೇಣಿಯವರು ಸ್ವ ಇಚ್ಛೆಯಿಂದ ಕೂದಲನ್ನು ತೆಗೆಸುತ್ತಾರೆ. ಅದೇ ಕಾದಂಬರಿಯ ಕಾತ್ಯಾಯಿನಿ ಮರುವಿವಾಹದ ಪ್ರಸ್ತಾಪವನ್ನು ಅತ್ತೆಮಾವಂದಿರ ಮುಂದಿಟ್ಟಾಗ, ಅವಳನ್ನು ಸೂಕ್ತ ಸಮಯದಲ್ಲಿ ಮಡಿ ಮಾಡಿಸದೆ ಬಿಟ್ಟಿರುವುದೇ ಈ ಅನರ್ಥಕ್ಕೆ ಕಾರಣ ಎನ್ನುವ ರೀತಿಯ ವಾದದ ಮೂಲಕ ವಿಧವಾ ವಿವಾಹಕ್ಕೆ ಅಸಮ್ಮತಿ ಬರುತ್ತದೆ. ನಾಗವೇಣಿಯ ಕೇಶಮುಂಡನದ ಸಂದರ್ಭದಲ್ಲಿ ಕಾತ್ಯಾಯಿನಿ ಮೂಲಕವೇ ಸಮರ್ಥನೆಯನ್ನು ದೊರಕಿಸಲಾಗಿದೆ. ಗಂಡ ಸತ್ತಾಗ ಮಡಿಯಾಗದೆ ಉಳಿದ ಬನಶಂಕರಿ ತನ್ನ ಮಕ್ಕಳ ತಂದೆ ಸತ್ತ ಸಮಾಚಾರ ತಿಳಿದಾಗ ಕೂದಲನ್ನು ಸ್ವ ಇಚ್ಛೆಯಿಂದ ತೆಗೆಸುತ್ತಾಳೆ. ಹರೆಯದ ರುಕ್ಮಿಣಿಯ ಕೂದಲನ್ನು ಕತ್ತರಿಸಲು ಕೃಷ್ಣಶಾಸ್ತ್ರಿಯವರ ಅಕ್ಕ ಪ್ರಯತ್ನ ನಡೆಸುತ್ತಿರುತ್ತಾಳೆ.

ಗಂಡ ಸತ್ತ ಬಳಿಕ ನಾನಾ ಕಾರಣಗಳಿಂದ ಲೌಕಿಕ ಜೀವನದಲ್ಲಿ ಆಸಕ್ತಿವಹಿಸಿದವರನ್ನು, ತಾಯ್ತನದ ಹೊರೆ ಹೊತ್ತವರನ್ನು ಬಹಿಷ್ಕಾರ ಹಾಕಿ ಜಾತಿಯಿಂದ ಹೊರ ಹಾಕುವುದು, ಘಟಶ್ರಧ್ಧದ ಮೂಲಕ ಊರಿನಿಂದ ಉಚ್ಚಾಟಿಸುವುದನ್ನು ಅನೇಕ ಕಾದಂಬರಿಗಳು ವಿವರಿಸುತ್ತವೆ. ರುಕ್ಮಿಣಿ, ಬನಶಂಕರಿ, ದಾಕ್ಷಾಯಿಣಿ ಈ ಬೆದರಿಕಾಕ್ರಮಗಳಿಗೆ ತಲೆಯೊಡ್ಡಿದವರು. ಅತ್ಯಾಚಾರ ಮತ್ತು ಲೈಂಗಿಕ ಶೋಷಣೆಗೆ ಒಳಗಾಗುವ ವಿಧವೆಯನ್ನು ಸಮಾಜ ಅನುಕಂಪದಿಂದ ಕಾಣದೆ ಕ್ರೂರವಾಗಿ ನಡೆಸುವುದನ್ನು ವೈಶಾಖ ಕಾದಂಬರಿ ವಿವರಿಸುತ್ತದೆ.

ಕಾನೂರು ಹೆಗ್ಗಡತಿಯ 'ಸುಬ್ಬಮ್ಮ' ಮತ್ತು ಹೂವು ಹಣ್ಣು ಕಾದಂಬರಿಯ ' ರಮಾ' ತಮ್ಮ ಅಸಹಾಯಕ ಪರಿಸ್ಥಿತಿಯ ಕಾರಣವಾಗಿಯೇ ದುರಂತವನ್ನು ತಂದುಕೊಳ್ಳುತ್ತಾರೆ. ವಿಧವೆಯನ್ನು ಜೀವನಾಮುಖಿಯನ್ನಾಗಿಸಿ ಅವಳನ್ನು ಮತ್ತೆ ಹಿಂದಿನಂತೆ ನೋಡಿಕೊಳ್ಳುವ ಪ್ರಸಂಗಗಳನ್ನು ಮರುವಿವಾಹದ ಮೂಲಕ ಸಾಧಿಸಿಕೊಳ್ಳಲಾಗಿದೆ.

ಇಂದಿರೆ, ಪಾತು, ಮಾಲತಿ, ಸುನಂದ ಮರುವಿವಾಹದ ಮೂಲಕ ಬದುಕಿಗೆ ಹಿಂತಿರುಗುತ್ತಾರೆ. ವಿಧವೆಯ ಮರುವಿವಾಹಕ್ಕೆ ಅಸಮ್ಮತಿಯನ್ನು ತಿರುಲಾಂಬರಂತಹ ಲೇಖಕಿಯೇ ಸೂಚಿಸಿದ್ದಾರೆ. ವೈರಾಗ್ಯಜೀವನ ವಿಧವೆಗೆ ಸೂಕ್ತವೆನ್ನುವ ತಿರುಲಾಂಬ 'ನಭ' ಪಾತ್ರವನ್ನು ವಿದ್ಯಾವಂತೆಯನ್ನಾಗಿಸಿ, ಉದ್ಯೋಗಸ್ಥೆಯನ್ನಾಗಿಯೂ ಪರಿವರ್ತಿಸಿದ್ದಾರೆ.

ಸಮಕಾಲೀನ ಸಮಾಜದಲ್ಲಿ ವಿಧವಾವಿವಾಹ ಸಮ್ಮತಿ ಪಡೆದರೂ 'ಪಾತಿವ್ರತ್ಯ'ದ ಕಲ್ಪನೆ ಇನ್ನು ಜೀವಂತವಾಗಿರುವ ಸಮಾಜದಲ್ಲಿ ಲೇಖಕಿಯರಿಗೆ ಅದನ್ನು ಸಮರ್ಥಿಸಿ ಕೊಳ್ಳಲು ಸಾಧ್ಯವಾಗಲಿಲ್ಲ. ಆದರೆ ಗುಲವಾಡಿಯಂತಹ ಲೇಖಕರು ೧೮೯೯ರಲ್ಲಿಯೇ 'ಇಂದಿರಾಬಾಯಿ' ಕಾದಂಬರಿಯಲ್ಲಿ ಈ ಸಾಧನೆ ಮಾಡಿದ್ದಾರೆ.

ಹೆಂಡತಿ ಸತ್ತ ಗಂಡಿಗೆ ಮರುವಿವಾಹದ ಹಕ್ಕಿರುವಾಗ ಹೆಣ್ಣಾದವಳಿಗೆ (ವಿಧವೆಗೆ) ಯಾಕಿಲ್ಲ ಎಂದು ಲಿಂಗಾಧಾರಿತ ಅಸಮಾನತೆಯ ಸಾಮಾಜಿಕ ವಿಚಾರದತ್ತ ಗಮನ ಸೆಳೆದ ಮೊದಲ ಲೇಖಕಿ ಕೊಡಗಿನ ಗೌರಮ್ಮ. ಕತೆ 'ಪುನರ್ವಿವಾಹ'ದಲ್ಲಿ ಈ ಪ್ರಸ್ತಾಪವನ್ನು ಗೌರಮ್ಮ ಮುಂದಿಟ್ಟಿದ್ದಾರೆ. ಆದರೆ ನಂತರದ ಲೇಖಕಿಯಾದ ಪಿ.ಮಂದಾಕಿನಿ (ಹೊಣ್ಣೆಯರು? ೧೯೩೪), ಪಿ.ಭಾರತಿಬಾಯಿ (ರಹಸ್ಯಭೇದ), ಎಚ್.ವಿ.ಸಾವಿತ್ರಮ್ಮ (ಮಾಯದ

ನೆನಪು ೧೯೪೯)ರ ವರಿಗೆ ಇದು ಸಾಧ್ಯವಾಗಿಲ್ಲ. ಹೆಣ್ಣಿನ ಪಾವಿತ್ರ್ಯ ಕಲ್ಪನೆಯ ಪೊಳ್ಳುತನವನ್ನು ಬಯಲು ಪಡಿಸುವುದರ ಮೂಲಕ ಮದುವೆ ತೀರ್ಮಾನ ತೆಗೆದುಕೊಳ್ಳುವ 'ಸುನಂದೆ' ಮೂಲಕ ತ್ರಿವೇಣಿ ಇದನ್ನು ಸಾಧಿಸುತ್ತಾರೆ. ವಿಧವೆಯ ಕುರಿತು ಸಾಹಿತ್ಯವು ಮೂಡಿಸಿರುವ ಕಲ್ಪನೆ ಈ ರೀತಿಯದು. ವಿಧವೆ ಸ್ವಂತ ಜೀವನ ನಡೆಸಲು ಅಸಮರ್ಥಳಾದ ಹೆಣ್ಣು. ಪರರ ಆಶ್ರಯದಲ್ಲಿ ಬದುಕಿರಬೇಕಾದವಳು.

೧. ವೈಧವ್ಯ ಎನ್ನುವುದು ಒಂದು ಶಾಪ; ಅದನ್ನು ಅವಳು ಅನುಭವಿಸಿಯೇ ತೀರಬೇಕು. - ವೈಧವ್ಯ ಸ್ಥಿತಿಗೆ ಅವಳನ್ನೇ ಜವಾಬ್ದಾರಿಯಾಗಿಸುವಿಕೆ.

೨. ಅವಳಿಗೆ ಸ್ವಂತ ಯೊಚನೆಯಾಗಲಿ, ಅಸೆ ಆಕಾಂಕ್ಷೆಗಳಿಗಾಗಲೀ ಅವಕಾಶವಿರುವುದಿಲ್ಲ. - ವಿರೂಪಗೊಳಿಸುವುದರ ಮೂಲಕ ಅನರ್ಹತೆಯನ್ನು ಸೂಚಿಸುವುದು.

೩. ತಾಯ್ತನದ ಹಕ್ಕು ಅವಳಿಗಿರುವುದಿಲ್ಲ. -- ಬಹಿಷ್ಕಾರ, ಘಟಶ್ರದ್ಧ ಕ್ರಮಗಳ ಮೂಲಕ ಬೆದರಿಕೆ.

ಈ ರೀತಿಯಾಗಿ ಗಂಡನನ್ನು ಕಳೆದುಕೊಂಡ ಹೆಣ್ಣಿನ ಮನಸ್ಸು, ದೇಹ ಮತ್ತು ಜೀವನ ವಿಧಾನವನ್ನು ನಿಯಂತ್ರಣಕ್ಕೆ ಒಳಪಡಿಸಿರುವುದನ್ನು ಕಾದಂಬರಿಗಳು ವಿವರಿಸುತ್ತವೆ. ಅಧೀನ ಪರಿಕಲ್ಪನೆಯ ಪಾತ್ರ ವಿಧವೆಯದು.

## 'ಸ್ವತಂತ್ರ ಸ್ತ್ರೀ' ಅಭಿವ್ಯಕ್ತಿ

ಕಥನ ಸಾಹಿತ್ಯ ಸ್ತ್ರೀ ವಿಮುಕ್ತಿ ಚಿಂತನೆಯನ್ನು ವಿವಿಧ ಹಂತಗಳಲ್ಲಿ ವಿವರಿಸುತ್ತದೆ. ವಿಮುಕ್ತಿ ಬಂಧನದಿಂದ ಬಿಡುಗಡೆಗೊಳ್ಳುವ ಸ್ಥಿತಿಯಾಗಿರುವ ಕಾರಣ, ಬಂಧನದ ಸ್ಥಿತಿಗೆ ಕಾರಣವಾಗುವ ವಿಚಾರಗಳನ್ನು ಸಾಹಿತ್ಯವು ಪರಿಶೀಲನೆ ಒಳಪಡಿಸಿದೆ.

ಶೋಷಣಾ ಮೂಲದ ಪರಿಶೋಧನೆ , ಅದರ ವಿರುದ್ಧ ಪ್ರತಿಭಟನೆ, ನಂತರ ಹುಟ್ಟಿ ಕೊಳ್ಳುವ ಬಂಡಾಯ, ಕೊನೆ ಹಂತವಾಗಿ, ವಿಮೋಚನೆ - ಇವು ವಿಮೋಚನೆಯ ಪರಿಕಲ್ಪನೆಯಲ್ಲಿರುವ ವಿವಿಧ ಹಂತಗಳು . ಸ್ವ-ಅಭಿವ್ಯಕ್ತಿ ಕೊನೆಯಲ್ಲಿ ಕಾಣಿಸಿಕೊಳ್ಳವಂಥದು. ಧರ್ಮ ಜಾತಿ, ವರ್ಗ, ಸಮಾಜ, ಕುಟುಂಬ ಮತ್ತು ವೈಯಕ್ತಿಕ ಸಂಬಂಧಗಳು ಹೆಣ್ಣಿನ ಮೇಲೆ ವಿಧಿಸುವ ಕಟ್ಟುಪಾಡುಗಳು, ನಡಾವಳಿಗಳು, ನಂಬಿಕೆ ಸಂಪ್ರದಾಯ, ಆಚರಣೆ ಮೊದಲಾದುವುಗಳ ವಿಧಿವಿಧಾನಗಳು - ಅವಳ ಶೋಷಣೆಯ ಮೂಲಗಳು.

ಮುಸ್ಲಿಂ ಸಂವೇದನೆಯ ಕತೆಗಳು, ದಲಿತ ಚಿತ್ರಣವಿರುವ ಕತೆಗಳು, ಮಧ್ಯಮವರ್ಗದ ಕೌಟುಂಬಿಕ ವಿವರಗಳನ್ನು ನೀಡುವ ಕತೆಗಳು ಶೋಷಣಾನೆಲೆಯನ್ನು ವಿವರಿಸುತ್ತವೆ. ಗೀತಾನಾಭೂಷಣರ ಕತೆಗಳ ಬೆಳ್ಳಿ, ನೀಲೂ , ಭವಾನಿ, ಸೋನಿ, ನೀಲಗಂಗಾ ಮೊದಲಾದವರು, ಸಾರಾ ಅಬೂಬಕರ ಕತೆಗಳ ನಾದಿರಾ, ಸೀಮಾ, ನಫೀಸಾ ಮುಂತಾದ ಸ್ತ್ರೀಪಾತ್ರಗಳು ಈ ಹಿನ್ನೆಲೆಯಲ್ಲಿ ಬದುಕುವ ಸ್ತ್ರೀಯರು.

ಚೋಮನ ದುಡಿ, ಗ್ರಾಮಾಯಣ, ವೈಶಾಖ, ಕಾದಂಬರಿಗಳಲ್ಲಿ ಬರುವ ಅತ್ಯಾಚಾರದ ಪ್ರಕರಣಗಳು ಸಾಮಾಜಿಕ ನೆಲೆಗಳಲ್ಲಿ ಕಾಣಿಸಿಕೊಳ್ಳುವ ರೀತಿಯದಾದರೆ, ಕೀಲುಗೊಂಬೆ, ಪಾಲಿಗೆ ಬಂದ ಪಂಚಾಮೃತ, ವಾತ್ಸಲ್ಯದ ಪಥ,

ಕಾದಂಬರಿಗಳಲ್ಲಿರುವ ಹಿಂಸಾಪ್ರಕರಣಗಳು ಕೌಟುಂಬಿಕ ಚೌಕಟ್ಟಿನೊಳಗೆ ನಡೆಯುವ ರೀತಿಯವು. ವೈಯಕ್ತಿಕ ಸಂಬಂಧಗಳು, ಭಾವನಾತ್ಮಕವಾಗಿ ಹೆಣ್ಣನ್ನು ಬಂಧನದಲ್ಲಿರಿಸಿಕೊಳ್ಳಬಹುದು, ಸಾಮಾಜಿಕ ಪಾತ್ರಗಳ, ವೈಭವೀಕರಣದ ಕಾರಣಗಳಿಂದ ಸಹಜಸ್ಥಿತಿಯನ್ನು ಮರೆಮಾಡುವುದರ ಮೂಲಕ ಈ ಬಂಧನವಿರುತ್ತದೆ.

ಪರಸ್ಪರ ಅವಲಂಬನೆ ವೈಯಕ್ತಿಕ ಸ್ವಾತಂತ್ರ್ಯಕ್ಕೆ ಬಾಧಕವೆನಿಸಿದಾಗ, ಹಿಂಸೆ, ಕ್ರೌರ್ಯ ಅತ್ಯಾಚಾರಗಳು ಒಂದು ಹಂತದಲ್ಲಿ ಸಹಿಸಲು ಅಸಾಧ್ಯವಾದ ಮಟ್ಟವನ್ನು ತಲುಪಿದಾಗ, ತನ್ನತನವನ್ನು ಸ್ಥಾಪಿಸಿಕೊಳ್ಳುವ ಹಂಬಲ ಬೆಳೆಯುತ್ತದೆ. ಈ ಹಂಬಲ ಮೊದಲು ಪ್ರತಿಭಟನೆಯ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ವ್ಯವಸ್ಥೆಯು ವಿರುದ್ಧ, ಸಂಪ್ರದಾಯದ ವಿರುದ್ಧ, ಗಂಡಸರ ವಿರುದ್ಧ, ಈ ಪ್ರತಿಭಟನೆ ವ್ಯಕ್ತವಾಗುತ್ತದೆ. ವಿವಾಹ, ತಾಯ್ತನ, ಪತ್ನಿತ್ವಗಳು ಇಲ್ಲಿ ಪ್ರಶ್ನೆಗೆ ಒಳಗಾಗುತ್ತವೆ.

ಪರಂಪರಾಗತವಾಗಿ ಬಂದಿರುವ ಸಾಮಾಜಿಕ ಪಾತ್ರಗಳನ್ನು ಕಳಚಿಕೊಂಡು ಸ್ವಂತಿಕೆಯನ್ನು ಸ್ಥಾಪಿಸುವ ಹಂತದಲ್ಲಿ ಬಂಡಾಯ ಕಾಣಿಸಿಕೊಳ್ಳುತ್ತದೆ. ಬಂಡಾಯದಿಂದ ಕುಟುಂಬದ ಹೊರಗೆ ಪರ್ಯಾಯ ಸಂಬಂಧಗಳನ್ನು, ಜೀವನವಿಧಾನಗಳನ್ನು, ಪಡೆಯುವ ಸಾಧ್ಯತೆಗಳು ಉಂಟಾಗುತ್ತವೆ.

ಅರ್ಥಿಕವಾಗಿ ಸ್ವಾವಲಂಬಿಯಾಗುವ ಉದ್ಯೋಗಸ್ಥೆಯ ಪಾತ್ರ, ಭವಿಷ್ಯ ಜೀವನವನ್ನು ತನ್ನ ಇಷ್ಟಕ್ಕೆ ಅನುಗುಣವಾಗಿ ಆಯ್ಕೆ ಮಾಡುವ ಸ್ವಾತಂತ್ರ್ಯ ಇಲ್ಲಿ ಮುಖ್ಯವಾಗುತ್ತವೆ. ಮೋಹಿನಿ ( ಮೋಹಿನಿ), ಹೇಮಾ (ಉತ್ತರಾಯಣ), ಸುನಂದ (ಏಕಾಂಗಿನಿ), ಪ್ರಭಾವತಿ (ಬಿಡುಗಡೆಯ ಬೇಡಿ), ಕಾಂತಿ (ತಂತು), ಅಮೃತಾ (ತಂತು) ದಾಂಪತ್ಯದಿಂದ ಅಸಹನೆ ಹೊಂದಿ, ಹೊರನಡೆಯುತ್ತಾರೆ, ಸ್ವತಂತ್ರರಾಗಿ ತಮ್ಮ ಪಾಡಿಗೆ ಬದುಕುವುದನ್ನು ಇಷ್ಟಪಡುತ್ತಾರೆ.

ವೃತ್ತಿಪರ ಜೀವನದ ಸಫಲತೆಗೆ, ಪತ್ನಿಯಾಗಿದ್ದು, ತಾಯ್ತನವನ್ನು ಹೊರೆಯಾಗಿ, ವೈಯಕ್ತಿಕ ಸ್ವಾತಂತ್ರ್ಯಕ್ಕೆ ತೊಡಕಾಗಿ 'ನನ್ನೊಳಗಿನೊಂದು' ಒಂದು (ನೇಮಿಚಂದ್ರ) ಕತೆಯ ನಾಯಕಿ, 'ಅಳ' (ಅನುಪಮಾ) ದ ಮಾಲಿನಿ ಪರಿಗಣಿಸುತ್ತಾರೆ. ವೈವಾಹಿಕ ಚೌಕಟ್ಟಿನ ಹೊರಗೆ ತಾಯ್ತನವನ್ನು ಸ್ವೀಕರಿಸುವುದಕ್ಕೆ ಸಿದ್ಧವಾಗುವ ಅನೇಕ ಪಾತ್ರಗಳು ಸ್ತ್ರೀಯರ ಬರವಣಿಗೆಯಲ್ಲಿ ಕಾಣಿಸಿಕೊಂಡಿದ್ದಾರೆ. ಎಚ್.ಎನ್. ಚಂಪಾವತಿ, ಎಚ್ .ವಿ. ಸಾವಿತ್ರಮ್ಮ, ಅನುಪಮಾ ನಿರಂಜನ, ವೀಣಾ ಶಾಂತೇಶ್ವರ ಈ ಚಿತ್ರಣವನ್ನು ಕೊಟ್ಟಿದ್ದಾರೆ.

ಹೆಣ್ಣಿನ ಆಯ್ಕೆ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯುವ ಕೆಲವು ಸಣ್ಣಕತೆಗಳು: ವೀಣಾ ಶಾಂತೇಶ್ವರ 'ಕೊನೆಯದಾರಿ', ಗಂಗಾಪಾದೇಕಲ್ ರ 'ಪುಲಪೇಡಿ', ಸರಳಾಬಾಯಿಯ 'ಆಯ್ಕೆ', ಮಿತ್ರಾವೆಂಕಟ್ರಾಜರ 'ಹಕ್ಕಿ ಮತ್ತು ಅವಳು', ಲಲಿತಾ ಯು.ಆರ್.ರ 'ಅಮೂರ್ತದ ಹಾದಿಯಲ್ಲಿ' ನೇಮಿಚಂದ್ರರ 'ನನ್ನೊಳಗಿನೊಂದು ಒಂದು' ಕಾದಂಬರಿಗಳು: 'ಬನಶಂಕರಿ', 'ನಿಸರ್ಗ', 'ಸರ್ವಮಂಗಳ', 'ಬಂಡಾಯ', 'ಅಂಚು', 'ಗಂಡಸರು' 'ವಾಗ್ದೇವಿ' ಇತ್ಯಾದಿ. ಸ್ತ್ರೀ ಸ್ವಾತಂತ್ರ್ಯವನ್ನು ವಿವರಿಸುವ ಕೆಲವು ಕಾದಂಬರಿಗಳು: ಮೋಹಿನಿ', ಬಿಡುಗಡೆಯ ಬೇಡಿ', ತಂತು', ಉತ್ತರಾಯಣ'. ಸ್ತ್ರೀ ಬಂಡಾಯ, ಪ್ರತಿಭಟನೆಯನ್ನು, ವಿವರಿಸುವ ಕಾದಂಬರಿಗಳು 'ಮಾಧವಿ', 'ಮುಕ್ತಿಚಿತ್ರ', 'ಫಣಿಯಮ್ಮ', 'ಕಿರಿಗೂರಿನ ಗಯ್ಯಾಳಿಗಳು', 'ಸರಸಮ್ಮನ ಸಮಾಧಿ'.

ಪೂರ್ವನಿರ್ಧಾರಿತ ಸಾಮಾಜಿಕ ಪಾತ್ರಗಳಿಂದ ಮುಕ್ತವಾಗಲು ಪ್ರಯತ್ನಿಸಿದಾಗಲೆಲ್ಲಾ ಸಾಮಾಜಿಕ ಮತ್ತು ಸ್ವವ್ಯಕ್ತಿತ್ವದ ನಡುವೆ ಘರ್ಷಣೆ ಉಂಟಾಗುತ್ತದೆ. ಅಗ ಕೌಟುಂಬಿಕ ಮತ್ತು ಭಾವನಾತ್ಮಕ ಸಂಬಂಧಗಳು ಅಪ್ರಾಮುಖ್ಯತೆಯನ್ನು, ಇತರ ವಿಚಾರಗಳು ಆದ್ಯತೆಗಳನ್ನು ಪಡೆಯುತ್ತದೆ. ಈ ಪ್ರಸಂಗದಲ್ಲಿ ತನ್ನ ಸುತ್ತವಿರುವ ಸಾಂಸ್ಕೃತಿಕ ಪರಿಸರವನ್ನು ನಿರಾಕರಿಸದೆ, ಈ ಪರಿಸರದ ವ್ಯಾಪ್ತಿಯೊಳಗೇ ಪರ್ಯಾಯ ಸಾಧ್ಯತೆಗಳನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ಹೊಂದಾಣಿಕೆ ಅನಿವಾರ್ಯವಾಗುತ್ತದೆ.ಈ ಹೊಂದಾಣಿಕೆಯಲ್ಲಿ ಬಹುವಾಗಿ ಸ್ತ್ರೀಪುರಷ ಸಮಾನತಾ ಭಾವಗಳು ಪ್ರಧಾನವಾಗಿರುತ್ತವೆ.

ಭ್ರಮ ನಿರಸನವೂ ಒಂದು ಕಾರಣವಾಗಬಹುದು. ವೀಣಾರವರ 'ಶೋಷಣೆ ಬಂಡಾಯ ಇತ್ಯಾದಿ', ಕಾದಂಬರಿ ಬಂಡಾಯದ ವಿಫಲತೆಯನ್ನು ವಿವರಿಸುತ್ತದೆ. ಅವರ 'ತಿರುಗಿ ಹೋದವಳು' ಕೌಟುಂಬಿಕ ಸ್ಥಾನದ ಪ್ರಾಮುಖ್ಯತೆಯನ್ನು ತಿಳಿಸುತ್ತದೆ. ಬಂಡಾಯದ ಪೂರ್ವಸ್ಥಿತಿಯಲ್ಲಿದ್ದ ಹೆಣ್ಣಿನ ಚಿತ್ರವನ್ನು ಚದುರಂಗದ 'ಉಯ್ಯಾಲೆ' ಕಾದಂಬರಿ ನೀಡುತ್ತದೆ. ಇಲ್ಲಿ ನಾಯಕಿ ಬೇರೆ ಬೇರೆ ಕಾರಣಗಳಿಗಾಗಿ ಹೊಂದಾಣಿಕೆ ಮಾಡುವುದು ಅನಿವಾರ್ಯವಾಗಿದೆ.

**ಅಡಿಟಿಪ್ಪಣಿಗಳು**

೧. "ನನ್ನ ಚಿಕ್ಕತಾಯಿ", "ನನ್ನ ಚಿಕ್ಕತಂದೆಯವರ ಉಯಿಲು" "ಭಾರತಶ್ರವಣ", "ಕಮಲಪುರದ ಹೊಟ್ಲನಲ್ಲಿ" ರಾವ್,ಮುಂಗೇಶ ಪಂಜೆ, (೧೯೦೦), ಸುವಾಸಿನಿ ಪತ್ರಿಕೆ, ಮಂಗಳೂರು.

೨. ಮೂರ್ತಿ, ನರಸಿಂಹ, ಕೆ., (೧೯೫೮) **"ಕನ್ನಡದ ಅತ್ಯುತ್ತಮ ಕತೆಗಳು : ೧೯೩೬ ರವರೆಗೆ ಬಂದ ೪೦ ಕತೆಗಳು"**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು , ೧೯೩೬ , ಸಂಪುಟ ೧, ಮತ್ತು **"ಕನ್ನಡದ ಅತ್ಯುತ್ತಮ ಕತೆಗಳು : ೧೯೪೬ ರವರೆಗೆ ಬಂದ ೩೦ ಕತೆಗಳು' ಸಂಪುಟ ೨, "ಕನ್ನಡ ಅತ್ಯುತ್ತಮ ಕತೆಗಳು ೧೯೪೬-೫೬ ರ ಅವಧಿಯ ೪೦ ಕತೆಗಳು** ಸಂ.೩.

೩. ರಾವ್ ಶೇಷಗಿರಿ ಎಲ್.ಎಸ್., (೧೯೯೩) **"ಕನ್ನಡದ ಕಾದಂಬರಿ ಲೋಕ"** ಕನ್ನಡ ಸಾಹಿತ್ಯವಾಹಿನಿ ಸುವಿದ್ಯಾ ಪ್ರಕಾಶನ, ಬೆಂಗಳೂರು .ಪುಟ ೨೭.

೪. ವಾಸುದೇವಾಚಾರ್ಯ, ಕೆರೂರು (೧೯೮೫), **"ಇಂದಿರಾ"** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ. ೮೯.

೫. ಅದೇ ಪುಟ.

೬. ಗಾಯಿತ್ರಿ, ಎನ್., (೧೯೯೩) **"ನವೋದಯ ಸಾಹಿತ್ಯದಲ್ಲಿ ಸಂಸ್ಕೃತಿಯ ವಿಕಾಸ ಮತ್ತು ಸ್ತ್ರೀ"**, ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇಧನೆಯ ಸ್ವರೂಪ, ಕರ್ನಾಟಕ ಸಾಹಿತ್ಯ ಅಕಾಡೆಮೆ, ಬೆಂಗಳೂರು, ಪುಟ ೧೨೫,

೭. ವೆಂಕಟೇಶ ಅಯ್ಯಂಗಾರ್, ಮಾಸ್ತಿ (೧೯೭೯), **ಶ್ರೀನಿವಾಸ**, ಅಭಿನಂದನಾ ಗ್ರಂಥ, ಡಾ|| ಮಾಸ್ತಿ ಶತಮಾನೋತ್ಸವ ಸಮಿತಿ, ಬೆಂಗಳೂರು, ಪುಟ I-V.

೮. ಇನಾಂದಾರ್ ಎಂ. (೧೯೯೩) **ಮೋಹಿನಿ**, ಗೀತಾ ಬುಕ್ ಹೌಸ್, ಬೆಂಗಳೂರು ೧೯೫೭.

೯. ನಿರಂಜನ, **ಬನಶಂಕರಿ,** ಪುಟ ೭೨.

೧೦. ಕಾರಂತ, **ಶಿವರಾಮ** (೧೯೯೨) **ಮೈಮನಗಳ ಸುಳಿಯಲ್ಲಿ**, ಎಸ್.ಬಿ.ಎಸ್.ಪಬ್ಲಿಶರ್ಸ್, ಬೆಂಗಳೂರು, ಪುಟ. ೭೦

## ಅಧ್ಯಾಯ ೫

# ತ್ರಿವೇಣಿ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು

ಸ್ತ್ರೀಕೇಂದ್ರಿತ ವಸ್ತುವನ್ನುಳ್ಳ ತ್ರಿವೇಣಿ ಕಾದಂಬರಿಗಳ ಕೇಂದ್ರ ಪಾತ್ರ ಹೆಣ್ಣು. ವಿಭಿನ್ನ ಪರಿಸರದ, ವಿವಿಧ ಮನೋಧರ್ಮದ, ಬೇರೆ ಬೇರೆ ವಯೋಮಾನದ ಹಲವಾರು ಸ್ತ್ರೀಪಾತ್ರಗಳನ್ನು ಲೇಖಕಿ ಸೃಷ್ಟಿಸಿದ್ದಾರೆ. ಕಾದಂಬರಿಗಳಲ್ಲಿ ಬರುವ ಬಹುತೇಕ ಪಾತ್ರಗಳು ಗೃಹಿಣಿಯರದಾದುದರಿಂದ ಮನೆ ಅಥವಾ ಕುಟುಂಬ ವ್ಯವಸ್ಥೆ ಈ ಕಾದಂಬರಿಗಳ ಕೇಂದ್ರ ಸ್ಥಾನದಲ್ಲಿದೆ. ಹೆಚ್ಚುಕಡಿಮೆ ಎಲ್ಲಾ ಕತೆಗಳು ಈ ಕೌಟುಂಬಿಕ ಚೌಕಟ್ಟಿನ ಒಳಗೇ ನಡೆಯುತ್ತದೆ. ನಿತ್ಯಬದುಕಿನಲ್ಲಿ ಹೆಣ್ಣಿಗೆ ಕಾಡುವ ಸಮಸ್ಯೆಗಳಿಗೆ ಮನೆಯ ಪರಿಸರ, ಮನುಷ್ಯ ಸಂಬಂಧಗಳು ಮತ್ತು ಹೆಣ್ಣಿನ ಮನೋದೈಹಿಕ ಸ್ಥಿತಿಗಳು ಎಷ್ಟರ ಮಟ್ಟಿಗೆ ಕಾರಣ ಎನ್ನುವುದರ ವಿಶ್ಲೇಷಣೆಯನ್ನು ತ್ರಿವೇಣಿ ಮಾಡಿದ್ದಾರೆ. ಕಾದಂಬರಿಯಲ್ಲಿ ಕಾಣಿಸಿಕೊಳ್ಳುವ ಪಾತ್ರಗಳು. ಘಟನೆಗಳು, ಬದುಕಿನ ವಿವರಗಳು, ವಿಶ್ಲೇಷಣೆಗಳು ಹೆಣ್ಣನ್ನು ವಿವರಿಸುವ ಪ್ರಯತ್ನಗಳಾಗಿದೆ.

ಆದೇ ತಾನೆ ಹುಟ್ಟಿದ ಹೆಣ್ಣುಮಗುವಿನಿಂದ ಹಿಡಿದು ಎಪ್ಪತ್ತರ ಅಂಚಿನಲ್ಲಿ ಜೀವನೋತ್ಸಾಹದಿಂದ ಬದುಕುವ ಹಣ್ಣುಮುದುಕಿಯವರೆಗೆ ಹಲವಾರು ಪಾತ್ರಗಳು ತ್ರಿವೇಣಿ ಕಾದಂಬರಿಗಳಲ್ಲಿ ಕಾಣಲು ಸಿಗುತ್ತವೆ. ಈ ಎಲ್ಲ ಹೆಣ್ಣುಗಳು ಹುಟ್ಟುವ, ಬೆಳೆಯುವ, ಶಿಕ್ಷಣ ಪಡೆಯುವ, ಉದ್ಯೋಗವನ್ನರಸುವ, ಮದುವೆಯಾಗುವ, ಮದುವೆ ಇಲ್ಲದೆ ಒಂಟಿಯಾಗಿ ಬದುಕುವ, ಸಮಸ್ಯೆಗೆ ಸಿಕ್ಕಿ ಒದ್ದಾಡುವ, ನೋವನ್ನುಣ್ಣುವ - ಪರಿಸರ, ಪರಿಸ್ಥಿತಿಗಳು ಹೆಚ್ಚು ಕಡಿಮೆ ಒಂದೇ ರೀತಿಯದಾಗಿ ಕಂಡು ಬಂದರೂ ಪ್ರತಿಯೊಬ್ಬ ಹೆಣ್ಣು ಪಡೆಯುವ ಅನುಭವ ಭಿನ್ನರೀತಿಯಾದಾಗಿರುವುದರಿಂದ ಮಹತ್ವ ಪಡೆಯುತ್ತದೆ. ತ್ರಿವೇಣಿ ಈ ಅನುಭವ ಭಿನ್ನತೆಯನ್ನು ಉದ್ದೇಶಪೂರ್ವಕವಾಗಿ ಬಳಸಿಕೊಳ್ಳುತ್ತಾರೆ. ಈ ಕಾದಂಬರಿಗಳಲ್ಲಿ ಪ್ರಸ್ತಾವಿಸಲಾಗಿರುವ ಸಮಸ್ಯೆಗಳು ಹೆಣ್ಣಿನ ಬದುಕಿಗೆ ಸಂಬಂಧಿಸಿದ ಸಮಸ್ಯೆಗಳೇ ಆಗಿದೆ. ಕಾದಂಬರಿಯ ಸ್ತ್ರೀಪಾತ್ರಗಳು ಎದುರಿಸುವ ಸಮಸ್ಯೆಗಳಿಗೆ ಕೆಲವು ನಿರ್ದಿಷ್ಟ ಕಾರಣಗಳನ್ನು ಲೇಖಕಿ ಸೂಚಿಸುತ್ತಾರೆ. ಅವುಗಳೆಂದರೆ.

೧. ಹೆಣ್ಣುಜಾತಿಯಲ್ಲಿ ಹುಟ್ಟಿದ ಕಾರಣಕ್ಕಾಗಿ

೨. ಆರ್ಥಿಕ ದುಸ್ಥಿತಿ ಅಥವಾ ಆರ್ಥಿಕ ಪರಾವಲಂಬನೆ.

೩. ಪುರುಷರಿಂದ ವಂಚನೆ

೪. ಅಸಫಲ ದಾಂಪತ್ಯ

೫. ವಿವಾಹೇತರ ಸಂಬಂಧ

೬. ವೈಧವ್ಯ

೭. ಮಾನಸಿಕ ಅಸ್ವಸ್ಥತೆ

೮. ಸಮಾಜದ ಲಿಂಗದ್ವಿಸ್ತರ ನೀತಿ.

## ಪಾತ್ರಚಿತ್ರಣ

ಹುಟ್ಟಿದಂದಿನಿಂದಲೇ ಸಮಸ್ಯೆಗೆ ಒಡ್ಡಿಕೊಳ್ಳುವ ಅನೇಕ ಹೆಣ್ಣುಗಳು ಈ ಕಾದಂಬರಿಗಳಲ್ಲಿ ಇವೆ. ಅದೇ ರೀತಿ ವಿವಾಹ ನಂತರದ ಬದುಕಿನಲ್ಲಿ ಸಮಸ್ಯೆಗೆ ಸಿಕ್ಕಿ ಒದ್ದಾಡುವ ಹೆಣ್ಣುಗಳೂ ಇಲ್ಲಿ ಸಾಕಷ್ಟಿವೆ.

ಹೆಣ್ಣಿನ ಬದುಕಿನಲ್ಲಿ ವಿವಾಹದ ಪ್ರಾಮುಖ್ಯತೆಯನ್ನು ಎತ್ತಿ ಹಿಡಿಯುವ ಅನೇಕ ಪ್ರಸಂಗಗಳನ್ನು ಈ ಕಾದಂಬರಿಗಳಿಂದ ಎತ್ತಿ ತೋರಿಸಬಹುದಾದರೂ, ವಿವಾಹವೆನ್ನುವುದು ಸಾಂಸ್ಥಿಕ ಬಂಧನವಾಗಬೇಕಿಲ್ಲ; ನೀತಿ-ಅನೀತಿಗಳ ಪ್ರಶ್ನೆಯಲ್ಲಿ ಗಂಡು-ಹೆಣ್ಣು ಬೇಧವಿಲ್ಲ; ಅವಕಾಶಗಳು ಅನುಕೂಲಗಳು ಗಂಡಿಗೆ ಮತ್ತು ಹೆಣ್ಣಿಗೆ ಸಮಾನ ರೀತಿಯಲ್ಲಿರಬೇಕು - ಮುಂತಾದ ಚಿಂತನೆಗಳನ್ನು ತ್ರಿವೇಣಿ ಗಮನಿಸಿರುವುದನ್ನು ಕಾದಂಬರಿ ಪ್ರಸಂಗಗಳು ಎತ್ತಿ ತೋರಿಸುತ್ತವೆ. ಏಕಾಏಕಿ ಹೋರಾಟಕ್ಕೆ ಇಳಿಯುವ ಅಥವಾ ಪ್ರತಿರೋಧದಲ್ಲಿ ಎದ್ದು ನಿಲ್ಲುವ ಬಂಡಾಯ ಧೋರಣೆ ತ್ರಿವೇಣಿಯಲ್ಲಿ ಇಲ್ಲ. ಆದರೆ ಸರಿಯಾದ ಸಮಯಕ್ಕೆ(ಕಾಲಕ್ಕೆ) ಕಾಯುವ, ತಮ್ಮ ಸರದಿ ಬಂದಾಗ ಅವಕಾಶಗಳನ್ನು ಬಳಸಿಕೊಳ್ಳುವ ಪಾತ್ರಗಳು ಇಲ್ಲಿವೆ.

ಪುರುಷ ಅಧಿಕಾರವಿರಲಿ, ಪುರುಷ ದೌರ್ಜನ್ಯವಾಗಲೇ ಈ ಸ್ತ್ರೀಯರಲ್ಲಿ ಕಿಡಿಯನ್ನು ಹತ್ತಿಸುವುದಿಲ್ಲ. ಪ್ರತಿಭಟನೆ, ಘೋಷಣೆಗಳನ್ನು ಬಳಸದೇ ಸ್ವರ್ಯಪೂರ್ಣತೆಗಾಗಿ ಕಾಯುವ ತಮ್ಮತನದ ಅರಿವಿನ ಮೂಲಕ ಬದುಕಲು ಅನುವಾಗುವ ಕೆಲವು ಪಾತ್ರಗಳನ್ನಾದರೂ ನಾವಿಲ್ಲಿ ಕಾಣಬಹುದಾಗಿದೆ. ತ್ರಿವೇಣಿ ಕಾದಂಬರಿಗಳು ನಾಯಕಿ ಪ್ರಧಾನವಾಗಿರುವುದರಿಂದ ಸುಮಾರು ಹದಿನೆಂಟು ಸ್ತ್ರೀಪಾತ್ರಗಳು ಕಾದಂಬರಿಗಳ ಕೇಂದ್ರ ಪಾತ್ರಗಳಾಗಿವೆ. ಈ ಸ್ತ್ರೀಪಾತ್ರಗಳು:

ರಮ (ಹೂವುಹಣ್ಣು), ಮೀರಾ (ಅಪಸ್ವರ ಅಪಜಯ), ಭಾರತಿ (ಸೋತುಗೆದ್ದವಳು), ಸುನಂದ (ದೂರದ ಬೆಟ್ಟ), ರಮ(ಕಂಕಣ), ಅಮೃತ(ಮುಕ್ತಿ), ರತ್ನ (ತಾವರೆಯಕೊಳ), ಮಾಲತಿ, (ಹಣ್ಣೆಲೆ ಚಿಗುರಿದಾಗ), ಇಂದಿರ (ಬೆಳ್ಳಿಮೋಡ),ಸರಳ (ವಸಂತಗಾನ), ಸೀತೆ (ಕೀಲುಗೊಂಬೆ), ಸರೋಜಿನಿ (ಅವಳಮನೆ), ಕಲ್ಯಾಣಿ (ಬಾನುಬೆಳಗಿತು), ಪದ್ಮಿನಿ (ಹೃದಯಗೀತೆ), ಕುಸುಮ (ಬೆಕ್ಕಿನ ಕಣ್ಣು), ಕಾವೇರಿ (ಶರಪಂಜರ), ನಾಯಕಿ (ಮೊದಲಹೆಜ್ಜೆ), ಶ್ಯಾಮಲ (ಕಾಶೀಯಾತ್ರೆ), ಮತ್ತು ಭವಾನಿ (ಅವಳಮಗಳು). ಈ ಪ್ರಮುಖ ಸ್ತ್ರೀಪಾತ್ರಗಳಲ್ಲದೆ ಅಜ್ಜಿ, ತಾಯಿ, ಅತ್ತೆ, ಮಗಳು, ಸೊಸೆ, ತಂಗಿ, ನಾದಿನಿ, ಮೊಮ್ಮಗಳು ಮೊದಲಾದ ಕೌಟುಂಬಿಕ ಸಂಬಂಧಗಳಲ್ಲಿ ಸಾಮಾಜಿಕ ಪಾತ್ರವನ್ನು ನಿರ್ವಹಿಸುವ ಅನೇಕ ಪಾತ್ರಗಳು ಇವೆ.

ಕಾದಂಬರಿಯ ನಾಯಕಿ ಸ್ಥಾನದಲ್ಲಿರುವವರು ಯುವತಿಯರು. ಹದಿನೇಳು ವರ್ಷದಿಂದ ಇಪ್ಪತ್ತೈದು ವರ್ಷದೊಳಗಿನ ವಯೋಮಾನದವರು. ಕಾಲೇಜು ವ್ಯಾಸಂಗ ಮಾಡುವವರು ಅಥವಾ ಆಗಷ್ಟೇ ಪದವಿ ಮುಗಿಸಿದವರು. ವಿದ್ಯೆಯಿಂದ ವಂಚಿತರಾದವರೂ ಇದ್ದಾರೆ. ಇದಕ್ಕೆ ಕಾದಂಬರಿ ನೀಡುವ ಕಾರಣ: ಆರ್ಥಿಕ ದುಸ್ಥಿತಿ ಅಥವಾ ಗಂಡು-ಹೆಣ್ಣುಮಗುವಿನ ನಡುವಿನ ತರತಮಭಾವ.

ಹದಿಹರೆಯದ ಕನಸುಗಳಿಂದ ಇದೀಗ ತಾನೇ ಎಚ್ಚೆತ್ತುಕೊಂಡು ತಮ್ಮ ಸುತ್ತಲಿನ ಜಗತ್ತನ್ನು ನೋಡಲು ಕಣ್ಣುತೆರೆಯುತ್ತಿರುವ ಈ ಯುವತಿಯರಿಗೆ ಎದುರಾಗುವ ಅನುಭವಗಳು ಅನೇಕ. ಮದುವೆಯ ಅನಿವಾರ್ಯತೆಯನ್ನು

ಇಲ್ಲಿರುವ ಎಲ್ಲ ಹೆಣ್ಣುಗಳು ಒಪ್ಪಿಕೊಳ್ಳುತ್ತಾರೆ. ಆದಷ್ಟು ಬೇಗ ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊಟ್ಟು ಜವಾಬ್ದಾರಿ ಕಳೆಯಬೇಕೆನ್ನುವ ತರಾತುರಿ ಇಲ್ಲಿಯ ಹೆತ್ತವರದು. ಮದುವೆಯಿಂದಲೇ ಹೆಣ್ಣಿಗೆ ಜೀವನ ಸಾರ್ಥಕತೆ ಎನ್ನುವ ಭಾವನೆ ಹೆತ್ತವರಲ್ಲಿ ಮಾತ್ರವಲ್ಲ ಮದುವೆಗೆ ಬೆಳೆದುನಿಂತ ಮಗಳಂದಿರಲ್ಲಿಯೂ ಇದೆ.

ಹೆಂಡತಿಯಾಗಿ, ತಾಯಾಗಿ ತಮ್ಮ ಸಾಮಾಜಿಕ ಪಾತ್ರವನ್ನು ನಿರ್ವಹಿಸಬೇಕೆನ್ನುವ ಆತುರ, ಅದಕ್ಕೆ ಹೆತ್ತವರು ನಡೆಸುವ ಪ್ರಯತ್ನಗಳು, ಶಿಕ್ಷಣವನ್ನು ಆರ್ಧಕ್ಕೆ ನಿಲ್ಲಿಸಿದರೂ ನೊಂದುಕೊಳ್ಳದೆ ವರಮಾಲೆಗೆ ಕೊರಳೊಡ್ಡುವ ಯುವತಿಯರು, ಅಷ್ಟೇ ತೀವ್ರವಾಗಿ ವೈವಾಹಿಕ ಬದುಕಿನ ಸಮಸ್ಯೆಗಳಲ್ಲಿ ಸಿಕ್ಕಿಕೊಂಡು ಒದ್ದಾಡುವ ದೃಶ್ಯ ಈ ಕಾದಂಬರಿಗಳಲ್ಲಿ ಸಾಮಾನ್ಯ, ಬದುಕಿನಲ್ಲಿ ಸುಖ, ಶಾಂತಿ ಲಭಿಸಿಕೊಂಡವರು ಇಲ್ಲಿ ತುಂಬಾ ಕಮ್ಮಿ.

ತ್ರಿವೇಣಿ ಕಾದಂಬರಿಗಳಲ್ಲಿ ನಗರ ಪರಿಸರದ ಮಧ್ಯಮ ಹಾಗೂ ಕೆಳಮಧ್ಯಮವರ್ಗದ ಬ್ರಾಹ್ಮಣ ಸಮಾಜದ ಕೌಟುಂಬಿಕ ವಿವರಗಳು ದೊರೆಯುತ್ತವೆ. ಐವತ್ತರ ದಶಕದ ನಂತರ ಬಂದಿರುವ ಈ ಕಾದಂಬರಿಗಳಲ್ಲಿ ಸ್ವಾತಂತ್ರ್ಯೋತ್ತರ ಅವಧಿಯಲ್ಲಿ ಸ್ಥಿತ್ಯಂತರ ಹೊಂದಿದ ಸಮಾಜದಲ್ಲಿ ಹೆಣ್ಣಿನ ಸ್ಥಾನಮಾನವನ್ನು ಗುರುತಿಸುವ ಪ್ರಯತ್ನವಿದೆ. ಸಂಪ್ರದಾಯವು ಹಿಂದೆ ಸರಿದು ಆಧುನಿಕತೆ ಪ್ರವೇಶ ಪಡೆದ ಈ ಕಾಲಾಮಾನದಲ್ಲಿ ಜನಜೀವನದಲ್ಲಿ ಉಂಟಾದ ಅಸ್ತವ್ಯಸ್ತತೆಯನ್ನಾಗಲೀ, ವ್ಯತ್ಯಾಸವನ್ನಾಗಲೀ ಈ ಕಾದಂಬರಿಗಳು ದಾಖಲಿಸುವುದಿಲ್ಲವಾದರೂ ಜನರ ಮನಸ್ಸಿನಲ್ಲಿ ಭವಿಷ್ಯ ಜೀವನದ ಆಶಾಭಾವನೆಯೊಂದು ಅಂಕುರವಾಗುತ್ತಿರುವುದನ್ನು ಲೇಖಕಿ ಗುರುತಿಸಿದ್ದಾರೆ.

ಸಂಪ್ರದಾಯವಾಗಲಿ, ಆಧುನಿಕತೆಯಾಗಲಿ ಸ್ಥಿತ್ಯಂತಗೊಳ್ಳುವ ಪರಿಸ್ಥಿತಿಯಲ್ಲಿ ಅದರ ಬಿಸಿ ಮೊದಲು ತಟ್ಟುವುದು ಹೆಣ್ಣಿಗೆ ಮತ್ತು ಅವಳ ಬದುಕಿನ ವಿಧಾನಕ್ಕೆ. ಶತಮಾನಗಳಿಂದ ಮುಂದುವರಿಯುತ್ತಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಆಳುವ ಸ್ಥಾನ ಮತ್ತು ಆಳಿಸುವ ಪ್ರವೃತ್ತಿಯನ್ನಳಿಸಿಕೊಂಡು ಬಂದ ಪುರುಷನ ಕೈಯಲ್ಲಿ ಅಧಿಕಾರ ಮತ್ತು ನಿಯಂತ್ರಣ ಎರಡೂ ಇರುವುದರಿಂದ ಪುರಷನ ಸ್ಥಾನಮಾನಗಳಲ್ಲಿ ಉಂಟಾಗುವ ವ್ಯತ್ಯಾಸಗಳು ತುಂಬ ಕಡಿಮೆ. ಅಥವಾ ಈ ವ್ಯತ್ಯಾಸಗಳು ಗೋಚರಿಸುವಷ್ಟು ಸ್ಪಷ್ಟರೂಪದಲ್ಲಿ ಇರುವುದೂ ಇಲ್ಲ.

ಆದರೆ ಸ್ವಾತಂತ್ರ್ಯದ ಅವಕಾಶಗಳು ಗೋಚರವಾದಾಗಲೆಲ್ಲ ಈ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ನಿಯಂತ್ರಣ ವ್ಯವಸ್ಥೆಯಿಂದ ಮುಕ್ತರಾಗಬೇಕಾದವರು ಸ್ತ್ರೀಯರು. ತಮ್ಮ ಬಂಧನದ ಸ್ಥಿತಿಯಿಂದ ಬಿಡುಗಡೆ ಪಡೆಯಬೇಕಾದವರು ಸ್ತ್ರೀಯರು. ಈ ಬಿಡುಗಡೆಯ ಪ್ರಯತ್ನವನ್ನು ತ್ರಿವೇಣಿ ಹಲವಾರು ವಿಧದಲ್ಲಿ ತೋರಿಸಿಕೊಡುತ್ತಾರೆ. ಗೃಹಿಣಿ ಧರ್ಮಕ್ಕೆ ಅನುಗುಣವಾಗಿ ಹೆಣ್ಣನ್ನು ವಿವರಿಸುವುದು ಅಥವಾ ಅವಳ ಸಾಮಾಜಿಕ ಪಾತ್ರನ್ನನುಸರಿಸಿ ಹೆಣ್ಣನ್ನು ವಿವರಿಸುವುದು - ಈ ವಿಧಾನಗಳನ್ನೆಲ್ಲ, ಇಲ್ಲಿ ಪ್ರಶ್ನೆಗೆ ಒಳಪಡಿಸುತ್ತಾರೆ ಲೇಖಕಿ.

ಹೆಣ್ಣಿನ ವ್ಯಕ್ತಿತ್ವವನ್ನು ಮತ್ತು ಜೀವನದ ವಿವರಗಳನ್ನು ಸಮಗ್ರವಾಗಿ ಕಲ್ಪಿಸಿಕೊಳ್ಳುವ ಅವಕಾಶವನ್ನು ತ್ರಿವೇಣಿ ಕಾದಂಬರಿಗಳು ನೀಡುವುದಿಲ್ಲವಾದರೂ, ಲೇಖಕಿ ಈ ಸಮಗ್ರತೆಯ ಕಲ್ಪನೆಗೆ ನೀಡುವ ಪೂರಕ ಅಂಶಗಳೆ ಉಲ್ಲೇಖಾರ್ಹವೆನಿಸುತ್ತವೆ.

ಹೆಣ್ಣಮಗು ಜನ್ಮತಾಳಿ ಬರುವುದರಿಂದ ಹಿಡಿದು ವಯಸ್ಸಾಗಿ ಸಾಯುವವರೆಗೆ, ಅವಳು ಮಾಡಬೇಕಾದ ತ್ಯಾಗ,

ನಡೆಸಬೇಕಾದ ಸೇವೆ, ಸಹಿಸಿಕೊಳ್ಳಬೇಕಾದ ಕಷ್ಟ, ಸಂಕಷ್ಟಗಳು, ಅನುಭವಿಸುವ ದುಃಖದುಗುಡಗಳು-ಈ ಎಲ್ಲ ವಿವರಗಳನ್ನು ಕಾದಂಬರಿ ಒಳಗೊಂಡಿದೆ. ಹೆಣ್ಣುಮಗುವಾಯಿತೆಂದು ಆದರ ಪಡುವ ತಂದೆತಾಯಿ, ಅನಾದಾರದಿಂದ ಉದಾಸೀನರಾಗುವ, ದುಃಖಪಡುವ ತಂದೆತಾಯಿ; ಒಂದು ಹಂತದಲ್ಲಿ ನಡೆಯಬೇಕಾದ ಮದುವೆಗೆ ಪೂರ್ವಭಾವಿಯಾಗಿ ಮಗಳನ್ನು ಬೆಳಸುವ ಕ್ರಮ, ಮದುವೆ ಒಪ್ಪಂದಕ್ಕಾಗಿ ಅವಳ ಶಿಕ್ಷಣ, ಉದ್ಯೋಗದ ಅಭಿಲಾಶೆಗಳನ್ನು ಮೊಟಕುಗೊಳಿಸುವ ಪ್ರಯತ್ನಗಳು; ಗಂಡ ಮತ್ತು ಗಂಡನ ಮನೆಯವರನ್ನು ಅನುಸರಿಸಿಕೊಂಡು ಹೋಗಲು ಬೇಕಾದ ಮಾನಸಿಕ ಸಿದ್ಧತೆ, ಮದುವೆ ನಂತರದ ಬದುಕು- ಈ ಹಲವು ಹತ್ತು ವಿಧಾನಗಳು ಹೆಣ್ಣಿನ ವ್ಯಕ್ತಿತ್ವದ ಸ್ವರೂಪವನ್ನು ಹೇಗೆ ರೂಪಿಸುತ್ತವೆ ಎನ್ನುವುದನ್ನು ಈ ಕಾದಂಬರಿಗಳು ವಿವರಿಸುತ್ತವೆ. ಗಂಡಿಗಾಗಿ ಅಥವಾ ಗಂಡನ ಸೇವೆಗಾಗಿ ರೂಪುಗೊಳ್ಳುವ ಈ ವ್ಯಕ್ತಿತ್ವಗಳು ವೈಯಕ್ತಿಕ ಸಾಧನಾರಹಿತವಾಗಿ ಹೇಗೆ ಅಸಮಗ್ರವಾಗಿ ಉಳಿದಿದೆ ಎನ್ನುವುವನ್ನು ತ್ರಿವೇಣಿ ಸ್ಪಷ್ಟಪಡಿಸುತ್ತಾರೆ.

ಹೆಣ್ಣಿನ ಈ ಅಸಮಗ್ರ ವ್ಯಕ್ತಿತ್ವದ ಒಂದು ಮುಖವನ್ನು ಕಾಣಿಸುವುದರೊಂದಿಗೇ ಸ್ವಪ್ರಜ್ಞೆ ಜಾಗೃತಗೊಳ್ಳುವ ಸ್ಥಿತಿಯಲ್ಲಿರುವ ಕೆಲವು ಪಾತ್ರಗಳ ಕಲ್ಪನೆಯೊಂದಿಗೆ ಹೆಣ್ಣಿನ ಸಮಗ್ರತೆಯ, ಸ್ವ-ಅಭಿವ್ಯಕ್ತಿಯ, ಅಭಿವ್ಯಕ್ತಿಗೆ ತ್ರಿವೇಣಿ ಅವಕಾಶ ನೀಡಿದ್ದಾರೆ.

ಬದುಕಿನಲ್ಲಿ ಎದುರುಗುವ ಅವಕಾಶಗಳು, ಅವು ಕನಿಷ್ಟ ಸಂಖ್ಯೆಯಲ್ಲಿದ್ದರೂ ಕೂಡಾ, ಈ ಅವಕಾಶಗಳನ್ನು ಬಳಸಿಕೊಂಡು ತಮ್ಮತನದ ಅರಿವನ್ನು ಮೂಡಿಸುವ ಕೆಲವು ಪಾತ್ರಗಳಾದರೂ ಇಲ್ಲಿ ಇವೆ. ತಮ್ಮ ಆಸೆ ಆಕಾಂಕ್ಷೆಗಳನ್ನು ವ್ಯಕ್ತಪಡಿಸಬಲ್ಲ ಪುರುಷ ದೋರಣೆಯನ್ನು ಪ್ರಶ್ನಿಸುವ, ಸಮಾನ ಹಕ್ಕು ಮತ್ತು ಭಾಧ್ಯತೆಗಳಗಾಗಿ ಧ್ವನಿ ಎತ್ತುವ, ಎತ್ತಿದ ಹೆಣ್ಣಿಗಳು. ಸಂಖ್ಯೆ ಕಡಿಮೆಯಿದ್ದರೂ, ಇಂಥ ಪ್ರಯತ್ನಗಳ ಹೊಳಹನ್ನು ಲೇಖಕಿ ಗುರುತಿಸಿರುವುದಕ್ಕೆ ಇದು ಸಾಕ್ಷಿಯಾಗಿದೆ.

ಕಾದಂಬರಿಯಲ್ಲಿ ಬರುವ ಯವತಿಯರು ಪದವೀಧರೆಯರು. ನಗರ ಪ್ರಜ್ಞೆಯಲ್ಲಿ ಬೆಳೆದವರು. ಅವರಲ್ಲಿ ವಿಚಾರಗಳಿವೆ, ಸ್ವಾತಂತ್ರ್ಯದ ಹಂಬಲವಿದೆ. ಗಂಡಿನಷ್ಟೇ ಕಿಚ್ಚು, ಧೈರ್ಯ, ಮುನ್ನುಗ್ಗುವ ಸಾಹಸಗಳಿವೆ. ಅವರು ಅಸಹಾಯಕರಲ್ಲ, ಅದರೆ ಅವರಲ್ಲಿ ಅಸಹಾಯಕಸ್ಥಿತಿಯನ್ನು ಕಲ್ಪಿಸುವ ಅನೇಕ ಕಾರಣಗಳು ಇವೆ.

ಬಡತನ, ವಿದ್ಯೆ ಇಲ್ಲದಿರುವಿಕೆ, ಗಂಡನ ಅಪಮೃತ್ಯು, ಗಂಡನ ಅನಾಗರಿಕ ವರ್ತನೆ, ಸಮಾಜದ ಕ್ರೂರದೃಷ್ಠಿ, ತನ್ನದೆನ್ನುವ ಸ್ಥಿರನೆಲೆ ಇಲ್ಲದಿರುವಿಕೆ - ಹೀಗೆ ಹಲವು ಬಾಹ್ಯ ಕಾರಣಗಳ ಮೂಲಕ ಈ ಹೆಣ್ಣುಗಳು ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕಿ ಬಳಲುತ್ತಾರೆ. ಹುಟ್ಟಿನಿಂದ ಸಾವಿನವರೆಗೆ ಸಂಸಾರದ ನೂರೆಂಟು ತಾಪತ್ರಯಗಳಿಗೆ ಸಿಲುಕಿ ನಲಗುವ ಈ ಹೆಣ್ಣುಗಳಿಗೆ ಬಿಡುಗಡೆಯ ಅವಕಾಶಗಳು ಇಲ್ಲವಾಗಿವೆ. ಈ ಕಾರಣವಾಗಿಯೇ ನಿರಂತರ ನೋವು ಸಂಕಟ ಮತ್ತು ದುಃಖಕ್ಕೆ ಬಲಿಯಾಗಿ ದೈಹಿಕವಾಗಿ ಮತ್ತು ಮಾನಸಿಕವಾಗಿ ಅಸ್ವಸ್ಥರಾಗುತ್ತಾರೆ.

ಹೆಣ್ಣಿನ ಮಾನಸಿಕ ಅಸ್ವಸ್ಥತೆ ತ್ರಿವೇಣಿ ಕಾದಂಬರಿಗಳ ಮುಖ್ಯ ಲಕ್ಷಣವಾಗಿ ಗುರುತಿಸಲ್ಪಟ್ಟಿದೆ. ತ್ರಿವೇಣಿ ಕಾದಂಬರಿಗಳಲ್ಲಿ ಮಾನಸಿಕ ರೋಗಿಗಳಾಗಿ ಅನೇಕ ಸ್ತ್ರೀಯರಿದ್ದಾರೆ. ಅವರ ಮಾನಸಿಕ ಅಸ್ವಸ್ಥತೆಗೆ ಗಂಡನ

ಅನಾದಾರ, ಗಂಡಿನ ಅತ್ಯಾಚಾರ, ಮನೆಯ ಪ್ರತಿಕೂಲ ಪರಿಸ್ಥಿತಿಗಳು, ತಾಯ್ತನದ ಬಯಕೆಗಳು, ಕೌಟುಂಬಿಕ ಒತ್ತಡಗಳು ಕಾರಣವಾಗುತ್ತವೆ. ಸ್ವಸ್ಥಮನಸ್ಸಿನ, ಸ್ವಸ್ಥ ಬದುಕಿನ ಸ್ತ್ರೀಪಾತ್ರಗಳೊಂದಿಗೆ, ಹುಚ್ಚಿ, ವೇಶ್ಯೆ, ಅಪರಾಧಿ, ಮುಂತಾದ ಪಾತ್ರಗಳು ಇಲ್ಲಿ ಕಾಣಿಸಿಕೊಂಡಿವೆ. ತ್ರಿವೇಣಿ ಸ್ತ್ರೀನಿರ್ವಚನವನ್ನು ಮೂರು ಮಾದರಿಗಳ ಮೂಲಕ ಅಭಿವ್ಯಕ್ತಿಸಿದ್ದಾರೆ. ಅವುಗಳೆಂದರೆ:

೧. ಪಾರಂಪರಿಕ ಮೌಲ್ಯಗಳನ್ನು ಅಂತರ್ಗತಗೊಳಿಸಿದ ನಿರ್ದೇಶನದ ಅನುಗುಣವಾಗಿ ನಿರ್ವಚಿಸಲ್ಪಟ್ಟ ಹೆಣ್ಣುಗಳು. ಈ ಹೆಣ್ಣುಗಳ ನಿರ್ವಚನವು ಅವರು ಕೈಗೋಳ್ಳುವ ಸಾಮಾಜಿಕ ಪಾತ್ರಗಳು ಮೂಲಕವೇ ವ್ಯಕ್ತವಾಗುತ್ತದೆ. ಇದು ಸಾಂಪ್ರದಾಯಿಕ ಸ್ತ್ರೀಮಾದರಿ.

೨. ಈ ಸಾಂಪ್ರದಾಯಿಕ ಮಾದರಿಗಿಂತ ತುಸು ಭಿನ್ನವಾಗಿದ್ದು ಸ್ತ್ರೀಪುರುಷ ಸಮಾನತಾ ದೋರಣೆಗನುಗುಣವಾಗಿರಲು ಪ್ರಯತ್ನಿಸುವ, ಆದರೆ ತಾವು ಬದುಕುವ ಸಾಂಸ್ಕೃತಿಕ ಪರಿಸರವನ್ನು ವಿರೋಧಿಸದಂತೆ ನೋಡಿಕೊಳ್ಳುವ ಪಾತ್ರಗಳು. ಇವು ಹೊಂದಾಣಿಕೆ ಸ್ತ್ರೀ ಮಾದರಿ.

೩. ಸ್ವಾತಂತ್ರ್ಯ ಮತ್ತು ಸ್ವಾಯತ್ತತೆ ತುಡಿಯುವ ಪಾತ್ರಗಳು.

ತನ್ನ ಬದುಕು ತನ್ನದು, ತನ್ನ ಭವಿಷ್ಯವಾಗಲೀ ಸಾಧನೆಯಾಗಲೇ ತನ್ನಿಂದಲೀ ನಡೆಯಬೇಕಾಗಿದೆ ಎಂದು ಸಾಂಪ್ರದಾಯಿಕವೆನಿಸುವುದಕ್ಕಿಂತ ಭಿನ್ನರೀತಿಯಲ್ಲಿ ಯೋಚಿಸುವ, ಬದುಕುವ ಸ್ತ್ರೀಪಾತ್ರಗಳು. ಇದು ಸ್ವ-ಅಭಿವ್ಯಕ್ತಿ ಸ್ತ್ರೀಮಾದರಿ. ತ್ರಿವೇಣಿ ಕಾದಂಬರಿಗಳಲ್ಲಿ ಸ್ತ್ರೀ ನಿರ್ವಚನ ಮಾದರಿಯನ್ನು ಗುರುತಿಸಲು ಕಾದಂಬರಿಯಲ್ಲಿನ ಹೆಣ್ಣಿನ ಬದುಕಿನಲ್ಲಿ ಮುಖ್ಯ ಪಾತ್ರವಹಿಸುವ ೩ ವಿಚಾರಗಳ ಮೂಲಕ ನೋಡಬಹುದಾಗಿದೆ. ೧. ಕುಟುಂಬ ವ್ಯವಸ್ಥೆ ೨. ವೈವಾಹಿಕ ಬದುಕು (ವಿವಾಹ) ೩. ಸ್ತ್ರೀ ಪುರುಷ ಸಂಬಂಧಗಳು.

**ಕುಟುಂಬ ವ್ಯವಸ್ಥೆ ಮತ್ತು ಸ್ತ್ರೀ**

ತ್ರಿವೇಣಿಯವರ ಬಹುತೇಕ ಕಾದಂಬರಿಗಳಲ್ಲಿರುವುದು ಪಿತೃಪ್ರಧಾನ ಕುಟುಂಬ. ಮನೆಯ ಹಿರಿಯ ಗಂಡಸು ಮನೆಯ ಯಜಮಾನ ಸ್ಥಾನದಲ್ಲಿರುವುದು ಇಲ್ಲಿ ಸಾಮಾನ್ಯ. ಕುಟುಂಬದ ಎಲ್ಲ ವ್ಯವಹಾರವನ್ನು ತನ್ನ ಮೂಲಕವೇ ನಡೆಸಬೇಕೆಂದುಕೊಳ್ಳುವ ಈ ವ್ಯಕ್ತಿ ಕುಟುಂಬದ ಇತರ ಸದಸ್ಯರನ್ನು ಅವರಲ್ಲಿಯೂ ಸ್ತ್ರೀಯರನ್ನು ನಿಯಂತ್ರಣದಲ್ಲಿಟ್ಟುಕೊಂಡಿರುವುದು ಹಲವು ಪ್ರಸಂಗಳ ಮೂಲಕ ವ್ಯಕ್ತವಾಗಿದೆ. ಹೆಚ್ಚಿನ ಕಾದಂಬರಿಗಳಲ್ಲಿರುವುದು ಗಂಡಹೆಂಡತಿ ಮತ್ತು ಮಕ್ಕಳನ್ನು ಒಳಗೊಂಡ ಕುಟುಂಬದ ಚಿತ್ರ.

'ಹಣ್ಣೆಲೆ ಚಿಗುರಿದಾಗ' ಕಾದಂಬರಿಯ ಅನಂತರಾಯರ ಹೆಂಡತಿ, ಮಕ್ಕಳು, ಸೊಸೆಯಂದಿರು ಮತ್ತು ಮೊಮ್ಮಕ್ಕಳನ್ನೊಳಗೊಂಡ ಸಂಸಾರದ ಚಿತ್ರ ಅಪ್ಪಟ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯ ಚಿತ್ರವೇ ಆಗಿದೆ. ಹೆಂಡತಿಯನ್ನು, ಬೆಳೆದ ಗಂಡುಮಕ್ಕಳನ್ನು ತಮ್ಮ ನಿಯಂತ್ರಣದಲ್ಲಿಟ್ಟು ಅಧಿಕಾರ ತೋರಿಸುವ ರಾಯರ ಮರ್ಜಿ, ಹಣದ ವಿಚಾರದಲ್ಲಿ ಅವರು ತೋರಿಸುವ ಜಿಪುಣತನ, ಮಕ್ಕಳು, ಮೊಮ್ಮಕ್ಕಳು, ಹೆಂಡತಿ ಎಲ್ಲರೂ ತನ್ನ ಅಭಿಪ್ರಾಯಕ್ಕೆ ಅನುಗುಣವಾಗಿಯೇ ಬದುಕಬೇಕು ಎನ್ನುವ ಅವರ ದರ್ಪದ ಮನೋಭಾವ, ಉಲ್ಲಂಘಿಸುವವರನ್ನು ನಿರ್ದಾಕ್ಷಿಣ್ಯವಾಗಿ ದೂರ ಮಾಡುವ, ಅವರನ್ನು ಕುಟುಂಬದ ಸಂಪತ್ತಿಗೆ ಅನರ್ಹರನ್ನಾಗಿ ಮಾಡಿಬಿಡುವ ಅವರ

ಮನೋಭಾವ - ಇವೇ ಮುಂತಾದ ವಿವರಗಳೊಂದಿಗೆ ಕಾದಂಬರಿ ಯಜಮಾನ ಸಂಸ್ಕೃತಿಯ ಕುಟುಂಬ ವ್ಯವಸ್ಥೆಯನ್ನು ವಿವರಿಸುತ್ತದೆ. ಪುರುಷಾಧಿಕಾರ ಧೋರಣೆಯುಳ್ಳ ಇನ್ನೂ ಎರಡು ಕುಟುಂಬಗಳ ಚಿತ್ರವನ್ನು 'ಕೀಲುಗೊಂಬೆ' ಮತ್ತು 'ಬಾನುಬೆಳಗಿತು' ಕಾದಂಬರಿ ನೀಡುತ್ತದೆ.

ಇಲ್ಲಿ ಅನಂತರಾಯರಂತೇ ನರಸಿಂಹಯ್ಯ ಮತ್ತು ಶೇಷಯ್ಯನವರು ಕುಟುಂಬದ ಇತರ ಸದಸ್ಯರ ಮೇಲೆ, ಅದರಲ್ಲಿಯೂ ತಮ್ಮ ಕೈಹಿಡಿದ ಹೆಂಡಂದಿರ ಮೇಲೆ ಪುರುಷಾಧಿಕಾರ ಧೋರಣೆಯನ್ನು ತೋರಿಸುವವರು. 'ಅಪಸ್ವರ'ದ ಶಾಮು ಅಪಾರ ಆಸ್ತಿಯ ಒಡೆಯನಾಗಿದ್ದು, ಒಡೆತನದ ಧೋರಣೆಯನ್ನು ತನ್ನ ಹೆಂಡತಿ ಮುಂದೆಯೂ ಪ್ರದರ್ಶಿಸುತ್ತಿರುತ್ತಾನೆ. ಗೃಹಾಡಳಿತದ ಪ್ರತಿ ವಿಚಾರದಲ್ಲಿ ತನ್ನ ಅಭಿಪ್ರಾಯ ಮೇಲುಗೈ ಸಾಧಿಸುವುದು ಅವನಿಗೆ ಇಷ್ಟವಾದ ವಿಚಾರವಾಗಿದೆ.

ಸಾಮಾಜಿಕರಣ ಪ್ರಕ್ರಿಯೆಯು ವ್ಯಕ್ತಿ ಹುಟ್ಟಿ, ಬೆಳೆಯುವ ಪರಿಸರದ ಮೂಲಕ (ಕುಟುಂಬದ ಚೌಕಟ್ಟಿನಲ್ಲಿ) ಉಂಟಾಗುತ್ತದೆ. ಈ ಸಾಮಾಜಿಕರಣ ಪ್ರಕ್ರಿಯೆಯು ಭವಿಷ್ಯದಲ್ಲಿ ಹೆಣ್ಣು ತನ್ನ ಸಾಮಾಜಿಕ ಪಾತ್ರವಾಗಿ ತನ್ನ ಇಡೀ ವ್ಯಕ್ತಿತ್ವವನ್ನು ಹೀಗೆ ಪರಿವರ್ತನೆಗೆ ಗುರಿಪಡಿಸುತ್ತಾಳೆ ಎನ್ನುವುವನ್ನು ತ್ರಿವೇಣಿ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣುಮಗುವಿನ ಬೆಳವಣಿಗೆಯ ವಿವಿಧ ಹಂತಗಳ ಮೂಲಕ ವಿವರಿಸುತ್ತಾರೆ.

ಹೆಣ್ಣಿನ ಹುಟ್ಟು ಮತ್ತು ಬಾಲ್ಯದ ವಿವರಗಳಿರುವ ಕಾದಂಬರಿಗಳು: 'ಮೊದಲ ಹೆಜ್ಜೆ', 'ಕೀಲುಗೊಂಬೆ', 'ಅವಳ ಮನೆ', 'ಅಪಸ್ವರ', 'ಬೆಕ್ಕಿನಕಣ್ಣು'. ಹುಟ್ಟಿದ ಮಗು ಹೆಣ್ಣು ಎನ್ನುವ ತಾತ್ಸಾರ, ಬೆಳೆಯುವ ಹಂತದಲ್ಲಿ ಗಂಡು - ಹೆಣ್ಣು ಮಕ್ಕಳ ನಡುವೆ ನಡೆಯುವ ತರತಮಭಾವ - ಇವು ಈ ಕಾದಂಬರಿಯಲ್ಲಿ ಪ್ರಮುಖವಾಗಿ ಗಮನಿಸಬೇಕಾದ ಅಂಶಗಳಾಗಿವೆ.

'ಮೊದಲ ಹೆಜ್ಜೆಯ' ಸುಬ್ಬಿ ಆರು ಹೆಣ್ಣುಮಕ್ಕಳಿರುವ ಕುಟುಂಬದ ಸದಸ್ಯೆ, ಸುಬ್ಬಿ ಮೈನೆರೆದಾಗ ಅವಳ ಹೆತ್ತತಂದೆ ಸಿಟ್ಟಿನಿಂದ ಅವಳನ್ನು ಹೊಡೆಯುದೊಂದು ಬಾಕಿಯಿತ್ತಂತೆ, ಗಂಡಾಗಿ ಹುಟ್ಟಿದರೆ ತಾನು ಸತ್ತಾಗ ಬೆಂಕಿ ಇಡುವ ಯೋಗ್ಯತೆಯಾದರೂ ಇರುತ್ತಿತ್ತು, ಎಂದುಕೊಂಡು ಅಸಹನೆಗೊಂಡ ತಂದೆ - ''ಚಿಕ್ಕಮಗುವಾಗಿದ್ದಾಗ ಲಿವರ್ ಕಾಯಿಲೆಯಾಗಿತ್ತಲ್ಲ. ಆಗಲೇ ಸತ್ತು ಹೋಗಿದ್ದರೆ ಚೆನ್ನಾಗಿತ್ತು'' ಎಂದು ಬೈದರಂತೆ.[೧] (ಮೊದಲ ಹೆಜ್ಜೆ :೩:೧೯೯೦) ಇಂಥ ತಾತ್ಸರಪೂರ್ಣ ಮಾತಿನಿಂದ ಬೆಳೆದ ಸುಬ್ಬಿಗೆ ಹೆಣ್ಣುಮಕ್ಕಳನ್ನು ಹೆರುವುದೆಂದರೆ ಅನಾಹುತವೆಂದೇ ಭಾವನೆ. ತನಗೇ ಹೆಣ್ಣುಮಗುವಾದಾಗ ಅವಳಿಗೆ ಆಘಾತವೆನಿಸುತ್ತದೆ. ''ಹುಟ್ಟಿದ ಮಗು ಹೆಣ್ಣೆಂದು ತಿಳಿದು ಸುಬ್ಬಿಗೆ ಷಾಕ್ ಆದಂತಾಯಿತು. ಆಕೆ ತನಗೆ ಗಂಡೇ ಆಗುವುದೆಂದು ದೃಢವಾಗಿ ನಂಬಿದ್ದಳು. ಮಗು ಹೆಣ್ಣಾಯಿತೆಂದು ಕೇಳಿ ಸುಬ್ಬಿಯ ದುಃಖಕ್ಕೆ ಪಾರವೇ ಇಲ್ಲ. ಹೊರಗಿನವರು ಆಕೆಯ ಅಳು ಕೇಳಿ ಮಗು ಸತ್ತು ಹೋಯಿತೊ ಏನೋ ಎಂದು ಭಾವಿಸಿದ್ದರಂತೆ''[೨] (ಅದೇ ಪುಟ:೮) ಹೀಗೆ ಸುಬ್ಬಿಯ ದುಃಖಕ್ಕೆ ಕಾರಣವಾಗಿ ಧರೆಗಿಳಿದ ಮಗುವಿನ ಸ್ಥಿತಿಯೂ ಸುಗಮವಾಗಿರುವುದಿಲ್ಲ ಚೆಲುವು, ಹಣ, ವಿದ್ಯೆ ಯಾವುದು ಇಲ್ಲದೆ. ತಾಯಿಯ ತಿರಸ್ಕಾರವು ಸೇರಿ ದೊಡ್ಡವಳಾದ ಈ ಹುಡುಗಿಯನ್ನು ವಂಚಕನೊಬ್ಬನು ಮೋಸ ಮಾಡುತ್ತಾನೆ. ಅವಿವಾಹಿತ ಮಾತೆಯಾದ ಅವಳು ತನಗೆ ಹುಟ್ಟಿದ ಮಗು ಹೆಣ್ಣು ಎಂದು ತಿಳಿದ ಕೂಡಲೇ ಅದನ್ನು ಸಾಯಿಸಿಬಿಡುತ್ತಾಳೆ. ತಾನು ಅನುಭವಿಸಿದ ಕಷ್ಟ ಪರಂಪರೆಗಳು,

ತನ್ನ ಮಗುವಿಗೆ ಬೇಡ ಎಂಬ ಸಮರ್ಥನೆ ಅವಳು ನೀಡುತ್ತಾಳೆ.

"...ನಾಯಿಯಂತೆ ಬಾಳುವುದಕ್ಕಿಂತ ಸಾವು ಮೇಲೆಂದು ಮಗುವಿನ ಕತ್ತು ಕಿವುಚಿಕೊಂಡೆ. ಮಗುವಿನ ಮೇಲೆ ಪ್ರೀತಿ, ಮರುಕದಿಂದ ನಾನು ಹಾಗೆ ವರ್ತಿಸಿದೆನೆಂದರೆ ಯಾರಾದರು ನಂಬುವರೆ? ಮಗು ಬದುಕಿದ್ದರೆ ನಾನೇನು ತಾನೇ ಕೊಡಬಲ್ಲೆ?.....ಎಲ್ಲರಿಂದಲೂ ತೆಗಳಿಸಿಕೊಂಡು ಎಲ್ಲರ ಕಾಲಕಸವಾಗಿ ಹರಕು ಚಿಂದಿಯುಟ್ಟು ಅರೆಹೊಟ್ಟೆ ಊಟ ಮಾಡಿ ಕಾಲಕಳೆಯಬೇಕಾಗಿತ್ತು ನನ್ನ ಮಗು. ಇವೆರಡರಲ್ಲಿ ಯಾವುದು ಉತ್ತಮ? ನನಗೆ ಯಾವುದು ಸರಿಯೆಂದು ತೋರಿತೋ ಆ ಕೆಲಸವನ್ನು ನಾನು ಮಾಡಿದೆ".[೩] (ಅದೇ, ಪುಟ:೧೩೦)

ತಾನು ಮತ್ತು ತನ್ನ ತಾಯಿ ಜೀವನದಲ್ಲಿ ಪಡೆದ ಅನುಭವ, ತನ್ನ ಮಗಳ ಬದುಕಿನಲ್ಲಿ ಮರುಕಳಿಸಬಾರದೆಂಬ ಹಂಬಲದಿಂದ ಹುಟ್ಟಿದ ಮಗುವನ್ನು ತಾಯಿ ಸಾಯಿಸಿಬಿಡುತ್ತಾಳೆ. ಇದೇ ಕಾದಂಬರಿಯಲ್ಲಿ ಬರುವ ಇನ್ನೊಂದು ಪಾತ್ರ ಮಂಜುಳೆಯದು. ಗಂಡನ ನಡತೆ ಸರಿಬೀಳದೆ ತೌರು ಸೇರಿದ ಮಂಜುಳೆಗೆ ದುಡಿದು ಬದುಕುವ ಕಷ್ಟದಲ್ಲಿ ತನ್ನ ಹೆಣ್ಣುಮಗು ಹೊರೆ ಎಂಬ ಭಾವನೆ:

'ಉಷೆಯೊಬ್ಬಳು ಕತ್ತಿನಲ್ಲಿರುವ ಭಾರಿ ಗುಂಡುಕಲ್ಲು. ಹಾಳಾದ್ದು ಅದೂ ಹೆಣ್ಣೇ. ಹೇಗೋ ಕಷ್ಟಪಟ್ಟು ಸಾಕಿದರೆ ಮುಂದೊಂದು ದಿನ ತನ್ನನ್ನು ನೋಡಿಕೊಂಡಿತೆಂಬ ಭರವಸೆಯೂ ಇಲ್ಲಿ ಮಂಜುಳೆಗೆ[೪] (ಅದೇ ಪುಟ:೧೭)

'ಅವಳಮನೆ' ಕಾದಂಬರಿಯಲ್ಲಿ ಗಂಡು ಸಂತಾನದ ನಿರೀಕ್ಷೆಯಲ್ಲಿದ್ದ ಬಡ ಗಂಡಹೆಂಡತಿಗೆ ಸಾಲಾಗಿ ಹೆಣ್ಣುಮಕ್ಕಳು ಹುಟ್ಟಿದಾಗ ನಿರಾಶೆ, ಸಂತಾಪ.

'ಮೂರನೇಯವಳೂ ಹೆಣ್ಣಾದಾಗ ತಾಯಿತಂದೆ ಸಹಜವಾಗಿ ತೋರುವ ಅನಾದರಣೆಯಲ್ಲಿ ಬೆಳೆದ ಹುಡುಗಿಯಾಗಿದ್ದಳು ಅನಂತೂ... ಅನಂತುವಿನ ಹಿಂದೆ ಕೇವಲ ಒಂದು ವರ್ಷಕ್ಕೇ ಜನ್ಮತಾಳಿದ ಸರೋಜಿಯನ್ನು ತಂದೆ, ತಾಯಿ ಮನೆಯ ಮುಂದಿದ್ದ ಮೋರಿಗೆ ಎಸೆಯದೆ ಮನೆಯಲ್ಲಿರಿಸಿಕೊಂಡು ಸಾಕಿದುದೇ ಅವಳ ಪುಣ್ಯವಾಗಿತ್ತು.[೫]'(ಅವಳಮನೆ: ೧೬:೧೯೯೩)

ಅದೇ ಕಾದಂಬರಿಯಲ್ಲಿ ಬರುವ ದತ್ತಕ ಪ್ರಸಂಗದಲ್ಲಿ ಹೆಣ್ಣಮಗುವನ್ನು ಕೊಟ್ಟರೆ ಮದುವೆ ಮತ್ತು ಇತರ ಖರ್ಚುಗಳು ಉಳಿಯತೆಂದು ತಂದೆತಾಯಿ, ಹೆಣ್ಣು ಮಗುವನ್ನು ತಂದು ಸಾಕಿದರೆ ಆಸ್ತಿವಾರಸುತನದ ಹಕ್ಕು ನೀಡುವುದರ ಅಗತ್ಯವಿಲ್ಲ ಎಂದು ಸಾಕು ತಂದೆತಾಯಿಗಳೂ ಸಮಾಧಾನಪಟ್ಟುಕೊಳ್ಳುತ್ತಾರೆ.

ಆರ್ಥಿಕವಾಗಿ ಕೆಳಮಟ್ಟದಲ್ಲಿರುವ, ಆಚಾರ ವಿಚಾರ, ಸಂಪ್ರದಾಯವನ್ನು ರೂಡಿಸಿಕೊಂಡಿರುವ ಸಾಮಾಜಿಕ ಪರಿಸರದ ಕುಟುಂಬದಲ್ಲಿ ಹುಟ್ಟಿದ ಹೆಣ್ಣುಮಗುವಿನ ಕುರಿತು ತಾತ್ಸರ, ಅನಾದಾರ ಮತ್ತು ನಿಂದನೆಗಳು ಅತ್ಯಂತ ಸಹಜ ಎನ್ನುವ ಭಾವನೆ ಇಲ್ಲಿ ವ್ಯಕ್ತವಾಗಿದೆ. ಹೆಣ್ಣುಮಗು ಹೊರೆ, ವಂಶದ ಉದ್ದಾರದಲ್ಲಿ ಅವಳ ಪಾತ್ರವಿಲ್ಲ. ಜೊತೆಗೆ ಸದಾ ದುಃಖಕ್ಕೆ ದಾರಿ ಎನ್ನುವ ಭಾವನೆ ಹೆತ್ತವರಲ್ಲಿದೆ. ಹೆಣ್ಣಮಗುವನ್ನು ಆದರಪೂರ್ವಕವಾಗ, ಪ್ರೀತಿಯಿಂದ 'ತನ್ನ ಮಗು' ಎಂಬ ಅಕ್ಕರೆಯಿಂದ ಸ್ವಾಗತಿಸಿದ ಕುಟುಂಬಗಳು ಇಲ್ಲಿ ಇವೆ.

'ಬೆಕ್ಕಿನ ಕಣ್ಣು' ವಿನ ಕುಸುಮಾ, 'ಅಪಸ್ವರ'ದ 'ವೀಣಾ', 'ಹೂವುಹಣ್ಣು' ವಿನ 'ಶೀಲಾ' ಇಂಥ ಅದೃಷ್ಟಶಾಲಿಗಳ ಸಾಲಿಗೆ ಸೇರುತ್ತಾರೆ. ವಾಸು ತಾನು ಬದುಕುವುದಿಲ್ಲವೆಂಬ ಭಾವನೆ ಬಂದ ಕೂಡಲೇ ಹೆಂಡತಿಯಲ್ಲಿ ಹೇಳುತ್ತಾನೆ: "ಶೀಲಾ ನಮ್ಮ ಮನೆ ಲಕ್ಷ್ಮಿ. ನಾನು ಹೋದ ಮೇಲೆ ನನ್ನ ಪ್ರತಿನಿಧಿ ಅವಳು. ಅವಳನ್ನು ಯೋಗ್ಯನಾದ ಹುಡುಗನೊಬ್ಬನಿಗೆ ಕೊಟ್ಟು ಮದುವೆ ಮಾಡು. ಆಮೇಲೆ ನೀನು ಅವಳ ಮನೆಯಲ್ಲೇ ಇರಬಹುದು ಮಗುವಿನ ಹೃದಯ ಯಾವ ರೀತಿಯಿಂದಲೂ ನೋಯಿಸಬೇಡ"[೬] (ಹೂವುಹಣ್ಣು:೭:೧೯೯೩)

ವಾಸು, ಶಾಮೂ, ಜಗನ್ನಾಥರಿಗೆ ತಮ್ಮ ಮಕ್ಕಳ ಮೇಲೆ ಅಪಾರ ಮಮತೆ, ಪ್ರೀತಿ ಇವೆ; ವಾತ್ಸಲ್ಯ, ವಾಂಛೆಗಳಿವೆ. ತಮ್ಮ ಹೆಣ್ಣುಮಕ್ಕಳ ಭವಿಷ್ಯ ಹಸನಾಗಬೇಕು ಎನ್ನುವ ಆಶಾವಾದವಿದೆ. ಜಗನ್ನಾಥರಾಯರಿಗೆ ಕಿರಿವಯಸ್ಸಿನಲ್ಲಿಯೆ ಮಗಳನ್ನು ವಿವಾಹ ಮಾಡಿಕೊಡುವುದು ಹಿತವಾಗುವುದಿಲ್ಲ. ಆದರೆ ಅವರು ಸಂಪ್ರದಾಯವನ್ನು ಬಿಡುವುದು ಶಕ್ಯವಲ್ಲದ ಕಾಲದಲ್ಲಿ ಇದ್ದಾರೆ. ಆಗ ಅವರು ಭವಿಷ್ಯದಲ್ಲಾದರೂ ಮದುವೆಯನ್ನು ಬೇಗ ನಡೆಸದೆ ಮಗಳನ್ನು ಮನೆಯಲ್ಲಿಟ್ಟುಕೊಳ್ಳುವ ಕಾಲ ಬರಬಹುದು ಎಂದು ಆಶಾಭಾವನೆ ವ್ಯಕ್ತ ಪಡಿಸುತ್ತಾರೆ.

"....ಕಾಲ ಹೀಗೆ ಇರುವುದಿಲ್ಲ. ಇನ್ನು ಹದಿನೈದು ವರ್ಷಗಳಲ್ಲಿ ಹುಡುಗಿಯರಲ್ಲಿ ಓದುವವರ ಸಂಖ್ಯೆ ಹೆಚ್ಚಾಗುತ್ತದೆ. ಹಾಗೇ ಮದುವೆಯಾಗುವ ವಯಸ್ಸು ಹೆಚ್ಚಾಗಬಹುದು[೭]". (ಕೀಲುಗೊಂಬೆ:೧೯:೧೯೯೩). ಸಮಾಜದ ದ್ವಿಸ್ತರ ನೀತಿಯಿಂದ ಹೆಣ್ಣು ಮಗುವಿನ ಭವಿಷ್ಯ ಜೀವನದ ಸ್ವರೂಪವನ್ನು ನಿರ್ದರಿಸಲು ಕುಟುಂಬ ಯಾವ ರೀತಿಯಲ್ಲಿ ಬಾಧ್ಯಸ್ಥವಾಗುತ್ತವೆ ಎನ್ನುವುದನ್ನು ತ್ರಿವೇಣಿ ಅನೇಕ ಘಟನೆಗಳ ಮೂಲಕ ವಿವರಿಸುತ್ತಾರೆ. ಬೆಳವಣಿಗೆಯ ಹಂತದಲ್ಲಿ ಕೌಟುಂಬಿಕ ವಾತಾವರಣದಲ್ಲಿ ಹೆಣ್ಣು ಮತ್ತು ಗಂಡುಮಕ್ಕಳ ನಡುವೆ ತೋರಿಸುವ ತಾರತಮ್ಯ ನೀತಿ:

ಉದಾ ೧: ಕಾದಂಬರಿ 'ಮೊದಲ ಹೆಜ್ಜೆ': ಸುಬ್ಬಿ ಮಗಳನ್ನು ಮನೆಕೆಲಸಕ್ಕೆ ಹಚ್ಚಿ, ಮಗನನ್ನು ಓದಿಸುತ್ತಾಳೆ. ಮಗಳು ನೊಂದುಕೊಂಡು - "ನನ್ನಏಳನೇಯ ವರ್ಷದಿಂದಲೂ ನಾನು ಸುಬ್ಬಿಗೆ ಮನೆಗೆಲಸದಲ್ಲಿ ಸಹಾಯ ಮಾಡತೊಡಗಿದೆ. ಹಾಗೆ ಸಹಾಯ ಮಾಡಿದೆ ಬೇರೆ ದಾರಿಯೇ ಇರಲಿಲ್ಲ. ಗಂಡು ಹುಡುಗನಾದುದರಿಂದ ಅವನು ಮನೆಗೆಲಸ ಮಾಡುವುದು ಸಾದ್ಯವೇ ಇರಲಿಲ್ಲ[೮]". (ಮೊದಲ ಹೆಜ್ಜೆ:೪೮:೧೯೯೦) ತನ್ನ ಭಾವನೆಯನ್ನು ಬಹಿರಂಗ ಪಡಿಸಲಾಗದ ಸ್ಥಿತಿ ಅವಳದು "ಗುರುವನ್ನು ಸಮಯಕ್ಕೆ ಸರಿಯಾಗಿ ಸ್ಕೂಲಿಗೆ ಕಳುಹಿಸುವಾಗ ಮಾತ್ರ ನನಗೆ ಕೊಂಚ ಹೊಟ್ಟೆಯುರಿಯತ್ತಿತ್ತು. ನಾನೂ ಹುಡುಗನಾಗಿ ಹುಟ್ಟಿದರೆ ಈ ಜವಾಬ್ದಾರಿಯಲ್ಲದೆ ಹಾಯಾಗಿರಬಹುದಾಗಿತ್ತಲ್ಲವೇ? "(ಅದೇ:ಪುಟ:೪೭) ಹೆಣ್ಣಾಗಿ ಹುಟ್ಟಿದ ಕಾರಣದಿಂದಲೇ ತನಗೆ ಶಿಕ್ಷಣ ಪಡೆಯುವ ಅವಕಾಶವಿಲ್ಲ ಎನ್ನುವ ಭಾವನೆ ಅವಳಲ್ಲಿ ಇತ್ತು.

ಉದಾ ೨: ಕಾದಂಬರಿ: 'ಅವಳಮನೆ'

ನಾಲ್ಕು ಜನ ಹೆಣ್ಣುಮಕ್ಕಳ ನಂತರ ಹುಟ್ಟಿದವನು ಗಂಡು. ಕಡುಬಡತನ, ದಾರಿದ್ರ್ಯ ತುಂಬಿದ ಕುಟಂಬದಲ್ಲಿ ಮಗ ಹುಟ್ಟಿದ ಸಂಭ್ರಮವನ್ನು ಕಾದಂಬರಿ ವ್ಯಂಗ್ಯವಾಗಿ ವರ್ಣಿಸುತ್ತದೆ. "ಸರೋಜಿಯ ನಂತರ ಕಾಲಿಟ್ಟು ಬೆಳಗಿದವನು ನರಸಿಂಹ. ಭಾಗ್ಯಮ್ಮ ಸುಬ್ಬಣ್ಣ ಇವರ ಸತತ ಪ್ರಯೋಗ ಕೊನೆಗೂ ಯಶಸ್ವಿಯಾಗಿತ್ತು.

ನರಸಿಂಹ ಸುಬ್ಬಣ್ಣನವರ ಚಕ್ರಾಧಿಪತ್ಯದ ಏಕಮಾತ್ರ ರಾಜಕುಮಾರ ಮುಂದೆ ಸಿಂಹಾಸನಕ್ಕೆ ಬರುವವನಾಗಿದ್ದ. ನಾಲ್ಕು ಜನ ಅಕ್ಕಂದಿರ ಕಣ್ಣು ತಪ್ಪಿಸಿ ತಾಯಿ ಅವನಿಗೆ ತರಕಾರಿ ಹಾಲು ನೀಡುತ್ತಿದ್ದರು. ಅಪರೂಪವಾಗಿ ತಿಂಡಿ ಮಾಡಿದ್ದ ದಿನ ತೃಪ್ತಿಯಾಗುವಷ್ಟು ತಿಂಡಿ ದೊರೆಯುತ್ತಿದ್ದುದು. ನರಸಿಂಹನಿಗೆ ಮಾತ್ರ'''' (ಅವಳಮನೆ:೧೭: ೧೯೯೩)

ಉದಾ ೩: ಕಾದಂಬರಿ ಕೀಲುಗೊಂಬೆ

ಹಬ್ಬದ ದಿನ ತಾಯಿ ತನಗೆ ತಲೆಗೆ ಎಣ್ಣೆ ಇಡುವಾಗ 'ಮುತ್ತೈದೆಯಾಗಿ, ಸಾವಿತ್ರಿಯಾಗಿ ಗಂಡ ಹೇಳಿದ ಹಾಗೆ ಕೇಳಿಕೊಂಡಿರಮ್ಮ ಎಂದು ಹರಸಿದಾಗ ಕುತೂಹಲದಿಂದ ಸೀತೆ ಕೇಳುತ್ತಾಳೆ: "ಅಮ್ಮ ಗೋಪಿಗೆ ಎಣ್ಣೆ ಇಡುವಾಗ ಹೆಂಡತಿ ಹೇಳಿದಹಾಗೆ ಕೇಳಿಕೊಂಡಿರಂತೆ ಹರಸ್ತಿಯೇನಮ್ಮ"? "ಅವನಿಗೇಕೆ ಹೆಂಡತಿಯ ಗುಲಾಮಗಿರಿ? ಗಂಡೋ ಮುತ್ತಿನ ಚೆಂಡು ಅಂತ ಹುಟ್ಟಿದ್ದಾನೆ'''' (ಕೀಲುಗೊಂಬೆ: ೫: ೧೯೯೩).

ಉದಾ ೪. ಕಾದಂಬರಿ: ಮುಕ್ತಿ

ಮೂವತ್ತು ವರ್ಷದ ಅಮೃತ ರಾತ್ರಿ ತಡವಾಗಿ ಮನೆಸೇರಿದರೆ ನೂರೆಂಟು ಪ್ರಶ್ನೆಕೇಳಿ ವಿಚಾರಣೆ ನಡೆಸುವ ತಾಯಿ, ತಮ್ಮ ವಿಠ್ಠಲನಲ್ಲಿ ಅದೇ ರೀತಿ ವರ್ತನೆ ತೋರಿಸಿವುದು ಸಾಧ್ಯವೇ ಎಂದು ಯೋಚಿಸುತ್ತಾಳೆ ಅಮೃತ.

ಹೆಣ್ಣು ಮಕ್ಕಳು ಬೆಳೆದಹಾಗೆ ಅವರನ್ನು ಮದುವೆಗಾಗಿ ಪೂರ್ವಸಿದ್ದತೆ ಮಾಡಲಾಗುತ್ತದೆ. ವಿವಾಹ ಹೆಣ್ಣಿನ ಬದುಕಿಗೆ ಕೇಂದ್ರವಾದಾಗ ವಿದ್ಯೆಯ ಅಗತ್ಯವಿಲ್ಲ ಎನ್ನುವ ನಿಲುವು ಕುಟುಂಬದ ಹಿರಿಯ ಸದಸ್ಯರ ಮೂಲಕ ವ್ಯಕ್ತವಾಗುತ್ತಿರುತ್ತದೆ.

ಮದುವೆಯಾಗುವ ಹುಡಿಗಿಗೆ ವಿದ್ಯೆ ಬೇಕಾಗಿಲ್ಲ, ಮನೆಗೆಲಸ ಗೊತ್ತಿದ್ದರೆ ಸಾಕು ಎನ್ನುವ ಭಾವವನ್ನು ನಿರೂಪಿಸುವ ವಿವಿಧ ಪ್ರಸಂಗಗಳು ಕಾದಂಬರಿಯಲ್ಲಿ ಇವೆ. ಸುಬ್ಬಿ ಮಗಳು ಪ್ರತಿಭಟಿಸಿದರೂ ಕೇಳದೆ ಅವಳ ಶಾಲೆ ಬಿಡಿಸುತ್ತಾಳೆ. ತಾನು ಮನೆ ಕೆಲಸ ಮಾಡಿ ತನ್ನ ತಮ್ಮ ಗಂಡು ಹುಡುಗನಾಗಿ ಹಾಯಾಗಿ ಓದಿಕೊಂಡಿರುವುದು ನೋಡಿ ಅವಳಿಗೆ ಅಪಾರವಾದ ದುಃಖವಾಗುತ್ತದೆ.

ಸೀತಾಳಿಗೆ ಮದುವೆ ನಿಶ್ಚಯವಾದ ಕೂಡಲೆ ಓದು ಸಾಕು ಎಂದು ಗಂಡಿನವರಿಂದ ಕಾಗದ ಬರುತ್ತದೆ. ಮದುವೆ ಅಂದ್ರೆ ತಾನು ಸ್ಕೂಲು ಯಾಕೆ ಬಿಡಬೇಕು, ಎನ್ನುವುದೇ ಸೀತೆಗೆ ಸಮಸ್ಯೆಯಾಗುತ್ತದೆ. ತನ್ನ ಸಮಸ್ಯೆ ಪರಿಹಾರಕ್ಕೆ ಅಜ್ಜಿ ನಂಜಕ್ಕನನ್ನು ಕೇಳಿದರೆ ಸಂಸಾರ ಮಾಡೊಕೇ ಓದು ಬೇಕಾಗಿಲ್ಲ. ಈಗ ಸಂಸಾರಮಾಡಿಕೊಂಡು ಇರುವವರೆಲ್ಲ ಓದಿಯೇ ಸಂಸಾರ ಮಾಡಿದವರೇ ಎನ್ನುವ ಉತ್ತರ ಅವಳಿಗೆ ಸಿಗುತ್ತದೆ. ಸೀತೆ, ಸುಬ್ಬಿಯ ಮಗಳು, ಇವರೆಲ್ಲ ಓದಿನಲ್ಲಿ ಆಸಕ್ತಿ ಉಳ್ಳವರೇ. ಓದು ಮುಂದುವರಿಸುವ ಹಂಬಲವಿದ್ದರೂ ಫಲಿಸಲಾಗದ ಒತ್ತಡದಿಂದ ಮುದುಡಿಕೊಂಡವರು.

ಓದಿನಲ್ಲಿ ಅತಿ ಜಾಣೆಯಾಗಿದ್ದ ಚುರುಕು ಬುದ್ಧಿಯ ಮೀರಾಳಿಗೂ ಅವಳ ಓದನ್ನು ಭಂಗಪಡಿಸುವ ಪ್ರಯತ್ನ, ಒತ್ತಡಗಳು ಸತತವಾಗಿ ಅವಳ ದೊಡ್ಡಮ್ಮ ಕಮಲಮ್ಮನವರ ರೂಪದಲ್ಲಿ ಕಾಡುತ್ತಿರುತ್ತದೆ. ಮೀರಾ ಲೋವರ್

ಸೆಕೆಂಡರಿ ಪರೀಕ್ಷೆಯಲ್ಲಿ ಮೊದಲ ಬಾರಿ ತೇರ್ಗಡೆ ಹೊಂದಿದಾಗಲೇ ಕಮಲಮ್ಮ ಅವಳ ಮುಂದಿನ ಅಭ್ಯಾಸವನ್ನು ಪ್ರತಿಭಟಿಸುತ್ತಾಳೆ. "ಹೆಂಗಸರಿಗೆ ಏಕೆ ವಿದ್ಯೆ? ಮೀರ ಓದಿದ್ದು ಸಾಕು ಒಂದಿಷ್ಟು ದಿನ ಮನೆಗೆಲಸ ಕಲಿತು ಕೊಳ್ಳಲಿ. ಆಮೇಲೆ ಎಲ್ಲಾದರು ಗಂಡು ಹುಡುಕಿ ಮದುವೆ ಮಾಡಿಬಿಡಿ[೧೪]". (ಅಪಸ್ವರ: ೨೪ : ೧೯೯೦)

ಮೀರಾ ಎಸ್. ಎಸ್. ಎಲ್. ಸಿ. ಯಲ್ಲಿ ಸಂಸ್ಥಾನಕ್ಕೆ ಮೊದಲನೆಯವಳಾಗಿ ತೇರ್ಗಡೆ ಹೊಂದಿದಾಗಲೂ ಕಮಲಮ್ಮ ಗಂಡನಲ್ಲಿ ಒತ್ತಾಯಿಸುತ್ತಾರೆ. "ಮೀರಾ ಓದಿದ್ದು ಸಾಕು. ಹೆಣ್ಣುಹುಡುಗಿ ಕಾಲೇಜು ವಿದ್ಯಾಬ್ಯಾಸ ಬೇಡ. ಸ್ವಲ್ಪಮನೆ ಕೆಲಸ ಕಲಿತು ಕೊಳ್ಳಲಿ ಆಮೇಲೆ ವರನೋಡಿ ಮದುವೆಮಾಡಿ..... ಈಗಿನ ಕಾಲದ ಹೆಣ್ಣು ಮಕ್ಕಳು ಅತೀ ಓದುತ್ತಿರುವುದರಿಂದಲೆ ನಿಶ್ಯಕ್ತರಾಗುತ್ತಿದ್ದಾರೆ. ಮೀರಾಳನ್ನು ಓದಿಸಬೇಡಿ.[೧೫]" (ಅದೇ ಪುಟ: ೩೬)

ಮೀರಾ ಈಡೇರದ ತನ್ನ ಓದಿನ ಹಂಬಲದಿಂದ ಸಾಕಷ್ಟು ವಿದ್ಯೆ ಇಲ್ಲದ ಗಂಡನ ಕೈಹಿಡಿದು ತನ್ನ ದಾಂಪತ್ಯ ಜೀವನದಲ್ಲಿ ಅಸಹನೆ, ದುಃಖ ಅನುಭವಿಸುತ್ತಾಳೆ. ಮೀರಾಳಂತೆ ಭಾರತಿ, ಮಾಲತಿ, ಸುನಂದವರು, ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಿ ಮದುವೆ ಮಂಟಪ ಪ್ರವೇಶ ಪಡೆದವರು. ಆದರೆ ವೈವಾಹಿಕ ಜೀವನದ ದುರಂತದಿಂದ ಘಾಸಿಯಾದ ಮನಸ್ಸಿಗೆ ಭವಿಷ್ಯದಲ್ಲಿ ಶಿಕ್ಷಣವನ್ನು ಮುಂದುವರಿಸುವುದರ ಮೂಲಕ ಆತ್ಮವಿಶ್ವಾಸ ಮತ್ತು ಛಲವನ್ನು ಮೈಗೂಡಿಸಿಕೊಂಡು, ಉದ್ಯೋಗ, ಮರುವಿವಾಹಗಳಂತಹ ಅವಕಾಶಗಳನ್ನು ಪಡೆಯುವುದನ್ನು ಇತ್ಯಾತ್ಮಕವಾಗಿ ತ್ರಿವೇಣಿ ತೋರಿಸಿಕೊಡುತ್ತಾರೆ.

ಇಲ್ಲಿ ಸುಬ್ಬಿ, ಕಮಲಮ್ಮ, ನಂಜಕ್ಕ, ರತ್ನಮ್ಮ, ಅಮೃತಾಳತಾಯಿ ಈ ಎಲ್ಲಾ ಸ್ತ್ರೀಯರು ಪಿತೃಪ್ರಧಾನ ಮೌಲ್ಯಗಳನ್ನು ಪ್ರತಿನಿಧಿಸುವವರೇ. ಸ್ವತಃ ಹೆಣ್ಣಾಗಿದ್ದರೂ ಪಾರಂಪರಿಕ ಮೌಲ್ಯ ಮತ್ತು ಸಂಪ್ರದಾಯಗಳಲ್ಲಿ ವಿಶ್ವಾಸವಿಟ್ಟುಕೊಂಡು ಬದುಕುವ ಈ ಸ್ತ್ರೀಯರಲ್ಲಿ ಹೆಣ್ತನದ ಕುರಿತು ಇರುವ ಭಾವನೆ ಪುರುಷರಪರ ಮತ್ತು ಪುರುಷಸೂಕ್ತ ರೀತಿಯದೆ ಆಗಿರುತ್ತದೆ.

ವಿದ್ಯೆಗಿಂತ ಮದುವೆಗೆ ಹೆಚ್ಚಿನ ಪ್ರಾಶಸ್ತ್ಯವಿರುವ ಕೌಟುಂಬಿಕ ಚೌಕಟ್ಟಿನೊಳಗೆ ಮದುವೆಯಾಗುವ ಹೆಣ್ಣಿನ ಅಭಿಪ್ರಾಯಗಳಿಗೆ ಮಾನ್ಯತೆ ಇರುವುದಿಲ್ಲ. 'ಮನೆತನ, ಗಂಡು ಒಪ್ಪಿಗೆಯಾದರೆ ಸಾಕು ಹೆಣ್ಣನ್ನು ಕೇಳಬೇಕಾದ ಅವಶ್ಯಕತೆ ಏನಿದೆ?' ಎಂಬ ಭಾವ ಹೆತ್ತವರದು. ಕೀಲುಗೊಂಬೆ ಕಾದಂಬರಿಯಲ್ಲಿ -

ಹದಿಮೂರು ವರ್ಷದ ಸೀತೆಗೆ ಗಂಡು ನೋಡಿದರು. ನರಸಿಂಹಯ್ಯನ ಸದೃಢದೇಹವನ್ನು ಕೆಂಪುಬಣ್ಣವನ್ನು ನೋಡಿ 'ರಾಜ ಇದ್ದ ಹಾಗೆ ಇದ್ದಾನೆ, ಎಂದುಕೊಂಡು ಗಂಡಿನ ಒಪ್ಪಿಗೆ ಪಡೆದು ಮದುವೆ ನಿಶ್ಚಯಿಸಿದರು. ಆದರೆ ಸೀತೆಯನ್ನು ಯಾರೂ ಹುಡುಗ ನಿನ್ನ ಮನಸ್ಸಿಗೆ ಒಪ್ಪಿಗೆಯೆ ಎಂದು ಕೇಳಲಿಲ್ಲ. ಸೀತುವಿನ ಅಜ್ಜಿಯಂತೂ -

"ಪಾಪ. ಅದಕ್ಕೇನು ತಿಳಿಯುತ್ತೆ. ನಾವು ಒಪ್ಪಿದ ವರನ್ನ ಅವಳು ಒಪ್ಪುತ್ತಾಳೆ. ಹುಡಿಗಿಯರನ್ನ ಯಾರೂ ನೀನು ಒಪ್ಪಿದಿಯಾ ಎಂದು ಕೇಳೊಲ್ಲ. ಮುಖ್ಯವಾಗಿ ಹುಡುಗನ ಮನಸ್ಸು ಒಪ್ಪಿದರೆ ಆಯಿತು" ಎಂದು ಬಿಟ್ಟರು.[೧೬] (ಕೀಲು ಗೊಂಬೆ: ೨೬: ೧೯೯೩) ಅಪಸ್ವರ ಕಾದಂಬರಿಯಲ್ಲಿ - ಮೀರಾಳಿಗೆ ವಿವಾಹದ ಅವಶ್ಯಕತೆಯೇನೊ ತೋರಿರಲಿಲ್ಲ. ಮದುವೆ ಇಲ್ಲದೆ ಹೆಂಗಸು ಬದುಕು ನೂಕಬಲ್ಲಳು, ಎಂಬುದು ಅವಳ ಅಭಿಪ್ರಾಯವಾಗಿತ್ತು.

ಆದರೂ ಒತ್ತಾಯ ಪೂರ್ವಕವಾಗಿ ಮೀರಾಳನ್ನು ಮದುವೆಗೆ ಒಪ್ಪಿಸಲಾಗುತ್ತದೆ.

"ನೋಡು ಮೀರಾ, ಶ್ಯಾಮು ಓದಿದ ಹುಡುಗನಲ್ಲ. ಆದರೆ ಅವನ ವಿನಯ, ಗುಣ, ಓದಿದ ಎಷ್ಟು ಜನರಿಗೆ ಇದೆ ಹೇಳು? ಹುಡುಗ ನೋಡಲು ರಾಜಕುಮಾರನಂತಿದ್ದಾನೆ ಅತ್ತೆ ಮಾವ, ಅತ್ತಿಗೆ ನಾದಿನಿಯವರ, ಕಾಟವಿಲ್ಲ. ಬೇಕಾದ ಹಾಗೆ ಆಸ್ತಿ ಇದೆ. ಅಷ್ಟು ದೊಡ್ಡಮನೆಗೆ, ಜಮೀನಿಗೆ ರಾಣಿಯಾಗಿ ನೀನು ಇರಬಹುದು. ಇದಕ್ಕಿಂತ ಹೆಚ್ಚಿಗೆ ನಿನಗೇನಾಗಬೇಕಾಗಿದೆ[೧೬]? (ಅಪಸ್ವರ: ೫೭ : ೧೯೯೦)

ಮಾನಸಿಕವಾಗಿ ಕೂಡಿಕೊಳ್ಳದ ಈ ದಾಂಪತ್ಯ ದುರಂತದಲ್ಲಿಯೇ ಕೊನೆಗೊಳ್ಳುತ್ತದೆ. ಸೀತೆ ತನಗಿಂತಲೂ ವಯಸ್ಸಿನಿಂದ ಹಿರಿಯನಾದ ಗಂಡನ ದೌರ್ಜನ್ಯಕ್ಕೆ ಬಲಿಯಾಗಿ ನರಳಿ, ನರಳಿ ಸತ್ತು ಹೋದರೆ, ಅಸಮ ದಾಂಪತ್ಯದ ಫಲವಾಗಿ ಮೀರಾ ಕೊನೆಯವರೆಗೆ ಅಸುಖಿಯಾಗಿಯೇ ಉಳಿಯುವಂತಾಗಿದೆ.

'ಹಣ್ಣೆಲೆ ಚಿಗುರಿದಾಗ' ಕಾದಂಬರಿಯಲ್ಲಿ ಸುಸಂಸ್ಕೃತ, ವಿದ್ಯಾವಂತ ಮತ್ತು ಶ್ರೀಮಂತ ಪರಿಸರವಿದ್ದರೂ ಮಾಲತಿ ಮದುವೆ ಸಂದರ್ಭದಲ್ಲಿ ತಂದೆಗೆ ಮಗಳ ಅಭಿಪ್ರಾಯ ಕೇಳಬೇಕೆನ್ನುವ ಮನಸ್ಸು ಇರುವುದಿಲ್ಲ. ಎಲ್ಲದರ ಅಂತಿಮ ನಿರ್ಧಾರ ತಮ್ಮದೇ ಎಂದುಕೊಳ್ಳುವ ರಾಯರಲ್ಲಿ, ಅವರ ಗಂಡು ಮಕ್ಕಳು ಮಾಲತಿ ಅಭಿಪ್ರಾಯ ಕೇಳಿ ಎಂದು ಸೂಚಿಸಿದಾಗ 'ಅದಕ್ಕೇನು ತಿಳಿಯುತ್ತೆ' ಎಂದು ಬಿಟ್ಟರು. ಆದರೆ ಮಕ್ಕಳ ಒತ್ತಾಯ ಮುಂದುವರಿದಾಗ ಮಾತ್ರ ಮಗಳ ಮನಸ್ಸು ತಿಳಿಯುವುದಕ್ಕೆ ಹೊರಡುತ್ತಾರೆ.

ಹುಟ್ಟಿದಂದಿನಿಂದ ಭವಿಷ್ಯದಲ್ಲಿ ನಡೆಯುವ ಮದುವೆಗಾಗಿ ಸಿದ್ಧತೆ ನಡೆಸುವ ವಿವಿಧ ಪ್ರಯತ್ನಗಳಿಂದಾಗಿ ಹೆಣ್ಣಿಗೆ ಹುಟ್ಟಿದ ಮನೆಯಲ್ಲಿ ತಾನು ಪರಕೀಯಳು ಎಂಬ ಭಾವನೆ ಕುಟುಂಬದ ಪರಿಸರದಲ್ಲಿ ಉದ್ಭವಿಸುತ್ತದೆ.

ಈ ಪರಕೀಯ ಭಾವನೆಯ ಕಾರಣವಾಗಿ ತಾನಿರುವ ಪರಿಸರದಲ್ಲಿ ಯಾವುದೇ ರೀತಿಯ ನಿರ್ಧಾರವನ್ನಾಗಲೀ, ಸಾಧನೆಯನ್ನಾಗಲೀ, ಕೈಗೊಳ್ಳಲು ಹೆಣ್ಣು ಅಸಮರ್ಥಳಾಗುತ್ತಾಳೆ. ಈ ಅಸ್ಥಿರತೆ ಅವಳಲ್ಲಿ ಅಸಹಾಯಕತೆಯನ್ನು ಉಂಟು ಮಾಡುತ್ತದೆ, ಎನ್ನುವುದನ್ನ ಮಾಲತಿಯ ಮನ:ಸ್ಥಿತಿ ವಿವರಿಸುತ್ತದೆ.

ಮಾಲತಿ ಮದುವೆಯಾದರೂ, ಗಂಡನ ಅಕಾಲಿಕ ಮರಣದಿಂದ ತಂದೆ ಮನೆಯಲ್ಲಿಯೇ ಉಳಿಯುವಂತಾಗಿದೆ. ತಂದೆ, ತಾಯಿ, ಅಣ್ಣಂದಿರು ಮುಂತಾದ, ಆತ್ಮೀಯ ಬಳಗವಿದ್ದರೂ ಮಾಲತಿ ತನ್ನ ಬದುಕು ಅಸ್ಥಿರವೆಂದು ತಿಳಿಯುತ್ತಾಳೆ. ವಯಸ್ಸು ವಿದ್ಯೆ ಇದ್ದರೂ ಅವಳಿಗೆ ಧೈರ್ಯವುಂಟಾಗುವುದಿಲ್ಲ.

"ಇಷ್ಟಕ್ಕೂ ತಾನು ಯಾರು ಈ ಮನೆಯಲ್ಲಿ? ಮನೆ ತಪ್ಪಿದ ಮಗಳು. ತಂದೆಯ, ಅಣ್ಣಂದಿರ, ಆಶ್ರಯದಲ್ಲಿ ಬಿದ್ದಿರುವವಳಲ್ಲವೇ? ಹಿರಿಯರೆಲ್ಲಾ ದಯೆ ತೋರಿ ತನಗೆ ಆಶ್ರಯ ಕೊಟ್ಟು ಅನ್ನ ಹಾಕುವುದರಿಂದಲೇ ಈಗ ತನ್ನದು ಒಂದು ಬದುಕು. ನಾಳೆಯ ದಿನ ಹಿರಿಯರಿಗೆ ಬೇಸರವಾಗಿ ನನ್ನನ್ನ ಅಲಕ್ಷ್ಯಮಾಡಿದರೆ ತನ್ನ ಗತಿಯೇನು? ತಂದೆಯ ಮನೆಯಲ್ಲಿ ತನ್ನನ್ನ ಅವರು ನೋಡಿಕೊಳ್ಳಬೇಕೆಂದು ನಿಯಮವೇನು ಇಲ್ಲ[೧೭]."(ಹಣ್ಣೆಲೆ ಚಿಗುರಿದಾಗ : ೧೦೭ : ೧೯೯೪)

'ಅವಳ ಮನೆ'ಕಾದಂಬರಿಯುದ್ದಕ್ಕೂ ಸರೋಜಿನಿ ತನ್ನ ನೆಲೆಯನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ಇರುತ್ತಾಳೆ. ಹುಟ್ಟಿದ ಮನೆ, ಸಾಕಿದವರ ಮನೆ, ಅವಳಿಗೆ 'ತನ್ನ ಮನೆ' ಯೆಂಬ ಭಾವನೆಯನ್ನು ಹುಟ್ಟಿಸುವುದಿಲ್ಲ. ವಿವಾಹವಾಗುವುದರ ಮೂಲಕ ತನ್ನ ನೆಲೆಯನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡುತ್ತಾಳೆ ಸರೋಜಿನಿ.

ಹೆತ್ತ ಮನೆಯಲ್ಲಿ ಹೊರೆ ಎನ್ನುವ ರೀತಿಯಲ್ಲಿ ಬೆಳೆದ ಪದ್ಮಾ, ಸರೋಜಿನಿಯರಿಗೆ ಗಂಡನ ಮನೆ ತಮ್ಮ ಶಾಶ್ವತ ನೆಲೆ ಎಂಬ ಭಾವನೆಯೊಂದಿಗೇ ಗಂಡನ ಮನೆ ಆರ್ಥಿಕ ಪುನರ್ವಸತಿ ಎಂಬ ಕಲ್ಪನೆಗೂ ಅವಕಾಶ ನೀಡುತ್ತದೆ. ಈ ರೀತಿ ವಿವಾಹದ ಅವಶ್ಯಕತೆಯನ್ನ ಹೆಣ್ಣಿನ ಬದುಕಿನಲ್ಲಿ ಅನಿವಾರ್ಯವಾಗಿಸುವ ಕಲ್ಪನೆ ಇಲ್ಲಿಂದಲೇ ಹುಟ್ಟಿಕೊಳ್ಳುತ್ತದೆ.

ಕೌಟುಂಬಿಕ ಚೌಕಟ್ಟಿನಲ್ಲಿ ತಾಯಿ, ಹೆಂಡತಿ, ಮಗಳು, ಸೊಸೆಯಾಗಿ ಬದುಕ ಬೇಕಾಗಿರುವ ಸಂದರ್ಭಗಳಲ್ಲಿ ಪುರುಷಾಧಿಕಾರದ ಧೋರಣೆಗಳು ಹೇಗೆ ಈ ಸಾಮಾಜಿಕ ಪಾತ್ರಗಳನ್ನು ನಿರ್ವಹಿಸಲು ಹೆಣ್ಣಿಗೆ ಒತ್ತಡಗಳನ್ನು ತರುತ್ತವೆ, ಎಂಬ ವಿವರಗಳನ್ನು ಅನೇಕ ಕಾದಂಬರಿಗಳು ನೀಡುತ್ತವೆ.

'ಹಣ್ಣೆಲೆ ಚಿಗುರಿದಾಗ' ಕಾದಂಬರಿಯ ಅನಂತರಾಯರು ಮೇಲುನೋಟಕ್ಕೆ ಪೆದ್ದುಪೆದ್ದಾಗಿ ಕಾಣಿಸಿಕೊಂಡರೂ, ಕುಶಲ ವ್ಯವಹಾರಿ. ಅವರು ತೆಗೆದುಕೊಳ್ಳುವ ನಿರ್ಧಾರಗಳು, ಅವರ ಧೋರಣೆಗಳು, ಅವರು ಇರುವ ಸ್ಥಾನದ ಬಲದ ಅಧಿಕಾರದ ಮೂಲಕ ಬಂದಿರುವಂತಹದು. ಮಗಳ ಮದುವೆ ಸಂದರ್ಭ, ಪತ್ನಿ ಸಾವಿನ ನಂತರ ಅವರು ನಡೆದುಕೊಳ್ಳುವ ರೀತಿ, ಪಿತೃ ಪ್ರಧಾನ ಮೌಲ್ಯಗಳ ಗುರುತರ ಉದಾಹರಣೆಗಳು. ''ತಾನು ಮನೆಯ ಯಜಮಾನ ಎಲ್ಲರೀತಿಯಿಂದಲೂ ತಾನು ಸರ್ವಾಧಿಕಾರಿ ತನ್ನನ್ನು ಪ್ರಶ್ನಿಸುವವರು ಯಾರು ಇಲ್ಲ. ಎಂದು ರಾಯರ ನಂಬಿಕೆ[೧೮]''. (ಹಣ್ಣೆಲೆ ಚಿಗುರಿದಾಗ: ೯೫: ೧೯೯೪)

ಪಿತೃಪ್ರಧಾನ ಕುಟುಂಬದ ಚಿತ್ರವನ್ನು 'ಹಣ್ಣೆಲೆ ಚಿಗುರಿದಾಗ', 'ಬಾನುಬೆಳಗಿತು', 'ಅಪಸ್ವರ', 'ಅವಳಮಗಳು' ಮತ್ತು 'ಅವಳ ಮನೆ' ಕಾದಂಬರಿ ನೀಡುತ್ತದೆ. ಪುರುಷಪ್ರಧಾನ ಸಮಾಜ ವ್ಯವಸ್ಥೆಯ ಚಿತ್ರವನ್ನು 'ಹೂವು ಹಣ್ಣು', 'ಮೊದಲ ಹೆಜ್ಜೆ', 'ಮುಚ್ಚಿದಬಾಗಿಲು' ಕಾದಂಬರಿ ನೀಡುತ್ತವೆ. ಕುಟುಂಬದಲ್ಲಿ ತೆಗೆದುಕೊಳ್ಳಲಾಗುವ ಎಲ್ಲಾ ನಿರ್ಧಾರಗಳಲ್ಲಿಯೂ ಗಂಡ | ಮಾವ | ತಂದೆಯರ ಮಾತೇ ಕೊನೆ ಮಾತಾಗಿರುವುದನ್ನು ಈ ಕಾದಂಬರಿಗಳು ತಿಳಿಸುತ್ತವೆ.

ಅದೆ ಹಾದಿಯಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲಿಯೂ ಪುರುಷ ಸಮಾಜ ಮೇಲುಗೈ ಸಾಧಿಸುವುದರಿಂದ ಹೆಣ್ಣಿನ ಬದುಕು ಅದಃಪತನಕ್ಕೆ ಬಲಿಯಾಗುವುದನ್ನು ಈ ಕಾದಂಬರಿಗಳು ವಿವರಿಸುತ್ತವೆ. ವೇಶ್ಯೆಯಾಗಿ, ಅಪರಾಧಿಯಾಗಿ ಮತ್ತು ಮಾನಸಿಕ ರೋಗಿಗಳಾಗುವುದಕ್ಕೆ ಈ ರೀತಿಯ ಸಾಮಾಜಿಕ ವ್ಯವಸ್ಥೆಯನ್ನು ಇಲ್ಲಿ ಗುರಿಪಡಿಸಲಾಗಿದೆ.

ಕೌಟುಂಬಿಕ ಪರಿಸರದಲ್ಲಿ ಹೆಣ್ಣಿನ ಸ್ವಂತ ಆಸೆ ಆಕಾಂಕ್ಷೆಗಳಿಗೆ ಅವಕಾಶ ಸಿಗುವುದು ತುಂಬಾ ಕಡಿಮೆ. ಹೆಂಡತಿ ಉಡುವ, ಉಣ್ಣುವ ವಿಚಾರಗಳಲ್ಲಿಯೂ ಗಂಡ ಅಧಿಕಾರ ಸ್ಥಾಪಿಸುವುದನ್ನು ಅನಂತರಾಯರು, ಶೇಷಯ್ಯನವರು ತಮ್ಮ ಹೆಂಡತಿ ವಿಚಾರದಲ್ಲಿ ನಡೆದುಕೊಳ್ಳುವ ರೀತಿ ತೋರಿಸಿಕೊಡುತ್ತದೆ.

ಎರಡು ಹೊತ್ತಿನ ಊಟ, ಎರಡು ಜತೆ ಬಟ್ಟೆಗಳು, ವಾಸಕ್ಕೆ ಮನೆ ಇರುವಾಗ ಇದಕ್ಕಿಂತ ಹೆಚ್ಚು ಬೇಕಾಗಿರುವುದೇನು ಎಂಬ ದೋರಣೆ ಗಂಡಹೆಂಡತಿ ಸಂಬಂಧದುದ್ದಕ್ಕೂ ಕಂಡು ಬರುವ ಅಂಶ. ಹೆಂಡತಿ ಬಯಕೆ ವ್ಯಕ್ತಪಡಿಸಿದರೆ, ಅತೃಪ್ತಿ ತೋರಿಸಿದರೆ ಅದನ್ನು ಮುಚ್ಚಿಬಿಡುವ ಪ್ರಯತ್ನವನ್ನು ನಡೆಸುವ ಗಂಡಂದಿರು, ಹೆಂಡತಿ

ಏನಾದರೂ ಸಾಧನೆ ಮಾಡಬೇಕೆಂಬ ಭಾವವನ್ನು ವ್ಯಕ್ತಪಡಿಸಿದರೆ. ವಿದ್ಯೆ, ಉದ್ಯೋಗಕ್ಕೆ ಆಸೆ ಪಟ್ಟರೆ ಅದಕ್ಕೆ ಭಂಗ ತರಲು ಹಿಂದೆ ಮುಂದೆ ನೋಡುವುದಿಲ್ಲ. ಶಾಮ, ರಾಮನಾಥರು ಇದೇ ಕಾರಣದಿಂದ ಹೆಂಡಂದಿರ ಈ ನಿಟ್ಟಿನ ಪ್ರಯತ್ನಗಳಿಗೆ. ಅಸಮ್ಮತಿ, ಅಸಹಕಾರ ತೋರಿಸುತ್ತಾರೆ.

ಲೈಂಗಿಕ ಶೋಷಣೆ ಕೇಂದ್ರಪ್ರಜ್ಞೆಯಾಗಿರುವ ಕೀಲುಗೊಂಬೆಯಲ್ಲಿ ಕೌಟುಂಬಿಕ ವಾತಾವರಣ ಸೀತೆಗೆ ಶೋಷಣೆಯ ಕೇಂದ್ರವಾಗಿದೆ. ಈ ಕೇಂದ್ರದಲ್ಲಿ ಶೊಷಕ ಮತ್ತು ಶೊಷಿತ ವರ್ಗ ಗಂಡ-ಹೆಂಡತಿ ಸಂಬಂಧದ ಮೂಲಕ ವ್ಯಕ್ತವಾಗಿರುವುದು ಗಮನ ಸೆಳೆಯುತ್ತದೆ. ಕೈಹಿಡಿದ ಮೃದು ಸ್ವಬಾವದ ಹೆಂಡತಿಯನ್ನ ತನ್ನ ಭೊಗ ಸಾಧನವಾಗಿ ಮಾತ್ರ ಕಾಣಬಲ್ಲ ನರಸಿಂಹಯ್ಯ ಮತ್ತು ಗಂಡ ಹೇಗಿದ್ದರೂ ಆತನನ್ನು ವಿರೋಧಿಸದೆ, ಪ್ರತಿಭಟಿಸದೆ ಬದುಕುವುದು ಧರ್ಮವೆಂದು ತಿಳಿದ ಸೀತೆ - ಈ ಎರಡೂ ಪಾತ್ರಗಳು ಸಂಪ್ರದಾಯ ಕಲ್ಪಿಸಿಕಂಡ ಕುಟುಂಬದ ಚಿತ್ರಣಗಳೇ ಆಗಿವೆ. ನರಸಿಂಹಯ್ಯನಂತೇ ಲೈಂಗಿಕ ಶೋಷಣೆಗೆ ಮುಂದುವರಿದು ಹೆಣ್ಣಿನ ಬದುಕನ್ನು ದುರಂತವಾಗಿಸಿದ ಅನೇಕ ಪುರುಷಪಾತ್ರಗಳಿಗೆ ಕುಟುಂಬ ಮತ್ತು ಸಮಾಜ ಬೆಂಬಲವಾಗಿ ನಿಂತುಕೊಂಡಿದೆ.

ಲೈಂಗಿಕವಾಗಿ ಹೆಣ್ಣಿನ ಬದುಕಿನೊಡನೆ ಆಟವಾಡಿದ ಶಿವಸ್ವಾಮಿ(ಮೊದಲಹೆಜ್ಜೆ), ವಿವೇಕ(ಶರಪಂಜರ), ಕಾಮುಕ ಸಮಾಜ (ಹೂವುಹಣ್ಣು) ಚಂದು(ಸೋತುಗೆದ್ದವಳು), ಸ್ವಾರ್ಥದಿಂದ ಹೆಂಡತಿಗೆ/ಪ್ರೇಮಿಗೆ ದ್ರೋಹಬಗೆಯುವ ಸತೀಶ(ಶರಪಂಜರ), ಮೋಹನ(ಬೆಳ್ಳಿಮೋಡ) ರಾಮನಾಥ(ಬಾನುಬೆಳಗಿತು) - ಇವರೆಲ್ಲರಿಗೂ ಎಲ್ಲ ರೀತಿಯ ಬೆಂಬಲಗಳು ಮತ್ತು ರಕ್ಷಣೆಗಳು ಕುಟುಂಬದ ಪರವಾಗಿ ಸಲ್ಲುತ್ತವೆ.

### ವೈವಾಹಿಕ ಬದುಕು: ಮತ್ತು ಸ್ತ್ರೀ

ಹೆಣ್ಣಿನ ಬದುಕಿನಲ್ಲಿ ವಿವಾಹ ಅನಿವಾರ್ಯ ಎನ್ನುವ ವಿಚಾರವನ್ನು ತ್ರಿವೇಣಿ ಕಾದಂಬರಿಗಳಲ್ಲಿ ಬರುವ ಸಂಭಾಷಣೆಗಳು, ಘಟನೆಗಳು ನಿರೂಪಿಸುತ್ತವೆ. ಅಷ್ಟೇ ಸಹಜವಾಗಿ ಮದುವೆ ಹೆಣ್ಣಿನ ಬದುಕಿನಲ್ಲಿ ಉಂಟು ಮಾಡುವ ತೊಂದರೆಗಳನ್ನು, ದುರಂತಗಳನ್ನು, ನೋವು ದುಗುಡಗಳನ್ನು ಕಾದಂಬರಿ ವಿವರಿಸುತ್ತದೆ.

ಮದುವೆಯ ಆವಶ್ಯಕತೆಯನ್ನು ಇಲ್ಲಿರುವ ಸ್ತ್ರೀ ಪಾತ್ರಗಳು ಅನುಮೋದಿಸುತ್ತಿರುತ್ತವೆ. ತಾಯಿ, ಅಜ್ಜಿ, ಮತ್ತು ಅತ್ತೆಗಳಂತಹ ಹಿರಿಯ ಪಾತ್ರಗಳಲ್ಲಿ ಈ ಧೋರಣೆ ಕಾಣಿಸುತ್ತದೆ. ಬೆಳೆದು ನಿಂತ ಹೆಣ್ಣುಮಕ್ಕಳಿಗೆ ಮದುವೆಯ ಅಗತ್ಯವನ್ನು ಮನಗಾಣಿಸುವುದರಲ್ಲಿ, ಮದುವೆಗೆ ಒಪ್ಪಿಸುವ ದಿಕ್ಕಿನಲ್ಲಿ ಒತ್ತಾಯ ಹೇರುವುದರಲ್ಲಿ, ವಿದ್ಯೆ, ಉದ್ಯೊಗ ಮುಂತಾದವುಗಳಿಗೆ ತಡೆಯೊಡ್ಡಿ ಮದುವೆಯ ಕರ್ತವ್ಯ ಮೊದಲು ಎಂದು ತಿಳಿಹೇಳುವುದರಲ್ಲಿ ಇಂಥ ಪಾತ್ರಗಳು ಸದಾ ಕ್ರಿಯಾಶೀಲವಾಗಿರುತ್ತವೆ.

ವೈವಾಹಿಕ ಜೀವನವೆಂದರೆ ಗಂಡು ಹೆಣ್ಣು ಪರಸ್ಪರ ಪ್ರೀತಿ-ಅನುರಾಗ-ವಿಶ್ವಾಸದಿಂದ ಕೂಡಿ ಬಾಳುವ ಆದರ್ಶ ಚಿತ್ರಕ್ಕಿಂತ ಭಿನ್ನವಾದ ವಾಸ್ತವ ವಿವರಗಳಿರುವ ದಾಂಪತ್ಯ ಚಿತ್ರ ಇಲ್ಲಿ ಇದೆ. ವಿವಾಹದ ನಂತರ ವೈವಾಹಿಕ ಬದುಕಿನಲ್ಲಿ ಸುಖವನ್ನುಂಡ ಹೆಣ್ಣುಗಳು ಇಲ್ಲಿ ಕಡಿಮೆ.

ಹೂವುಹಣ್ಣು ಕಾದಂಬರಿಯ ರಮಾ ವಿವಾಹಿತೆ. ಪುಟ್ಟ ಹೆಣ್ಣುಮಗುವಿನ ತಾಯಿ, ಸ್ನೇಹಿತರು ಬಂಧುಗಳು ಇಲ್ಲದ ರಮಾ-ವಾಸು ದಂಪತಿಗಳು ಅತ್ಯಂತ ದಾರುಣವಾದ ಬಡತನದಲ್ಲಿ ಜೀವನ ನಡೆಸುತ್ತಿರುತ್ತಾರೆ. ವಾಸುವಿಗೆ ಚಿಕ್ಕ ಉದ್ಯೋಗವೊಂದು ದೊರಕಿ, ಅವರ ಬದುಕು ಸುಗಮದಾರಿಯಲ್ಲಿ ಹೋಗುವ ನಿರೀಕ್ಷೆ ಇದ್ದಾಗಲೇ, ವಾಸುವಿನ ಅಪಮೃತ್ಯುವಾಗುತ್ತದೆ. ಗಂಡ ಬದುಕಿರುವಾಗಲೇ ಸರಿಯಾಗಿ ಉಣ್ಣಲು ತಿನ್ನಲು ಇಲ್ಲದ ತತ್ವಾರದ ಬದುಕು ಅನುಭವಿಸುತ್ತಿದ್ದ ರಮಾ ಗಂಡ ಸತ್ತ ಬಳಿಕ ಅಕ್ಷರಶಃ ಬೀದಿ ಪಾಲಾಗುತ್ತಾಳೆ. ರಮ ಹರೆಯದವಳು. ಸಾಕಷ್ಟು ವಿದ್ಯೆ ಇಲ್ಲದವಳು, ಅವಳು ಮದುವೆಯಾದ ಗಂಡನೂ ಅದೇ ಸ್ಥಿತಿಯಲ್ಲಿದುದರಿಂದ ರಮಾಳ ಭವಿಷ್ಯದ ಜೀವನ ಅರ್ಥಿಕ ಅಸಹಾಯಕತೆಯ ಕಾರಣವಾಗಿ ನರಕವೆನಿಸುತ್ತದೆ.

'ಅಪಸ್ವರ' ದ ಮೀರಾ ಮದುವೆಯನ್ನೇ ಬಯಸದವಳು. ಕಾನ್ವೆಂಟ್ ಶಿಕ್ಷಣ ಪಡೆದು ಓದು ಮುಂದುವರಿಸುವ ಹಂಬಲವಿದ್ದ ಅವಳನ್ನು ಆಸ್ತಿಯುಳ್ಳವನೆಂಬ ಕಾರಣವನ್ನು ಮುಂದಿಟ್ಟು ಶಾಮುವಿನೊಂದಿಗೆ ಒತ್ತಾಯಪೂರ್ವಕವಾಗಿ ಮದುವೆ ನಡೆಸಲಾಗುವುದು. ಮೀರಾಳದು ಅಸಮ ದಾಂಪತ್ಯ, ಅವಳ ಸ್ವತಂತ್ರ ಮನೋಭಾವಕ್ಕೆ, ಶಾಮುವಿನ ಅಧಿಕಾರೀ ಮನೋಭಾವಕ್ಕೆ ಅಪಾರವಾದ ಅಂತರ. ಶಾಮು ಮೀರ ಬೆಳೆದ ಪರಿಸರ ಬೇರೆ, ಪಡೆದ ಶಿಕ್ಷಣ ಬೇರೆ. ಉಂಡು ಉಟ್ಟುಕೊಳ್ಳುವ ಸಂಪನ್ನತೆಯೊಂದೇ ಅವರ ವೈವಾಹಿಕ ಬದುಕಿನ ಸಫಲತೆಗೆ ಮೂಲವಾಗುವುದಿಲ್ಲ.ಮೀರಾ ತನ್ನ ವಿದ್ಯೆಯ ಆಕಾಂಕ್ಷೆಗೆ ವೈಯುಕ್ತಿಕ ಬದುಕನ್ನು ತ್ಯಾಗ ಮಾಡಬೇಕಾಗುತ್ತದೆ. ಮಗುವನ್ನು ಪಡೆಯಲಾಗದ ಅವಳ ದೈಹಿಕ ನ್ಯೂನತೆ ಮತ್ತು ಜೀವನದ ಮಹತ್ವಾಕಾಂಕ್ಷೆಗಳು ಪತಿಯ ಸಾಂಗತ್ಯವಿಲ್ಲದ ಒಂಟಿಬದುಕನ್ನು ಅವಳಿಗೆ ನೀಡುತ್ತವೆ.

'ಮುಕ್ತಿ'ಯ ವೇದದಲ್ಲಿ ಮದುವೆಯಾಗಬೇಕೆಂದು ಹಂಬಲಿಸಿ, ಅಂತರ್ಜಾತಿ ಯುವಕನನ್ನು ವಿವಾಹವಾಗುತ್ತಾಳೆ. ಮದುವೆಗಾಗಿ ತಂದೆ, ತಾಯಿ, ಬಂಧು ಬಳಗವನ್ನು ತ್ಯಾಗಮಾಡಿದ ವೇದವಲ್ಲಿಗೆ, ಮದುವೆಗಾಗಿ ತಾನು ಕೈಕೊಂಡ ನಿರ್ಧಾರದ ಕುರಿತು ಪಶ್ಚಾತ್ತಾಪವನ್ನು ಅತಿ ಶೀಘ್ರುವಾಗಿ ಅನುಭವಿಸುವ ದಿನಗಳು ಬರುತ್ತವೆ. ಗಂಡನ ದುರ್ವರ್ತನೆ,ಕೆಟ್ಟಚಟ ಮತ್ತು ಬೇಜವಬ್ದಾರಿಗಳಿಂದ ನೊಂದ ವೇದವಲ್ಲಿ ಹೊಟ್ಟೆಪಾಡಿಗಾಗಿ ಕೆಲಸಕ್ಕೆ ಸೇರಿ ಎರಡು ಹೊತ್ತಿನ ಊಟಕ್ಕೆ ದಾರಿ ಕಂಡುಕೊಳ್ಳಬೇಕಾಗುತ್ತದೆ.

'ಬಾನು ಬೆಳಗಿತು'ವಿನ ಕಲ್ಯಾಣಿ ಭವಿಷ್ಯ ಜೀವನದ ಕುರಿತು ಯಾವುದೇ ನಿಶ್ಚಿತ ನಿರ್ಧಾರಗಳಿಲ್ಲದ ಮುಗ್ಧ ಹೆಣ್ಣು. ಪ್ರೇಮ ವಿವಾಹವಾದ ಬಳಿಕ ಅವಳಿಗೆ ಗಂಡನ ಮನೆಯಲ್ಲಿ ನೆಮ್ಮದಿ ಇದ್ದರೂ ವಿದ್ಯಾವತಿಯಾದ ತಾನು ಕೆಲಸಕ್ಕೆ ಸೇರಿ ವಿರಾಮದ ವೇಳೆಯನ್ನು ಸದುಪಯೋಗಗೊಳಿಸಬೇಕೆಂದಿದ್ದ ಕಲ್ಯಾಣಿ ಮನೆಯವರಿಂದ ವಿರೋಧವನ್ನು ಎದುರಿಸಬೇಕಾಗುತ್ತದೆ. ಅವಳು ಉದ್ಯೋಗವನ್ನು ಸೇರುವುದಕ್ಕೆ ಗಂಡ, ಅಣ್ಣ ಮುಂತಾದವರ ಮೂಲಕ ಅಡ್ಡಿ ಬಂದು ಕೊನೆಗೆ ತಾಯ್ತನಕ್ಕೆ ಕಲ್ಯಾಣಿ ತನ್ನ ನೌಕರಿಯ ಅಪೇಕ್ಷೆಯನ್ನು ಬಿಡಬೇಕಾಗುತ್ತದೆ.

'ಸೋತುಗೆದ್ದವಳು'ವಿನ ಭಾರತಿ ಮದುವೆ ಅವಳ ಗಂಡನಾಗಬೇಕಾದವನು ವಿದೇಶಕ್ಕೆ ಹೋಗಬೇಕಾದ ಸಂದರ್ಭದಲ್ಲಿ ವಿದೇಶೀ ಹೆಣ್ಣಿನ ಮೋಹಕ್ಕೆ ಬೀಳಬಾರದೆಂಬ ಉದ್ದೇಶದಿಂದ ನಡೆದು ಹೋಗುತ್ತದೆ. ಮದುವೆಗಾಗಿ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಿದ ಭಾರತಿ ಅತ್ತೆಮನೆಯಲ್ಲಿ ಒಂಟಿಯಾಗಿ, ಅತೃಪ್ತ ಬದುಕನ್ನು ಸಾಗಿಸುವಂತಾಗುತ್ತದೆ.

ಭಾರತಿಯ ಅಸಹಾಯಕತೆಯನ್ನು ಅವಳ ಅತ್ತೆ ಸಂಬಂಧಿ ಚಂದು ದುರುಪಯೋಗ ಪಡೆದುಕೊಳ್ಳುವಂತಾಗುತ್ತದೆ. ಈ ಪರಿಸ್ಥಿತಿಯಲ್ಲಿ ಅತ್ತೆ, ತಾಯಿ ಮನೆಯವರ ದೂಷಣೆ, ನಿಂದನೆಗಳನ್ನು ಭಾರತಿ ಒಂಟಿಯಾಗಿಯೆ ಎದುರಿಸಬೇಕಾಗುತ್ತದೆ.

'ಶರಪಂಜರ'ದ ಕಾವೇರಿ ಅಪೂರ್ವ ಚೆಲುವೆ. ಚುರುಕು ಬುದ್ಧಿಯವಳು. ವ್ಯವಹಾರ ಕುಶಲಿ. ಪದವೀಧರೆ. ಸತೀಶ ಅವಳ ರೂಪಕ್ಕೆ ಮನಸೋತು ಮದುವೆಯಾದವನು. ಸತೀಶ ಪತ್ನೀಸ್ಥಾನದಲ್ಲಿ ಕಾವೇರಿಯಿಂದ ಎಲ್ಲ ರೀತಿಯ ಸೇವೆ,ಸಹಕಾರಗಳನ್ನು ಪಡೆದು ಹೆಮ್ಮೆಪಟ್ಟುಕೊಂಡ ವ್ಯಕ್ತಿ. ಆದರೆ ಕಾವೇರಿ ಹೆರಿಗೆಯ ಸಂದರ್ಭದಲ್ಲಿ ವಿವಾಹಪೂರ್ವ ಅತ್ಯಾಚಾರದ ನೆನಪಿನಿಂದ ಮಾನಸಿಕವಾಗಿ ಅಸ್ವಸ್ಥಳಾದಾಗ ಸತೀಶ ಅವಳಿಂದ ದೂರ ಸರಿಯುತ್ತಾನೆ. ಸ್ನೇಹ ಸಹಕಾರದ ಅಗತ್ಯವಿದ್ದ, ಕಠಿಣ ಸಂದರ್ಭದಲ್ಲಿ ಕಾವೇರಿಗೆ ಗಂಡನಿಂದ ಯಾವುದೇ ರೀತಿಯ ನೆರವು, ಸಹಕಾರಗಳು ದೊರೆಯವುದಿಲ್ಲ. ವೈವಾಹಿಕ ಬದುಕಿನಲ್ಲಿ ಅಲ್ಪಾವಧಿಗೆ ಉನ್ನತ ಸ್ಥಾನಮಾನ ಪಡೆದ ಕಾವೇರಿ ಅಷ್ಟೇ ತೀವ್ರವಾದ ಅದಃಪತನದ ಕಾರಣವಾಗಿ ಮತ್ತೆ ಮಾನಸಿಕ ರೋಗಿಯಾಗಿ ಪರಿವರ್ತನೆ ಹೊಂದುತ್ತಾಳೆ.

'ಕೀಲುಗೊಂಬೆ'ಯ ಸೀತೆ ವೈವಾಹಿಕ ಬದುಕಿನಲ್ಲಿ, ದುಃಖ, ನೋವುಗಳನ್ನು ಮಾತ್ರ ಉಂಡವಳು. ಕೌಟುಂಬಿಕ ಹಿಂಸೆ, ಲೈಂಗಿಕ ದಾಸ್ಯ, ಪುರುಷದೌರ್ಜನ್ಯಕ್ಕೆ ಬಲಿಯಾದ ಸೀತೆಯ ಬದುಕಿನಲ್ಲಿ ನಡೆಯುವ ಅತ್ಯಾಚಾರ ಪ್ರಕರಣಗಳು ಕೈಹಿಡಿದ ಪತಿಯಿಂದಲೇ ನಡೆಯುವ ಕಾರಣ, ಅವಳಿಗೆ ಹೆತ್ತವರಿಂದಾಗಲೀ, ಇತರರಿಂದಾಗಲೀ ನೆರವು ದೊರೆಯುವುದಿಲ್ಲ. ವೈವಾಹಿಕ ಬದುಕಿನ ದೌರ್ಜನ್ಯದಲ್ಲಿ ನರಳಿನರಳಿ ಸೀತೆ ಕೊನೆಗೆ ಸತ್ತು ಹೋಗುತ್ತಾಳೆ.

'ಮುಚ್ಚಿದ ಬಾಗಿಲು' ವಿನ ಶಾರದ ೨೨ ವರ್ಷದ ಲಕ್ಷಣವಾದ ಯುವತಿ. ೧೨ ನೇ ವರ್ಷದಲ್ಲಿಯೇ ಅವಳ ವಿವಾಹವಾಗಿರುತ್ತದೆ. ಅವಳ ಗಂಡ ಜಯರಾಮ ಕ್ರೂರಿ. ಅವಳಿಗೆ ವಿಧವಿಧವಾದ ಚಿತ್ರಹಿಂಸೆಗಳಿಂದ ಕಾಡುತ್ತಿದ್ದವನು. ಬಾಗಿಲಲ್ಲಿ ನಿಂತವಳೆಂಬ ಕಾರಣದಿಂದ ಬೆಂಕಿಯಲ್ಲಿ ಅವಳ ಕೈಯನ್ನು ಸುಡುವ ಮೂಲಕ ಪಾವಿತ್ರ್ಯದ ಪರೀಕ್ಷೆಯನ್ನು ಮಾಡಿದವನು. ಶಾರದೆ ಗಂಡನ ವರ್ತನೆಯಿಂದ ಹುಚ್ಚಿಯಾಗಿ ಪರಿಣಮಿಸಿದ್ದಳು. ಮತಿವಿಕಲ್ಪನಾಗಿ ವರ್ತಿಸುವ ಗಂಡ ಜಯರಾಮನಿಂದ ಶಾರದ ಮತಿಕೆಟ್ಟು ಹೋಗಿದ್ದಳು.

ಅದೇ ಕಾದಂಬರಿಯ ಸಖೂಬಾಯಿ ೩೨ ವರ್ಷಕ್ಕೇ ೯ ಮಕ್ಕಳನ್ನು ಹೆತ್ತವಳು. ವೈವಾಹಿಕ ಬದುಕಿನಲ್ಲಿ ಸತತವಾದ ಹೆರಿಗೆ, ಸಂಕಷ್ಟಗಳನ್ನು ಅನುಭವಿಸುವ ಸಖೂಬಾಯಿ ಬದುಕಿನಲ್ಲಿ ಶಾಂತಿ ನೆಮ್ಮದಿಗಳೂ, ಸುಖಸಂತೋಷಗಳು ಇರಲೇ ಇಲ್ಲ. ಇದೇ ಅಪೇಕ್ಷೆ ಕಾರಣವಾಗಿ ಸಖೂಬಾಯಿ ಮಾನಸಿಕ ರೋಗಿಯಾಗಿ ಆಸ್ಪತ್ರೆ ಸೇರಿದಳು. 'ತಾವರೆಕೊಳ'ದ ರತ್ನ, 'ಬೆಕ್ಕಿನ ಕಣ್ಣು'ವಿನ ಪದ್ಮಾ ವೈವಾಹಿಕ ಬದುಕಿನಲ್ಲಿ ಅತೃಪ್ತರು. ತ್ರಿವೇಣಿ ಕೊಡುವ ದಾಂಪತ್ಯ ಚಿತ್ರಣವು ಹಲವು ವಿಚಾರಗಳನ್ನು ಒರೆಗಲ್ಲಿಗೆ ಹಚ್ಚುವುದನ್ನು ನೋಡಬಹುದಾಗಿದೆ.

ದಾಂಪತ್ಯದ ರಂಜಕ ಕಲ್ಪನೆ ಬಾನು ಬೆಳಗಿತು ಕಾದಂಬರಿಯ ಕಲ್ಯಾಣಿ-ರಾಮನಾಥರ ವೈವಾಹಿಕ ಬದುಕಿನಲ್ಲಿ, ಕಾಲಕ್ರಮೇಣ ಹುಸಿಯಾಗುವುದರತ್ತ ಗಮನ ಸೆಳೆಯುತ್ತದೆ. ಕೀಲುಗೊಂಬೆಯಲ್ಲಿ ದಾಂಪತ್ಯವು ಶೋಷಣೆಯ ಕೇಂದ್ರವಾಗಿದೆ. ಹೆಂಡತಿ,ಸೊಸೆ, ತಾಯಿ ಸಂಬಂಧಗಳನ್ನು ಕಾವೇರಿಯ ಹಂಬಲ ವಿಫಲವಾಗುವುದರ ಮೂಲಕ ಪೊಳ್ಳಾಗಿ ಪರಿವರ್ತಿತವಾಗುವುದನ್ನು ತೋರಿಸಲಾಗಿದೆ. ಪಾತಿವ್ರತ್ಯದ ಹುಸಿತನವನ್ನು ಸೋತುಗೆದ್ದವಳು ಮತ್ತು

ತಾವರೆಯ ಕೊಳ ವಿಶದ ಪಡಿಸಿದರೆ, ಪತಿನಿಷ್ಠೆಯ ಸತ್ಯಾಸತ್ಯತೆ ಶರಪಂಜರದಲ್ಲಿ ಅನಾವರಣ ಗೊಳ್ಳುತ್ತದೆ.

**ಸ್ತ್ರೀ ಪುರುಷ ಸಂಬಂಧಗಳು: ಮತ್ತು ಸ್ತ್ರೀ**

**ಪ್ರೇಮ-ಸಂಬಂಧಗಳು**

ಸ್ತ್ರೀ ಪುರುಷ ಸಂಬಂಧಗಳಲ್ಲಿ ಪ್ರೇಮ ಸಂಬಂಧಗಳನ್ನು ವಿವಾಹ ಪೂರ್ವನೆಲೆಯಲ್ಲಿ ತ್ರಿವೇಣಿ ವಿವರಿಸಿದ್ದಾರೆ. ಸ್ತ್ರೀ ಪುರುಷ ಸಂಬಂಧದಲ್ಲಿ ಪರಸ್ಪರ ಆಕರ್ಷಣೆ ಪ್ರಧಾನವಾಗಿರುವಂತಹದು. ಗಂಡು ಹೆಣ್ಣಿನ ಈ ಆಕರ್ಷಣೆ ದೈಹಿಕ ಮಟ್ಟದ್ದಾಗಿರಬಹುದು, ದೈಹಿಕ-ಮಾನಸಿಕ ಸಾಂಗತ್ಯಕ್ಕಾಗಿ ಇರುವ ಹಂಬಲದಿಂದ ಪ್ರೇರಣೆ ಪಡೆದುದಾಗಿರಬಹುದು ಅಥವಾ ಆರ್ಥಿಕಸಂಬಂಧೀ ಕಾರಣದಿಂದ ಉಂಟಾದ ಸಂಬಂಧವಾಗಿರಬಹುದು. ಕಂಕಣ-ಮುಕ್ತಿ, ಬೆಳ್ಳಿಮೋಡ, ಅವಳ ಮನೆ, ದೂರದ ಬೆಟ್ಟ, ಕಾಶೀಯಾತ್ರೆ, ಬೆಕ್ಕಿನ ಕಣ್ಣು ಮೊದಲ ಹೆಜ್ಜೆ, ಹೃದಯಗೀತ, ಹಣ್ಣೆಲೆ ಚಿಗುರಿದಾಗ, ಅವಳ ಮಗಳು ಈ ೧೦ ಕಾದಂಬರಿಗಳಲ್ಲಿ ವಿವಾಹಪೂರ್ವ ಪ್ರೇಮಸಂಬಂಧಗಳಿವೆ.

ಈ ಸಂಬಂಧಗಳ ಹುಟ್ಟು ಬೆಳವಣಿಗೆ ಮತ್ತು ಮುಕ್ತಾಯಗಳಲ್ಲಿ ಹೆಣ್ಣಿನ ಬದುಕಿನಲ್ಲಿ ಉಂಟಾಗುವ ಬದಲಾವಣೆಗಳ ಕಾರಣವಾಗಿ ಅವಳ ವ್ಯಕ್ತಿತ್ವದಲ್ಲಿ ಉಂಟಾಗುವ ಪರಿವರ್ತನೆಯ ಮೂಲಕ ಹೆಣ್ಣನ್ನು ವಿವರಿಸುವ ಪ್ರಯತ್ನ ನಡೆಸಿದ್ದಾರೆ ತ್ರಿವೇಣಿ. ಕಂಕಣ-ಮುಕ್ತಿಯಲ್ಲಿ ಕೆಲವು ವಿಫಲ ಪ್ರೇಮ ಪ್ರಕರಣಗಳಿವೆ.

ಆಕರ್ಷಣೆ ದೈಹಿಕ ಮಟ್ಟದಲ್ಲಿಯೇ ಉಳಿದರೆ ಅಥವಾ ಪ್ರೇಮಭಾವವನ್ನು ಮಾನಸಿಕವಾಗಿ ಸ್ವೀಕರಿಸಲು ತಕ್ಕ ಸಿದ್ಧತೆ ನಡೆಯದೆ ಹೋದಾಗ, ಅದು ಅಸಫಲವೆನಿಸುತ್ತದೆ. ಈ ವಿಫಲತೆಗೆ ಬೆಲೆ ಕೊಡಬೇಕಾದವಳು ಮಾತ್ರ ಇಲ್ಲಿ ಹೆಣ್ಣು.

ಚೆಲವು ಮತ್ತು ಆಕರ್ಷಕ ವ್ಯಕ್ತಿತ್ವದ ಕಸ್ತೂರಿ (ಕಂಕಣ), ಕುರೂಪಿ ಮತ್ತು ಅಸಹಾಯಕತೆಯ ಮೂರ್ತರೂಪವಾಗಿದ್ದ ಸುಬ್ಬಿಯ ಮಗಳು (ಮೊದಲ ಹೆಜ್ಜೆ) ಪ್ರೇಮದ ಕಲ್ಪನೆಯಿರುವ, ದೈಹಿಕ ಆಕರ್ಷಣೆಯ ಪ್ರಧಾನವಾಗಿರುವ ಸಂಬಂಧದಲ್ಲಿ ಪಾಲುಗೊಂಡು ದುರಂತವಾಗುತ್ತಾರೆ. ಗಂಡಸು ಇಲ್ಲಿ ಯಾವುದೇ ಹಾನಿಯಿಲ್ಲದೆ ಪಾರಾದರೆ, ಕಸ್ತೂರಿ ಆತ್ಮಹತ್ಯೆ ಮಾಡುತ್ತಾಳೆ, ಸುಬ್ಬಿಯ ಮಗಳು ಕೊಲೆಮಾಡಿ ಸೆರೆಮನೆ ಸೇರುತ್ತಾಳೆ.

ಸುರೇಶ, ಶಿವಸ್ವಾಮಿಯಂತಹ ಸಮಯ ಸಾಧಕರ, ಕೈಗೆ ಸಿಕ್ಕಿದ ಹೆಣ್ಣುಗಳು ಪ್ರೇಮವೆಂಬ ಭ್ರಮಿತ ಸ್ಥಿತಿಗೆ ಮರುಳಾಗುವ ಅಸಹಾಯಕತೆ ವ್ಯಕ್ತಪಡಿಸುತ್ತಾರೆ. ಸುಬ್ಬಿಯ ಮಗಳು ಹೇಳುತ್ತಾಳೆ.

"ನೀವು ನನ್ನ ದೇವರು ನಾನು ನಿಮ್ಮ ದಾಸಿ"

"ನಾನು ದೇವರು. ನೀನು ದಾಸಿಯೇ"

"ಹೌದು ನಾನು ನಿಮ್ಮನ್ನು ಕಾಮಿಸಿ ಬಂದೆ. ಆದರೆ ಈಗ ನನ್ನ ಮನಸ್ಸನ್ನು ನಿಮಗೆ ಅರ್ಪಿಸಿದ್ದೇನೆ"[೧೯] (ಮೊದಲ ಹೆಜ್ಜೆ : ೧೧೯:೧೯೯೦)

ಶಿವಸ್ವಾಮಿಗೆ ಅವಳು ಒಬ್ಬ ವ್ಯಕ್ತಿ ಎನ್ನುವ ಅರಿವೇ ಇರುವುದಿಲ್ಲ.

'ಅವಳೊಂದು ನೇರಿಳಿದ ಹಣ್ಣು, ನಾನು ಜ್ವಾಲೆ-ಅವಳು ಪತಂಗ. ಸಾವಕಾಶವಾಗಿ ಗಾಳ ಹಾಕಿದರೆ ಈ ಮೀನು ಗಾಳಕ್ಕೆ ಸಿಕ್ಕಿಕೊಳ್ಳುವುದರಲ್ಲಿ ನನಗೆ ಯಾವ ಸಂಶಯವೂ ಉಳಿದಿರಲಿಲ್ಲ[೨೦]'' (ಅದೇ ಪುಟ : ೯೧). ಅವಳು ಮಾನಸಿಕವಾಗಿ ದೈಹಿಕವಾಗಿ ಪ್ರೀತಿ ತೋರಿಸಿದರೂ, ಶಿವಸ್ವಾಮಿಗೆ ಅದರಲ್ಲಿ ಅಸಕ್ತಿ ಇಲ್ಲ. ''ಬಯಕೆ, ಕುತೂಹಲದಿಂದ ನಾನವಳನ್ನು ನನ್ನ ಬಳಿಗೆ ಎಳೆದುಕೊಂಡಿದ್ದೆನೇ ಹೊರತು, ಪ್ರೇಮದಿಂದಲ್ಲ''(ಅದೇ ಪುಟ: ೧೧೪).

ಹೆಣ್ಣನ್ನು ಭೋಗದ ಸಾಧನವಾಗಿ ಮಾತ್ರ ಕಲ್ಪಿಸುವುದು ಶಿವಸ್ವಾಮಿಗೆ ಸಾಧ್ಯವಾಗುತ್ತದೆ. ಬೆಳ್ಳಿಮೋಡದ ಮೋಹನನ ವಂಚನೆ ಸ್ವಾರ್ಥದ ಇನ್ನೊಂದು ಮುಖವನ್ನು ತೋರಿಸುತ್ತದೆ. ಅಪಾರ ಅಸ್ತಿಗೆ ಏಕಮಾತ್ರ ವಾರುಸುದಾರಳಾಗಿದ್ದ ಇಂದಿರೆ ವ್ಯಕ್ತಿತ್ವಕ್ಕಿಂತಲೂ ಹೆಚ್ಚಾಗಿ ಜಮೀನಿನ ಆದಾಯದ ಮೇಲೆ ಕಣ್ಣಿರಿಸಿಕೊಂಡ ಮೋಹನ ಇಂದಿರೆಯಲ್ಲಿ ಪ್ರೇಮದ ನಾಟಕವಾಡುತ್ತಾನೆ. ಮದುವೆಯ ಆಶ್ವಾಸನೆ ನೀಡುತ್ತಾನೆ. ಆದರೆ ಉತ್ತರಾಧಿಕಾರತ್ವ ಇಂದಿರೆಗೆ ತಪ್ಪಿ ಹೋದಾಗ ಅವನ ಪ್ರೇಮ ಹಿಂದೆ ಸರಿಯುತ್ತದೆ. ಹೆಣ್ಣಿನ ಪ್ರೇಮವನ್ನು ಅರ್ಥಿಕಮೂಲವಾಗಿ ಕಂಡ ಮೋಹನನಿಗೆ ಅವಳ ವ್ಯಕ್ತಿತ್ವದ ಆಕರ್ಷಣೆ ಮೊದಲು ಉಂಟಾಗುವುದೇ ಇಲ್ಲ. ಮರುಕ-ಕರುಣೆಗಳಿಂದ ಪ್ರೇರಿತವಾದ ಮಾನವೀಯ ಅನುಕಂಪದ ಪ್ರೀತಿ ಭಾವ ಉಂಟಾಗುವುದು- ರಾಜಶೇಖರ-ಕುಸುಮಾ (ಬೆಕ್ಕಿನಕಣ್ಣು) ಸರೋಜಿನಿ-ಮಾಧವ (ಅವಳ ಮನೆ) ಭವಾನಿ-ಜಗನ್ನಾಥ (ಅವಳ ಮಗಳು) ಜೋಡಿಗಳಲ್ಲಿ.

ಹುಟ್ಟಿದ ಮನೆಯ ಪ್ರೀತಿಗೆ ಎರವಾದ ಈ ಹುಡಿಗೆಯರಿಗೆ ತಮ್ಮ ನೆಲೆಗಳನ್ನು ಕಂಡು ಹಿಡಿಯುವ ಹುಡುಕಾಟವಿದ್ದರೆ, 'ತಾನು ಈ ವ್ಯಕ್ತಿಯನ್ನು ರಕ್ಷಿಸಬೇಕು, ಈಕೆ ಇರುವ ಪರಿಸ್ಥಿತಿಯಿಂದ ಪಾರು ಮಾಡಬೇಕು' ಎಂಬ ರಕ್ಷಣಾ ಪಾತ್ರ ಇಲ್ಲಿಯ ಗಂಡಸರದು.

ವಿಧವಾ ಮರುವಿವಾಹದ ಎರಡು ಕಾದಂಬರಿಗಳಲ್ಲಿ ೨ ಪ್ರೇಮಪ್ರಕರಣಗಳಿವೆ. 'ದೂರದ ಬೆಟ್ಟ'ದ ಸುನಂದ ಪದವೀಧರೆ ಮತ್ತು ಉದ್ಯೋಗಸ್ಥೆ, 'ಹಣ್ಣೆಲೆ ಚಿಗುರಿದಾಗ'ದ ಮಾಲತಿ ಪದವೀಧರೆ ಮತ್ತು ಶ್ರೀಮಂತೆ. ಸುನಂದ-ಶ್ರೀಧರ, ಮಾಲತಿ-ಕೃಷ್ಣಪ್ರಸಾದರಲ್ಲಿ ಸಮಾನ ಮನೋಭಾವ, ಸಮಾನ ಅಭಿರುಚಿ, ಪರಸ್ಪರ ಗೌರವ, ನಂಬಿಕೆಗಳ ನೆಲೆಗಟ್ಟಿನ ಮೇಲೆ ಪ್ರೇಮ ಹುಟ್ಟಿ, ಬೆಳೆದು ಫಲಿತವಾಗುತ್ತದೆ. ಗಂಡು-ಹೆಣ್ಣಿಗೆ ಬೇರೆ ಬೇರೆ ನೀತಿ ಸಲ್ಲದು ಎಂಬ ಭಾವ ಈ ಸಂಬಂಧದಲ್ಲಿರುವ ಸೌಹಾರ್ದತೆ ಮುಖ್ಯ ಕಾರಣವೆನಿಸಿದೆ.

ಸ್ವ ಇಚ್ಛೆಯಿಂದ ತನ್ನ ಎರಡು ಪಟ್ಟು ವಯಸ್ಸಾದ, ತನ್ನ ಗೆಳತಿಯ ತಂದೆಯಾದ ವಿಧುರನನ್ನು ಪ್ರೀತಿಸಿ, ತನ್ನವರ, ತನ್ನ ಸಮಾಜದ ವಿರುದ್ಧವನ್ನು ಲೆಕ್ಕಿಸದೆ ಮದುವೆಯಾದ ಪದ್ಮಿನಿಯ ಕತೆ 'ಹೃದಯಗೀತ' ಕಾದಂಬರಿಯದು. ವಯಸ್ಸು, ಮನೋಧರ್ಮಗಳಲ್ಲಿ ಅಪಾರವಾದ ಅಂತರವಿದ್ದರೂ ನಿರ್ವಾಜ್ಯ ಪ್ರೇಮವೊಂದೇ ಬೇಕಾಗಿರುವುದು ಎನ್ನುವ ಉದಾತ್ತತೆ ಈ ಪ್ರೇಮ ಸಂಬಂಧದಲ್ಲಿದೆ. ಯಾವ ಬೆಂಬಲವಿಲ್ಲದಿದ್ದರೂ ತನಗೆ ಸರಿ ಎಂದು ತೋರಿ ತನ್ನ ಭವಿಷ್ಯದ ಕುರಿತು ನಿರ್ಧಾರ ತೆಗೆದುಕೊಂಡಿರುವ ಪದ್ಮಿನಿ, ತನ್ನ ವೈಯಕ್ತಿಕ ಬದುಕಿಗೆ ತಾನು ಮಾತ್ರ ಹಕ್ಕುದಾರಳು ಎನ್ನುವುದನ್ನು ತೋರಿಸಿ, ಸಾಧಿಸುತ್ತಾಳೆ.

**ವಿವಾಹ-ಸಂಬಂಧಗಳು**

ತ್ರಿವೇಣಿಯರವರ ೫ ಕಾದಂಬರಿಗಳಲ್ಲಿ ವೈವಾಹಿಕ ಸ್ತ್ರೀ-ಪುರುಷ ಸಂಬಂಧದ ಸವಿಸ್ತಾರವಾದ ವರ್ಣನೆ ಇದೆ. ಶರಪಂಜರ, ಅಪಸ್ವರ-ಅಪಜಯ, ವಸಂತಗಾನ, ಬಾನು ಬೆಳಗಿತು, ಮತ್ತು ಕೀಲುಗೊಂಬೆ. ವೈವಾಹಿಕ ಬದುಕಿನಲ್ಲಿ ಹೆಣ್ಣಿನ ಸ್ಥಾನಮನಗಳನ್ನು ನಿರ್ಧರಿಸಲು ದಾಂಪತ್ಯ ಸಂಬಂಧಗಳು ಹೇಗೆ ಕಾರ್ಯ ನಿರ್ವಹಿಸುತ್ತವೆ ಎನ್ನುವುದನ್ನು ಈ ಕಾದಂಬರಿಗಳು ವಿವರಿಸುತ್ತವೆ. ದಾಂಪತ್ಯ ಬದುಕಿನಲ್ಲಿ ಒಡನಾಡಿಗಳು: ಗಂಡು ಮತ್ತು ಹೆಣ್ಣು.

ದಾಂಪತ್ಯಕ್ಕೆ ವಿವಿಧ ಮೆಟ್ಟಲುಗಳಿವೆ. ಬೇರೆ ಬೇರೆ ಕಾರಣಗಳಿಂದ ಈ ಸಾಂಗತ್ಯ ಅಥವಾ ಸಂಬಂಧ ಮುಂದುವರಿಯಬಹುದು ಅಥವಾ ಮುರಿದು ಬೀಳಬಹುದು. ಪರಸ್ಪರ ವಿಶ್ವಾಸ ಮತ್ತು ಹೊಂದಾಣಿಕೆಗಳು ಈ ಜೀವನ ವಿಧಾನದ ಬುನಾದಿಗಳು ಎಂದು ಎಚ್ಚರಿಸುವ ಮೂಲಕ ತ್ರಿವೇಣಿ ಸಮಾನತೆ ಅಂಶವನ್ನು ಎತ್ತಿಹಿಡಿಯುತ್ತಾರೆ. 'ಶರಪಂಜರ' ಕಾದಂಬರಿಯ ವಿವಾಹಿತ ಜೋಡಿ: ಕಾವೇರಿ-ಸತೀಶ. ಕಾವೇರಿ ಅಪೂರ್ವ ಚೆಲುವೆ. ಸತೀಶ ಸೌಂದರ್ಯೋಪಾಸಕ. ಸುಸಂಸ್ಕೃತ ನಡೆನುಡಿಯ ಕಾವೇರಿಗೆ ಪ್ರತಿ ಹೆಜ್ಜೆಯಲ್ಲೂ ಗಂಡನ ಸಹಕಾರ, ಮೆಚ್ಚುಗೆ ಇದೆ.

''ಹೆಂಡತಿಯ ರೂಪದ ಬಗೆಗೆ, ವಿದ್ಯೆ, ಮಾತುಗಾರಿಕೆ, ಜಾಣತನ, ಒಪ್ಪಓರಣ-ಪ್ರತಿಯೊಂದರ ಬಗ್ಗೆಯೂ ಸತೀಶನಿಗೆ ಅಸಾದ್ಯ ಹೆಮ್ಮೆಯಿತ್ತು. ತನ್ನ ಹೆಂಡತಿಯೊಡನೆ ಎಲ್ಲರೊಡನೆಯೂ ತಿರುಗಾಡುವುದರಲ್ಲಿ. ಅವಳನ್ನು ಇತರರಿಗೆ ಪರಿಚಯ ಮಾಡಿಕೊಡುವುದರಲ್ಲಿ ಅವನಿಗೆ ಎಲ್ಲಿಲ್ಲದ ಶ್ರದ್ಧೆ. ಆಸಕ್ತಿ! ಸುಂದರವಾದ ವಸ್ತುವನ್ನು ಪ್ರದರ್ಶಿಸಿ ಹಿಗ್ಗುವಂತೆ ಸತೀಶ ಕಾವೇರಿಯನ್ನು ಇತರರ ಎದುರಿಗೆ ಮೆರೆದಾಡಿಸಿ ಹಿಗ್ಗುತ್ತಿದ್ದ[೨೧] (ಶರಪಂಜರ: ೫೫) ತನ್ನ ಗಂಡನ ಅಭಿರುಚಿ , ಅವರ ಬೇಕುಬೇಡಗಳನ್ನು ನೋಡಿಕೊಳ್ಳುವುದು, ಮನೆ, ಮಕ್ಕಳು ಎಂದು ಕಾವೇರಿಯೂ ತನ್ನ ಪ್ರಪಂಚವನ್ನು ಸೃಷ್ಟಿಸಿಕೊಂಡಿದ್ದಳು. ''ಕಾವೇರಿಯ ಪ್ರಪಂಚ ತುಂಬಾ ಚಿಕ್ಕದು. ಸತೀಶ, ಸತೀಶನಿಂದ ತಾನು ಪಡೆದ ಎರಡು ಮುದ್ದಾದ ಮಕ್ಕಳು. ಇಷ್ಟಕ್ಕೆ ಮುಗಿಯತು ಅವಳ ಪ್ರಪಂಚ[೨೨]'' (ಅದೇ:ಪುಟ:೧೧)

ನಾಲ್ಕು ಜನರ ಮೆಚ್ಚುಗೆಗೆ ಕಾರಣವಾದ ಈ ದಾಂಪತ್ಯ ಕಾವೇರಿಯ ಅಸ್ವಸ್ಥತೆ ಕಾರಣವಾಗಿ ಕುಸಿದು ಬೀಳುತ್ತದೆ. ಹೆಂಡತಿಯ ಮಾನಸಿಕ ಅಸ್ವಸ್ಥತೆ ಸತೀಶನ ಪ್ರೀತಿಯನ್ನು, ಮೆಚ್ಚುಗೆಯನ್ನು ಕರಗಿಸುತ್ತದೆ. ಕಾವೇರಿ ಗುಣಮುಖಳಾಗಿ ಹಿಂತಿರುಗಿದರೂ ಕೂಡಾ, ಹೆಂಡತಿಯನ್ನು ಮೊದಲಿನಂತೆ ಕಾಣವುದು ಅವನಿಗೆ ಶಕ್ಯವಾಗುವುದಿಲ್ಲ. ಹೆಂಡತಿಯಾಗಿ ತನ್ನ ಸಂಸಾರಕ್ಕಾಗಿ ಬದುಕನ್ನೇ ಮುಡಿಪಾಗಿಟ್ಟ ಕಾವೇರಿಗೆ ಬೇಕಾದ ಅನುಕಂಪ, ಪ್ರೀತಿ ಮತ್ತು ಸಹಕಾರವನ್ನು ನೀಡಲು ಸತೀಶನಿಗೆ ಸಾಧ್ಯವಾಗುವುದಿಲ್ಲ.

ನಾಲ್ಕು ಜನರ ಮುಂದೆ ತಾನು ಕಲ್ಪಿಸಿಕೊಂಡ ಚಿತ್ರದ ಸುಂದರತೆಗೆ ಭಂಗ ಬಂದಿರುವುದು ಅವನ ಅಸಹನೆಗೆ ಕಾರಣ. ಜನರ ಮುಂದೆ ಕಾವೇರಿಯ ಅಸ್ವಸ್ಥತೆ ತನಗಾದ ಅವಮಾನವೆಂದೇ ಅವನಿಗೆ ಭಾವನೆ.''ತಾನು ಅವಳಿಗೆ ಕೊಟ್ಟ ಸುಖ ಜೀವನಕ್ಕೆ ಪ್ರತಿಫಲ ಇದೇ ಏನು? ಉಳಿದವರು ತನ್ನ ವಿಷಯದಲ್ಲಿ ಏನೆಂದು ಭಾವಿಸಬಹುದು? ಗಂಡ ಹೆಂಡತೀನ ಸರಿಯಾಗಿ ನೋಡಿಕೊಳ್ಳುತ್ತಿರಲಿಲ್ಲವೇನೋ ಆದುದರಿಂದ ಕಾವೇರಿಗೆ ಬುದ್ಧಿಭ್ರಮಣೆಯಾಯಿತು- ಎಂದು ಜನ ಒಂದೇ ಮಾತಿನಲ್ಲಿ ತನಗೆ ಬೆಲೆಕಟ್ಟಬಹುದು[೨೩]'' (ಅದೇ ಪುಟ:೫೮)

ಸತೀಶನ ದೃಷ್ಟಿಯಲ್ಲಿ ಮಾನಸಿಕವಾಗಿ, ದೈಹಿಕವಾಗಿ ಸ್ವಸ್ಥಳಾಗಿರುವ, ಸಮಾಜದಲ್ಲಿ ನಾಲ್ಕು ಜನರ ಮುಂದೆ ಮೆರೆದಾಡಿಸಲು ಅನುಕೂಲೆಯಾದ ಹೆಂಡತಿ ಮಾತ್ರ ಹೆಣ್ಣು ಎಂಬ ಭಾವನೆ ಇತ್ತು. ಹೆಂಡತಿಯೆಂದರೆ - ತಾನು ತಿಳಿದಂತಿರಬೇಕು, ತಾನು ನೀಡುವ ಸುಖವನ್ನು ಅನುಭವಿಸುತ್ತ ಗೃಹಾನುಕೂಲಿಯಾಗಿರಬೇಕೆಂಬ ಭಾವನೆ ಸತೀಶನಲ್ಲಿ ಇರುವಂತೆ 'ಅಪಸ್ವರ'ದ ಶಾಮುವಿನಲ್ಲಿಯೂ ಇತ್ತು. ಶಾಮು ಮೀರಾಳ ವ್ಯಕ್ತಿತ್ವದ ನಡುವಿನ ಅಗಾಧ ವ್ಯತ್ಯಾಸವೇ ಅವರ ದಾಂಪತ್ಯಕ್ಕೆ ತೊಡಕಾಗಿ ಪರಿಣಮಿಸುತ್ತದೆ.

ಮೀರಾಳಿಗೆ ತನ್ನ ವೈಯಕ್ತಿಕ ಸಾಧನೆಯಲ್ಲಿದ್ದ ಆಸಕ್ತಿ ವೈವಾಹಿಕ ಬದುಕಿನಲ್ಲಿ ಇರಲಿಲ್ಲ. ಗಂಡನ ಮನೆಯಲ್ಲಿ ತನಗೆ ಅಸಹನೆ ಯಾಕೆ ಹುಟ್ಟುತ್ತದೆ ಎಂದು ಮೀರಾ ಯೋಚಿಸುತ್ತಿರುತ್ತಾಳೆ. "...ಹೆಂಗಸಾದವಳಿಗೆ ಇನ್ನೇನು ಬೇಕು? ದೇವತೆ ಎಂದು ತಿಳಿದು ಪೂಜಿಸುವ ಗಂಡ, ಹಣ, ರೂಪ. ಯಾವುದರಲ್ಲಿಯೂ ಕೊರತೆ ಇಲ್ಲದ ಮೇಲೂ ಅಶಾಂತಿಯಿಂದ ನರಳುವ ತನ್ನ ಮನಸ್ಸಿನ ರೀತಿ ಅವಳಿಗೆ ಕೆಲವು ಬಾರಿ ಅರ್ಥವಾಗುತ್ತಿರಲಿಲ್ಲ[೨೪]" (ಅಪಸ್ವರ:೯೪)

ಶಾಮು ಹಣವಂತನಾದರೂ ವಿದ್ಯೆಬುದ್ಧಿಯಲ್ಲಿ ತನಗೆ ಸಮಾನನಲ್ಲ ಎಂಬ ಭಾವನೆ ಮೀರಾಳಿಗೆ. ಶಾಮು ಅನೇಕ ಸಂದರ್ಭಗಳಲ್ಲಿ ಗಂಡನೆಂಬ ಅಧಿಕಾರವನ್ನು ಚಲಾಯಿಸುತ್ತಿದ್ದ. ಅವಳ ವೈಯಕ್ತಿಕ ಭಾವನೆಗಳಿಗೆ ಅವನು ಘಾತಕವೆನಿಸುವ ರೀತಿಯಲ್ಲಿ ವರ್ತಿಸುತ್ತಿದ್ದನು.

ಗೌರಿಹಬ್ಬಕ್ಕೆ ತೌರುಮನೆಗೆ ಕಳುಹಿಸದೆ ಉಳಿಸುವಲ್ಲಿ; ವಿದ್ಯೆ ಮುಂದುವರೆಸುವ ಬಯಕೆ ವ್ಯಕ್ತವಡಿಸಿದಾಗಲೆಲ್ಲಾ ನಿರಾಕರಿಸುತ್ತ, ಗೆಳತಿಯರು ಬಂದಾಗ ಅವಳನ್ನು ಬಲವಂತವಾಗಿ ಉಳಿಸಿಕೊಂಡು, ಒಡವೆ ಮಾಡಿಸುವ ವಿಚಾರ, ಮಗುವಿನ ನಾಮಕರಣದ ಸಂದರ್ಭ - ಪ್ರತೀ ಘಟನೆಯಲ್ಲೂ ತನ್ನದೇ ಮಾತು ನಡೆಯಬೇಕಾದುದು ಎಂಬ ಧೋರಣೆ ಶಾಮುವಿನದು. ಶಾಮು ಯಜಮಾನ ಸಂಸ್ಕೃತಿಯ ಪ್ರತಿರೂಪ. ಪುರುಷಪರ ಮೌಲ್ಯಗಳಿಗೆ ಮಾತ್ರ ಮಾನ್ಯತೆ ನೀಡುವ ವ್ಯಕ್ತಿ. ಮೀರಾ ಅವನಿಗೆ ಬೇಕಾದ 'ವಸ್ತು'ವಾಗಿದ್ದಳು.

"ಮೀರಳಂತಹ ಚೆಲುವೆಯಾದ ಜಾಣೆಯಾದ ಹುಡುಗಿ ತನ್ನ ಹೆಂಡತಿಯಾಗಿ ಬಂದುದಕ್ಕಾಗಿ ಶಾಮುವಿಗೆ ತುಂಬಾ ಸಂತೋಷವಾಗಿತ್ತು. ವೆಂಕಟರಮಣಯ್ಯನವರು ತಮ್ಮ ಫಲವತ್ತಾದ. ಸುಂದರವಾದ, ಚಿನ್ನದಂತಹ ಜಮೀನನ್ನು ಅಲ್ಪ ಬೆಲೆಗೆ ತನಗೆ ಮಾರಿದಾಗ ಸಂತೋಷವಾದಂತೆ ಮೀರ ಶಾಮುವಿಗೆ ಬೇಕಾಗಿದ್ದಳು[೨೫]". (ಅಪಸ್ವರ:೨೧೫:೧೯೫೪)

ಬೇಸಾಯಗಾರನಾಗಿ ಹಳ್ಳಿಗನಾಗಿ ಭೂಒಡೆಯವಾಗಿದ್ದವನಿಗೆ ಹೆಂಡತಿಗೂ ಜಮೀನಿಗೂ ಹೆಚ್ಚಿನ ವ್ಯತ್ಯಾಸ ಕಾಣುವುದು ಸಾಧ್ಯವಿರಲಿಲ್ಲ. ಹೆಂಡತಿಯನ್ನು ವಸ್ತುವಿನಂತೆ, ಜಮೀನಿನಂತೆ ಕಾಣುವುದು ಒಡೆಯ ಸ್ಥಾನದಲ್ಲಿದ್ದ ಶಾಮುವಿಗೆ ಅತ್ಯಂತ ಸಹಜವಾಗಿತ್ತು. ಆದರೆ ನಗರಪ್ರಜ್ಞೆಯ, ಆತ್ಮವಿಶ್ವಾಸದ, ಜೀವನದಲ್ಲಿ ಭರವಸೆ ಇಟ್ಟುಕೊಂಡ ಮೀರಾಳಿಗೆ ಮದುವೆ, ಗಂಡ, ಮನೆ, ಮಕ್ಕಳು ಬಂಧನವಾಗಿತ್ತು ಶಾಮುವಿನ ಆಂಕೆಯಲ್ಲಿದ್ದು ಜೀವಿಸುವುದು ಮೀರಾಳಿಗೆ ಸಾಧ್ಯವಾಗುವುದಿಲ್ಲ.

ಮೀರಾಳಂತಹ ತನ್ನತನದ ಅರಿವು ಬೆಳಸಿಕೊಂಡ ಹೆಣ್ಣಿಗೆ ಸ್ವತಂತ್ರವಾಗಿ ತನ್ನ ಸಾಧನಾ ಮಾರ್ಗವನ್ನು ಅನುಸರಿಸುವುದು ಮುಖ್ಯವಾಗಿ ಬೇಕಾಗಿತ್ತು. ಆದುದರಿಂದಲೇ ಮೀರಾ ಶಾಮು ತನ್ನನ್ನು ಪ್ರೀತಿಸುವನೆಂದು ತಿಳಿದೂ

ಮನೆಬಿಟ್ಟು ಹೊರಡುತ್ತಾಳೆ.

'ಹೆಂಗಸಾದವಳು ಗಂಡನಿಂದ ಏನನ್ನು ನಿರೀಕ್ಷಿಸಬಹುದೊ ಅಷ್ಟನ್ನು ತಾನು ಮೀರಾಳಿಗೆ ಕೊಟ್ಟಿರುವೆನೆಂಬ ಭಾವನೆ ಶಾಮುವಿಗೆ. ಅವಳಿಗೆ ಕೇಳಿದ ಬಟ್ಟೆ, ಒಡವೆ, ಪುಸ್ತಕಗಳನ್ನು ಅವನು ಕೂಡಲೇ ತೆಗೆದುಕೊಡುತ್ತಿದ್ದ. ಗಂಡನ ಅಭಿರುಚಿಗೆ ಹೊಂದಿಕೊಳ್ಳುವುದೇ ಹೆಂಗಸಿನ ಕರ್ತವ್ಯವೆಂದು ಅವನ ದೃಢ ನಂಬಿಕೆ[೨೬]. (ಅಪಸ್ವರ:೯೯೦)

ಹೊಂದಾಣಿಕೆ ಮಾಡಿಕೊಳ್ಳಲಾಗದ ಮೀರಳ ಸ್ವಭಾವ ಶಾಮುವಿಗೆ ಒಗಟಾಗಿತ್ತು. ಸತೀಶ, ಶಾಮು ಇಬ್ಬರೂ ಸುಸಂಸ್ಕೃತರು, ಹೆಂಡತಿಯನ್ನು ಅಪಾರವಾಗಿ ಪ್ರೀತಿಸಿದವರು. ಅದರೆ ಹೆಂಡತಿ ಖಾಸಗಿ ಆಸ್ತಿಯೆಂಬ ಭಾವನೆ ಅವರಿಗೆ. ತಮ್ಮ ಗ್ರಹಿಕೆಯಂತೆ ಹೆಂಡತಿ ಇರಬೇಕಾದುದು ಎಂಬ ಭಾವನೆ ಅವರಿಗೆ. ಮೀರಾ, ಕಾವೇರಿಯರು ತಾವು ಗ್ರಹಿಸಿದ ರೀತಿಯಲ್ಲಿ ಇಲ್ಲ ಎಂಬುದೇ ಅವರ ಸಂದಿಗ್ಧತೆಗೆ ಕಾರಣವಾಗುತ್ತದೆ. ಆದುದರಿಂದಲೇ ಮೀರಾಳ ಓದಿನ ಹಂಬಲ ಮತ್ತು ಕಾವೇರಿಯ ಅಸ್ಪಷ್ಟತೆ ಅವರ ಗಂಡಂದಿರಿಗೆ ಬಿಡಿಸಲಾಗದ ಒಗಟಾಗುತ್ತದೆ.

'ಕೀಲುಗೊಂಬೆ' ಸೀತೆ-ನರಸಿಂಹಯ್ಯನ ದಾಂಪತ್ಯ ಸಂಬಂಧವನ್ನು ವಿವರಿಸುವ ಕಾದಂಬರಿ, ನರಸಿಂಹ ವಿದ್ಯಾವಂತವಾಗಿಯೂ ಅನಾಗರಿಕ, ಪಶು ಸ್ವಭಾವದ ವ್ಯಕ್ತಿ. ಅತ ಹೆಂಡತಿಯನ್ನು ಮನುಷ್ಯರಂತೆ ಎಂದೂ ನಡೆಸುತ್ತಿರಲಿಲ್ಲ. 'ತನ್ನ ಆಶ್ರಯ, ತಾನು ನೀಡುವ ಆಹಾರವನ್ನೇ ಮಹಾಪ್ರಸಾದವೆಂದು ಕೈಯೊಡ್ಡಿ ಸ್ವೀಕರಿಸಿ, ತಾನು ಹೇಳಿದಂತೆ ಕೇಳಿಕೊಂಡು ಬಿದ್ದಿರಬೇಕಾದ ಪ್ರಾಣಿ ಹೆಂಡತಿ ಎಂಬ ಮನೋಭಾವನೆಯ ಗಂಡ ನರಸಿಂಹಯ್ಯ. ಸೀತೆ ಹೆಂಡತಿಯಾಗಿ ನರಸಿಂಹಯ್ಯನಿಗೆ ಭೋಗಭೂಮಿಯಂತಿದ್ದಳು. ಆತನ ಎಣೆಯಿಲ್ಲದ ಲೈಂಗಿಕ ತೃಷೆಗೆ ಬಲಿಯಾಗುವ ಮೂಕ ಪಶುವಿನಂತಿದ್ದಳು. ಸೀತೆ ನರಸಿಂಹಯ್ಯನ ದಾಂಪತ್ಯ ಸಂಬಂಧದಲ್ಲಿ ಯಾವ ನಿಯಮಗಳೂ ಕಾರ್ಯವೆಸಗುತ್ತಿರಲಿಲ್ಲ, ಗಂಡ-ಹೆಂಡತಿ ಸಂಬಂಧ ಇಲ್ಲಿ ಒಡೆಯ-ಗುಲಾಮ ಸಂಬಂಧದ ರೀತಿಯದಾಗಿತ್ತು. ಒಂದು ಕಾಲದಲ್ಲಿ ಜಗತ್ತಿದಾದ್ಯಂತ ವ್ಯಾಪಕವಾಗಿ ಹರಡಿದ್ದ ಶೋಷಕ ಪದ್ದತಿ.: ಗುಲಾಮಗಿರಿ.

ಗುಲಾಮಗಿರಿತನದ ಮುಖ್ಯ ಲಕ್ಷಣವೆಂದರೆ -

ಈ ಪದ್ಧತಿಯಲ್ಲಿ ಶೋಷಿತವರ್ಗದಿಂದ ಶ್ರಮ, ದುಡಿತ ಮತ್ತು ವಿಧೇಯತೆಯನ್ನು ಶೋಷಕ ವರ್ಗವು ನಿರೀಕ್ಷಿಸುತ್ತದೆ. ಈ ಸೇವೆಗೆ ಪ್ರತಿಫಲವಾಗಿ ಬದುಕಲು ಅಗತ್ಯವಿರುವಷ್ಟೇ ಆಹಾರ ಮತ್ತು ಇತರ ವಸ್ತುಗಳು ದೊರೆಯುತ್ತಿದ್ದವು. ಗುಲಾಮವರ್ಗದಲ್ಲಿ ಸ್ತ್ರೀ ವರ್ಗವಿದ್ದರೆ ಅವರಿಂದ ಭೋಗಸೇವೆ(ಲೈಂಗಿಕ ಸಂಬಂಧ)ಯನ್ನು ಕಡ್ಡಾಯವಾಗಿ ನಿರೀಕ್ಷಿಸಲಾಗುತ್ತಿತ್ತು.

ನರಸಿಂಹಯ್ಯನಿಗೆ ಹೆಂಡತಿಯೆಂದರೆ -

'ಮನೆಗೆಲಸ ಮಾಡುವ ತೊತ್ತು. ರಾತ್ರಿ ಶಯ್ಯೆಯಲ್ಲಿ ಮಲಗಿ ಗಂಡನನ್ನು ತಣಿಸುವ ವೇಶ್ಯೆ ಮಾತ್ರವಾಗಿದ್ದಳು. ಊಟ, ತಿಂಡಿ, ಬಟ್ಟೆಗಳ ಅಗತ್ಯವಿರುವ ಒಂದು ಕೀಲುಗೊಂಬೆ ಮಾತ್ರವಾಗಿದ್ದಳು. ಹೆಂಡತಿಗೂ ಹೃದಯವಿದೆ, ವ್ಯಕ್ತಿತ್ವವಿದೆ. ಅದನ್ನು ತಾನು ಗೌರವಿಸಬೇಕೆಂಬ ಬಾವನೆಗಳಿಂದ ಅವನು ದೂರವಾಗಿದ್ದ[೨೭]' (ಕೀಲುಗೊಂಬೆ:೬೩:೯೯೩)

ಸೀತೆ ಗಂಡನ ಮನೆಯಲ್ಲಿ ಗುಲಾಮಳಾಗಿಯೇ ಇದ್ದಳು. ನರಸಿಂಹಯ್ಯನಿಗೆ ಹೆಂಡತಿಯನ್ನು ತನಗಿಷ್ಟಬಂದ ಹಾಗೆ ಬಳಸಿಕೊಳ್ಳುವುದಕ್ಕೆ ಧರ್ಮಸಮ್ಮತಿ ಇತ್ತು . ಅವನ ಸುತ್ತಲೂ ಬದುಕು ಮಾಡುವ ಗಂಡಸರ ಪೂರ್ಣ ಬೆಂಬಲವಿತ್ತು. ಸೀತೆಯ ಪರಿಸ್ಥಿತಿ ಅವಳ ತಂದೆ, ತಾಯಿ, ಅತ್ತೆ, ಮಾವ, ಎಲ್ಲರಿಗೂ ತಿಳಿದಿತ್ತು. ಆದರೆ ಅವಳನ್ನು ರಕ್ಷಿಸುವುದು ಅವರಿಂದಾಗಲೀ, ಸ್ವತಃ ಹೊಟ್ಟೆಯಲ್ಲಿ ಹುಟ್ಟಿದ ಮಗ ಮಧುವಿನಿಂದಲೂ ಸಾಧ್ಯವಾಗುವುದಿಲ್ಲ.

'ತನ್ನ ಆಶ್ರಯ, ತಾನು ನೀಡುವ ಅಹಾರವನ್ನೇ ಮಾಹಾಪ್ರಸಾದವೆಂದು ಕೈಯೊಡ್ಡಿ ಸ್ವೀಕರಿಸಿ ತಾನು ಹೇಳಿದಂತೆ ಕೇಳಿಕೊಂಡು ಬಿದ್ದಿರಬೇಕಾದ ಪ್ರಾಣಿ ಹೆಂಡತಿ' ಎಂಬ ಮನೋಭಾವನೆಯ ಗಂಡ ನರಸಿಂಹಯ್ಯನಾದರೆ 'ಗಂಡನೇ ಪ್ರತ್ಯಕ್ಷ ದೈವ' ಅವನನ್ನು ಎಂದೂ ಪ್ರತಿಭಟಿಸಲಾಗದು ಎಂಬ ಭಾವನೆಯನ್ನು ರಕ್ತಗತವಾಗಿಸಿಕೊಂಡ ಹೆಂಡತಿಯಾದ ಸೀತೆಗೂ, ಸ್ವತಃ ತನ್ನನ್ನು ತಾನು ರಕ್ಷಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ತನ್ನ ವ್ಯಕ್ತಿತ್ವವನ್ನು ಪುರುಷಪರ ಮೌಲ್ಯಗಳಿಂದ ರೂಪಿಸಿಕೊಂಡ ಹೆಣ್ಣು ಸೀತೆ.

'ಬಾನು ಬೆಳಗಿತು' ಕಾದಂಬರಿಯ ಕಲ್ಯಾಣಿ-ರಾಮನಾಥರದು ಪರಸ್ಪರ ಪ್ರೀತಿ, ವಿಶ್ವಾಸದಲ್ಲಿ ಅರಳಿದ ದಾಂಪತ್ಯ, ಇಬ್ಬರೂ ವಿದ್ಯಾವಂತರು, ದಾಂಪತ್ಯ ಜೀವನದ ಪ್ರಾರಂಭದ ಸಿಹಿ ಕರಗಿದ ನಂತರ ಕಲ್ಯಾಣಿ ಉದ್ಯೋಗದ ಕಡೆ ಮನಸ್ಸು ಮಾಡಿದಾಗಲೇ ಗಂಡ ಹೆಂಡತಿ ನಡುವೆ ಮನಸ್ತಾಪ ಬೆಳೆಯುತ್ತದೆ. ಸ್ತ್ರೀ-ಪುರುಷ ಸಮಾನತೆಯ ಭಾಷಣ ಬಿಗಿಯುವ ರಾಮನಾಥನಿಗೆ ಹೆಂಡತಿ ಮನೆಯಿಂದ ಹೊರಗೆ ದುಡಿಯುವುದು ಅಸಮಾಧಾನವೆನಿಸುತ್ತದೆ. ತನಗೆ ಇಷ್ಟಬಂದ ರೀತಿಯಲ್ಲಿ ಜೀವನ ನಡೆಸುವ ಅವಕಾಶವಿದೆ ಅದೇ ರೀತಿ ಹೆಂಡತಿಯ ನಿರ್ಧಾರವನ್ನು ಗೌರವಿಸಬೇಕೆಂಬ ಮನಸ್ಸು ರಾಮನಾಥನಿಗೆ ಇಲ್ಲ.

ಕಲ್ಯಾಣಿ ಕೆಲಸಕ್ಕೆ ಹೋಗದಂತೆ ತಡೆದು, ಅವಳು ತೌರುಮನೆಯಲ್ಲಿಯೂ ನೆಮ್ಮದಿಯಿಂದ ಬಾಳದಂತೆ ನೋಡಿಕೊಂಡು, ಅವಳನ್ನು ಹಿಂದೆ ಕರೆಸುವಲ್ಲಿ ರಾಮನಾಥ ಯಶಸ್ವಿಯಾಗುತ್ತಾನೆ. ಹೆಂಡತಿ ತನ್ನ ಕೈಕೆಳಗೆ, ತನಗೆ ಬೇಕಾದ ರೀತಿ ಬಾಳುವಂತೆ ಮಾಡುವ ರಾಮನಾಥನ ಪ್ರಯತ್ನಗಳಿಗೆ ಕಾದಂಬರಿಯಲ್ಲಿ ಎಲ್ಲರ ಬೆಂಬಲವೂ ದೊರೆಯುತ್ತದೆ. 'ಹೆಂಡತಿಯಾದವಳು ಮನೆ-ಗಂಡ-ಮಕ್ಕಳು ಎಂದು ಇರಬೇಕಾದವಳು' ಎಂಬ ಭಾವನೆಗೆ ಎಲ್ಲರೂ ಸಮ್ಮತಿಸುತ್ತಾರೆ. ವಸಂತಗಾನ ಸರಳೆಯ ವೈವಾಹಿಕ ಬದುಕಿನ ಚಿತ್ರವಿರುವ ಲಘು ಕಾದಂಬರಿ.

ವಾಸು-ಸರಳೆಯ ಜೋಡಿಯಲ್ಲಿ ಪರಸ್ಪರ ಪ್ರೀತಿ, ಗೌರವಗಳಿವೆ, ಬದುಕನ್ನು ಹಗುರವಾಗಿ ಕಾಣುವ ಲಘು ಮನೋಭಾವವಿದೆ. ದಾಂಪತ್ಯದ ರಂಜಕ ಕಲ್ಪನೆಯನ್ನು ಹಾಸ್ಯ ಭರಿತವಾಗಿ ನಿರೂಪಿಸಿದರೂ, ಸರಳ ತನ್ನ ಸರಳ ಮನೋಭಾವದಿಂದ ಯವುದೇ ರೀತಿಯ ಸೃಜನಕಾರ್ಯಗಳಲ್ಲಿ ತೊಡಗಿಸಿಕೊಳ್ಳದೆ ಊಟ ತಿಂಡಿ ಓಡಾಟಗಳಿಗಷ್ಟೇ ತನ್ನನ್ನು ತಾನು ತೊಡಗಿಸಿಕೊಂಡಿರುವುದು ಗೋಚರಿಸುತ್ತದೆ.

**ವಿವಾಹೇತರ ಮತ್ತು ಅಸಾಂಪ್ರದಾಯಕ ಸ್ತ್ರೀ-ಪುರುಷ ಸಂಬಂಧಗಳು**

ವೈವಾಹಿಕ ಚೌಕಟ್ಟಿನಿಂದ ಹೊರಗೆ, ಧರ್ಮಸಮ್ಮತವಲ್ಲವೆಂಬ ಭಾವನೆ ಇರುವ ಸ್ತ್ರೀ-ಪುರುಷ ಸಂಬಂಧವಿದು. ವಿವಾಹೇತರ ಸಂಬಂಧದಲ್ಲಿರುವ ಮೂರು ಸ್ತ್ರೀ ಪಾತ್ರಗಳನ್ನು ತ್ರಿವೇಣಿ ಕಾದಂಬರಿಗಳು ವಿವರಿಸುತ್ತದೆ. ರತ್ನ

(ತಾವರೆಕೊಳ), ರಮು (ಹೂವುಹಣ್ಣು), ಭಾರತಿ (ಸೋತುಗೆದ್ದವಳು) ವಿವಾಹಿತೆಯರು. ಸಣ್ಣವಯಸ್ಸಿನಲ್ಲಿಯೇ ಮದುವೆಯಾಗಿ ಗಂಡನ ಮನೆ ಸೇರಿದವರು. ಚೆಲುವೆಯರು, ವಿವಿಧ ಕಾರಣದಿಂದ ಈ ಸ್ತ್ರೀಯರು ದಾಂಪತ್ಯ ಸುಖದಿಂದ ವಂಚಿತೆಯರಾಗಬೇಕಾಗುತ್ತದೆ.

ರತ್ನಳಿಗೆ ಗಂಡ, ಮಗುವಿನ ಸಂಸಾರವಿದೆ. ಗಂಡನ ನಿರಾಸಕ್ತಿ, ಬಿಡುವಿಲ್ಲದ ದುಡಿಮೆ ರತ್ನಳನ್ನು ರಮೇಶನತ್ತ ಆಕರ್ಷಿಸುತ್ತದೆ. ಪರಸ್ಪರ ಆಕರ್ಷಣೆಗೆ ಒಳಗಾದ ಇವರಲ್ಲಿ ಪ್ರೇಮ ಅನುರಾಗ ಬೆಳೆಯುತ್ತದೆ. ರಮೇಶ ಇನ್ನು ವಿದ್ಯಾರ್ಥಿಯಾಗಿರುವುದರಿಂದ ಅವನ ಭವಿಷ್ಯ ಇನ್ನು ನಿರ್ಧಾರವಾಗಿಲ್ಲ. ರತ್ನಾಳಿಗೆ ಸಂಪ್ರಾದಾಯ, ಶೀಲ, ಪಾವಿತ್ರ್ಯತೆ ಕುರಿತು ಯಾವ ನಂಬಿಕೆಯೂ ಇಲ್ಲ. ''ನಾನು ಸತೀಧರ್ಮಕ್ಕಾಗಲೀ, ಪಾತಿವ್ರತ್ಯಕ್ಕಾಗಲಿ ಅಥವಾ ಇತರಿಗಾಗಲೀ ಹೆದರಿ ನಿಮ್ಮನ್ನು ನಿರಾಕರಿಸುತ್ತಿಲ್ಲ. ನನ್ನ ದೃಷ್ಟಿಯಲ್ಲಿ ಅವುಗಳಿಗೆ ಯಾವ ಬೆಲೆಯೂ ಇಲ್ಲ''[೯] (ತಾವರೆಕೊಳ : ೧೭೦:೧೯೯೧) ರತ್ನಾ ತನ್ನ ಮತ್ತು ರಮೇಶನ ಸಂಬಂಧವನ್ನು ಮುಂದುವರಿಯದಂತೆ ತಡೆಯುತ್ತಾಳೆ. ಅದಕ್ಕೆ ಅವಳು ಕೊಡುವ ಕಾರಣ.'ಪ್ರೇಮಕ್ಕೆ ವ್ಯವಹಾರ ಬುದ್ಧಿ ಇರಬೇಕು. ನಾನೊಂದು ಒಡೆದ ಕನ್ನಡಿ. ಅದರಲ್ಲಿ ಮುಖ ನೋಡಿಕೊಳ್ಳುವ, ಅದನ್ನು ಸರಿಪಡಿಸುವ ಸಾಹಸ ನಿಮ್ಮದು. ಅದರಿಂದ ಏನೂ ಪ್ರಯೋಜನವಿಲ್ಲ[೧೦]'' (ಅದೇ ಪುಟ.೧೫೪).

ಒಬ್ಬ ಗಂಡಸಿನ ಜತೆ ಬಾಳುವೆ ನಡೆಸಿದ ಹೆಣ್ಣು ಇನ್ನೊಬ್ಬ ಗಂಡಸಿನೊಡನೆ ಅದೇ ಭಾವನೆಯಿಟ್ಟು ಬದುಕುವುದು ಸಾಧ್ಯವೇ ಎನ್ನುವ ರತ್ನಾಳ ಪ್ರಶ್ನೆಗೆ ಕಾದಂಬರಿ ರತ್ನ ರಮೇಶ ದೂರವಾಗುವ ಮೂಲಕ ಉತ್ತರ ನೀಡಿದೆ. ಶರಪಂಜರದ 'ಸತೀಶ', ಅಪಜಯದ 'ಶ್ಯಾಮು' ಇವರು ಹೆಂಡತಿಯಿದ್ದೂ ಬೇರೆ ಸಂಬಂಧದಲ್ಲಿ ಹೆಣ್ಣಿನ ಸಂಪರ್ಕವನ್ನು ಇಟ್ಟುಕೊಂಡಿರುತ್ತಾರೆ. ರತ್ನಾಳಿಗಿಂತ ಭಾರತಿ ಜೀವನದಲ್ಲಿ ನಡೆಯುವ ಪ್ರಸಂಗ ಭಿನ್ನ ರೀತಿಯದು:

ಅತಿಯಾಗಿ ತನ್ನ ಪ್ರೀತಿಸಿ, ಬಯಸುವ ಗಂಡ ಅಲ್ಪಾವಧಿಗೆ ಸುಖದ ಪ್ರಪಂಚವನ್ನು ತೋರಿಸಿ ಮರೆಯಾದಾಗ ಹರೆಯದ ಭಾರತಿ ಪ್ರಕೃತಿ ಸಹಜ ಬಯಕೆಗೆ ಬಲಿಯಾಗುತ್ತಾಳೆ. ಇಂಥ ಸಂದರ್ಭದಲ್ಲಿ ಕಲಾವಿದ ಚಂದುವಿನ ಸಂಪರ್ಕ ಅವಳಿಗಾಗುತ್ತದೆ. ಭಾರತಿ-ಚಂದು ನಡುವೆ ದೈಹಿಕ ಆಕರ್ಷಣೆ ಮೂಡುತ್ತದೆ.

ಭಾರತಿಗೆ ಚಂದುವಿನಲ್ಲಿ ದ್ವೇಷದ ಭಾವನೆ ಇದೆ. ಚಂದುವಿಗೆ ಹೆಂಗಸರ ಬಗ್ಗೆ ಗೌರವ, ಆದರದ ಭಾವನೆಗಳು ಇಲ್ಲ. ಈ ಕಾರಣದಿಂದ ಅವರಿಬ್ಬರೂ ಮಾನಸಿಕವಾಗಿ ಹತ್ತಿರವಾಗುವುದಿಲ್ಲ. ಚಂದು ಭಾರತಿಯನ್ನು ಕರೆದರೂ ಅವಳು ಅವನೊಡನೆ ಹೊಗಲು ಒಪ್ಪುವುದಿಲ್ಲ. ಅವಳು ಆನಂದನ ಹೆಂಡತಿಯಾಗಿಯೇ ಉಳಿಯುವ ಅಪೇಕ್ಷೆ ವ್ಯಕ್ತಪಡಿಸುತ್ತಾಳೆ.

ಭಾರತಿಯಲ್ಲಿ ಆತ್ಮವಂಚನೆ ಇಲ್ಲ. ತಾನು ಈ ರೀತಿ ವರ್ತಿಸಿದುದಕ್ಕಾಗಿ ಪಶ್ಚಾತ್ತಾಪ ಪಡುವುದಕ್ಕಿಂತಲೂ ಹೆಚ್ಚಾಗಿ ಅವಳು ಸಮರ್ಥನೆ ಹುಡುಕುವ ಪ್ರಯತ್ನ ನಡೆಸುತ್ತಾಳೆ. ಈ ದಿಕ್ಕಿನಲ್ಲಿ ರತ್ನಾಳಿಗಿಂತ ಭಾರತಿ ಹೆಚ್ಚು ಮಾನವ ಸಹಜ ಸ್ವಭಾವವನ್ನು ತೋರಿಸುತ್ತಾಳೆ.

''ಬಾಯಾರಿಕೆ ಹಸಿವು ನಿದ್ದೆಗಳಂತೆ ಕಾಮವೂ ಒಂದು ಹುಟ್ಟುಗುಣ. ಬಾಯಾರಿಕೆಯಾದಾಗ ನೀರು ಕುಡಿಯದಿರಲು

ಸಾಧ್ಯವೇ? ಬಾಯಾರಿಕೆಯಾದಾಗ ನೀರು ಕುಡಿಯುವುದಾಗಲೀ ಹಸಿವಾದಾಗ ಊಟ ಮಾಡುವುದಾಗಲಿ ತಪ್ಪಿಲ್ಲವಾದರೆ ಈ ದೈಹಿಕಾರ್ಷಣೆಯನ್ನೇಕೆ ಅದುಮಿಡಬೇಕು[೨೧]?" (ಸೋತುಗೆದ್ದವಳು:೯೨:೧೯೮೭). ಭಾರತಿ ಗಂಡ ಆನಂದನಿಂದ ಏನನ್ನು ಮುಚ್ಚಿಡುವುದಿಲ್ಲ. ಅನಂದ - ಭಾರತಿ ಒಂದೇ ರೀತಿ ಅನುಭವಕ್ಕೆ ಒಳಗಾದವರು. ಆದುದರಿಂದ ಪರಸ್ಪರರಿಗೆ ನ್ಯಾಯ ದೊರಕುತ್ತದೆ.

ರತ್ನಾ-ರಮೇಶರ ಪ್ರೇಮಸಂಬಂಧ, ಭಾರತಿ-ಚಂದುರ ದೈಹಿಕ ಸಂಬಂಧ, ಇವೆರಡೂ ಅನಿರೀಕ್ಷಿತವಾಗಿ ನಡೆದಿರುವುದಲ್ಲ. ಸಾಕಷ್ಟು ಮಾನಸಿಕ ಸಿದ್ಧತೆಗಳ ನಂತರವೇ ಮುಂದುವರೆದುದು. ಭಾರತಿ ವಿಚಾರದಲ್ಲಿ ಚಂದು ಪಲಾಯನವಾದಿಯಾದರೆ ಭಾರತಿ ಮಾತ್ರ ಕೊನೆಯವರೆಗೆ ದೃಢತೆಯಿಂದ ನಿಲ್ಲುತ್ತಾಳೆ. ಅದೇ ರೀತಿ ರತ್ನ ಕೂಡ. 'ಹೂವುಹಣ್ಣು' ಕಾದಂಬರಿಯ ರಮಾ ವೇಶ್ಯೆ.

ರಮಾ ವಾಸುವಿನ ಹೆಂಡತಿಯಾಗಿ, ಶೀಲಾಳ ತಾಯಿಯಾಗಿ, ಬದುಕು ಮಾಡಿಕೊಂಡು ಇದ್ದ ಹೆಣ್ಣು, ಗಂಡನ ಅನಿರೀಕ್ಷಿತ ಸಾವು, ಕಿತ್ತು ತಿನ್ನುವ ಬಡತನ, ಬಳಗದ ಕೊರತೆ, ಮಗುವಿನ ಜವಾಬ್ದಾರಿ, ಇವುಗಳಿಂದ ರಮಾ ಕಂಗೆಟ್ಟು, ಮರ್ಯಾದೆಯಾಗಿ ಬಾಳುವ ವಿವಿಧ ಪ್ರಯತ್ನಗಳನ್ನು ನಡೆಸುತ್ತಾಳೆ . 'ತೋಳಿನಲ್ಲಿ ಬಲವಿದೆ, ದೇಹದಲ್ಲಿ ಆರೋಗ್ಯವಿದೆ. ಕಷ್ಟಪಟ್ಟು ದುಡಿದು ಕೂಲಿನಾಲಿ ಮಾಡಿ ನನ್ನ ಕಾಲಿನ ಮೇಲೆ ನಿಲ್ಲುತ್ತೇನೆ'[೨೨] (ಹೂವುಹಣ್ಣು:೧೮:೧೯೯೩) ಎಂದುಕೊಂಡು ದುಡಿಮೆ ಕ್ಷೇತ್ರಕ್ಕೆ ಇಳಿದ ರಮೆಗೆ ವಾಸ್ತವಿಕತೆಯ ಕಟು ಅನುಭವ ಬೇಗನೆ ಉಂಟಾಗುತ್ತದೆ. 'ಗಂಡನಿಲ್ಲದ ಎಳೆಯ ಪ್ರಾಯದ ಹೆಣ್ಣು ವಾರಸುದಾರರಿಲ್ಲದ ಅನ್ನದಂತೆ, ಎನಿಸಿತು. ವಾರಸುದಾರರಿಲ್ಲದ ಅನ್ನಕ್ಕೆ ಮುತ್ತುವ ಕಾಗೆಗಳಂತೆ ತನ್ನ ಬಾಳಾಗಿರುವುದು ತಿಳಿದು ರಮಾ ಅಧೀರಳಾದಳು[೨೩]' (ಅದೇ: ಪುಟ:೩೩-೩೪).

ರಮಾ ತನ್ನ ಮತ್ತು ತನ್ನ ಮಗಳ ಎರಡು ಹೊತ್ತಿನ ಊಟಕ್ಕಾಗಿ ವಿವಿಧ ರೀತಿಯ ಕೆಲಸವನ್ನು ಮಾಡುತ್ತಿರುತ್ತಾಳೆ. ಅದರೆ ಅವಳು ದುಡಿಯುವ ಕ್ಷೇತ್ರದಲ್ಲಿದ್ದ ಗಂಡಸರು,ಅವಳ ದೇಹಕ್ಕಾಗಿ ಆಸೆಪಟ್ಟುಕೊಂಡಿರುತ್ತಾರೆ. ಒಂಟಿಯಾಗಿ ಮತ್ತು ಮರ್ಯಾದೆಯಾಗಿ ಬಾಳುವುದು ಸಾಧ್ಯವಾಗದೆ ಹೋದಾಗ ರಮಾ ಪೂರ್ವನಿಶ್ಚಯದಿಂದಲೇ ವೇಶ್ಯೆಯ ಬದುಕನ್ನು ಆಯ್ಕೆ ಮಾಡುತ್ತಾಳೆ. 'ಹೆಣ್ಣು ಮರ್ಯಾದೆಯಾಗಿ ಬಾಳನ್ನು ಬಾಳಬೇಕಾದರೆ ಗಂಡಸಿನೊಬ್ಬನ ಅಶ್ರಯಬೇಕೆ ಬೇಕು. ಎಂದು ರಮಾ ಅಗ ತಿಳಿದಳು. ಮರದ ಆಶ್ರಯ ತಪ್ಪಿ ನೆಲದ ಮೇಲೆ ಬಿದ್ದು ಹೊರಳಾಡುವ ಬಳ್ಳಿಯನ್ನು ಓಡಾಡುವವರೆಲ್ಲಾ ತುಳಿದುಕೊಂಡು ಓಡಾಡಿ ಬಳ್ಳಿಯನ್ನು ಹಾಳು ಮಾಡಿದಂತಾಯ್ತು ರಮೆಯ ಸ್ಥಿತಿ'[೨೪] (ಅದೇ: ಪುಟ:[೨೪] )

ವಿದ್ಯೆ ಇಲ್ಲದ ರಮೆಯ ಮುಂದೆ ಬೇರೆ ಆಯ್ಕೆ ಇರದೆ ಹೋಗುವ ಬಿಕ್ಕಟ್ಟಿನ ಪರಿಸ್ಥಿತಿ, ಈ ಸ್ಥಿತಿಯಲ್ಲಿ ಗಂಡಸಿನ ಕುರಿತು ದ್ವೇಷ ಮತ್ತು ಜಿಗುಪ್ಸೆಯೊಂದಿಗೇ ರಮಾ ಅಸಾಂಪ್ರದಾಯಕ ಸಂಬಂಧವನ್ನು ಮುಂದುವರಿಸುತ್ತಾಳೆ. ರಮೆಯ ಈ ತ್ಯಾಗದಿಂದ ಶೀಲಾಳ ಬದುಕು ಬಂಗಾರವಾದರೂ, ಸ್ವತಃ ರಮೆ ಬಡತನ ಮತ್ತು ರೋಗಗಳಿಂದ ನಿರಂತರವಾಗಿ ನೋವನ್ನು ಉಣ್ಣುವ ಬದುಕನ್ನು ಪಡೆಯುತ್ತಾಳೆ. 'ಮುಕ್ತಿ'ಯ ಸುಶೀಲೆ ರಮಾಳಂತೆ ಅಸಹಾಯಕಳಾಗಿರಲಿಲ್ಲ.

ಅವಿವಾಹಿತೆಯಾಗಿದ್ದ ಸುಶೀಲೆಗೆ ಸಂಪಾದನೆ ಇರುವ ಉದ್ಯೋಗ, ವಿದ್ಯೆ ಎರಡೂ ಇದ್ದವು. ತಂದೆ,ತಾಯಿ,

ಆಪ್ತಗೆಳತಿಯರು ಬಳಗವಿತ್ತು. ಆದರೆ ಮದುವೆ ವಿಚಾರದಲ್ಲಿ ಉಂಟಾದ ನಿರಾಸೆ ಅವಳನ್ನು ಈ ಬದುಕಿಗೆ ತಳ್ಳಿದೆ. ಬದುಕಿನಿಂದ ಎಷ್ಟು ಸಾಧ್ಯವೋ ಅಷ್ಟು ಸುಖ, ಸಂತೋಷ ಪಡೆಯಲು ನಾನು ಗಂಡಸರೊಡನೆ ಸ್ವೇಚ್ಛೆಯಾಗಿರುತ್ತೇನೆ. ಎಂದು ಸುಶೀಲ ಹೇಳಿಕೊಳ್ಳುತ್ತಾಳೆ. ರಮ, ಸುಶೀಲರಂತಹವರನ್ನು ಸಮಾಜ ತಿರಸ್ಕಾರದಿಂದ ಕಾಣುತ್ತದೆ.

ನಾಗೇಂದ್ರ ಮತ್ತು ಅಮೃತ ಸುಶೀಲಾಳ ಕುರಿತು ರಮಾಳಲ್ಲಿ ಆಡುವ ಮಾತುಗಳು, ಹೆತ್ತ ಮಗಳೇ ರಮಾಳನ್ನು ತಿರಸ್ಕಾರದಿಂದ ಕಾಣುವ ವಿಧಾನದಲ್ಲಿ ಈ ತಿರಸ್ಕಾರ ವ್ಯಕ್ತವಾಗಿದೆ. ತ್ರಿವೇಣಿ ವಿವಾಹೇತರ ಸಂಬಂಧಗಳಲ್ಲಿ ರತ್ನ, ಭಾರತಿ, ರಮ, ಸುಶೀಲಾ ಮುಂತಾದ ಹೆಣ್ಣುಗಳ ಮೂಲಕ ಸೀಮೋಲ್ಲಂಘನ ವಿಚಾರವನ್ನು ವ್ಯಕ್ತಪಡಿಸುತ್ತಾರೆ. ರಮಾಳನ್ನು ಹೊರತು ಪಡಿಸಿದರೆ ಉಳಿದವರು ಇಲ್ಲಿ ಅವಕಾಶವನ್ನು ಮನಸಾ ಒಪ್ಪಿ ನಡೆದುಕೊಂಡವರು. ರಮಾ ಪರಿಸ್ಥಿತಿಯ ಕೈಗೊಂಬೆಯಾದರೂ ನಂತರ ತನ್ನ ಬದುಕಿನ ಆಯ್ಕೆಗಾಗಿ ಅವಳೂ ಮುಂದೆಂದೂ ಪಶ್ಚಾತ್ತಾಪ ಪಟ್ಟ ಹಾಗೆ ಕಾದಂಬರಿ ವಿವರಣೆ ನೀಡಿಲ್ಲ.

**ಕಾದಂಬರಿಯ ಸ್ತ್ರೀ ಮಾದರಿಗಳು**

**ಪಾರಂಪರಿಕ ಸ್ತ್ರೀ ಮಾದರಿ**

ಪರಂಪರೆ ಮತ್ತು ಸಂಪ್ರದಾಯವನ್ನು ಆದರಪೂರ್ವಕವಾಗಿ ಕಾಣುವುದರಲ್ಲಿಯೇ ಜೀವನದ ಅರ್ಥವಿದೆ, ಎಂದು ನಂಬುವ ಅನೇಕ ಸ್ತ್ರೀಯರು ತ್ರಿವೇಣಿ ಕಾದಂಬರಿಗಳಲ್ಲಿ ಇದ್ದಾರೆ. ಜೀವನ ಮೌಲ್ಯಗಳಲ್ಲಿ ಈ ಸ್ತ್ರೀಯರಿಗೆ ಅತೀವ ಶ್ರದ್ಧೆ ಇದೆ. ತಾವು ನಂಬಿಕೊಂಡುಬಂದ ಆದರ್ಶವನ್ನು ಚಾಚು ತಪ್ಪದೆ ಅನುಸರಿಸುವುದಷ್ಟೇ ಅಲ್ಲದೆ ತಮ್ಮ ಮುಂದಿನ ಪೀಳಿಗೆಗೂ ಈ ಆದರ್ಶವನ್ನು ಮುಂದುವರಿಸುವುದರಲ್ಲಿ ಇವರ ಸಹಕರ ಮತ್ತು ಬೆಂಬಲಗಳು ಇವೆ. ಇವರು ಸಮಯ ಸಂದರ್ಭ ಬಂದಾಗಲೆಲ್ಲಾ ಉಪದೇಶದ ಮಾತುಗಳಿಂದ ಮನೆಮಕ್ಕಳಿಗೆ ತಮ್ಮ ಆದರ್ಶದ ಪಾಠ ಹೇಳುತ್ತಾರೆ. ಹೆಣ್ಣುಮಕ್ಕಳನ್ನು ತಮ್ಮ ನಂಬಿಕೆಯ ವಾತಾವರಣದಲ್ಲಿ ಬೆಳಸುವಲ್ಲಿ ಈ ಹೆಂಗಸರು ಅತೀವ ಆಸಕ್ತಿ ತೋರಿಸುತ್ತಾರೆ. ತಾವು ಕೇಳಿದ ಪುರಾಣಕತೆಗಳು, ಉಂಡ ಅನುಭವಗಳು ಇವುಗಳ ಆಧಾರದ ಮೇಲೆ ಅವರು ಹೆಣ್ಣಿನ ಒಂದು ಪಾರಂಪರಿಕ ಸ್ತ್ರೀ ಮಾದರಿಯೊಂದನ್ನು ಸೃಷ್ಟಿಸಿಕೊಳ್ಳುತ್ತಾರಲ್ಲದೆ, ಈ ಮಾದರಿಯ ಅದರ್ಶಗುಣಗಳನ್ನು ಸ್ತ್ರೀವ್ಯಕ್ತಿತ್ವದ ಗುಣಲಕ್ಷಣಗಳೆಂದೇ ಪ್ರಚಾರಕ್ಕೆ ತರುತ್ತಾರೆ. ಅವರ ಕಲ್ಪನೆಯ ಸ್ತ್ರೀಯು ಕೌಟುಂಬಿಕ ಚೌಕಟ್ಟಿನೊಳಗೆ ಗೃಹಜಗತ್ತಿಗೆ ತನ್ನನ್ನು ತಾನು ಸಮರ್ಪಣಭಾವದಿಂದ ಒಪ್ಪಿಸಿರುವ ಸ್ತ್ರೀಯಾಗಿದ್ದಾಳೆ. ಮನೆಯಲ್ಲಿ ಪ್ರಾಯಕ್ಕೆ ಬರುವ ಹೆಣ್ಣುಮಕ್ಕಳಿಗೆ ಈ ಹಿರಿಯರು ಒಂದೇ ರೀತಿಯ ಗೃಹನೀತಿಯನ್ನು ತಮ್ಮ ತಿಳುವಳಿಕೆ ಆಧಾರದಿಂದ ಉಪದೇಶಿಸುತ್ತಿರುತ್ತಾರೆ.

ತ್ರಿವೇಣಿ ಕಾದಂಬರಿಗಳಲ್ಲಿರುವ ಅಜ್ಜಿಪಾತ್ರಗಳು ಈ ರೀತಿಯ ಹಿರಿಯ ತಲೆಮಾರಿಗೆ ಸೇರಿದವರಾಗಿದ್ದಾರೆ. ಕೀಲುಗೊಂಬೆ 'ನಂಜಕ್ಕ', ದೂರದಬೆಟ್ಟದ 'ವೆಂಕಮ್ಮ', 'ಮುಟ್ಟಿದ ಬಾಗಿಲು' ವಿನ ಕನಕಳ 'ಅಜ್ಜಿ', ಕಾಶೀಯಾತ್ರೆಯ 'ಪಾತಜ್ಜಿ' ಮೊದಲಾದವರು.

ಈ ಅಜ್ಜಿಯರ ಉಪದೇಶದ ಪರಿಣಾಮವನ್ನು ಭೀಕರವಾಗಿ ಅನುಭವಿಸುವ ಯುವತಿಯರನ್ನೂ ಕಾದಂಬರಿ ಉದಾಹರಿಸಿದೆ. 'ಸುನಂದ' ಮತ್ತು 'ಕನಕ' ತಾವು ಬದುಕುವ ಆಧುನಿಕ ಪರಿಸರದಲ್ಲಿ ಈ ಅಜ್ಜಿಯ ಉಪದೇಶದ

ಕಾರಣವಾಗಿಯೇ ಸರಿತಪ್ಪುಗಳ ದ್ವಂದ್ವದಲ್ಲಿ ಮಾನಸಿಕ ಅಸ್ಪಸ್ಥತೆಯನ್ನು ಅನುಭವಿಸುತ್ತಾರೆ. ಸೀತೆಯ ಮೇಲೆ ಉಂಟಾದ ಪರಿಣಾಮದ ಕಾರಣದಿಂದ ಅವಳು ಪ್ರತಿಭಟಿಸಲಾಗದ ಮೂಕ ಪಶುವಿನಂತೆ ದೈಹಿಕ ಅನಾರೋಗ್ಯದಿಂದ ಬಳಲುತ್ತಾಳೆ.

ಈ ಹಿರಿತಲೆಗಳ ಉಪದೇಶ ಮತ್ತು ಮಾರ್ಗದರ್ಶನದಲ್ಲಿ ಬೆಳೆದ ಎರಡನೇ ತಲೆಮಾರಿನ ಹೆಂಗಸರಿಗೆ, ತಾವು ಹುಟ್ಟಿದ ಮತ್ತು ಬೆಳೆದ ಪರಿಸರದ ಪ್ರಭಾವದ ಕಾರಣವಾಗಿ ಹಿರಿತಲೆಮಾರು ಸೂಚಿಸಿದ ಹಾದಿಯಲ್ಲಿ ಕ್ರಮಿಸುವುದಲ್ಲದೆ ಬೇರೆ ದಾರಿ ಕಂಡಿಲ್ಲ. ಹೆಣ್ಣಾಗಿ ಹುಟ್ಟಿದ ಕಾರಣದಿಂದ ತಾವು ಹಲವು ಕಷ್ಟಗಳಿಗೆ ಒಡ್ಡಿಕೊಳ್ಳಬೇಕಾಗಿದೆ ಎಂಬ ಅರಿವು ಇದ್ದರೂ ಕೂಡಾ, ಇದಕ್ಕೆ ಹೊರತಾದ ಬೇರೆ ದಾರಿಯನ್ನು ಕಂಡುಕೊಳ್ಳಲಾಗದ ಅಸಹಾಯಕ ಪರಿಸ್ಥಿತಿಯಲ್ಲಿ ಬದುಕುವುದರಿಂದ ಈ ಹೆಂಗಸರು ತಮ್ಮ ಪಾಲಿಗೆ ಬಂದ ಬದುಕಿನೊಂದಿಗೆ ರಾಜಿ ಮಾಡಿಕೊಳ್ಳುತ್ತಾರೆ. ಹೊಂದಾಣಿಕೆಯ ಈ ಬದುಕಿನಲ್ಲಿಯೇ ಸುಖವನ್ನರಸುವ ಈ ಸ್ತ್ರೀಯರಿಗೆ ಪ್ರತಿರೋಧವನ್ನು ತೋರಿಸುವುದಾಗಲೀ ಪ್ರತಿಭಟನೆಯನ್ನು ಕಾಣಿಸುವುದಾಗಲೀ ಸಾಧ್ಯವಾಗುವುದಿಲ್ಲ.

ಹೆಣ್ಣಾಗಿ ಹುಟ್ಟುವುದರಲ್ಲಿಯೇ ಕೊರತೆ ಇದೆ ಎಂಬ ಭಾವನೆ ಇವರಲ್ಲಿರುವುದರಿಂದ ಮತ್ತು ಅವರು ಇರುವ ಸ್ಥಿತಿಯಲ್ಲಿ ಇದಕ್ಕಿಂತ ಹೆಚ್ಚಿನದನ್ನು ಬಯಸುವುದು ಸಾಧ್ಯವಿಲ್ಲವಾದುದರಿಂದ ಅವರು ಮೂಕವಾಗಿ ತಮ್ಮ ನೋವನ್ನು ಅನುಭವಿಸುತ್ತಾರೆ. ತಮ್ಮ ಹಿರಿಯರಂತೆ ಪಾರಂಪರಿಕ ಮೌಲ್ಯಗಳಲ್ಲಿ ಶ್ರದ್ದೆ ಇಟ್ಟುಕೊಂಡು, ಧರ್ಮಕರ್ಮವೆಂಬ ನಂಬಿಕೆಯಿಂದ ತಮ್ಮ ಬದುಕಿನುದ್ದಕ್ಕೂ ಇತರರ ಸೇವೆಯಲ್ಲಿ ದಿನಕಳೆಯುವ, ಸ್ವಂತ ಆಸೆ, ಆಕಾಂಕ್ಷೆಗಳನ್ನು ವ್ಯಕ್ತಪಡಿಸಲೂ ಆಗದೆ ಮನೆ ಮತ್ತು ಮನೆಯವರ ಜವಾಬ್ದಾರಿಯಿಂದ ಹಗಲಿರುಳೂ ದುಡಿಯವ ಹೆಂಗಸರು ಇವರು. ತಮ್ಮ ಸ್ವಂತ ವ್ಯಕ್ತಿತ್ವವೆನ್ನುವುದು ಏನಿದ್ದರೂ, ಅದು ಅವರು ನಿರ್ವಹಿಸುವ ಸಾಮಾಜಿಕ ಪಾತ್ರದ ಮೂಲಕವೇ ವ್ಯಕ್ತಗೊಳ್ಳಬೇಕು. ಮತ್ತು ತಾನು ಬದುಕುವ ಪರಿಸರದ ಪ್ರಭಾವದಿಂದ ತನ್ನ ಮುಂದಿನ ಪೀಳಿಗೆಗೂ ಅದೇ ರೀತಿ ಪರಿಸರವನ್ನು ಕಲ್ಪಿಸುವ ಇಚ್ಛೆ ಇವರದಾಗಿರುತ್ತದೆ. ಈ ಇಚ್ಛೆ ಈ ಹೆಂಗಸರ ದಿನನಿತ್ಯ ವ್ಯವಹಾರದ ಮೂಲಕ ವ್ಯಕ್ತವಾಗುತ್ತಿರುತ್ತದೆ. ಆಚಾರವಿಚಾರಗಳಲ್ಲಿ ಶ್ರದ್ಧೆಯುಳ್ಳ ಸಾಂಪ್ರದಾಯಕ ಕುಟುಂಬಗಳು, ಕೂಡುಕುಟುಂಬಗಳು ಮುಂತಾದೆಡೆ ಈ ಮಾದರಿಯ ಸ್ತ್ರೀಯರು ಕಾಣಸಿಗುತ್ತಾರೆ. ಈ ಮಾದರಿಯ ಸ್ತ್ರೀ ವ್ಯಕ್ತಿತ್ವವನ್ನು ಕೆಲವು ಗುಣಲಕ್ಷಣಗಳ ಮೂಲಕ ವ್ಯಾಖ್ಯಾನಿಸುವುದರಿಂದ ಹೆಣ್ಣು ಎಂದರೆ ಹೀಗಿರುವಾಕೆ ಎಂಬ ನಿರ್ವಚನವು ಇಲ್ಲಿ ಪ್ರಧಾನವಾಗಿ ಗೋಚರಿಸುತ್ತದೆ. ತ್ರಿವೇಣಿ ಕಾದಂಬರಿಗಳಲ್ಲಿ ಬರುವ ಈ ಮಾದರಿಯ ಸ್ತ್ರೀಯರೆಂದರೆ:

ಹಿರಿಯ ತಲೆಮಾರಿನ: ನಂಜಕ್ಕ (ಕೀಲುಗೊಂಬೆ), ವೆಂಕಮ್ಮ (ದೂರದ ಬೆಟ್ಟ) ಪಾತಜ್ಜಿ (ಕಾಶಿಯಾತ್ರೆ) ಕನಕಳ ಅಜ್ಜಿ( ಮುಟ್ಟಿದ ಬಾಗಿಲು). ಎರಡನೆ ತಲೆಮಾರಿನ : ರಾಜಮ್ಮ (ಹಣ್ಣೆಲೆ ಚಿಗುರಿದಾಗ), ಭಾಗ್ಯಮ್ಮ (ಅವಳ ಮನೆ), ತಾಯಮ್ಮ (ಕಂಕಣ), ಕಮಲಮ್ಮ (ಅಪಸ್ವರ) ಸಂಕೇತಿವೆಂಕಮ್ಮ ಮತ್ತು ಅಲಮೇಲಮ್ಮ (ಮುಕ್ತಿ) ಸುಬ್ಬಿ (ಮೊದಲಹೆಜ್ಜೆ), ರತ್ನಮ್ಮ (ಕೀಲುಗೊಂಬೆ).

ಪರಂಪರೆಯನ್ನು ಕಟ್ಟೆಚ್ಚರದಿಂದ ಕಾಪಾಡುವ ಅಜ್ಜಿಯರು ಅದನ್ನು ಮುಂದುವರಿಸಲು ವಾಹಕವಾಗುವ ತಾಯಂದಿರು, ಮನೆಯ ಹಿರಿಯರ ಉಪದೇಶವನ್ನು ವಿಮರ್ಶೆಯಿಲ್ಲದೆ ಒಪ್ಪಿಕೊಳ್ಳುವ ಮಗಳಂದಿರು,

ಸೊಸೆಯಂದಿರನ್ನು ಉದಾಹರಿಸುತ್ತ: ಈ ಪರಂಪರೆಯು ಮುಂದುವರಿಯುತ್ತಿರುವುದನ್ನು ಮತ್ತು ಸ್ವತಃ ಹೆಣ್ಣಾದವರಿಂದಲೇ ಈ ಜೀವ ವಿರೋಧಿಭಾವಗಳಿಗೆ ಬೆಂಬಲ ಸಿಗುತ್ತಿರುವುದನ್ನು ತ್ರಿವೇಣಿ ಮನಗಾಣಿಸಲು ಪ್ರಯತ್ನಿಸುತ್ತಾರೆ. ಈ ಪರಂಪರೆಯ ವಿಪರೀತ ಪರಿಣಾಮವನ್ನು ತಿಳಿಸಲೆಂದೇ ಅವರ 'ದೂರದ ಬೆಟ್ಟ' ಮತ್ತು 'ಕೀಲುಗೊಂಬೆ' ಕಾದಂಬರಿಗಳು ರಚನೆಯಾಗಿವೆ. ಮುಂದಿನ ಪೀಳಿಗೆಯನ್ನು ತಮ್ಮ ಭಾವನಾತ್ಮಕ ಸಂಬಂಧದ ಮೂಲಕ ಕಟ್ಟುನಿಟ್ಟಾಗಿ ನಿಯಂತ್ರಿಸುವ ಕ್ರಮದ ಫಲವಾಗಿ ಭವಿಷ್ಯದ ಪೀಳಿಗೆಯು ಸಂದಿಗ್ಧ ಸ್ಥಿತಿಯಲ್ಲಿದೆ ಎನ್ನುವುದೂ ಇಲ್ಲಿ ಸ್ಪಷ್ಟವಾಗಿದೆ.

ರಾಜಮ್ಮ, ಸೀತಮ್ಮನಂತಹ ಹೆಂಗಸರು ತಮ್ಮ ಹೆಂಡತಿ ಸ್ಥಾನದ ಕಾರಣವಾಗಿಯೇ ತೃಪ್ತಿಗೊಳ್ಳಬೇಕಾಗಿದೆಯೇ ವಿನಹ, ವೈಯಕ್ತಿಕ ಬದುಕಿನಲ್ಲಿ ಅವರೆಂದೂ ಸುಖವನ್ನು ಕಂಡವರಲ್ಲ. ಜಿಪುಣ ಗಂಡಂದಿರನ್ನು ಕಟ್ಟಿಕೊಂಡು ತಮ್ಮ ಸಣ್ಣಪುಟ್ಟ ಆಸೆಗಳನ್ನು ಬಚ್ಚಿಟ್ಟು ಬಾಳುವ ಸ್ಥಿತಿ ಅವರದು. ಎರಡು ಹೊತ್ತಿನ ಊಟ, ವರ್ಷಕ್ಕೆರಡು ಸೀರೆ, ಇರಲು ಮನೆ, ಗಂಡ ಮತ್ತು ಮಕ್ಕಳಿಗಾಗಿ ಹಗಲಿರುಳು ದುಡಿಮೆ - ಈ ರೀತಿ ಬದುಕಿನಲ್ಲಿಯೇ ಅವರು ತೃಪ್ತರಾಗಬೇಕಾಗಿದೆ. ರಾಜಮ್ಮ, ಸೀತಮ್ಮನಂತಹವರಿಗೆ ತಮ್ಮ ವೈಯಕ್ತಿಕ ಸಾಮರ್ಥ್ಯದ ಅರಿವು ಬರುವುದು ಸಾದ್ಯವಿಲ್ಲ. ಪುರುಷಪರ ಜೀವನದಲ್ಲಿಯೇ ಅವರು ತೃಪ್ತರು.

ಶೇಷಯ್ಯನಂತಹ ವ್ಯಕ್ತಿಯೊಡನೆ ಮೂರು ದಶಕಗಳ ಕಾಲ 'ಸುಖ' ವಾಗಿ ನಗುನಗುತ್ತ ಕಾಲ ಕಳೆದಿರುವ ಸೀತಮ್ಮನನ್ನು ನೋಡಿದರೆ ಸ್ವತಃ ಸೊಸೆ ಕಲ್ಯಾಣಿಗೆ ಅಚ್ಚರಿಯಾಗುತ್ತದೆ. ಮೂರು ವರ್ಷದ ದಾಂಪತ್ಯದಲ್ಲಿ 'ಹೆಣ್ಣುಬಯಸುವುದೆಲ್ಲವನ್ನು' ಪಡೆದೆನೆಂದು ಕೊಂಡರೂ ಕಲ್ಯಾಣಿಯ ಮನಸ್ಸಿಗೆ ಶಾಂತಿ ಇಲ್ಲ. ಅಸಹನೆ ಇದೆ. ಶೇಷಯ್ಯ, ಅನಂತರಾಯರು ಹೆಂಡತಿಗೂ ಒಂದು ಮನಸ್ಸಿದೆ, ವ್ಯಕ್ತಿತ್ವವಿದೆ ಎಂದು ತಿಳಿದುಕೊಂಡವರೇ ಅಲ್ಲ.

ಶೇಷಯ್ಯನವರಿಗೆ ಮದುವೆಯಾಗಿ ಹೆಂಡತಿ ಮನೆಗೆ ಬಂದ ೩೭ ವರ್ಷಗಳಾಗಿದ್ದರೂ ಅವರಿಗೆ ಅಕೆಯಲ್ಲಿ ನಂಬಿಕೆ ಇರಲಿಲ್ಲ. ಮೂರು ಕಾಸಿನ ಸಾಮಾನು ತರುವ ಜವಾಬ್ದಾರಿಯನ್ನು ಆತ ಹೆಂಡತಿಗೆ ಒಪ್ಪಿಸಿರಲಿಲ್ಲ. ಅಕೆಯ ಬಟ್ಟೆಗೆಂದು ಅತ ಒಂದು ದಿನ ಮೂರುಕಾಸನ್ನು ಕೊಟ್ಟಿರಲಿಲ್ಲ. ಸೀತಮ್ಮನೇ ಯಾವಾಗಲಾದರೂ ಕಾಸು ಬೇಕಾಗಿದ್ದು ಹಠ ಹಿಡಿದು ಕೇಳಿದಾಗ ಶೇಷಯ್ಯನವರು ಉತ್ತರಿಸುತ್ತಿದ್ದರು.

'ವರ್ಷಕ್ಕೆರಡು ಸೀರೆ, ರವಿಕೆ ತೆಗೆದುಕೊಡುತ್ತೇನೆ. ಮನೆಗೆ ಬೇಕಾಗುವ ಸಾಮಾನುಗಳನ್ನೆಲ್ಲಾ ತಂದು ಹಾಕುತ್ತೇನೆ. ನಿನಗಿನ್ನೇನು ಖರ್ಚಿದೆ?[೩೫]'' (ಬಾನು ಬೆಳಗಿತು: ೫೫: ೧೯೯). ಒಬ್ಬನೆ ಮಗನ ಮದುವೆ ಸಂದರ್ಭದಲ್ಲಿಯೂ ಹೆಂಡತಿಗೆ ಸೀರೆ ತಂದುಕೊಡಲಿಲ್ಲ. ''ಮದುವೆ ಹುಡುಗಿ ಅವಳಿಗೆ ಸೀರೆ ತರಬೇಕಾದುದು ನ್ಯಾಯ. ನಿನಗ್ಯಾಕೆ ಸೀರೆ? ಇರೋ ಸೀರೇನೆ ಉಡು ಸಾಕು'' ಎಂದು ಜಬ್ಬರಿಸಿ ಹೇಳಿದ್ದರು[೩೬] '(ಅದೇ ಪುಟ: ೫೨) ಸೀತಮ್ಮನಿಗೆ ಗಂಡನ ವರ್ತನೆಯಿಂದ ನೋವಾಗದೆ ಇರಲಿಲ್ಲ - ''ತನ್ನ ಹಂಬಲ, ಆಸೆ, ಆಕಾಂಕ್ಷೆಗಳೆಲ್ಲ ವ್ಯರ್ಥವೆನಿಸಿದರೂ ಆಸೆ (ಸೀತಮ್ಮ) ಹಂಬಲಿಸುವುದನ್ನು ಬಿಟ್ಟಿರಲಿಲ್ಲ. ಆದರೂ ಗಂಡನಿಂದ ಪ್ರತಿಬಾರಿ ತುಳಿಯಲ್ಪಟ್ಟಾಗಲೂ ಅಕೆ ನೊಂದುಕೊಳ್ಳುತ್ತಿದ್ದರು[೩೭]'' (ಅದೇ ಪುಟ : ೭೨-೭೩). ರಾಜಮ್ಮನೂ ಇದೆ ಪರಿಸ್ಥಿತಿಯಲ್ಲಿ ಬದುಕುವ ಹೆಂಗಸು. ಸಂಪಾದನೆ ಚೆನ್ನಾಗಿದ್ದ ಕಾಲದಲ್ಲಿಯೂ ರಾಯರು ಹೆಂಡತಿಗೆ ಒಡವೆ, ಸೀರೆ ಕೊಟ್ಟವರಲ್ಲ.

ಒಬ್ಬಳೆ ಮಗಳ ಮದುವೆಯಲ್ಲಿಯೂ ತಮಗೆ ಬೇಕಾದ ಬಟ್ಟೆಗಳನ್ನು ತೆಗೆದರೇ ಹೊರತು ಬಾಯಿ ತಪ್ಪಿಯಾದರೂ ಹೆಂಡತಿಯನ್ನು ನಿನಗೊಂದು ಸೀರೆ ಬೇಕೆ ಎಂದು ಕೇಳಲಿಲ್ಲ. ಪ್ರತಿ ತಿಂಗಳು ಕೊಡುತ್ತಿದ್ದ ಎರಡು ರುಪಾಯಿಯನ್ನು, ಮಗಳ ಮದುವೆ ನಂತರ, ದುಂದು ಎಂಬ ಕಾರಣದಿಂದ ನಿಲ್ಲಿಸಿಬಿಟ್ಟಿದ್ದರು'

'ತಾನು ಗಂಡಸು, ಮನೆಯ ಯಜಮಾನ, ಹೆಣ್ಣು ತನ್ನೆಲ್ಲ ಮನೋಭಿಲಾಶೆಗಳನ್ನು ಪೂರೈಸುವ ಸಾಧನ ಎಂಬ ಗ್ರಹಿಕೆಯನ್ನಿಟ್ಟುಕೊಂಡು ಕೈಹಿಡಿದ ಹೆಂಡತಿಯನ್ನು ಸತತವಾಗಿ ಹಿಂಸೆಗೆ ಗುರಿಪಡಿಸಿದ ನರಸಿಂಹಯ್ಯನಿಂದಲೂ ಸೀತಮ್ಮ ಸುಖವಾಗಿರಲಿಲ್ಲ. ಅದರೆ ಹೆಣ್ಣಾಗಿ ತಾನು ಹೀಗೆ ಬಾಳಬೇಕಾದವಳು ಎಂಬ ಉಪದೇಶವನ್ನು ರಕ್ತಗತವಾಗಿಸಿಕೊಂಡ ಅವಳಿಗೆ ಪ್ರತಿಭಟಿಸುವುದು ಸಾಧ್ಯವಾಗುವುದಿಲ್ಲ. ಅಲ್ಲದೆ.

'ತನ್ನ ಅಶ್ರಯ, ತಾನು ನೀಡಿದ ಆಹಾರವನ್ನು ಮಹಾಪ್ರಸಾದವೆಂದು ಕೈಯೊಡ್ಡಿ ಸ್ವೀಕರಿಸಿ ತಾನು ಹೇಳಿದಂತೆ ಕೇಳಿಕೊಂಡು ಬಿದ್ದಿರಬೇಕಾದ ಪ್ರಾಣಿ ಹೆಂಡತಿ ಎಂಬ ಮನೋಭಾವನೆಯಿರುವ ಗಂಡನಿಂದ ಸೀತೆಗೆ ಸ್ವಲ್ಪವೂ ಸುಖವಿರಲಿಲ್ಲ.ಅದರೆ ಅವೆಲ್ಲಕ್ಕೂ ಮೀರಿದ ಸುಖ ತನ್ನ ಪಾಲಿಗಿಲ್ಲವೆಂದು ಅವಳಿಗೆ ತಿಳಿದಿತ್ತು[೩೮]' (ಕೀಲುಗೊಂಬೆ: ೬೩) ಹೆಂಡತಿ ತನ್ನಂತೆ ರಕ್ತಮಾಂಸವುಳ್ಳ ಮನುಷ್ಯವ್ಯಕ್ತಿ ಎಂಬುದನ್ನು ನರಸಿಂಹಯ್ಯ ತಿಳಿದೇ ಇರಲಿಲ್ಲ ಇಂಥ ಗಂಡನನ್ನು ಕಟ್ಟಿಕೊಂಡ ಸೀತೆಗೆ 'ಪತಿಯೇ ಪ್ರತ್ಯಕ್ಷದೈವ' ವೆಂಬ ಭಾವನೆಯಿಂದ ಕಳಚಿಕೊಳ್ಳುವುದು ಸಾಧ್ಯವೂ ಇಲ್ಲ.

ಸೀತಮ್ಮನ ದುರಂತ ಬಾಳುವೆಗೆ ಅಪ್ರತ್ಯಕ್ಷವಾಗಿ ಕಾರಣವಾದ ಅವಳ ತಾಯಿ, ಅಜ್ಜಿಯರು ನೊಂದುಕೊಳ್ಳುವುದು ಬಿಟ್ಟರೆ, ಬೇರೇನನ್ನು ಸೂಚಿಸಲು ಅಸಮರ್ಥವಾಗಿರುವ ವ್ಯಕ್ತಿತ್ವದವರಾಗಿದ್ದಾರೆ. ಹೀಗೆ ಪಾರಂಪರಿಕ ಸ್ತ್ರೀ ಮಾದರಿಯನ್ನು ಅಂತರ್ಗತಗೊಳಿಸಿದ ಸ್ತ್ರೀ ವ್ಯಕ್ತಿತ್ವವು ಜೀವ ವಿರೋಧಿಭಾವಗಳಿಗೆ ಹೇಗೆ ಬಲಿಯಾಗುತ್ತದೆ, ಎಂಬುದನ್ನು ಸೀತೆಯ ಜೀವನದ ಮೂಲಕ ವಿವರಿಸಲಾಗಿದೆ. ಬದುಕಿನಿಂದ ಏನನ್ನೂ ನಿರೀಕ್ಷಿಸದೆ ಪಾಲಿಗೆ ಬಂದ ಹೆಂಡತಿ, ತಾಯಿಸ್ಥಾನದಲ್ಲಿಯೇ ತೃಪ್ತಳಾಗಿ ಸುಖವಾಗಿ ಬಾಳಿದ ಅಂಬಿಕ ಒಂದು ರೀತಿಯಲ್ಲಿ ಬದುಕಿನೊಡನೆ ರಾಜಿ ಮಾಡಿಕೊಂಡವಳು. 'ನನ್ನ ಗಂಡ, ನನ್ನ ಮಕ್ಕಳ ಬದುಕಿನಲ್ಲಿ ನನ್ನ ಬದುಕಿನ ಸಾರ್ಥಕತೆಯನ್ನು ನಾನು ಕಂಡುಕೊಂಡಿದ್ದೇನೆ. ಒಳ್ಳೆಯ ಪತ್ನಿಯಾಗಿ, ಒಳ್ಳೆಯ ತಾಯಾಗಿರುವುದರಲ್ಲಿ ನನಗೆ ತುಂಬಾ ಸಂತೋಷವಿದೆ[೩೯]' (ಮುಕ್ತಿ: ೧೧೮: ೧೯೯೪)

ಅಂಬಿಕಾಳ ಸಾಮಾಜಿಕ ಪಾತ್ರ ನಿರ್ವಹಣೆಯಲ್ಲಿ ಸುಖವನ್ನು ಕಾಣುವ ಪ್ರವೃತ್ತಿಯನ್ನು ಇನ್ನುಳಿದ ಕೆಲವು ಸ್ತ್ರೀಪಾತ್ರಗಳ 'ತಾಯ್ತನದ ಸುಖ' ದಲ್ಲಿಯೂ ಲೇಖಕಿ ಗುರುತಿಸಿಕೊಳ್ಳುತ್ತಾರೆ. ಮಗಳ ಭವಿಷ್ಯಕ್ಕಾಗಿ ತನ್ನ ಬದುಕನ್ನು ಬಲಿತೆಗೆದಕೊಂಡ ತ್ಯಾಗಮಯಿ 'ರಮಾ' (ಹೂವುಹಣ್ಣು) ಕೃಷ್ಣಪ್ರಸಾದನ ತಾಯಿಲ್ಲದ ತಬ್ಬಲಿ ಮಗವಿನಲ್ಲಿ ಅಕ್ಕರೆ, ಪ್ರೀತಿ ತೋರುವ ಮಾಲತಿ (ಹಣ್ಣೆಲೆ ಚಿಗುರಿದಾಗ), ಮಕ್ಕಳ ಪ್ರೀತಿ-ಸಾಂಗತ್ಯಕ್ಕಾಗಿ ಹಗಲಿರುಳು ಹಂಬಲಿಸಿದ ಕಾವೇರಿ (ಶರಪಂಜರ) ಮಗಳ ಅಗಲಿಕೆಯಿಂದ ಹುಚ್ಚಿಯಾದ ಸಾವಿತ್ರಮ್ಮ (ಬೆಕ್ಕಿನ ಕಣ್ಣು) ತಾಯಿಯ ಸುಖ, ಸಾನಿಧ್ಯಗಳು ಎಷ್ಟು ಅಗತ್ಯ ಹೆಣ್ಣಿನ ಬಾಳಿಗೆ ಎನ್ನುವುದನ್ನು ನಿರೂಪಿಸುವ ಅನೇಕ ಕಾದಂಬರಿಗಳು ತಾಯಿ ಆಸರೆಯಿಲ್ಲದ ಮಕ್ಕಳು ಅನುಭವಿಸುವ ಕಷ್ಟಗಳನ್ನು ವಿವರಿಸಿವೆ.

ಕುಸುಮ(ಬೆಕ್ಕಿನಕಣ್ಣು), ಶ್ಯಾಮಲೆ (ಕಾಶಿಯಾತ್ರೆ), ಭವಾನಿ (ಅವಳಮಗಳು) ಗೀತಾ (ಹೃದಯಗೀತ) ಮಿರಾ (ಅಪಸ್ವರ) ಮೊದಲಾದವರು ತಾಯಿಯಿಲ್ಲದ ಕಾರಣವಾಗಿಯೇ ನೋವನ್ನು ಕಷ್ಟವನ್ನು ಅನುಭವಿಸುತ್ತಾರೆ. ಪ್ರೀತಿ, ಮಮತೆ, ತ್ಯಾಗಗಳ, ಸಾಕಾರವಾಗಿರುವ ಹೆಣ್ಣಿನ ವ್ಯಕ್ತಿತ್ವವನ್ನು ಚಿತ್ರಿಸಿದರೂ ತ್ರಿವೇಣಿ ಕಾದಂಬರಿಗಳಲ್ಲಿ ಕೆಟ್ಟ ತಾಯಿಯೂ ಇದ್ದಾಳೆ.

ಕುಸುಮಾಳ ಮಲತಾಯಿ ಪದ್ಮ(ಬೆಕ್ಕಿನಕಣ್ಣು) ಮತ್ತು ಶ್ಯಾಮಲೆಯ ಮಲತಾಯಿ ಸುಶೀಲಮ್ಮ (ಕಾಶಿಯಾತ್ರೆ), ಹೆತ್ತಮಗುವನ್ನು ಕೈಯಾರೆ ಕೊಂದ ಸುಬ್ಬಿ ಮಗಳು (ಮೊದಲ ಹೆಜ್ಜೆ) ತಾಯ್ತನದಲ್ಲಿ ಕೆಟ್ಟದನ್ನು ತೋರಿಸಿದ ನಿದರ್ಶನಗಳು. ತಾಯ್ತನದ ಹಂಬಲಿಕೆ ಫಲಿಸದೆ ಅಕಾಲ ಮರಣ ಹೊಂದಿದ ಶಾಂತಾ (ತಾವರೆಕೊಳ) ರಮೇಶನನ್ನು, ತನ್ನ ಮಗುವಿನಂತೆ ನೋಡಿಕೊಂಡವಳು.

**ವಿಮೋಚಿತ ಸ್ತ್ರೀ ಮಾದರಿಗಳು**

ತಾವು ಹುಟ್ಟಿ ಬೆಳೆದ ಸಂಪ್ರದಾಯಸ್ಥ ವಾತಾವರಣ, ತಮ್ಮ ಸಂಪರ್ಕಕ್ಕೆ ಬಂದಿರುವ ಹೊರಜಗತ್ತಿನಲ್ಲಿ ಆಧುನಿಕ ವಾತಾವರಣ - ಈ ರೀತಿ ಒಳ ಮತ್ತು ಹೊರ ಪರಿಸರದ ಪ್ರಭಾವದಿಂದ ವಿವಿಧ ರೀತಿಯ ಪ್ರತಿಕೂಲ ಸ್ಥಿತಿಯನ್ನು ಎದುರಿಸುವ ಅನೇಕ ಸ್ತ್ರೀಯರನ್ನು ತ್ರಿವೇಣಿ ಕಾದಂಬರಿಗಳಲ್ಲಿ ಕಾಣುತ್ತೇವೆ.

ಭವಿಷ್ಯವನ್ನು ನಿರ್ಧರಿಸಬೇಕಾಗಿರುವ ನಿಶ್ಚಿತ ಘಟ್ಟವೊಂದರಲ್ಲಿ ನಿಂತು ಬದುಕನ್ನು ಎದುರಿಸುವ ಸಿದ್ಧತೆಯಲ್ಲಿ ಈ ಹೆಣ್ಣುಗಳು ಇದ್ದಾರೆ. ಕಾದಂಬರಿಯಲ್ಲಿ ಕಾಣಿಸಿಕೊಳ್ಳುವ ಮೂರನೇ ತಲೆಮಾರಿಗೆ ಸೇರುವ ಈ ಸ್ತ್ರೀಯರು ಯುವತಿಯರು. ಶಿಕ್ಷಣದ ಅವಕಾಶ, ಉದ್ಯೋಗಕ್ಕೆ ಸೇರುವ ಅವಕಾಶ, ಸಮವಯಸ್ಕ ಬಳಗದ ಸ್ನೇಹಿತೆಯರ ಸಹವಾಸ, ಸಂಗಾತಿ ಆಯ್ಕೆ ಸ್ವಾತಂತ್ರ್ಯ - ಹಲವು ಹೊಸ ವಿಚಾರಗಳನ್ನು ಸ್ವಾಗತಿಸುವ ಸ್ವಾತಂತ್ರ್ಯ ಇವರಿಗೆ ಲಭಿಸಿದೆ. ಈ ಸ್ತ್ರಿಯರಿಗೆ ದೊರೆತಿರುವ ಅವಕಾಶಗಳೆಂದರೆ - ೧. ಸ್ವಾತಂತ್ರ್ಯ ಅಥವಾ ಮುಕ್ತತೆ , ೨.ಸಮಾನ ಮನೋಧರ್ಮಿಯರೊಡನೆ ಒಡನಾಟ, ೩. ಆರ್ಥಿಕ ಸ್ವಾವಲಂಬನ ಮತ್ತು ೪. ಇತರರ ಬೆಂಬಲ. ಈ ಮಾದರಿಯಲ್ಲಿ ಎರಡು ಗುಂಪುಗಳಿವೆ.

ವಿದ್ಯೆ ಕಲಿತು, ಮದುವೆಯಾಗಿ, ಸುಖನೆಮ್ಮದಿಯಲ್ಲಿ ಬದುಕನ್ನು ಸ್ವೀಕರಿಸುವ ಗುಂಪು, ಇವರದು ಹೊಂದಾಣಿಕೆಯ ಬದುಕು. ಬದುಕನ್ನು ಸುಗಮವಾಗಿ ಕಳೆಯುವುದಷ್ಟೇ ಇವರಿಗೆ ಬೇಕಾಗಿರುವುದು. ಬದುಕಿನಿಂದ ಹೆಚ್ಚಿನ ನಿರೀಕ್ಷೆಯನ್ನು ಇಟ್ಟುಕೊಳ್ಳ, ಸುಖ-ದುಃಖವನ್ನು ಸಮ ಸ್ಥಿತಿಯಲ್ಲಿ ಸ್ವೀಕರಿಸುವ ಮನೋಭಾವ ಈ ಹೆಣ್ಣುಗಳದು.

ಮದುವೆಗೆ ಎರಡನೇ ಸ್ಥಾನವಿತ್ತು, ತನ್ನ ಜೀವನದಲ್ಲಿ ಏನನ್ನಾದರೂ ಸಾಧಿಸಬೇಕು. ಈ ಸಾಧನೆ ಮಹತ್ವಪೂರ್ಣವಾಗಿರುವುದು ಆವಶ್ಯಕವಾಗಿರದೆ, ತನ್ನ ಪಾಡಿಗೆ, ತನಗೆ ಇಷ್ಟ ಬಂದ ರೀತಿಯಲ್ಲಿ ಬದುಕುವ ಆಯ್ಕೆಯಾದರೂ ತನಗಿರಲಿ ಎಂಬ ಅಪೇಕ್ಷೆಯಿಂದ ಇರುವ ಗುಂಪು ಎರಡನೇಯದು.

ಎರಡನೇ ಗುಂಪಿನಲ್ಲಿ ವಿಮೋಚನಾ ಕಲ್ಪನೆಯು ತೀವ್ರವಾಗಿದ್ದು ಪ್ರತಿಭಟನೆ, ಪ್ರತಿರೋಧಗಳು ಕಾಣಿಸಿಕೊಂಡಿವೆ. ಸ್ವಾತಂತ್ರ್ಯದ ಅಭಿಲಾಶೆ ನಿಚ್ಚಳವಾಗಿ ಇದೆ. ವೈಯುಕ್ತಿಕ ಸ್ವಾತಂತ್ರ್ಯ ವಿಮೋಚನಾ ದಾರಿ ಎಂಬ ಆಶಯ ಇಲ್ಲಿ ಪ್ರಧಾನವಾಗಿದೆ. ತ್ರಿವೇಣಿಯವರ ಕಂಕಣ - ಮುಕ್ತಿ ಕಾದಂಬರಿಗಳಲ್ಲಿಯು ಯುವತಿಯರು ಈ ಎರಡೂ ಗುಂಪಿನ ಅತ್ಯುತ್ತಮ ಉದಾಹರಣೆಗಳಾಗಿವೆ.

ವಿಭಿನ್ನ ಮನೋಭಾವದ ಆದರೆ ಒಂದೇ ಪರಿಸರ ಮತ್ತು ಒಂದೇ ರೀತಿಯ ಶಿಕ್ಷಣವನ್ನು ಪಡೆದ ಆರು ಜನ ಯುವತಿಯರು ಆಯ್ಕೆ ಮಾಡಿದ ಜೀವನದ ಭಿನ್ನತೆಯಲ್ಲಿ, ಕುಟುಂಬ, ಸಮಾಜ, ವೈಯಕ್ತಿಕ ಸಂಬಂಧಗಳೊಡನೆ, ಹೆಣ್ಣಿನ ಮಾನಸಿಕ ಸಿದ್ಧತೆಯೂ ಎಷ್ಟು ಮುಖ್ಯವಾಗಿದೆ, ಎನ್ನುವುದನ್ನು ಇಲ್ಲಿ ಮನಗಾಣಿಸಲಾಗಿದೆ.

ಪ್ರೇಮದ ಕುರಿತು ಮತ್ತು ಗಂಡಸರ ಕುರಿತು ಅಪಕ್ವಭಾವನೆ, ಅತಿಭಾವುಕತೆ, ಇಟ್ಟುಕೊಂಡ ಕಸ್ತೂರಿ ತನ್ನ ಭವಿಷ್ಯದ ಕುರಿತಾಗಲೀ ವೈಯಕ್ತಿಕತೆಯ ಕುರಿತಾಗಲೀ ಯೋಚಿಸದೆ ಗಂಡು ದ್ರೋಹ ಬಗೆದುದರ ತಿಳಿವು ಮೂಡುತ್ತಲೇ ಸಾವಿಗೆ ಬಲಿಯಾಗುತ್ತಾಳೆ.

ರಮಾ ಬಡತನ ಮತ್ತು ತಂದೆ ಇಲ್ಲದ ಕಾರಣಗಳಿಗಾಗಿ ಪೋಷಕ ಸ್ಥಾನದಲ್ಲಿ ನಿಂತು ತನ್ನ ತಾಯಿ, ತಂಗಿ ತಮ್ಮಂದಿರನ್ನು ನೋಡಿಕೊಳ್ಳುತ್ತಾಳೆ. ಆದರೆ ರಮೆಯದು ಯಾವಾಗಲೂ ನೆಮ್ಮದಿ ಬದುಕಿನ ನಿರೀಕ್ಷೆ. ಉದ್ಯೋಗದಲ್ಲಿ ಸ್ಥಿರತೆಯನ್ನು ಪಡೆಯುವುದಾಗಲೀ, ತನ್ನ ಪ್ರೇಮವನ್ನು ಸಫಲಗೊಳಿಸುವಲ್ಲಿ ಹೋರಾಡುವುದಾಗಲೀ ಅವಳಿಗೆ ಸಾಧ್ಯವಾಗುವುದಿಲ್ಲ. ಕುರುಡು ವ್ಯಕ್ತಿಯನ್ನು ಮದುವೆಯಾದರೂ, ತನ್ನ ಸಂಸಾರವನ್ನು ಜವಾಬ್ದಾರಿಯುತವಾಗಿ ನಡೆಸಿದ ತೃಪ್ತಿಯೇ ಅವಳಿಗೆ ಮುಖ್ಯವಾಗುತ್ತದೆ. ರಮಾಳಂತೆ ಅಂಬಿಕಾಳೂ ಗೃಹಿಣಿಪಟ್ಟದಲ್ಲಿ ತೃಪ್ತಳು. ಜೀವನವನ್ನು ಅದು ಇರುವ ಹಾಗೆ ಸ್ವೀಕರಿಸುವ ರಮಾ, ಅಂಬಿಕಾ ಅಲ್ಪತೃಪ್ತರು.

ವೇದವಲ್ಲಿ ಮದುವೆಗೆ ಆತುರಪಟ್ಟು, ಮದುವೆಯಲ್ಲಿ ಸುಖಕಾಣದೆ ಎರಡು ಹೊತ್ತಿನ ಊಟಕ್ಕೆ ತೊಂದರೆಯಾಗದ ಜೀವನವೇ ನಿಜವಾದ ಜೀವನ ಎಂಬ ನಂಬಿಕೆಯಲ್ಲಿ ಸ್ವಾವಲಂಬಿಯಾಗುತ್ತಾಳೆ. ಮದುವೆ ವ್ಯವಸ್ಥೆಯಲ್ಲಿಯೇ ನಂಬಿಕೆ ಕಳೆದುಕೊಂಡ ಸುಶೀಲಾ ಯಾವುದೇ ಸಂಪ್ರದಾಯ, ಪದ್ಧತಿಗಳ, ಪರಿಧಿಗೆ ಒಳಗಾಗದಿರುವ ಸ್ವಚ್ಛಂದ ಜೀವನದ ಆಯ್ಕೆ ಮಾಡುತ್ತಾಳೆ.

ಅಮೃತಾ ಒಬ್ಬಳೆ ತನ್ನ ಬದುಕಿನ ವೈಯಕ್ತಿಕವಾದ, ವೈರುದ್ಯಗಳ ನಡುವೆಯೂ ತನ್ನ ಮನಸ್ಥಿತಿಯಷ್ಟೇ ನಿಧಾನವಾಗಿ ಆದರೆ ನಿಖರವಾದ ರೀತಿಯಲ್ಲಿ ಬದುಕನ್ನು ಎದುರಿಸುತ್ತಾಳೆ. ಅಲ್ಲಿ ಅವಳು ಪಡೆಯುವ ಗೆಲವು ಅವಳ ವೈಯಕ್ತಿಕ ಗೆಲವು ಆಗಿ ವಿಮೋಚನೆಯ ಎಲ್ಲ ಒಳಲಕ್ಷಣಗಳನ್ನು ಅಂತರ್ಗತಗೊಳಿಸಿಕೊಂಡಿದೆ. ಅಮೃತಾ ಪಾತ್ರವು ಉಳಿದೆಲ್ಲಾ ಪಾತ್ರಗಳ ಬದುಕಿನ ನೆಲಗಟ್ಟಿನ ಮೇಲೆ ನಿಲ್ಲಿಸಿದ ಒಂದು ಸಶಕ್ತ ಪಾತ್ರವಾಗಿದೆ. ವಿದ್ಯೆ,ಬುದ್ಧಿ, ನಗರ ಪ್ರದೇಶದ ಅವಕಾಶಗಳು, ಇಲ್ಲಿರುವ ಯುವತಿಯರಿಗೆ ತಮ್ಮ ವ್ಯಕ್ತಿತ್ವದ ಪರಿಪೂರ್ಣತೆಯನ್ನು ಪಡೆಯುವ ಅವಕಾಶಗಳನ್ನು ಕಲ್ಪಿಸಿದರೂ 'ಸುಖಜೀವನ'ದ ಪರಿಕಲ್ಪನೆಯು ಪ್ರತಿಯೊಬ್ಬ ಹೆಣ್ಣಿನಲ್ಲಿಯೂ ಇಲ್ಲಿ ಭಿನ್ನ ಭಿನ್ನವಾಗಿ ಮೂಡಿಬಂದುದರ ಫಲವಾಗಿ ಅವರ ಜೀವನದ ಆಯ್ಕೆಯೂ ಭಿನ್ನಸ್ವರೂಪವನ್ನು ಪಡೆಯುತ್ತದೆ.

ಗಂಡ, ಮಕ್ಕಳು ಮತ್ತು ಆರ್ಥಿಕ ಸುಭದ್ರತೆಯಲ್ಲಿ ಸುಖವನ್ನು ಕಾಣುವ ಅಂಬಿಕಾ ಸಂತೃಪ್ತಳು. ಕುರುಡು ಗಂಡನನ್ನು ಪಡೆದು, ತನ್ನಮೇಲಿದ್ದ ಜವಾಬ್ದಾರಿಗಳನ್ನು ಯಶಸ್ವಿಯಾಗಿ ನೆರವೇರಿಸಿ, ಗಂಡುಮಗುವಿನ ತಾಯಿಯಾಗಿ ತಾನು ಸುಖವಾಗಿದ್ದೇನೆ, ಎಂದು ತಿಳಿದ ರಮಾ ಸಂತೃಪ್ತಳು. ಗೃಹಿಣಿ ಜೀವನದಲ್ಲಿರುವ ಸುಭದ್ರತೆಯಲ್ಲಿಯೇ ಜೀವನದ ಸಾರ್ಥಕತೆಯನ್ನು ಪಡೆಯುವ ಪಾತ್ರಗಳಿವು. ಬದುಕಿನೊಡನೆ ಹೊಂದಾಣಿಕೆ ಮಾಡಿಕೊಂಡಿರುವ ಸ್ತ್ರೀಯರು.

ತನ್ನ ಪ್ರೇಮಿಯನ್ನೇ ವಿವಾಹವಾಗಿದ್ದರೂ, ಸಂಸಾರದ ತೊಂದರೆಗಳಿಗೆ ಸಿಕ್ಕಿಕೊಂಡ ವೇದವಲ್ಲಿ, ಉದ್ಯೋಗಕ್ಕೆ ಸೇರಿಕೊಳ್ಳುವುದರ ಮೂಲಕ ಆರ್ಥಿಕವಾಗಿ ಚೇತರಿಸಿಕೊಂಡ ಮೇಲೆ ತಾನು ನೆಮ್ಮದಿಯಾಗಿದ್ದೇನೆ ಎಂದು ತಿಳಿಯುತ್ತಾಳೆ. ಆದರೆ ಮದುವೆಯಿಲ್ಲದೆ ಅಸಾಂಪ್ರದಾಯಿಕ ವಿಧಾನದ ಬದುಕಿನ ಆಯ್ಕೆ ಮಾಡಿದ ಸುಶೀಲಾ ತಾನು ಈ ರೀತಿಯ ಜೀವನದಿಂದ ಅವನತಿ ಹೊಂದುತ್ತಿದ್ದೇನೆ ಎಂದುಕೊಳ್ಳುತ್ತಾಳೆ. ಕಾದಂಬರಿ ಸುಶೀಲಾಳ ಜೀವನದ ವಿಧಾನವನ್ನು ಇಲ್ಲಿ ಸಂಪೂರ್ಣವಾಗಿ ತಿರಸ್ಕರಿಸಿದೆ. ಅಮೃತಾ ತನ್ನ ಗೆಳತಿಯರು ಅನುಭವಿಸಿದ ಕಷ್ಟಗಳ ಕಗ್ಗಂಟನ್ನು ತಾನೂ ಎದುರಿಸುತ್ತ ನಿಧಾನವಾಗಿ ತನ್ನ ವ್ಯಕ್ತಿತ್ವವನ್ನು ವಿಕಾಸಗೊಳಿಸುತ್ತಾಳೆ.

ಹುಟ್ಟಿನಿಂದ ತಾನು ಬೆಳೆಯುವವರೆಗೆ ಇದ್ದ ಸಾಂಪ್ರದಾಯಿಕ ಕುಟುಂಬದ ವಾತಾವರಣವನ್ನು ಬಿಟ್ಟು ಮುಂಬೈ ಶಹರವನ್ನು ಸೇರಿದಾಗಲೆ ಅವಳಿಗೆ ನಿಜವಾದ ಬಿಡುಗಡೆ, ಸ್ವಾತಂತ್ರ್ಯ ಸಿಗುತ್ತದೆ. ಇದಕ್ಕೆ ಮುನ್ನ ನಡೆದ ಮದುವೆಯ ವಿಫಲ ಯತ್ನಗಳು. ಕೌಟುಂಬಿಕ ಕಲಹಗಳು, ಅವಳ ತಂದೆತಾಯಿ ಅವಳ ಕುರಿತು ವ್ಯಥೆಪಡುವ ಸನ್ನಿವೇಶಗಳು - ಇವುಗಳಿಂದ ದೂರವಾಗಿ ನಗರ ಪ್ರದೇಶದ ಅಪರಿಚಿತ ವಾತಾವರಣದಲ್ಲಿ ಉದ್ಯೋಗ, ಹೊಸ ಪರಿಚಯಗಳು, ಅವಳ ಬಾಹ್ಯರೂಪಕ್ಕೆ ಸಿಕ್ಕಿದ ಕಡಿಮೆ ಗಮನ - ಇವುಗಳಿಂದ ಅವಳಿಗೆ ಆಂತರಿಕವಾಗಿ ಬೆಳೆಯುವ ಅವಕಾಶ ಸಿಗುತ್ತದೆ. ಎರಡನೇ ವರನನ್ನು ಮೊದಲು ತಿರಸ್ಕರಿಸಿದ ಅಮೃತ ಕೊನೆಗೆ ತನ್ನ ಸಂಗಾತಿಯ ಆಯ್ಕೆಯಲ್ಲಿ ಬುದ್ಧಿಪೂರ್ವಕವಾಗಿಯೇ ವರ್ತಿಸುತ್ತಾಳೆ. ತನ್ನ ಭವಿಷ್ಯದ ಜೀವನವನ್ನು ರೂಪಿಸಿಕೊಳ್ಳುವುದರಲ್ಲಿ ಸಮರ್ಥಳೂ ಆಗುತ್ತಾಳೆ.

ಅಮೃತಾಳಂತೆ ಸುನಂದೆ ಮತ್ತು ಮಾಲತಿಯರು ಕೂಡಾ ತಾವಿದ್ದ ಪರಿಸರದೊಡನೆ ಭಾವನಾತ್ಮಕ ಸಂಬಂಧಗಳನ್ನು ಕಡಿದುಕೊಂಡಾಗಲೇ ಅವರಿಗೆ ಭವಿಷ್ಯ ಕುರಿತು ನಿರ್ಧಾರ ತಳೆಯುವುದು ಸಾಧ್ಯವಾಗುತ್ತದೆ. ಅಮೃತಾಳಿಗೆ ತಮ್ಮ ವಿಠಲನ ಬೆಂಬಲವಿದ್ದರೆ, ಮಾಲತಿಗೆ ಅಣ್ಣಂದಿರ ಬೆಂಬಲ, ಪ್ರೋತ್ಸಾಹಗಳು ದೊರಕಿದ್ದವು, ಗಂಡ ಸತ್ತ ಬಳಿಕ ಮಾಲತಿ ತನ್ನನ್ನು ತಾನು ಅಸಹಾಯಕಳೆಂಬ ಭಾವನೆಯ ಕಾರಣವಾಗಿ ನೊಂದುಕೊಂಡಿರುವಾಗ ಶಿಕ್ಷಣ ಮುಂದುವರಿಸುವ ಸಲಹೆ ಬರುತ್ತದೆ. ಮಾಲತಿ ತಂದೆ ಇದಕ್ಕೆ ಸಮ್ಮತಿಸಿರುವುದಿಲ್ಲ. ಮಾಲತಿಗೆ ತಂದೆಯನ್ನು ವಿರೋಧಿಸಿ ನಡೆಯುವ ಧೈರ್ಯವಿರುವುದಿಲ್ಲ. ಆಗ ಅವಳ ಅಣ್ಣ ಅವಳಿಗೆ ಬೆಂಬಲ ಸೂಚಿಸುತ್ತಾನೆ.

"ಮುಂದಿನ ವಿಷಯ ನೀನು ಯೋಚಿಸಬೇಕು. ನಿನ್ನ ವಿಷಯಕ್ಕೆ ಯೋಚಿಸುವುದನ್ನು ಕೊಂಚ ಕಲಿ. ಎಲ್ಲಾ ವಿಷಯವನ್ನೂ 'ಅಪ್ಪ ಹೇಳಿದ ಹಾಗೆ ಮಾಡುತ್ತೇನೆ' ಎನ್ನಬೇಡ. ನಿನಗೆ ಯಾವುದು ಒಳ್ಳೇದು ಎನ್ನುವುದನ್ನು ನೀನು ನಿರ್ಧರಿಸು ನಿನ್ನ ವಿಷಯವಾಗಿ ಇತರರು ನಿರ್ಧರಿಸುವುದು ಎಂದಿಗೂ ಸರಿಯಲ್ಲ[೬೦]"(ಹಣ್ಣೆಲೆ ಚಿಗುರಿದಾಗ:೧೧೧:೧೯೯)

ಕಾಲೇಜು ಸೇರಿ, ನಾಲ್ಕು ಜನರೊಡನೆ ಕಲೆತು ಓಡಾಡಿದ ನಂತರ ಮಾಲತಿಗೆ ಆತ್ಮಾಭಿಮಾನ, ಆತ್ಮವಿಶ್ವಾಸದ ಬೆಳಕಿನಲ್ಲಿ ತನ್ನನ್ನು ತಾನು ಕಾಣುವಂತಾಯಿತು. ಸುತ್ತಲಿದ್ದವರ ಬೆಂಬಲ, ಸಹಕಾರವಿದ್ದರೂ ವೈಯಕ್ತಿಕವಾಗಿ ಮನಸ್ಸು ಸಿದ್ಧವಾಗಿರದಿದ್ದರೆ ಯಾವ ನಿರ್ಧಾರಗಳೂ ಫಲಿಸದು ಎನ್ನುವುದನ್ನು ಸುನಂದಾಳ ಮನಃಸ್ಥಿತಿ ತೋರಿಸುತ್ತದೆ. ಸಂಪ್ರದಾಯವನ್ನು ಮೀರಲು ವೈಜ್ಞಾನಿಕ ನೆರವನ್ನು ಪಡೆದು ತನ್ನ ಗುರಿಯನ್ನು ಸಾಧಿಸುತ್ತಾಳೆ ಸುನಂದೆ. ತನ್ನ ವಿದ್ಯೆ ಮತ್ತು ಆತ್ಮವಿಶ್ವಾಸ ನೆರವಿನಿಂದ ಯಜಮಾನ ಸಂಸ್ಕೃತಿಯ ಪ್ರತಿರೂಪದಂತಿದ್ದ ತನ್ನ ತಂದೆಯ ಮನಃ ಪರಿವರ್ತನೆಯನ್ನು ಸ್ವತಃ ಕೈಗೊಳ್ಳುವುದರ ಮೂಲಕ ಮಾಲತಿ ಅದನ್ನು ಸಾಧಿಸುತ್ತಾಳೆ. ಅಮೃತ, ಮಾಲತಿ, ಸುನಂದ, ಸ್ವತಂತ್ರ ವ್ಯಕ್ತಿತ್ವದ ಹೆಣ್ಣುಗಳು; ಪ್ರತಿರೋಧಗಳ ನಡುವೆಯು ತಮ್ಮನ್ನು ತಾವು ಸ್ವತಂತ್ರಗೊಳಿಸಿದ ವಿಮೋಚಿತೆಯರು.

ಸ್ತ್ರೀ ಪುರುಷ ಸಮಾನತೆಯ ವಿಚಾರಗಳು ಕಲ್ಯಾಣಿ, ಭಾರತಿಯರ ನಡೆ-ನುಡಿಗಳಲ್ಲಿ ಪದೇ ಪದೇ ಕಾಣಿಸಿಕೊಂಡಿದೆ. ಇಂದಿರೆಯ ಆತ್ಮಾಭಿಮಾನ, ಮೀರಾಳ ವೈದ್ಯಕೀಯ ಶಿಕ್ಷಣದ ಹಂಬಲ, ಕಲ್ಯಾಣಿಯ ಸ್ವಾತಂತ್ರ್ಯದ ಕಲ್ಪನೆ, ಕಾವೇರಿಯ ಹುಚ್ಚಿನ ಮರುಕಳಿಕೆ, ರತ್ನಾಳ ವಿವಾಹೇತರ ಪ್ರೇಮ , ಭವಾನಿ, ಸರೋಜಿಯರ ಸಹಬಾಳ್ವೆಯ ಕಲ್ಪನೆ ಮತ್ತು ಪದ್ಮಿನಿಯ ಸಾಹಸ - ಈ ಎಲ್ಲಾ ಭಾವಗಳನ್ನು ಆಧರಿಸಿ ಸಾಂಪ್ರದಾಯಿಕ ಮಾದರಿಗಿಂತ ಭಿನ್ನರೀತಿಯ ವಿಮೋಚನಾ ಪರಿಕಲ್ಪನೆಯ ಸ್ತ್ರೀ ಮಾದರಿಯೊಂದನ್ನು ತ್ರಿವೇಣಿ ಕಟ್ಟಿಕೊಟ್ಟಿದ್ದಾರೆ.

**ಅಡಿಟಿಪ್ಪಣಿಗಳು**

೧. ತ್ರಿವೇಣಿ, ಮೊದಲಹೆಜ್ಜೆ, ತ್ರಿವೇಣಿ ಪಬ್ಲಿಕೇಶನ್ , ಮೈಸೂರು, ೧೯೯೦ (ಮ-ಮು) ಪುಟ-೩.
೨. ಪೂರ್ವೋಕ್ತ ಪುಟ: ೮
೩. ಪೂರ್ವೋಕ್ತ ಪುಟ: ೧೩೦.
೪. ಪೂರ್ವೋಕ್ತ ಪುಟ: ೧೭.
೫. ತ್ರಿವೇಣಿ (೧೯೬೦), ಅವಳ ಮನೆ, ತ್ರಿವೇಣಿ ಎಂಟರ್ ಪ್ರೈಸೆಸ್ , ಮೈಸೂರು. ೧೯೯೩ (ಮ.ಮ.) ಪುಟ ೧೬.
೬. ತ್ರಿವೇಣಿ (೧೯೫೪) ಹೂವುಹಣ್ಣು, ತ್ರಿವೇಣಿ ಪಬ್ಲಿಕೇಶನ್ಸ್ , ಮೈಸೂರು. ೧೯೯೩ (ಮ.ಮ.) ಪುಟ: ೭,
೭. ತ್ರಿವೇಣಿ (೧೯೫೫), ಕೀಲುಗೊಂಬೆ, ತ್ರಿವೇಣಿ, ಎಂಟರಪ್ರೈಸೆಸ್ , ಮೈಸೂರು, ೧೯೯೩ (ಮ.ಮ.) ಪುಟ:೧೯.
೮. ಮೊದಲ ಹೆಜ್ಜೆ, ೧೯೯೦, ಪುಟ: ೪೮.
೯. ಪೂರ್ವೋಕ್ತ ಪುಟ ೪೭.
೧೦. ತ್ರಿವೇಣಿ (೧೯೬೦), ಅವಳ ಮನೆ. ೧೯೯೩ (ಮ.ಮು.) ಪುಟ: ೧೭.
೧೧. ಕೀಲುಗೊಂಬೆ, ೧೯೯೩, ಪುಟ:೫.
೧೨. ಪೂರ್ವೋಕ್ತ, ಪುಟ: ೯೧.
೨೦. ಪೂರ್ವೋಕ್ತ. ಪುಟ: ೧೧೪.
೨೧. ತ್ರಿವೇಣಿ (೧೯೬೫), ಶರಪಂಜರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಾಲಯ, ಬೆಂಗಳೂರು, ೧೯೭೯, (ಮ.ಮ.) ಪುಟ: ೫೫
೨೨. ಪೂರ್ವೋಕ್ತ ಪುಟ: ೧೧.

೨೩. ಪೂರ್ವೋಕ್ತ ಪುಟ: ೫೮

೨೪. ಅಪಸ್ವರ (೧೯೫೪), ೧೯೯೦ (ಮಮ) ಪುಟ: ೯೪.

೨೫. ಪೂರ್ವೋಕ್ತ ಪುಟ: ೨೧೫.

೨೬. ಪೂರ್ವೋಕ್ತ ಪುಟ:

೨೭. ಕೀಲುಗೊಂಬೆ, ೧೯೯೩, ಪುಟ: ೬೩.

೨೮. ಪೂರ್ವೋಕ್ತ ಪುಟ: ೫೭ - ೫೮.

೨೯. ತ್ರಿವೇಣಿ (೧೯೬೧), ತಾವರೆಯ ಕೊಳ, ತ್ರಿವೇಣಿ ಪಬ್ಲಿಕೇಶನ್ಸ್ , ಮೈಸೂರು, ೧೯೯೧, (ಮ.ಮ.) ಪುಟ: ೧೭೦.

೩೦. ಪೂರ್ವೋಕ್ತ ಪುಟ: ೧೫೪.

೩೧. ತ್ರಿವೇಣಿ (೧೯೫೪), ಸೋತುಗೆದ್ದವಳು, ತ್ರಿವೇಣಿ ಪಬ್ಲಿಕೇಶನ್ಸ್ , ಮೈಸೂರು. ೧೯೮೭ (ಮ.ಮ.) ಪುಟ: ೯೨.

೩೨. ಹೂವು ಹಣ್ಣು, ೧೯೯೩. ಪುಟ: ೧೮.

೩೩. ಪೂರ್ವೋಕ್ತ, ಪುಟ: ೩೩-೩೪

೩೪. ಪೂರ್ವೋಕ್ತ ಪುಟ: ೩೪.

೩೫. ತ್ರಿವೇಣಿ (೧೯೬೭), ಬಾನುಬೆಳಗಿತು, ಸಾಯಗೀತಾ ಪ್ರಕಾಶನ, ಮೈಸೂರು, ೧೯೯೪ (ಮ.ಮ.) ಪುಟ: ೫೫.

೩೬. ಪೂರ್ವೋಕ್ತ ಪುಟ: ೫೨.

೩೭. ಪೂರ್ವೋಕ್ತ ಪುಟ: ೬೨-೬೩.

೩೮. ಕೀಲುಗೊಂಬೆ, ೧೯೯೩, ಪುಟ: ೬೩.

೩೯. ತ್ರಿವೇಣಿ (೧೯೫೯), ಮುಕ್ತಿ, ತ್ರಿವೇಣಿ ಪಬ್ಲಿಕೇಶನ್, ಮೈಸೂರು, ೧೯೯೪ (ಮ.ಮ.) ಪುಟ: ೧೧೮.

೪೦. ಹಣ್ಣೆಲೆ ಚಿಗುರಿದಾಗ, ೧೯೯೪, ಪುಟ: ೧೧೧.

೧೩. ತ್ರಿವೇಣಿ (೧೯೯೦), ಅಪಸ್ವರ, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು. ಪುಟ: ೨೪

೧೪. ಪೂರ್ವೋಕ್ತ: ಪುಟ: ೩೬.

೧೫. ಕೀಲುಗೊಂಬೆ, ೧೯೯೩, ಪುಟ: ೨೬

೧೬. ಅಪಸ್ವರ, ೧೯೯೦, ಪುಟ: ೫೭

೧೭. ತ್ರಿವೇಣಿ, (೧೯೯೪), ಹಣ್ಣೆಲೆ ಚಿಗುರಿದಾಗ, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು. ಪುಟ: ೧೦೭.

೧೮. ಪೂರ್ವೋಕ್ತ, ಪುಟ: ೯೫.

೧೯. ಕೀಲುಗೊಂಬೆ, ೧೯೯೩, ಪುಟ: ೧೦೯.

## ಅಧ್ಯಾಯ ೬

# ವೈದೇಹಿ ಕತೆಗಳಲ್ಲಿ 'ಸ್ತ್ರೀ ಪಾತ್ರಗಳು'

ವೈದೇಹಿ ಕತೆಗಳ ಕೇಂದ್ರ ಗೃಹಜಗತ್ತು. ಈ ಗೃಹಜಗತ್ತಿಗೆ ಸೀಮಿತವಾಗಿ ಬದುಕುವ ಹೆಣ್ಣುಗಳು ಇಲ್ಲಿ ಪ್ರಧಾನ ಭೂಮಿಕೆಯಲ್ಲಿರುವವರು. ವೈದೇಹಿ ಕತೆಗಳಲ್ಲಿ ಹಲವಾರು ಸ್ತ್ರೀಪಾತ್ರಗಳಿವೆ. ಭಿನ್ನಭಿನ್ನ ವರ್ಗ, ಜಾತಿ ಮತ್ತು ಮನಸ್ಥಿತಿಯಲ್ಲಿ ಬದುಕುವ, ಬೇರೆ ಬೇರೆ ರೀತಿಯ ಸಮಸ್ಯೆಗಳಿಗೆ ತಮ್ಮನ್ನು ತಾವು ಒಡ್ಡಿಕೊಳ್ಳುತ್ತ ಬದುಕುವ ನೂರಾರು ಪಾತ್ರಗಳು ಇಲ್ಲಿ ಕಂಡುಬರುತ್ತವೆ. ವಿವಿಧ ವಯೋಮಾನದ, ವಿವಿಧ ಮನೋಧರ್ಮದ ಈ ಎಲ್ಲಾ ಹೆಣ್ಣುಗಳಲ್ಲಿ ಸಾಮಾನ್ಯವಾಗಿರುವ ಅಂಶ : 'ಅಸಹಾಯಕತೆ'. ಈ ಅಸಹಾಯಕತೆಯನ್ನುವುದು ಇಲ್ಲಿನ ಹೆಣ್ಣುಗಳ ಬದುಕಿನ ವಿಧಾನವೇ ಆಗಿದೆ. ಹೆಚ್ಚಿನವರು ದುಡಿದು ಸಂಪಾದಿಸುವವರಾದರೂ, ಅವರು ಸ್ವತಂತ್ರರಲ್ಲ. ಹೊಟ್ಟೆಬಟ್ಟೆಗೆ ಮಾತ್ರ ಸೀಮಿತವಾಗುವ ಈ ಸಣ್ಣಪುಟ್ಟ ದುಡಿಮೆ ಅವರನ್ನು ಪರಾವಲಂಬಿಗಳಾಗಿರಲು ಮತ್ತಷ್ಟು ಸಹಕಾರಿಯಾಗಿದೆ. ಈ ಅತಂತ್ರಸ್ಥಿತಿಯಿಂದ ತಮ್ಮನ್ನು ತಾವು ಬಿಡುಗಡೆಗೊಳಿಸಬೇಕೆಂಬ ಆಶಯ ಬಹುತೇಕ ಹೆಣ್ಣುಗಳಲ್ಲಿ, ಅದರಲ್ಲಿಯೂ ಯುವಪೀಳಿಗೆಯವರಲ್ಲಿ ಬಲವಾಗಿದ್ದರೂ. ಬಿಡುಗಡೆಯ ದಾರಿ ಮಾತ್ರ ಖಚಿತವಾಗಿಲ್ಲ. ಕುಟುಂಬವ್ಯವಸ್ಥೆ, ಸಂಪ್ರದಾಯಗಳು, ಪರಾವಲಂಬನ, ಆರ್ಥಿಕ ದುಸ್ಥಿತಿ ಮತ್ತು ಪಿತೃಪ್ರದಾನ ಮೌಲ್ಯಗಳ ಆದರಣೆ ಇರುವ ಸಾಮಾಜಿಕ ಪರಿಸರದ ಕಾರಣವಾಗಿ ಅವರು ತಮ್ಮನ್ನು ಬಂಧನದ ಸ್ಥಿತಿಯಲ್ಲಿ ಕಲ್ಪಿಸಿಕೊಂಡಿದ್ದಾರೆ. ಮತ್ತು ವಸ್ತುಸ್ಥಿತಿ ಈ ಕಲ್ಪನೆಗೆ ತೀರಾ ಸಮೀಪವಿರುವ ಕಾರಣ ವಿಮೋಚನೆಯ ಪ್ರಯತ್ನಗಳೂ ಇಲ್ಲಿ ಸ್ಪಷ್ಟ ಸ್ವರೂಪವನ್ನು ತಳೆದಿಲ್ಲ.

ಬಹುತೇಕ ಹೆಂಗಸರು ಇಲ್ಲಿ ಕೆಳಮಧ್ಯಮವರ್ಗಕ್ಕೆ ಸೇರಿದವರಾಗಿದ್ದಾರೆ. ಸಾಮಾಜಿಕವಾಗಿ ಕೆಳಸ್ತರದವರಾಗಿ ಗುರುತಿಸಲ್ಪಡುವ ಹೆಂಗಸರೂ ಇಲ್ಲಿ ಪ್ರಮುಖ ನೆಲೆಯಲ್ಲಿ ಗುರುತಿಸಲ್ಪಟ್ಟಿದ್ದಾರೆ. ಇವರೆಲ್ಲರೂ ಒಂದು ಗುಂಪಾಗಿ, ವರ್ಗ, ವರ್ಣ, ಜಾತಿ, ಧರ್ಮ ಮತ್ತು ಲಿಂಗ ಇವುಗಳ ತಾರತಮ್ಯವನ್ನು ಒಂದೇ ನೆಲೆಯಲ್ಲಿ ವಿಭಿನ್ನ ವಿಧಾನದ ಮೂಲಕ ಅನುಭವಿಸುತ್ತಿದ್ದಾರೆ.

ಕತೆಗಳಲ್ಲಿ ಬರುವ ಹೆಣ್ಣುಗಳಲ್ಲಿ ಮೊದಲನೆ ತಲೆಮಾರಿಗೆ ಸೇರಿದವರು ಪರಂಪರೆಯನ್ನು ಗೌರವಿಸುತ್ತ, ತಾವು ನಂಬಿ ಬಂದ ಆದರ್ಶವನ್ನು ಮುಂದಿನ ಪೀಳಿಗೆಗೆ ದಾಟಿಸುವ ಮನೋಧರ್ಮದ ಹಿರಿತಲೆಗಳು. ಅಜ್ಜಿ, ದೊಡ್ಡಮ್ಮ, ದೊಡ್ಡತ್ತೆ, ದೊಡಕ್ಕ ಮೊದಲಾದ ಕೌಟುಂಬಿಕ ಸಂಬಂಧಗಳ ಸ್ಥಾನದಲ್ಲಿ ನಿಂತುಕೊಂಡು, ಎರಡನೇ ಮತ್ತು ಮೂರನೇ ಪೀಳಿಗೆಯವರನ್ನು ನಿಯಂತ್ರಿಸುವವರು, ಅಥವಾ ತಮ್ಮ ಮಾತುಗಳಿಂದ, ಉಪದೇಶಗಳಿಂದ ಮುಂದಿನ ಪೀಳಿಗೆ ಮೇಲೆ ಪ್ರಭಾವ, ಪ್ರೇರಣೆ ಉಂಟುಮಾಡುವವರು.

ಇದೇ ಪರಿಸರದಲ್ಲಿ ಹುಟ್ಟಿ, ಬೆಳೆದು ಮದುವೆಯಾಗಿ ಸಂಸಾರ ಮಾಡಿಕೊಂಡು, ತಮ್ಮ ಅನುಭವದ ಮೂಲಕ

ತಾವು ಬದುಕುವ ಪರಿಸರ ತಮ್ಮ ದುಃಖ, ನೋವುಗಳಿಗೆ ಮೂಲಕಾರಣವೆಂದು ಅರಿತೂ, ಅದನ್ನು ವಿರೋಧಿಸಲಾಗದ ಅಥವಾ ಪ್ರತಿಭಟಿಸುವ ವಿಧಾನವನ್ನು ಅರಿಯದೆ ಹೊಂದಿಕೊಂಡು ಬಾಳುವವರು ಎರಡನೇ ತಲೆಮಾರಿನವರು. ಹಿರಿಯರ ಆದರ್ಶಗಳ ವಾಹಕಗಳಂತೆ ಕಂಡುಬರುವ ಈ ಹೆಣ್ಣುಗಳಿಗೆ ಪ್ರಧಾನ ವ್ಯವಸ್ಥೆವನ್ನು ವಿರೋಧಿಸಿ ಬದುಕುವ ಧೈರ್ಯವಿಲ್ಲ. ತಮ್ಮ ಹೆಂಡತಿ, ಗೃಹಿಣಿ ಪಾತ್ರದಲ್ಲಿಯೇ ಇವರು ಸಂತೃಪ್ತರು. ಮೊದಲನೇ ತಲೆಮಾರಿನವರ ಮನೋಧರ್ಮ ಪಿತೃಪ್ರಧಾನ ಮೌಲ್ಯಗಳ ಪರವಾಗಿದ್ದರೆ. ಈ ಎರಡನೇ ತಲೆಮಾರಿನವರು ಮೌಲ್ಯ ನಿರ್ದೇಶನದ ಅನುಗುಣವಾಗಿಯೇ ಬದಕುವವರು. ಸ್ವತಂತ್ರ ವ್ಯಕ್ತಿತ್ವಕ್ಕಿಂತ ಅವರ ಸಾಮಾಜಿಕ ಪಾತ್ರಕ್ಕೆ ಇಲ್ಲಿ ಬೇಡಿಕೆ ಹೆಚ್ಚು. ಹೆಣ್ಣು ಜಾತಿಯಲ್ಲಿ ಹುಟ್ಟಿರುವುದಕ್ಕೆ ತಾವು ಹೀಗಿರುವುದೇ ಸರಿ ಎಂಬ ಭಾವಕ್ಕೆ ಮನ್ನಣೆ ಕೊಟ್ಟು ಬದುಕುವ ಸ್ತ್ರೀಯರು ಇವರು. ಈ ಸ್ತ್ರೀಯರ ವ್ಯಕ್ತಿತ್ವವೇನಿದ್ದರೂ ಪುರುಷಪರ ವಿಚಾರಗಳಿಂದ ಹೆಚ್ಚು ಪ್ರಭಾವಿತವಾಗಿರುವ ರೀತಿಯದು.

ಮೂರನೇ ತಲೆಮಾರಿನ ಯುವತಿಯರಲ್ಲಿ ಸ್ವಾತಂತ್ರ್ಯದ ಆಶಯ ಕೇಂದ್ರಸ್ಥಾನದಲ್ಲಿದೆ. ಸಂಪ್ರದಾಯ, ಪರಂಪರೆ, ರೂಢಿಗತ ಬದುಕು, ಪೂರ್ವನಿರ್ಧಾರಿತ ಪಾತ್ರನಿರ್ವಹಣೆ - ಈ ಎಲ್ಲಾ ವಿಚಾರಗಳಿಂದ ಕಳಚಿಕೊಂಡು, ತಮ್ಮನ್ನು ತಾವು ಮುಕ್ತರಾಗಿಸುವುದು ಇಲ್ಲಿರುವ ಪ್ರಧಾನ ಆಶಯ. ಈ ವಿಮೋಚನೆಯ ಕಲ್ಪನೆಯಲ್ಲಿ ತನ್ನತನದ ಅರಿವು ಪ್ರಧಾನ ನೆಲೆಯಲ್ಲಿ ಇದ್ದು. ನಂತರ ಇತರ ವಿಚಾರಗಳು ಆದ್ಯತೆ ಪಡೆಯುತ್ತವೆ. ಈ ಯುವಪೀಳಿಗೆ ಹಿರಿತಲೆಮಾರನ್ನು ಸೂಕ್ತವಾಗಿ ಗಮನಿಸುತ್ತ ವ್ಯವಸ್ಥೆಯ ಪೊಳ್ಳುತನವನ್ನು ಭೇಧಿಸುತ್ತ ನಡೆದಿದೆ. ಆಧುನಿಕ ಪ್ರಜ್ಞೆಯ ಈ ವ್ಯಕ್ತಿತ್ವದಲ್ಲಿ ಛಲವಿದೆ, ತನಗಿಷ್ಟವಾದ ರೀತಿಯಲ್ಲಿ ತನ್ನ ಭವಿಷ್ಯವನ್ನು ಕಟ್ಟಿಕೊಳ್ಳುವ ಕೆಚ್ಚು ಇದೆ. ಸಾಂಪ್ರದಾಯಕ ಸ್ತ್ರೀ ಮಾದರಿಗೆ ತೀರಾ ಭಿನ್ನವಾಗಿರುವ ಈ ವ್ಯಕ್ತಿತ್ವದಲ್ಲಿ ಸ್ತ್ರೀ ಕುರಿತಾಗಿರುವ ಪೂರ್ವನಿಶ್ಚಿತ ವಿಚಾರಗಳೆಲ್ಲವನ್ನು ಪ್ರಶ್ನಿಸುವ ಪ್ರತಿಭಟನೆಯ ಮನೋಧರ್ಮವಿದೆ. ತಾವಿರುವ ಪರಿಸ್ಥಿತಿಯನ್ನು ಬದಲಾಯಿಸಬೇಕೆಂಬ ಮನಸ್ಥಿತಿಯಲ್ಲಿ, ಜೀವವಿರೋಧಿಯಾಗಿರುವ ಮೌಲ್ಯಗಳನ್ನೆಲ್ಲ ವಿರೋಧಿಸುವ, ಪ್ರತಿಭಟನೆ ತೋರುವ ವಿಧಾನಗಳು ಬಹಿರಂಗವಾಗಿ ಕಾಣಿಸಿವೆ. ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆ ಮತ್ತು ವೈವಾಹಿಕ ಬದುಕು ಹೆಣ್ಣಿನ ಬದುಕಿನಲ್ಲಿ ನಡೆಸಿಕೊಂಡು ಬಂದಿರುವ ಕಾರ್ಯಾಚರಣೆ ವಿರುದ್ದ ಈ ಯುವತಿಯರು ಮಂಡಿಸುವ ವಿಚಾರಗಳು, ಈ ವ್ಯಕ್ತಿತ್ವದಲ್ಲಿ ಮೂಡಿರುವ ಎಚ್ಚರವನ್ನು ಸೂಚಿಸುತ್ತದೆ. ಅಸಹನೀಯವೆನಿಸಿದುವುಗಳನ್ನು ದೂರಮಾಡುವುದರಲ್ಲಿ ಹಿಂತೆಗೆಯದ ಈ ಮೂರನೇ ತಲೆಮಾರಿನವರಲ್ಲಿ ಮೂಡಿರುವ ವಿಚಾರದ ಭಾವ, ನಡೆ, ನುಡಿಗಳಲ್ಲಿರುವ ಪ್ರತಿರೋಧ, ಪ್ರತಿಭಟನೆಗಳು ವಿಮೋಚನಾ ಪರಿಕಲ್ಪನೆಯನ್ನು ಹಿನ್ನೆಲೆಯಲ್ಲಿಟ್ಟು ಬಂದವುಗಳಾಗಿವೆ. ಇಲ್ಲಿ ಬರುವ ಎಲ್ಲ ಯುವತಿಯರೂ ಸಂಪೂರ್ಣವಾಗಿ ತಮ್ಮನ್ನು ತಾವು ಸ್ವತಂತ್ರಗೊಳಿಸಿದವರಲ್ಲ. ಕತೆಯಲ್ಲಿ ಪರಿಸರಕ್ಕೆ ನೀಡಿದ ಆದ್ಯತೆಯಿಂದಾಗಿ ಬಹುತೇಕ ಸ್ತ್ರೀಯರಿಗೆ ಹೆಚ್ಚಿನ ಅವಕಾಶಗಳು ದೊರೆಯುವುದು ಅಸಾಧ್ಯವಾಗಿದೆ.

ಶಿಕ್ಷಣ ಮತ್ತು ಉದ್ಯೋಗಕ್ಕೆ ತ್ರಿವೇಣಿ ಕಾದಂಬರಿಗಳಲ್ಲಿರುವಂತೆ ಇಲ್ಲಿ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗಿಲ್ಲ. ಲೇಖಕಿಯ ಆಸ್ಥೆ ಗೃಹಜಗತ್ತನ್ನು ಕೇಂದ್ರವಾಗಿಟ್ಟುಕೊಂಡು ಹೆಣ್ಣಿನ ಚಿತ್ರಣವನ್ನು ನೀಡುವುದಕ್ಕೆ ಸರಿದಿರುವುದರಿಂದ ಸ್ತ್ರೀಪರ ಕಾಳಜಿ ಇಲ್ಲಿ ಮುಖ್ಯವಾಗುತ್ತದೆ, ವಿನಹ ಪರ್ಯಾಯ ಬದುಕಿನತ್ತ ಗಮನ ಹರಿಸಬಹುದಾದ ಸಾಧ್ಯತೆಗಳನ್ನು ಇಲ್ಲಿ ಗಮನಿಸುವುದು ಲೇಖಕಿಗೆ ಸಾಧ್ಯವಾಗಿಲ್ಲ. ಆದುದರಿಂದ ಹೆಣ್ಣಿನ ವ್ಯಕ್ತಿತ್ವದ ಚಿತ್ರವನ್ನು

ಈ ಕತೆಗಳು ಪೂರ್ಣರೀತಿಯಲ್ಲಿ ಕಟ್ಟಿಕೊಡಲು ಅಸಮರ್ಥವಾಗುತ್ತವೆ. ಸರಿಯಾದ ವಿದ್ಯೆ ಉದ್ಯೋಗಕ್ಕೆ ಅವಕಾಶವಿರದಿದ್ದರೆ ಹೆಣ್ಣಿನ ಸ್ಥಿತಿ ಶತಮಾನಗಳಿಂದಲೂ ಹೀಗೆ ಮುಂದುವರಿಯುತ್ತದೆ ಎಂಬ ಸೂಚನೆಯನ್ನು ಪುಟ್ಟಮ್ಮತ್ತೆ ಪಾತ್ರವು ಸ್ಪಷ್ಟವಾಗಿ ಹೇಳಿದರೂ, ಅಂತಹ ಯಾವ ಪ್ರಯತ್ನವನ್ನು ಇಲ್ಲಿಯ ಹೆಣ್ಣುಗಳು ಗಮನಿಸಿದೆ, ತಾವಿರುವ ಸ್ಥಿತಿಯನ್ನು ಕುರಿತು ದುಃಖಪಡುತ್ತ, ಕಾಲಕಳೆಯುತ್ತವೆ.

ಎಪ್ಪತ್ತರ ದಶಕದ ನಂತರದ ಕತೆಗಳು ಉಪೇಕ್ಷಿತವರ್ಗದಲ್ಲಿ ಹೆಣ್ಣನ್ನು ಸೇರಿಸಿಕೊಂಡು, ಅವರ ಸ್ಥಿತಿಗೆ ಕಾರಣವಾದ ನೆಲೆಗಳನ್ನು ಹುಡುಕುವ ಪ್ರಯತ್ನ ನಡೆಸಿದ ರೀತಿಯಲ್ಲಿಯೇ ವೈದೇಹಿ ಕತೆಗಳು ಕೂಡ ಈನೆಲೆಗಳ ಹುಡುಕಾಟದಲ್ಲಿ, ಹೆಚ್ಚುಕಡಿಮೆ ನಿಂತು ಬಿಟ್ಟಿವೆ.

**ಪಾತ್ರ ಚಿತ್ರಣ**

ವೈದೇಹಿ ಕತೆಗಳನ್ನು ನಾಯಕಿಪ್ರಧಾನವೆಂದು ಕರೆಯಲು ಸಾಧ್ಯವಾಗದಿದ್ದರೂ, ಕತೆಯಲ್ಲಿ ಬರುವ ಕೇಂದ್ರ ಪಾತ್ರವೊಂದು ಹೆಚ್ಚಿನ ಗಮನವನ್ನು ಸೆಳೆಯುತ್ತದೆ. ಈ ಕೇಂದ್ರಪಾತ್ರವು ಹೆಣ್ಣಾಗಿದೆ. ಸಣ್ಣಪುಟ್ಟ ಪಾತ್ರಗಳು ತಮ್ಮ ಜೀವಂತಿಕೆಯಿಂದ ಗಮನ ಸೆಳೆಯುತ್ತವೆ.

ಪ್ರತಿ ಕತೆಯಲ್ಲಿಯೂ ಹಲವಾರು ಸ್ತ್ರೀ ಪಾತ್ರಗಳು ಕಾಣಿಸಿಕೊಳ್ಳುತ್ತವೆ. ಆದರೆ ಮುಖ್ಯ ಭೂಮಿಕೆಯಲ್ಲಿರುವವರು ಗೃಹಿಣಿಯರು. ಈ ಗೃಹಿಣಿಯರ ಸಂಪರ್ಕಕ್ಕೆ ಬರುವ ಹೆಣ್ಣಾಳುಗಳ ಸವಿಸ್ತಾರ ವಿವರಣೆಯನ್ನು ಕತೆಗಳು ನೀಡುತ್ತವೆ. ಈ ಹೆಣ್ಣಾಳುಗಳು ಜಾತಿ ಮತ್ತು ವರ್ಗದಿಂದ ಕೆಳಸ್ತರದಲ್ಲಿರುವವರು. ಈ ಹೆಂಗಸರನ್ನು ಹೊರತು ಪಡಿಸಿದರೆ ಯುವತಿಯರ ಒಂದು ಗುಂಪು ಇಲ್ಲಿದೆ. ಈ ಯುವತಿಯರು ಆಧುನಿಕತೆಯ ಪ್ರಭಾವಕ್ಕೆ ಒಳಗಾದವರು. ಹೊರಜಗತ್ತಿನ ಆಕರ್ಷಣೆ ಇವರ ಮೇಲೆ ಬಲವಾಗಿ ಇದೆ. ಹದಿಹರೆಯದ ಹುಡುಗಿಯರಿಗೆ ತಾವು ಬೆಳೆದು ದೊಡ್ಡವರಾಗುವುದೇ ಒಂದು ಹೊಸ ಅನುಭವವಾಗಿದೆ ಇಲ್ಲಿ. ವೈದೇಹಿ ತಮ್ಮ ಕತೆಗಳಲ್ಲಿ ಪುರುಷಲೋಕ ಮತ್ತು ಸ್ತ್ರೀಲೋಕವೆಂಬ ಎರಡು ಭಿನ್ನ ಪರಿಸರವನ್ನು ಗುರುತಿಸುತ್ತಾರೆ.

ಮನೆಯ ಹೊರಗೆ ಬಯಲಿಗಿಳಿದು ಮುಕ್ತ ವಾತಾವರಣದಲ್ಲಿ ತಿರುಗಾಡಿಕೊಂಡಿರುವ ಪುರುಷಲೋಕ ಮತ್ತು ಗೃಹಕೃತ್ಯದ ದುಡಿಮೆಯಲ್ಲಿ ಮನೆಯ ನಾಲ್ಕು ಗೋಡೆಗಳ ನಡುವೆ ಕಳೆಯುವ ಸ್ತ್ರೀಲೋಕ. ಎರಡು ಮನುಷ್ಯ ಜಾತಿಗಳ ಅನುಭವಗಳು, ಗೃಹಿಕೆಗಳು ಬದುಕಿನ ಒಳನೋಟಗಳು ಹೇಗೆ ಒಂದರಿಂದ ಇನ್ನೊಂದು ಭಿನ್ನವಾಗುತ್ತದೆ ಎಂಬುದರ ಅನಾವರಣವನ್ನು ಇಲ್ಲಿ ಮಾಡಲಾಗಿದೆ. ಬಹುತೇಕ ಪುರುಷಪಾತ್ರಗಳು ನೇಪಥ್ಯದಲ್ಲಿರುವ ಕಾರಣವಾಗಿ ಸ್ತ್ರೀಲೋಕವನ್ನು ಪ್ರಧಾನ ಭೂಮಿಕೆಯಲ್ಲಿ ಕಾಣಿಸಲಾಗಿದೆ.

ಸ್ತ್ರೀಯರ ಬದುಕಿನ ವಿವರಗಳು ಗೋಚರವಾಗುವುದು ಮನೆಯ ಒಳಾವರಣದಲ್ಲಿ, ಅಡುಗೆಮನೆ, ಹಿತ್ತಲು, ಮನೆಯಂಗಳ ಅಥವಾ ಮುಂಜಿ, ಮದುವೆಗಳಂತಹ ಕೌಟುಂಬಿಕ ಸಮಾರಂಭಗಳಲ್ಲಿ. ಮನೆಜಗತ್ತಿನ ದಿನನಿತ್ಯ ವ್ಯವಹಾರದಲ್ಲಿ ಬಂದು ಹೋಗುವವರು ಹೆಂಗಸರೇ.

ಮುಟ್ಟು, ಬಸಿರು, ಬಾಣಂತನ, ಅಡುಗೆ - ಹಲವು ಹತ್ತು ಕಾರಣಗಳಿಂದಾಗಿ ಮನೆಯಲ್ಲಿ ಉಳಿಯುವ ಗೃಹಿಣಿಯರು, ಈ ಗೃಹಿಣಿಯರ ಗೃಹಕೃತ್ಯದ ನೆರವಿಗೆ ಬರುವ ಸ್ವಜಾತಿ ಹೆಣ್ಣಾಳುಗಳು, ಪಾತ್ರೆ, ಬಟ್ಟೆ, ಹಟ್ಟಿ, ಸುತ್ತಲಿನ ಕೆಲಸದಲ್ಲಿ ತೊಡಗಿಸಿಕೊಳ್ಳುವ ಕೆಳಜಾತಿಯ ಹೆಣ್ಣಾಳುಗಳು, ಸೊಪ್ಪು ಹಾಕಲು ಬರುವ ಮುಟ್ಟಾಳು ಕೊರತಿಯರು - ವಿವಿಧ ಸ್ವಬಾವದ, ವಿವಿಧ ಹಿನ್ನೆಲೆಯುಳ್ಳ, ವಿವಿಧ ಮನೋಧರ್ಮದ ಸ್ತ್ರೀಯರು ಇಲ್ಲಿ ದಿನನಿತ್ಯ ವ್ಯವಹಾರದಲ್ಲಿ ಕೂಡಿ ಬದುಕುವುದು, ದೈನಂದಿನ ಚಟುವಟಿಕೆಗಳಲ್ಲಿ ಸೇರಿ ಭಾಗವಹಿಸುವುದು ಸಾಮಾನ್ಯ ದೃಶ್ಯವಾಗಿ ಚಿತ್ರಿತವಾಗಿದೆ. ಆರ್ಥೀಕವಾಗಿ ಮತ್ತು ಸಾಮಾಜಿಕವಾಗಿ ಭಿನ್ನಸ್ತರದವರಾಗಿ ಗುರುತಿಸಲ್ಪಡುವ ಹೆಂಗಸರು ಇಲ್ಲಿ ತಮ್ಮದೇ ಆದ ಪ್ರಪಂಚವನ್ನು, ಸ್ತ್ರೀಲೋಕವನ್ನು ಸೃಷ್ಟಿಸಿದ್ದಾರೆ. ಪುರುಷಪ್ರವೇಶ ಕನಿಷ್ಟವಾಗಿರುವ ಈ ಪರಸ್ಪರ ಒಡನಾಟಗಳಲ್ಲಿ ದುಃಖ ದುಗುಡಗಳು ಪರಸ್ಪರ ಹಂಚಿಹೋಗುತ್ತವೆ. ಸ್ತ್ರೀ ಸಮುದಾಯವನ್ನು ಒಂದೇ ಗುಂಪಿನಲ್ಲಿ ಗುರುತಿಸುವ ಪ್ರಯತ್ನವಾಗಿ ಈ ವಿವರಗಳು ಮಹತ್ವವನ್ನು ಪಡೆಯುತ್ತದೆ. ಇಲ್ಲಿರುವ ಹೆಚ್ಚಿನ ಸ್ತ್ರೀಪಾತ್ರಗಳು ದುಃಖಿತರು. ಅವರ ದುಃಖಕ್ಕೆ ಹಲವಾರು ಕಾರಣಗಳಿವೆ. ಬಡತನ, ಒಂಟಿತನ, ಬಂಧು ಜನ ಬೆಂಬಲದ ಕೊರತೆ, ಕೌಟುಂಬಿಕ ಕಲಹ, ಪುರುಷ ದೌರ್ಜನ್ಯ, ಕ್ರೌರ್ಯ ಮೊದಲಾದವು, ಮುಖ್ಯಕಾರಣಗಳು.

ಗೃಹಿಣಿಯರು, ಬಾಲವಿಧವೆಯರು, ವೃದ್ಧೆಯರು, ನಡುವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡವರು, ಪರಿತ್ಯಕ್ತೆಯರು, ಬಡವರು, ಮರುಳರು, ಕಳ್ಳರು, ಹುಚ್ಚಿಯರು ಗಂಡನ ಸ್ವಭಾವದಿಂದ ಪರಾವಲಂಬಿಗಳಾದವರು, ಅವಿವಾಹಿತೆಯರು, ಹದಿಹರೆಯದವರು,ಗಂಡಿನ ಹಿಂಸೆಗೆ ಬಲಿಯಾಗುತ್ತಿರುವವರು, ಹೀಗೆ ವಿವಿಧ ಪರಿಸ್ಥಿತಿಯಲ್ಲಿ ಬದುಕುವ ಹೆಣ್ಣಿನ ಚಿತ್ರಣವನ್ನು ಇಲ್ಲಿ ನೀಡಲಾಗಿದೆ. ಅತಂತ್ರಸ್ಥಿತಿ, ಭವಿಷ್ಯದ ಅನಿಶ್ಚಿತತೆ ಈ ಹೆಣ್ಣುಗಳನ್ನು ಬಹುವಾಗಿ ಕಾಡುವ ಸಮಸ್ಯೆಗಳು. ಸತತವಾಗಿ ಕಾಡುವ ತಮ್ಮ ಸಮಸ್ಯೆಗಳಿಗೆ ಹೆಣ್ಣುಜಾತಿಯಲ್ಲಿ ಹುಟ್ಟಿರುವುದು ಮುಖ್ಯ ಕಾರಣವೆಂಬ ತಿಳವಳಿಕೆ ಇಲ್ಲಿಯದು. ಹೆಣ್ಣಾಗಿ ಹುಟ್ಟಿದುದರಿಂದಲೇ ನಾವು ಈ ಕಷ್ಟಗಳನ್ನು ಅನುಭವಿಸಬೇಕಾಗಿದೆ ಎಂಬ ಮನೋಭಾವ ಇಲ್ಲಿ ಮುಖ್ಯವಾಗಿರುತ್ತದೆ. ಬದಲಾಗುತ್ತಿರುವ ಸಾಮಾಜಿಕ ಪರಿಸರದಲ್ಲಿ ಬದಲಾಗದೆ ಉಳಿಯುವ ಹೆಣ್ಣು ಬದುಕುವ ಪರಿಸರದ ಹಿನ್ನೆಲೆಯಲ್ಲಿ ಸ್ತ್ರೀಪಾತ್ರಗಳನ್ನು ರೂಪಿಸಲಾಗಿದೆ.

ಬಾಹ್ಯಕಾರಣಗಳು ತಮ್ಮ ಸ್ವಭಾವ ಮತ್ತು ಬದುಕನ್ನು ನಿಯಂತ್ರಿಸುವುದನ್ನು ಪ್ರತಿಭಟಿಸುವ ಹಿನ್ನೆಲೆಯಲ್ಲಿ ಹೆಣ್ಣಿನಲ್ಲಿ ಮೂಡಿರಬಹುದಾದ ಪ್ರತಿರೋಧವನ್ನು ಇಲ್ಲಿ ಸೂಚ್ಯವಾಗಿ ಕಾಣಿಸಲಾಗಿದೆ. ಉದಾಹರಣೆಗೆ ಒತ್ತಡ, ನಿಯಂತ್ರಣಗಳು ಹೆಚ್ಚಾಗಿ ತೋರಿದೆಡೆಯಲ್ಲೆಲ್ಲಾ ಹುಚ್ಚು ಕಾಣಿಸಿದೆ. ಮರುಳುತನ (ಅರೆಪಿರ್ಕಿ), ಉನ್ಮಾದ, ಹುಚ್ಚು ಮತ್ತು ದೈವ ಆವಾಹನೆ ಕಥೆಯಲ್ಲಿ ಸಾಂಕೇತಿಕವಾಗಿ ಉಪಯೋಗಿಸಲಾಗಿರುವ ಮಾನಸಿಕ ಅಸ್ವಸ್ಥತೆಗಳು. ಅಪ್ರಜ್ಞಾವಸ್ಥೆಯ ಹೆಣ್ಣಿನ ವರ್ತನೆಗಳು ಇಲ್ಲಿ ಸಾಂಕೇತಿಕ ಅರ್ಥವನ್ನು ಮೂಡಿಸಲು ಬಳಸಲಾಗಿರುವ ಸಂಕೇತಗಳಾಗಿವೆ.

'ಅಸ್ಪೃಶ್ಯತೆ' ಕತೆಯಲ್ಲಿ ಬಳಕೆಯಾಗಿರುವ ಎರಡನೇ ಸಂಕೇತವಾಗಿದೆ. ಸಾಮಾಜಿಕ ಪದ್ಧತಿಯಾಗಿ, ಜೀವವಿರೋಧಿಯಾಗಿರುವ ಅಸ್ಪೃಶ್ಯತೆ ವರ್ಣ, ವರ್ಗಕ್ಕೆ ಹೊರತಾಗಿ ಸ್ತ್ರೀ ಬದುಕನ್ನು ಆವರಿಸಿಕೊಂಡಿರುವ ವಿಚಾರವನ್ನು ಒಂದು ಪ್ರಶ್ನಾರೂಪದಲ್ಲಿ ಸಾಹಿತ್ಯದ ಮೂಲಕ ವ್ಯಕ್ತಪಡಿಸಿದವರಲ್ಲಿ ಬಹುಶಃ ವೈದೇಹಿ ಮೊದಲಿಗರಾಗಿ ಕಾಣತ್ತಾರೆ. ಅಸ್ಪೃಶ್ಯತೆ ಮನುಷ್ಯರನ್ನು ಮನುಷ್ಯರಿಂದ ಪ್ರತ್ಯೇಕಿಸುವ ಒಂದು ಅಮೂರ್ತ ವಿಚಾರ. ಅದು ತನ್ನ

ಕಾರ್ಯಾಚರಣೆಗಳ ಮೂಲಕ ಮೂರ್ತ ಸ್ವರೂಪವಾಗಿ ವ್ಯಕ್ತವಾಗುತ್ತದೆ.

ಮೂಲತಃ ದೈಹಿಕ ಮೈಲಿಗೆ ಸ್ವರೂಪದಲ್ಲಿರುವ ಅಸ್ಪೃಶ್ಯತೆ ಪ್ರಕೃತಿ ಸಹಜ ಮುಟ್ಟು, ಬಾಣಂತನಗಳಿಗೆ ವಿಸ್ತಾರಗೊಂಡು ನಿರ್ದಿಷ್ಟ ಅವಧಿಗೆ ಹೆಣ್ಣನು ಅಸ್ಪೃಶ್ಯಳಾಗಿ ಮಾಡುತ್ತದೆ. ರೂಢಮೂಲ ವಿಚಾರಗಳಿಂದ ಪ್ರೇರಿತವಾಗಿರುವ ಅಸ್ಪೃಶ್ಯತಾ ಕಲ್ಪನೆ ಸಾಂಪ್ರದಾಯಿಕ ನಡಾವಳಿಗಳ ಮೂಲಕ ದೈಹಿಕನೆಲೆಗೆ ಸೀಮಿತವಾಗಿರುವುವಂತಹದು ಮುಂದುವರಿದು ಮಾನಸಿಕಸ್ತರವನ್ನು ಒಳಗೊಂಡಂತೆ ಬದುಕಿನಲ್ಲಿ ವ್ಯಾಪಕವಾದ ಆಸ್ಥೆಯನ್ನು ಮೂಡಿಸುತ್ತ, ಸ್ತ್ರೀ ಅಧೀನತೆಯ ಕಲ್ಪನೆಗೆ, ಅವಳ ವ್ಯಕ್ತಿತ್ವ ದೌರ್ಬಲ್ಯಕ್ಕೆ ಮೂಲ ಕಾರಣವಾಗುವುದನ್ನು ಲೇಖಕಿ ಎಲ್ಲ ಜಾತಿ, ವರ್ಗವನ್ನು ಒಳಗೊಂಡಂತೆ ಇಡೀ ಸ್ತ್ರೀ ಸಮುದಾಯವನ್ನು ಉದ್ದೇಶಿಸಿದಂತೆ, ಈ ಅಸ್ಪೃಶ್ಯತಾ ಕಲ್ಪನೆಯನ್ನು ಇಲ್ಲಿ ಬಳಸಿಕೊಳುತ್ತಾರೆ. ಹೀಗೆ ಅಸ್ಪೃಶ್ಯತೆ ಮತ್ತು ಹುಚ್ಚು - ಈ ಎರಡು ಸಂಕೇತಗಳ ಮೂಲಕ ಸ್ತ್ರೀ ಪಾತ್ರಾಭಿವ್ಯಕ್ತಿಯು ಸ್ಪಷ್ಟತೆಯನ್ನು ಪಡೆಯುವುದಕ್ಕೆ ಲೇಖಕಿ ಪ್ರಯತ್ನ ಪಟ್ಟಿದ್ದಾರೆ.

ಅದೇ ತಾನೆ ಹುಟ್ಟಿ ಮೊರದಲ್ಲಿ ಮೈಲಿಗೆಯನ್ನು ಅಂಟಿಸಿಕೊಂಡು ಮಲಗಿರುವ ಹೆಣ್ಣುಶಿಶುವಿನಿಂದ ಹಿಡಿದು, ದೃಷ್ಟಿ ಮಾತು ಕಳೆದು ಸಾವಿನ ನಿರೀಕ್ಷೆಯಲ್ಲಿರುವ ವೃದ್ದೆಯವರೆಗೆ ಎಲ್ಲ ವಯೋಮಾನದ ಸ್ತ್ರೀಯರೂ ಇಲ್ಲಿ ಇದ್ದಾರೆ. ''ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು'' ವಿನಲ್ಲಿ ನಾಲ್ಕು ತಲೆಮಾರುಗಳವರೆಗೆ ಒಂದೇ ಸ್ಥಿತಿಯಲ್ಲಿ ಬದುಕುವ ಬೇರೆ ಬೇರೆ ಹೆಣ್ಣಿನ ವಿವರಗಳಿವೆ. ಪುಟ್ಟಮ್ಮತ್ತೆ ಅವಳ ತಾಯಿ, ಪುಟ್ಟಮ್ಮತ್ತೆ ಮಗಳು ಮತ್ತು ಮೊಮ್ಮಗಳು ಹಲವಾರು ಕಾರಣಗಳಿಗಾಗಿ ಸಂಘರ್ಷದ ಬದುಕನ್ನು ಬಾಳುತ್ತಿರುವುದನ್ನು ಈ ಕತೆ ವಿವರಿಸುತ್ತದೆ. 'ಅಸ್ಪೃಶ್ಯರು'ವಿನಲ್ಲಿ ಗೌರಮ್ಮ, ಅವಳ ಮಗಳು ರತ್ನಾ, ಮೊಮ್ಮಗಳು ಸುಗುಣರೊಂದಿಗೆ, ಅವರ ಬಂಧು ವಯಸ್ಸಾದ ಪಾರ್ತಕ್ಕರೂ ಇದ್ದಾರೆ. ಮೂರುನಾಲ್ಕು ತಲೆಮಾರಿನ ಹೆಂಗಸರು ಒಂದೇ ಸೂರಿನ ಕೆಳಗೆ ಬದುಕುವುದು ಇಲ್ಲಿ ಸಾಮಾನ್ಯ ವಿಚಾರ. ಈ ಕಾರಣದಿಂದ ಪರಸ್ಪರ ಪ್ರಬಾವ, ಪ್ರೇರಣೆಗಳು ಸಹಜವಾಗಿಯೇ ಉಂಟಾಗುತ್ತವೆ. ಮನೆಯಲ್ಲಿ 'ಹಿರಿಸ್ಥಾನ'ದಲ್ಲಿರುವವರು :-ಅಜ್ಜಿ, ದೊಡ್ಡಮ್ಮ, ಅತ್ತೆ, ತಾಯಿ ಸ್ಥಾನದಲ್ಲಿರುವವರು. ಈ ಸ್ಥಾನದಲ್ಲಿರುವ ಕೆಲವು ಸ್ತ್ರೀಯರು.

ರಂಗಜ್ಜಿ (ಚಿಪ್ಪು) ಪಾರ್ತಕ್ಕ(ಅಸ್ಪೃಶ್ಯರು) ತಾಯಿ(ಮರಗಿಡಬಳ್ಳಿ)ದೊಡ್ಡತ್ತೆ (ಅಕ್ಕು)ದೊಡಕ (ಹಕ್ಕಿಲ್ಲವವರು), ಪುಟ್ಟಮ್ಮತ್ತೆ(ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು) ದೊಡ್ಡಮ್ಮ(ಭೂತ) ಅತ್ತೆ(ಯಾತ್ರೆ). ಹೆಂಡತಿಯಾಗಿ, ಗೃಹಿಣಿ ಸ್ಥಾನದಲ್ಲಿರುವವರು:- ಗೌರಮ್ಮ(ಅಸ್ಪೃಶ್ಯರು) ಗೌರಕ್ಕ(ಒಂದು ಅಪಾರಾಧ ತನಿಖೆ), ಮೀನಾಕ್ಷತ್ತೆ(ಆರತಿತಟ್ಟೆ), ರತ್ನ(ಅಸ್ಪೃಶ್ಯರು) ಲಕ್ಷ್ಮಿದೇವಮ್ಮ(ಅಲ್ಲಲ್ಲಿನ ಲೋಕದವರು), ಶಾರದೆ(ಮರಗಿಡಬಳ್ಳಿ) ಶಾಂತಮ್ಮ(ಬಂದು ಹೋಗುವವರು).ಕತೆಯಲ್ಲಿ ಪ್ರಧಾನ ಭೂಮಿಕೆಯಲ್ಲಿರುವವರು:-

ಅಕ್ಕು(ಅಕ್ಕು), ಸಿರಿ (ಹಕ್ಕಿಲ್ಲದವರು), ಸರೋಜ(ಅಸ್ಪೃಶ್ಯರು), ಬಾಬಿ (ಒಂದು ಅಪರಾಧ ತನಿಖೆ) ಪಾರ್ವತಿ(ಭೂತ), ಮಾಂಕಾಳಿ(ಅಲ್ಲಲ್ಲಿನ ಲೋಕದವರು), ಬಚ್ಚಮ್ಮ (ಒಂದು ಕಳ್ಳವೃತ್ತಾಂತ), ಮೀನಾಕ್ಷಿ(ಅರತಿ ತಟ್ಟೆ), ಕಮಲಾವತಿ, ಮಾಲತಿ (ಗೂಡಿನೊಳಗೆ ಒಂದು ಹಕ್ಕಿ), ಸುಬ್ಬಕ್ಕ (ಸಮಾಜಶಾಸ್ತ್ರಜ್ಞೆಯ ಟಿಪ್ಪಣಿ).

ಸೌಗಂಧಿ(ಸೌಗಂಧಿಯ ಸ್ವಗತಗಳು), ಅಚಲ(ಅಂತರಂಗದ ಪುಟಗಳು), ಕುಸುಮ(ಒಂದು ಅಪರಾಧ ತನಿಖೆ).

ಈ ಮುಖ್ಯ ಪಾತ್ರಗಳಲ್ಲದೆ ಅನೇಕ ಸಣ್ಣಪುಟ್ಟ ಸ್ತ್ರೀಪಾತ್ರಗಳು ತಮ್ಮ ಜೀವಂತಿಕೆಯ ಕಾರಣವಾಗಿ ಕತೆಗಳಲ್ಲಿ ಮಹತ್ವದ ಸ್ಥಾನವನ್ನು ಪಡೆದಿವೆ. ಬೀನ, ಚಂದಲೆ, ಅಹಲ್ಯ, ಶಾಮ, ಸರಸ, ಯಶವಂತಿ, ಗುಲಾಬಿ, ಲಿಲ್ಲಿಬಾಯಿ, ಮಂಜಿ, ಚಂದು, ಸಣ್ಣಿಮೊದಲಾದವರು. ಪುರುಷಪಾತ್ರಗಳು ನೇಪಥ್ಯದಲ್ಲಿ ಉಳಿದರೂ ಕತೆಯಲ್ಲಿ ಬರುವ ದುರಂತ ಚಿತ್ರಣದಲ್ಲಿ ಪುರುಷರು ಪರೋಕ್ಷವಾಗಿ ಅಥವಾ ಪ್ರತ್ಯಕ್ಷವಾಗಿ ಕಾರಣವಾಗುವುದರ ಮೂಲಕ ಈ ಪಾತ್ರಗಳಿಗೆ ಪ್ರಾಮುಖ್ಯತೆ ಸಲ್ಲುತ್ತದೆ.

ಬೇಜವಬ್ದಾರಿ, ದುಡುಕು, ಸಣ್ಣತನ, ಹೊರಚಾಳಿ ಇಲ್ಲಿಯ ಗಂಡಸರ ಮುಖ್ಯ ಲಕ್ಷಣಗಳು. ಬೋಳೆತನ ಮತ್ತು ಸೋಮಾರಿತನಗಳಿಂದ ಕುಳಿತು ಉಣ್ಣುವವರೇ ಅಧಿಕ. ಕೈಹಿಡಿದ ಹೆಂಡತಿಯಲ್ಲಿ, ಮನೆಯ ಹೆಣ್ಣುಮಕ್ಕಳ ಮೇಲೆ ಕ್ರೌರ್ಯ, ಹಿಂಸೆ, ದೌರ್ಜನ್ಯ ಮತ್ತು ಅಧಿಕಾರ ಚಲಾಯಿಸುವವರೆ ಹೆಚ್ಚು. ಹೆಂಗಸರನ್ನು ಕಾಡಿದಷ್ಟು ಮನೆತನದ ಮರ್ಯಾದೆ, ಗೌರವಗಳು ಇಲ್ಲಿನ ಗಂಡಸರನ್ನು ಕಾಡುವುದಿಲ್ಲ. ಸ್ವಾರ್ಥ ಸಾಧನೆಗೆ ಆಚಾರವಿಚಾರಗಳನ್ನು ಗಾಳಿಗೆ ತೂರಿ, ಮನಸ್ಸಿಗೆ ಸರಿ ಎಂದು ಕಂಡ ರೀತಿ ಬದುಕುವವರೇ ಜಾಸ್ತಿ.

ಸಂಸ್ಕೃತಿ ವಾಹಕರಾಗಿ ಹೆಂಗಸರು ಮತ್ತು ನೈತಿಕ ಚೌಕಟ್ಟಿನ ಆವರಣವಿಲ್ಲದೆ ಬದುಕುವ ಗಂಡಸರು ಒಂದೇಮನೆಯ ಸೂರಿನಡಿ ಒಟ್ಟೊಟ್ಟಿಗೆ ಬದುಕುತ್ತಾರೆ. ಮನೆಯಲ್ಲಿ ಹೆಂಗಸರು ಸಹನಾಮೂರ್ತಿಗಳಾಗಿ ಮತ್ತು ಹೊಂದಾಣಿಕೆ ಸ್ವಭಾವದವರಾಗಲು, ಈ ಗಂಡಸರು ಅಪ್ರತ್ಯಕ್ಷವಾಗಿಯೂ ಮತ್ತು ಸಾಮಾಜಿಕ ಕಾರಣಗಳು ಪ್ರತ್ಯಕ್ಷವಾಗಿಯೂ ಕೆಲಸ ನಿರ್ವಹಿಸುತ್ತದೆ. ಒಳ್ಳೆವಿಚಾರ, ಸದ್ವರ್ತನೆ ಮತ್ತು ಸ್ತ್ರೀಪರ ವಿಚಾರಗಳನ್ನು ಅಳವಡಿಸಿದ ಕೆಲವೇ ಮಂದಿ ಪುರುಷ ಪಾತ್ರಗಳು ಇಲ್ಲಿವೆ.

ಒಟ್ಟು ಪಾತ್ರ ನಿರ್ವಹಣೆಯಲ್ಲಿ, ಹೆಣ್ಣಿನ ಬದುಕಿನ ಕಷ್ಟಗಳಿಗೆ ಕಾರಣವಾಗುವ ಪರಿಸರದ ಚಿತ್ರಣದ ಆಧ್ಯತೆಗಳಿಂದಾಗಿ, ಹೆಣ್ಣಿನ ಸ್ಥಿತಿಗೆ ಕಾರಣವಾಗುವ ಹಲವು ಪರಿಸ್ಥಿತಿಗಳಲ್ಲಿ ಗಂಡಸರೂ ಹೇಗೆ ಕಾರಣರಾಗುತ್ತಾರೆ ಎಂಬುದನ್ನು ಇಲ್ಲಿ ಮನಗಾಣಿಸುವ ಪ್ರಯತ್ನ ಮಾಡಿದ ಕಾರಣವಾಗಿ ನಿರ್ದಿಷ್ಟ ಸ್ವಭಾವದವರನ್ನಷ್ಟೆ ಇಲ್ಲಿ ಆಯ್ಕೆ ಮಾಡಿದಂತೆ ತೊರುತ್ತದೆ.

**ಕೆಲವು ಪುರುಷ ಪಾತ್ರಗಳು**

ಅಜ್ಜಯ್ಯ (ಅಕ್ಕು), ವಾಸು(ಅಕ್ಕು), ಬಳುವಟೆ ನಾರಾಯಣ(ಅಲ್ಲಲ್ಲಿನ ಲೊಕದವರು), ವಾಚಣ್ಣ (ಒಂದು ಕಳ್ಳವೃತ್ತಾಂತ), ನಾಗಪ್ಪ (ಯಾತ್ರೆ) ಭಾಸ್ಕರ, ವಾಸುದೇವರಾಯರು (ಅಸ್ಪೃಶ್ಯರು), ಅಪ್ಪಣ್ಣ (ಅರತಿತಟ್ಟೆ).

ಹೆಣ್ಣಾಗಿ ಹುಟ್ಟಿದವಳ ಸ್ವಭಾವ, ವರ್ತನೆ ಮತ್ತು ಅವಳ ಭವಿಷ್ಯದ ಸಾಮಾಜಿಕ ಪಾತ್ರವನ್ನು ನಿರ್ಧರಿಸುವಲ್ಲಿ ಕುಟುಂಬ ವ್ಯವಸ್ಥೆ ಮತ್ತು ವೈವಾಹಿಕ ಜೀವನದ ಪಾತ್ರವನ್ನು, ತ್ರಿವೇಣಿಯವರಂತೇ ವೈದೇಹಿಯವರೂ ಮಹತ್ವದ್ದಾಗಿ ಪರಿಗಣಿಸುತ್ತಾರೆ.

ಸಾಮಾಜಿಕರಣ ಮತ್ತು ಸಾಂಸ್ಕೃತೀಕರಣ ಪ್ರಕ್ರಿಯೆಗಳು ಪರೋಕ್ಷವಾಗಿ ಹೆಣ್ಣಿನ ನಿರ್ವಚನವನ್ನು ನಿರ್ದಿಷ್ಟ ಮಾದರಿಗೆ ಸೀಮಿತವಾಗಿಸಿರುವುದನ್ನು, ಮತ್ತು ಈ ಸೀಮಿತತೆಯ ಬದ್ಧತೆಯನ್ನು ಪ್ರಶ್ನಿಸುವ ದಿಕ್ಕಿನಲ್ಲಿ ಹೆಣ್ಣಿನಲ್ಲಿ ಮೂಡುವ ಬಿಡುಗಡೆಯ ಆಶಯವನ್ನು ವೈದೇಹಿ ಕತೆಗಳು ವ್ಯಕ್ತಪಡಿಸಿದೆ. ಹಲವಾರು ಕತೆಗಳ, ಘಟನೆಗಳು, ನಿರೂಪಣೆಗಳು, ಹೆಣ್ಣಿನ ಆಂತರಿಕ ತುಮುಲಗಳು, ಬಾಹ್ಯಕಾರಣಗಳು, ಅವಳ ಪ್ರತಿಕ್ರಿಯೆ, ಪ್ರಯತ್ನಗಳ ಸಫಲತೆ ಅಥವಾ ವಿಫಲತೆ ಈ ಎಲ್ಲಾ ವಿವರಗಳ ಮೂಲಕ ಹೆಣ್ಣನ್ನು ವಿವರಿಸುವ, ಅವಳ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳುವ ದಿಕ್ಕಿನಲ್ಲಿ ಲೇಖಕಿಯ ಪ್ರಯತ್ನವಿದೆ.

ಲೇಖಕಿಯ ಪ್ರಯತ್ನವನ್ನು ಗಮನಿಸುವ ದಿಕ್ಕಿನಲ್ಲಿ ಈ ಕೆಳಗಿನ ವರ್ಗೀಕರಣ ಮೂಲಕ ಕತೆಗಳ ವಿಶ್ಲೇಷಣೆಯನ್ನು ಮಾಡಲಾಗಿದೆ.

೧. ಕುಟುಂಬ ವ್ಯವಸ್ಥೆ ಮತ್ತು ಸ್ತ್ರೀ

೨. ವೈವಾಹಿಕ ಬದುಕು ಮತ್ತು ಸ್ತ್ರೀ

೩. ವೈದೇಹಿ ಕತೆಗಳಲ್ಲಿ ಸ್ತ್ರೀಮಾದರಿಗಳು.

**ಕುಟುಂಬ ವ್ಯವಸ್ಥೆ ಮತ್ತು ಸ್ತ್ರೀ:** ವೈದೇಹಿ ಕತೆಗಳಲ್ಲಿ ಬರುವ ಕುಟುಂಬ ವ್ಯವಸ್ಥೆ ಕೂಡುಕುಟುಂಬದ ಮಾದರಿ. ತಂದೆ, ತಾಯಿ, ಮಕ್ಕಳು, ಸೊಸೆಯಿಂದಿರು, ಮೊಮ್ಮಕ್ಕಳು, ಹಿರಿಯರು ಬದುಕಿದ್ದರೆ ಹಿರಿಯರು, ಅನಾಥ ಬಂಧುಗಳು - ಹೀಗೆ ಹಲವು ಸದಸ್ಯರನ್ನೊಳಗೊಂಡ ಸಾಮಾಜಿಕ ಸಂಸ್ಥೆಯ ರೂಪ ಈ ಕುಟುಂಬ. ಪ್ರಾಯಕ್ಕೆ ಬರುವ ಹೆಣ್ಣುಮಕ್ಕಳು, ಗಂಡುಮಕ್ಕಳು ಮನೆಯ ಹಿರಿಯರ ಜತೆಯಲ್ಲಿ ಬದುಕುವುದರಿಂದ ಸಹಜವಾಗಿ ಹಿರಿಯರ ಅನುಭವ ಕಥಾನಕಗಳು, ಉಪದೇಶಗಳು, ನಡೆನುಡಿಗಳು ಮಕ್ಕಳ ಮೇಲೆ ಪರಿಣಾಮವನ್ನು ಬೀರಿವೆ. ಈ ಪ್ರಭಾವದ ಕಕ್ಷೆಯೊಳಗೆ ಬಲವಾಗಿ ಸಿಕ್ಕಿಕೊಳ್ಳುವವರು ಹೆಣ್ಣುಮಕ್ಕಳು. ಹೆಣ್ಣುಮಕ್ಕಳ ಸಾಮಾಜಿಕರಣ ಪ್ರಕ್ರಿಯೆಯು ಹಿರಿಯರ ಸಾಂಗತ್ಯದಲ್ಲಿ ಕುಟುಂಬ ವ್ಯವಸ್ಥೆಯಲ್ಲಿ ಬಾಲ್ಯದಿಂದಲೇ ಪ್ರಾರಂಭಗೊಳ್ಳುತ್ತದೆ.

ಹೆಣ್ಣುಮಕ್ಕಳು ಮುಚ್ಚಟೆಯಾದಷ್ಟು ಜಾತಿ, ಧರ್ಮ, ದೇಶ, ಮನೆ ಎಲ್ಲವೂ ಉಳಿಯುತ್ತದೆ ಎನ್ನುವ ಅಜ್ಜಯ್ಯ, ಅಜ್ಜಿ, ಅಮ್ಮ, ಅಪ್ಪಯ್ಯ, ಮಾವಯ್ಯನವರು ಮನೆಯಲ್ಲಿ ಇರಬೇಕು ಎಂದು ಗೌರಮ್ಮ ತಾವು ಹುಟ್ಟಿಬೆಳೆದ ಪರಿಸರವನ್ನು ನೆನೆಯುತ್ತಾರೆ.

"ತನ್ನ ಅಜ್ಜಯ್ಯ ಮನೆಯ ಹೊಸಿಲು ದಾಟಲು ಬಿಟ್ಟಿದರೇ ಮದುವೆಯಾಗುವವರೆಗೆ? ಅಪ್ಪಯ್ಯ, ಅಣ್ಣಯ್ಯ, ಮತ್ತೇನು! ಹೆಣ್ಣುಮಕ್ಕಳು ಎಲ್ಲಿಗೂ ಹೋಗಬಾರದು, ಅವರಿಗೆ. ಕಡೆಗೊಂದು ನಗುವನ್ನಾದರೂ ಗಟ್ಟಿಯಾಗಿ ಆಡುವಂತಿಲ್ಲ. ಹೆಣ್ಣುಮಕ್ಕಳ ನಗೆ ಹಂಚಿಗೂ ಕೇಳಿಸಬಾರದು ಎನ್ನುತ್ತ ಬೆಳೆಸಿದರು[1]".(ಅಸ್ಪೃಶ್ಯರು: ೧೨೦:೧೯೯೨)

ಮನೆಯ ಹಿರಿಗಂಡಸರ ಬಿಗಿ ಬಂದೊಬಸ್ತುಗಳಲ್ಲಿ ಬೆಳೆದ ಗೌರಮ್ಮನವರಿಗೆ ಹೆಣ್ಣುಮಕ್ಕಳ ಮುಚ್ಚಟೆ ಸಮ್ಮತವೆನಿಸುತ್ತದೆ. ಹೆಣ್ಣುಮಕ್ಕಳಿಗೆ ಮಾತ್ರ ಜಾತಿ, ಧರ್ಮ ದೇಶ, ಮನೆ ಮೊದಲಾದ ಸಾಂಸ್ಕೃತಿಕ ವಿಚಾರಗಳು ಯಾಕೆ ಮುಖ್ಯವಾಗುತ್ತವೆ ಎನ್ನುವ ದಿಕ್ಕಿನಲ್ಲಿ ಮನಸ್ಸು ಹರಿಯಗೊಡದಷ್ಟು ಪಾರಂಪರಿಕ ಮೌಲ್ಯಗಳು ಅವರಲ್ಲಿ ರಕ್ತಗತವಾಗಿವೆ. ಹಿರಿಯರು ಏನೇ ನಿರ್ದೇಶನ ನೀಡಿದರೂ ಅದು ಹೆಣ್ಣುಮಕ್ಕಳಿಗೆ ಒಳ್ಳೆಯದನ್ನೆ ಮಾಡುತ್ತವೆ

ಎನ್ನುವ ಭಾವನೆಯನ್ನು ಅವರು ಹುಟ್ಟಿನಿಂದಲೇ ಬೆಳೆಯಿಸಿಕೊಂಡಿದ್ದಾರೆ. "ದೊಡ್ಡವರು ಹೇಳಿದ ಮೇಲೆ ಮುಗಿಯಿತಪ್ಪ. ಅವರೇನು ಕೆಟ್ಟದಕ್ಕೆ ಹೇಳುತ್ತಾರೆಯೇ? ಅವರು ಹೇಳಿದ ಮೇಲೆ ಕೇಳುವುದೇ ಸರಿ". (ಅದೇ, ಪುಟ:೧೨೧)

ಬಿಗಿವಾತಾವರಣ ತಮ್ಮ ಒಳ್ಳೆಯದಕ್ಕೆ ಎಂಬ ಭಾವನೆ ಬೆಳೆಯಿಸಿಕೊಂಡಿರುವ ಗೌರಮ್ಮ, ಪಾರ್ತಕ್ಕ, ಪುಟ್ಟಮ್ಮತ್ತೆ, ಮೀನಾಕ್ಷತ್ತೆ ಮೊದಲಾದವರಿಗೆ, ತಮ್ಮ ಮುಂದಿನ ಪೀಳಿಗೆಯೂ ಅದೇ ಪರಿಸರದಲ್ಲಿ ಬಾಳಿದರೆ ಉತ್ತಮವೆಂಬ ಭಾವನೆ ಇದೆ. ಮನೆಯಲ್ಲಿ ಗಂಡನಾದವನು ಹೆಂಡತಿಯನ್ನು ಹದ್ದುಬಸ್ತಿನಲ್ಲಿಡವುದೇ ಚೆಂದವೆಂಬ ಭಾವನೆ, ಅವರದು.

"ಪಾರ್ತಕ್ಕನ ಮಟ್ಟಿಗೆ,ಪೌರುಷ ಎಂಬುದಿದ್ದರೆ ಅದು ರತ್ನನ ಗಂಡನಿಗೇ. ಹೇಗೆ ಹೆಂಡತಿಯನ್ನ ಮುಷ್ಠಿಯೊಳಗೆ ಇರಿಸಿಕೊಂಡಿದ್ದಾರೆ! ಹೆಣ್ಣುಮಕ್ಕಳು ಹಾಗೆ ಗಂಡನ ಮುಷ್ಠಿಯೊಳಗೆ ಇದ್ದರೇ ಒಂದು ಮನೆ. ಅಲ್ಲವಾದರೆ ಅದು ಮನೆಯೇ..?"(ಅದೇ:ಪುಟ:೫೯)

ಹೆಣ್ಣುಮಕ್ಕಳನ್ನು, ಹೆಂಡಂದಿರನ್ನು ಬಿಗಿವಾತಾವರಣದಲ್ಲಿ ಬೆಳೆಸುವುದು, ಸಾಕುವುದು, ಈ ಕುಟುಂಬ ವ್ಯವಸ್ಥೆಯಲ್ಲಿ ಸಾಮಾನ್ಯ ಸಂಗತಿಯಾಗಿರುತ್ತದೆ. ಹೆಣ್ಣು ಮಕ್ಕಳನ್ನು ಮದುವೆಗೆಂದೇ ಬೆಳಿಸಿ, ದೊಡ್ಡವಳನ್ನಾಗಿ ಮಾಡಲಾಗುತ್ತದೆ. ಯಶೋದಾ ಹೇಗಿದ್ದಾಳೆ, ಹೇಗಿರಬೇಕು ಎನ್ನುವುದನ್ನೆಲ್ಲ ಅವಳ ತಂದೆ, ರಂಗಜ್ಜಿ ನಿರ್ಧರಿಸುತ್ತಾರೆ. ಅವಳ ಮದುವೆ, ಭವಿಷ್ಯ ಜೀವನವನ್ನೆಲ್ಲ ಸ್ವತಃ ಹಿರಿಯರೇ ನಿರ್ಧರಿಸುತ್ತಾರೆ. ವಾರಿಜಾ ತಂದೆಯ ನೆರಳಿನಂತೆ ಬರುವವಳು, ಹೋಗುವವಳು. ಅವಳ ಚಹರೆ, ರೂಪ, ಚಿನ್ನ, ಬಣ್ಣಗಳೆಲ್ಲವೂ ಮದುವೆ ವಿಚಾರಕ್ಕಷ್ಟೇ ಸೀಮಿತವಾದ ಅರ್ಥವನ್ನು ಹೊಮ್ಮಿಸುವ ರೀತಿಯವು.

ಈ ಕತೆಗಳಲ್ಲಿ ಬರುವ ಅನೇಕ ಹಿರಿಮನೆಗಳ ವಿವರಗಳು ಇಲ್ಲಿ ಯುವ ಸಾಕ್ಷಿ ಪ್ರಜ್ಞೆಯಲ್ಲಿ ಮೂಡಿದ ಪರಂಪರೆಯ ಚಿತ್ರಣವಾಗಿದೆ.'ಅಕ್ಕು'ವಿನ ಅಜ್ಜಯ್ಯನ ಮನೆ, 'ಯಾತ್ರೆ'ಯ ಅಜ್ಜಯ್ಯನ ಒಡೆದ ಅವಿಭಕ್ತಕುಟುಂಬ, 'ಆರತಿ ತಟ್ಟೆ'ಯ ಅಪ್ಪಣ್ಣಜ್ಜಯ್ಯನ ಮನೆ, 'ಭೂತ'ದ ದೊಡ್ಡಪ್ಪನ ಸಂಸಾರ ಇವುಗಳೆಲ್ಲ ಹಿರಿಯರ ಮನೆಗಳು. ಈ ಮನೆಗಳ ಒಳವಿವರಗಳನ್ನು ಕುತೂಹಲದಿಂದ ವೀಕ್ಷಿಸುವ, ವಿಶ್ಲೇಷಣೆ ನಡೆಸುವ ಸರಸ, ಮೀರಾ, ಯಶವಂತಿ, ಲತ, ಸಮಾಜಶಾಸ್ತ್ರಜ್ಞೆ ಮೊದಲಾದವರು ತಮ್ಮ ಪರಂಪರೆಯನ್ನು ಕುತೂಹಲದಿಂದ ಗಮನಿಸುವ ಯುವ ಪೀಳಿಗೆ ಆಗಿದ್ದಾರೆ. ಆಧುನಿಕ ಪ್ರಜ್ಞೆಯ ಈ ಹುಡುಗಿಯರಿಗೆ ಈ ಕುಟುಂಬಗಳಲ್ಲಿ ಹೆಣ್ಣಿನ ದುರಂತದ ಚಿತ್ರವಲ್ಲದೆ ಬೇರೇನೂ ಕಾಣಿವುದಿಲ್ಲ.

ಈ ಕುಟುಂಬ ವ್ಯವಸ್ಥೆಯಲ್ಲಿ ಮನೆ ಹಿರಿಯ ಯಜಮಾನ ಸ್ಥಾನದಲ್ಲಿರುವವನು. ಅವನ ಅಧಿಕಾರ, ನಿಯಂತ್ರಣಕ್ಕೆ ಒಳಗಾಗುವವರು ಮನೆ ಹೆಂಗಸರು. ಮಾನಸಿಕವಾಗಿ ಮತ್ತು ದೈಹಿಕವಾಗಿ ಬಳಲುವ, ನೋವನ್ನು ಉಣ್ಣುವ ಹೆಂಗಸರೇ ಇಲ್ಲಿ ಅಧಿಕ. ಅವರಿಗೆ ಸ್ವಂತ ವ್ಯಕ್ತಿತ್ವವೆಂಬುದೇ ಇಲ್ಲ. ಅದೇನಿದ್ದರೂ ಪೂರ್ವನಿರ್ಧಾರಿತ ವಿಚಾರಗಳಿಂದ ಬದ್ಧತೆಯನ್ನು ಪಡೆದಿರುತ್ತದೆ. ಅಕ್ಕು ಹುಟ್ಟಿ, ಬೆಳೆದ ಮನೆ ವಾತಾವರಣದಲ್ಲಿ ಅವಳ ತಂದೆ 'ಅಜ್ಜಯ್ಯನ'ದೇ ಯಜಮಾನಿಕೆ. ಮನೆಯಲ್ಲಿರುವವರು ಇರುವ ಸ್ಥಿತಿ ಹೇಗಿತ್ತೆಂದರೆ-

"ಹೆಂಗಸರು....ಮಜ್ಜಿಗೆ ಕಡಿಯಲಿಕ್ಕೆ, ಅಡಿಗೆಗೆ ಉಪ್ಪುಹುಳಿ ಹಾಕಲಿಕ್ಕೆ. ನೀರೆತ್ತಲಿಕ್ಕೆ, ಹೊಸ ಸೀರೆ ಚಿನ್ನ, ತೊಟ್ಟು ಮದುವೆ, ಉಪನಯನ ಇತ್ಯಾದಿಗಳಿಗೆ ಹೋಗಿ ಬರಲಿಕ್ಕೆ, ಗಂಡಸರು ವ್ಯವಹಾರ ನೋಡಿ ಅಜ್ಜಯ್ಯನಿಗೆ ವರದಿ ಒಪ್ಪಿಸಲಿಕ್ಕೆ, ಆ ಮನೆಯ ಕಂಭಗಳಂತೆ, ತಲೆಯ ಮೇಲೆ ಭಾರವಿದ್ದರೂ ತುಟಿ ಎರಡು ಮಾಡರು'" (ಬೆಳ್ಳಿಬಾಗಿನ:೧೧೮:೧೯೯೨)

ಅಕ್ಕುವಿನ ಮನೆಯಲ್ಲಿ ಅಧಿಕಾರದ ಒಂದು ಶ್ರೇಣೀಕೃತ ವ್ಯವಸ್ಥೆ ಇದೆ. ಅಜ್ಜಯ್ಯ, ದೊಡ್ಡತ್ತೆ ಮತ್ತು ವಾಸು ಚಿಕ್ಕಪ್ಪನವರ ರೂಪದಲ್ಲಿರುವ ಈ ವ್ಯವಸ್ಥೆಯ ಮುಖ್ಯ ಗುರಿ ಅಕ್ಕು. ಅಕ್ಕು ಅಜ್ಜಯ್ಯನ ಸ್ವಂತ ಮಗಳು. ಅವಳ ತಂಗಿ ಸಿರಿ ಮದುವೆಯಾಗಿ ಗಂಡನ ಮನೆ ಸೇರಿದ್ದಾಳೆ. ಮದುವೆಯಾಗಿರುವ ಅಕ್ಕು ಗಂಡನನ್ನು ಒಲ್ಲೆಂದು ತೌರುಮನೆಯಲ್ಲಿಯೇ ಉಳಿದಿದ್ದಾಳೆ. ಅಕ್ಕುವಿನ ತಿರುಗಾಟದಲ್ಲಿ. ಅವಳು ಬದುಕುವ ರೀತಿಯಲ್ಲಿ ಸ್ವಾತಂತ್ರ್ಯವಿರುವಂತೆ ಭಾಸವಾಗುತ್ತದೆ. ಆದರೆ ಅಕ್ಕುವಿನ ಸ್ವಾತಂತ್ರ್ಯದ ಮಿತಿ ಅವಳ ಗಂಡ ಪ್ರತ್ಯಕ್ಷವಾದ ಮೇಲೆ ಪ್ರಕಟಗೊಳ್ಳುತ್ತದೆ. ಅವಳನ್ನು ಗಂಡನ ಹತ್ತಿರ ಕಳಿಸುವಲ್ಲಿ. ಅವನ ಹಿಂದೆ ಹೋಗುವಂತೆ ಒತ್ತಾಯಿಸುವಲ್ಲಿ, ಕೋಣೆಯೊಳಗೆ ಕಟ್ಟಿಹಾಕಿ ಹೊಡೆಯುವುದರಲ್ಲಿ. ಕೌಟುಂಬಿಕ ಕ್ರೌರ್ಯ ಬಿಚ್ಚಿಕೊಳ್ಳುತ್ತಾ ಅಕ್ಕುವಿನ ಅಧೀನ ಸ್ಥಿತಿಯನ್ನು ಅಭಿವ್ಯಕ್ತಿಸುತ್ತದೆ. ನಿರಂತರ ಶಿಕ್ಷೆ ನೀಡುವುದರ ಮೂಲಕ ಅಕ್ಕುವನ್ನು ನಿಯಂತ್ರಿಸುವ ಪ್ರಯತ್ನಕ್ಕೆ ಕೌಟುಂಬಿಕ ನೆಲೆಯಲ್ಲಿ ಸಮ್ಮತಿ ದೊರೆಯುತ್ತದೆ. ತನ್ನ ಉನ್ಮಾದದ ಸ್ಥಿತಿಯಲ್ಲಿ ಅಕ್ಕು ಪ್ರಕಟಿಸುವ ಪ್ರಕೃತಿ ಸಹಜ ಹೆಣ್ತನದ ಅನುಕರಣೆಗಳು ವಾಸ್ತವಿಕತೆಯ ವಿಡಂಬನಾರೂಪಗಳಾಗಿವೆ.

ರತ್ನ, ಮೀನಾಕ್ಷಿ, ಅತ್ತೆಯರು ಇದೇ ವೃತ್ತದೊಳಗೆ ಸುತ್ತುವ 'ಆರತಿ ತಟ್ಟೆ' ಮಾದರಿಗಳು. ಗಂಡನ ಕ್ರೌರ್ಯ, ಹಿಂಸೆಗಳನ್ನು ಕೌಟುಂಬಿಕ ನೆಲೆಯಲ್ಲಿ ಸದ್ದಿಲ್ಲದೆ ಒಪ್ಪಿಕೊಂಡವರು. ಈ ಕುಟುಂಬದಲ್ಲಿರುವ ಯಾವ ಗಂಡಸರೂ ಜವಾಬ್ದಾರಿಯಿಂದ, ಸೌಹಾರ್ದದ ನಡವಳಿಕೆಯಿಂದ ವರ್ತಿಸಿದವರೇ ಅಲ್ಲ. ಹೆಣ್ಣಿನ ಸಮಾನತಾಕಲ್ಪನೆಯಾಗಲಿ, ಸ್ವಾತಂತ್ರ್ಯದ ಅಭಿಲಾಶೆಗಳಾಗಲಿ ಪ್ರಕಟಗೊಳ್ಳದ ರೀತಿಯಲ್ಲಿ ಈ ಪರಿಸರದ ನಿಯಂತ್ರಣವಿದೆ.

ದೈಹಿಕವಾಗಿ ಮತ್ತು ಮಾನಸಿಕವಾಗಿ ಮನೆ ಹೆಂಗಸರನ್ನು ನಿಯಂತ್ರಣಕ್ಕೆ ಗುರಿಪಡಿಸಲು ಇಲ್ಲಿರುವ ಗಂಡಸರು ಉಪಯೋಗಿಸುವ ವಿಧಾನಗಳು: ಬೈಗಳು, ಹೊಡೆತ, ಹಿಂಸೆ, ಮತ್ತು ವಿರುದ್ಧನಿಯ ಮೂದಲಿಕೆ. ಈ ಎಲ್ಲಾ ವಿಧಾನಗಳನ್ನು ಮೂಕವಾಗಿ ಅನುಭವಿಸುತ್ತ, ತಮ್ಮ ದುಃಖವನ್ನು ಬಹಿರಂಗ ಪಡಿಸಲಾಗದ ಹೆಂಗಸರು ಇಲ್ಲಿ ಮತಿವಿಕಲ್ಪಗೊಂಡಿದ್ದಾರೆ. 'ಅತ್ತೆಯ' ಸಾವಿನ ಮೊದಲಿನ ಹುಚ್ಚು, 'ದೊಡ್ಡಮ್ಮ'ನ ಅಳು ಮತ್ತು ರಾತ್ರಿ ಬಾವಿಸ್ನಾನದ ಭರಾಟೆ, 'ಮೀನಾಕ್ಷ'ತ್ತೆ ಪ್ರಾಯದಲ್ಲಿ ತನ್ನ ಸುಖಕ್ಕೆ ಅಡ್ಡಿಬಂದವರನ್ನೆಲ್ಲ ಕಾಗೆರೂಪದಲ್ಲಿ ಕಾಡುವುದನ್ನು ಕಾಣವುದು - ಇವುಗಳೆಲ್ಲ ಈ ಹೆಂಗಸರು ಅನುಭವಿಸಿದ ನೋವಿನ ಪ್ರಕರಣಗಳ ಪ್ರಕಟರೂಪಗಳು.

ಈ ಪರಿಸರವನ್ನು ಹತ್ತಿರದಿಂದ ನೋಡಿ ಬೆಳೆದವರಾದ ಆಧುನಿಕ ಪ್ರಜ್ಞೆಯ ಯಶವಂತಿ, ಲತ, ಕಲಾವತಿ, ಸರೋಜಾ, ಯಶೋದಾ, ಅಚಲ ಮೊದಲಾದವರಿಗೆ ಕುಟುಂಬದಲ್ಲಿ ತಮ್ಮ ಸಾಮಾಜಿಕ ಪಾತ್ರ ನಿರ್ವಹಣೆಯಲ್ಲಿ ಕಿಂಚಿತ್ತೂ ಭರವಸೆ ಉಳಿದಿಲ್ಲ. ಈ ಹುಡುಗಿಯರು ತಮ್ಮ ಅತ್ತೆ, ಅಮ್ಮ, ದೊಡ್ಡಮ್ಮ,ಅಕ್ಕ, ಮೊದಲಾದವರಿಂದ ತಮ್ಮನ್ನು ಪ್ರತ್ಯೇಕಿಸಲು, ಪ್ರತ್ಯೇಕವಾಗಿ ಗುರುತಿಸಿಕೊಳ್ಳಲು ಪ್ರಯತ್ನ ಮಾಡುತ್ತಾರೆ.ಕ್ರೂರಿ ಗಂಡನ ಸೇವೆಗೆ ಸದಾ

ಸಿದ್ಧಳಿರುವ ಅಕ್ಕ ರತ್ನಾಳ ವರ್ತನೆ ನೋಡಿದಾಗೆಲ್ಲಾ ಸರೋಜಾ ' ತಾನು ಆಸ್ಥಾನದಲ್ಲಿದ್ದರೆ...' ತಾನು ಅಕ್ಕನ ಸ್ಥಿತಿಯಲ್ಲಿದ್ದರೆ ಯಾವ ರೀತಿ ವರ್ತಿಸಬೇಕು ಎಂದು ಮಾನಸಿಕ ಸಿದ್ಧತೆ ನಡೆಸುತ್ತಾಳೆ. ಸರೋಜಾಳಂತೆ ಯಶೀಯೂ ಸತತವಾಗಿ ರಂಗಜ್ಜಿ ಪ್ರಭಾವದಿಂದ ತನ್ನನ್ನು ಬಿಡಿಸಿಕೊಳ್ಳುವ ಪ್ರಯತ್ನ ಮಾಡುತ್ತಾಳೆ. "ಅಜ್ಜಿ, ಅಮ್ಮ ಅಪ್ಪ, ನೆರೆಹೊರೆಯವರು ತಾನು ಹುಟ್ಟುವ ಮೊದಲೇ ಸೃಷ್ಟಿಸಿ ಇಟ್ಟ ಆ ಹಳೆಯ, ನಾರುವ, ಬೋಳುಬೇಲಿಯ ಒಳಗೆ ತನ್ನ ನಾಲಿಗೆ ಬಂಧಿತವಾಗಬೇಕೆ? ಈ ಬೇಲಿ ಹರಿದುಕೊಂಡು ಹೊರಗೆ ಬರಬೇಕು ತಾನು.." ಎಂದೆಲ್ಲಾ ಅವಳು ಯೋಚಿಸುತ್ತಾಳೆ" (ಚಿಪ್ಪು: ಪುಟ: ೧೦೩).

**ವೈವಾಹಿಕ ಬದುಕು ಮತ್ತು ಸ್ತ್ರೀ**

ತ್ರಿವೇಣಿಯವರಂತೆ ವೈದೇಹಿಯವರೂ ವಿವಾಹ ಹೆಣ್ಣಿನ ಬದುಕಿನಲ್ಲಿ ಅನಿವಾರ್ಯವೆಂದು ಒಪ್ಪಿಕೊಳ್ಳುತ್ತಾರೆ. ಮದುವೆಗಿರುವ ಆವಶ್ಯಕತೆ, ಮದುವೆ ಹೆಣ್ಣಿನ ಬದುಕಿನಲ್ಲಿ ನಿರ್ವಹಿಸುವ ಪಾತ್ರ, ವಿವಾಹದಿಂದ ಹುಟ್ಟಿಕೊಳ್ಳುವ ಸಮಸ್ಯೆಗಳು, - ಈ ಎಲ್ಲಾ ಅಂಶಗಳು, ವಿವಿಧ ಕತೆಗಳಲ್ಲಿ ಪುನರಾವರ್ತನೆಗೊಂಡಿವೆ. ಸುಮಾರು ಇಪ್ಪತ್ತೈದಕ್ಕೂ ಅಧಿಕ ವಿವಾಹಿತೆಯರ ಬದುಕಿನ ವಿವರಗಳ ಮೂಲಕ ದಾಂಪತ್ಯಜೀವನದ ವಿವಿಧ ಆಯಾಮಗಳನ್ನು ತೋರಿಸಿಕೊಡಲಾಗಿದೆ. ಮದುವೆ ಕುರಿತು ಸಂದಿಗ್ಧತೆ ವ್ಯಕ್ತಪಡಿಸುವ, ವಿವಾಹ ಸಂಬಂಧಗಳನ್ನು ನಿರಾಕರಿಸುವ ಅಥವಾ ತಿರಸ್ಕರಿಸುವ ಪ್ರಸಂಗಗಳೂ ಇಲ್ಲಿ ಇವೆ. ವೈವಾಹಿಕ ಬದುಕಿನಲ್ಲಿ ಹೆಣ್ಣಿನ ಸ್ಥಾನವನ್ನು ತಿಳಿಸುವುದರ ಮೂಲಕ ಸಾಂಸ್ಕೃತಿಕರಣದ ಮೂಲಕ ಕಟ್ಟಿಕೊಳ್ಳಲಾದ ವಿಧೇಯ ಹೆಂಡತಿ ಮಾದರಿಯನ್ನು ಇಲ್ಲಿ ವಿಶದಪಡಿಸಿಕೊಳ್ಳಲಾಗಿದೆ.

ಸಮಾನ ಅಭಿರುಚಿ, ಪರಸ್ಪರ ಗೌರವದ ಭಾವನೆ ಮತ್ತು ಒಮ್ಮತವಿರುವ ಗಂಡ ಹೆಂಡತಿ ಕೂಡಿ ಬಾಳುವ ಆದರ್ಶ ವೈವಾಹಿಕ ಜೀವನದ ಚಿತ್ರಕ್ಕಿಂತ ಭಿನ್ನರೀತಿಯ ಕಟು ಅನುಭವದ ವಾಸ್ತವಿಕತೆಯೊಂದನ್ನು ಇಲ್ಲಿ ಕಾಣಿಸಲಾಗಿದೆ. ಈ ದಾಂಪತ್ಯದಲ್ಲಿರುವ ಗಂಡ ಹೆಂಡತಿ ಹೇಗಿರುತ್ತಾರೆಂದರೆ ----

**ಗಂಡಂದಿರು** : ಹೆಂಡತಿ ಮೇಲೆ ಅಧಿಕಾರ ಚಲಾಯಿಸುವವರು, ನಾನಾ ವಿಧದ ಹಿಂಸೆಗೆ ಗುರಿಪಡಿಸುವವರು, ಕ್ರೂರವಾಗಿ ವರ್ತಿಸುವವರು, ಬೇಜವಾಬ್ದಾರಿ ಅಥವಾ ಸೋಮಾರಿತನದಿಂದ ನಡೆದುಕೊಳ್ಳುವವರು, ಕೆಟ್ಟಚಟ, ಕೆಟ್ಟ ಸಂಬಂಧಗಳನ್ನು ಇಟ್ಟುಕೊಂಡಿರುವವರು. ಹೆಂಡತಿಯನ್ನು ಗೌರವ ಭಾವನೆಯಿಂದ, ಸಮಾನತಾ ಭಾವದಿಂದ ಕಾಣುವವರು, ಒಬ್ಬರೋ ಇಬ್ಬರು, ಉಳಿದ ಗಂಡಸರೆಲ್ಲ ಗಂಡನೆಂಬ ಹಕ್ಕು ಚಲಾಯಿಸುವವರೇ.

**ಹೆಂಡಂದಿರು:** ಗಂಡನ ಅಧಿಕಾರವನ್ನು, ಅವನು ಕೊಡುವ ಹಿಂಸೆಯನ್ನು ಅಪಾರ ತಾಳ್ಮೆಯಿಂದ ಸಹಿಸಿ ವಿಧೇಯವಾಗಿ ನಡೆದುಕೊಳ್ಳುವವರು, ಪಾಲಿಗೆ ಬಂದ ಪಂಚಾಮೃತವೆಂದು ತಿಳಿದು ಹೊಂದಿಕೊಂಡು ಬದುಕುವವರು, ಪ್ರತಿಭಟಿಸಲು ಸಾಧ್ಯವಾಗದೆ ಮನಸ್ಸಿನಲ್ಲಿಯೇ ಕೊರಗುವವರು, ಸ್ವಂತ ವ್ಯಕ್ತಿತ್ವವನ್ನೇ ಮರೆತು ಇನ್ನೊಬ್ಬರಿಗಾಗಿಯೇ ತಾವು ಬದುಕಲು ಇದ್ದೇವೆ ಎಂಬ ಭಾವನೆಯಲ್ಲಿರುವವರು. ವೈವಾಹಿಕ ಬದುಕು ಅಸಹನೀಯವಾದಾಗ ಅದರಿಂದ ಹೊರನಡೆದು ಒಂಟಿಯಾಗಿರುವ ಆದರೆ ಅತಂತ್ರಸ್ಥಿತಿಯಲ್ಲಿರುವ ಹೆಂಡಂದಿರೂ ಇಲ್ಲಿದ್ದಾರೆ. ವೈವಾಹಿಕ ಬದುಕಿನ ವಿವರಗಳಿರುವ ಕತೆಗಳು:

'ಒಂದು ಅಪರಾಧ ತನಿಖೆ', 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು', 'ಅಸ್ಪೃಶ್ಯ'ರು, 'ಯಾತ್ರೆ', 'ಭೂತ', 'ಅಕ್ಕು', 'ಆರತಿತಟ್ಟೆ', 'ಒಂದು ಕಳ್ಳವೃತ್ತಾಂತ', 'ಹಕ್ಕಿಲ್ಲದವರು', 'ಅಲ್ಲಲ್ಲಿನ ಲೋಕದವರು', 'ಗೂಡಿನೊಳಗೆ ಒಂದು ಹಕ್ಕಿ', 'ಕಾಣೆಯಾದವರು'.

ವೈದೇಹಿ ಕತೆಗಳ ಗೃಹಜಗತ್ತು ಕಟ್ಟಿಕೊಡುವ ಗೃಹಿಣಿ ಚಿತ್ರ ಬದುಕಿನಿಂದ ಏನನ್ನು ನಿರೀಕ್ಷಿಸದೆ ತನ್ನ ಮನೆ, ಗಂಡ, ಮಕ್ಕಳೆಂದು ಸಮರ್ಪಣಾಭಾವದಿಂದಿರುವ ಹೆಣ್ಣಿನ ಚಿತ್ರ, ಗೃಹಿಣಿ ವರ್ಗವನ್ನು ಪ್ರತಿನಿಧಿಸುವ ಗೌರಕ್ಕ (ಒಂದು ಅಪರಾಧ ತನಿಖೆ), ಲಕ್ಷ್ಮೀದೇವಮ್ಮ (ಅಲ್ಲಲ್ಲಿನ ಲೋಕದವರು), ಶಾರದೆ(ಮರಗಿಡ ಬಳ್ಳಿ), ಶಾಂತಮ್ಮ (ಬಂದು ಹೋಗುವವರು) ಮೊದಲಾದವರದು ಸಂತೃಪ್ತ ಜೀವನ. ಇವರಿಗೆ ಬದುಕಿನಿಂದ, ತಮ್ಮವರಿಂದ ಹೆಚ್ಚಿನ ನಿರೀಕ್ಷೆಗಳು ಇಲ್ಲ. ಗಂಡ, ಮನೆ ಮಕ್ಕಳು, ಮನೆಕೆಲಸವೆಂದು ಇವರು ತೃಪ್ತರು. ಹೇಳಿಕೊಳ್ಳಬಹುದಾದ ಸಮಸ್ಯೆಗಳೂ ಇವರಿಗೆ ಕಡಿಮೆ. ಪ್ರತ್ಯೇಕ ಅಸ್ತಿತ್ವವಿಲ್ಲದಂತೆ ಊಟ, ತಿಂಡಿ, ತಿರುಗಾಟಗಳಲ್ಲಿ ತಮ್ಮ ಜೀವನ ಸಾರ್ಥಕತೆಯನ್ನು ಪಡೆಯುವ ಈ ಹೆಣ್ಣುಗಳನ್ನು ಒಂದು ಗುಂಪಿನಲ್ಲಿ ಪರಿಗಣಿಸುತ್ತಾರೆ ಲೇಖಕಿ:

"..ಗಂಡಂದಿರು ದುಡ್ಡು ದುಡಿಯುತ್ತಾರೆ. ಹೆಂಗಳೆಯರು ಮನೆಯಲ್ಲಿದ್ದುಕೊಂಡು ಊಟ, ತಿಂಡಿ, ಪ್ರಶಸ್ತವಾಗಿ ನಡೆಯುವಂತೆ ನೋಡಿಕೊಂಡರಾಯಿತು. ಹೇಳಿಕೆ ಬಂದಲ್ಲಿಗೆ ಭರ್ಜರಿಯಾಗಿ ಅಲಂಕರಿಸಿಕೊಂಡು ಹೋಗುತ್ತ ಇಂಥವರ ಹೆಂಡತಿ ಎಂಬ ಕಾರಣಕ್ಕಾಗಿಯೇ ಮರ್ಯಾದೆ ಪಡೆಯುತ್ತಾರೆ[೭]". (ಒಂದು ಕಳ್ಳವೃತ್ತಾಂತ: ಪುಟ: ೧೨೦) ಈ ಹೆಂಗಸರನ್ನು ಪ್ರತ್ಯೇಕವಾಗಿ ಗುರುತಿಸುವುದು ಅಸಾಧ್ಯ : "ಚಪ್ಪರದ ತುಂಬ ಸೀರೆ ಚಿನ್ನದೊಳಗೆ ಮುಳುಗಿ ಪಿಳಿಗೊಡುವ ಹೆಂಗಸರು. ಅವರವರ ಗಂಡಂದಿರ ಸಾಮರ್ಥ್ಯ ತೋರಿಸುವ ಪುರುಷರ ಪೌರುಷ ಮಣಿಗಳಂತೆ ಹೊಳೆಯುತ್ತಿದ್ದರು"[೭] (ಅದೇ ಪುಟ: ೧೨೧).

ಮನೆಯಲ್ಲಿ ಅಡುಗೆಮನೆ ಮತ್ತು ಅದಕ್ಕೆ ಸಂಬಂಧಿಸಿದ ವ್ಯವಹಾರಗಳು ಈ ಹೆಂಗಸರ ಪ್ರಪಂಚದ ಮುಖ್ಯಭಾಗವಾದರೆ, ಮನೆಯಿಂದ ಹೊರಗೆ ಅವರು ಒಂದು ಗುಂಪಾಗಿ ಕಾಣಿಸಿಕೊಳ್ಳುತ್ತಾರೆ. 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ' ಮತ್ತು 'ಒಂದು ಕಳ್ಳ ವೃತ್ತಾಂತ' ಕತೆಗಳು ಈ ಗೃಹಿಣಿಯರ ನಡೆನುಡಿಗಳನ್ನು ವಿಶ್ಲೇಷಿಸುತ್ತವೆ. ತಮ್ಮ ಮಾತುಕತೆಗಳಲ್ಲಿ ಒಡವೆ, ವಸ್ತ್ರ, ಗಂಡ, ವಿವಾಹ, ಕಳೆದು ಹೋದ ದಿನಗಳ ಪೂರ್ವಸ್ಮೃತಿ - ಹೀಗೆ ಒಂದು ನಿರ್ದಿಷ್ಟ ಪರಿಧಿಗೆ ಸೀಮಿತವಾಗುವಂತೆ ತಮ್ಮ ವಿಚಾರಗಳನ್ನು ಮಂಡಿಸುತ್ತ ಕಾಲಕಳೆಯುವ ಈ ಹೆಂಗಸರು ಹೆಂಡತಿ ಪಾತ್ರಗಳಿಂದಲೇ ಹೆಚ್ಚು ಸಂತೃಪ್ತರಾಗಿದ್ದಾರೆ. ಹೆಂಡತಿ ಪಾತ್ರವನ್ನು ನಿರ್ವಹಿಸುತ್ತ 'ಸಂತೃಪ್ತ'ರಂತೆ ಕಾಣುವವರಲ್ಲಿ ಕೆಲವರು - ರತ್ನ, ಸುಬ್ಬಕ್ಕ, ಬಾಬಿ, ಮೀನಾಕ್ಷಿ, ಮಾಂಕಾಳಿ ಮತ್ತು ಬಚ್ಚಮ್ಮ.

ಇವರೆಲ್ಲಾ ವಿಧೇಯ ಪತ್ನಿಯರು, ಗಂಡನ ದಬ್ಬಾಳಿಕೆಯನ್ನು, ಕೆಟ್ಟ ಸ್ವಭಾವವನ್ನು, ನಡವಳಿಕೆಯಿಂದ ಉಂಟಾಗುವ ನಷ್ಟವನ್ನು ಮೌನವಾಗಿ ಸಹಿಸಿಕೊಂಡು ಬದುಕುವವರು. ಈ ಹೆಂಡತಿಯನ್ನು ಗಂಡಂದಿರು ಹಿಡಿತದಲ್ಲಿಟ್ಟಿದ್ದಾರೆ ಎನ್ನುವುದನ್ನೇ ಗೌರವದಿಂದ ಕಾಣುವವರು ಸುತ್ತಲೂ ಇದ್ದಾರೆ.

ರತ್ನಾ ತುಂಬಿದ ಸಂಸಾರದಲ್ಲಿ ಹುಟ್ಟಿ, ಮದುವೆಯಾಗಿ ಗಂಡನ ಮನೆ ಸೇರಿದವಳು, ರತ್ನಾಳ ಗಂಡ ಕೋಪಿಷ್ಟ. ತನ್ನ ಇಷ್ಟದ ಪ್ರಕಾರ ನಡೆಯದಿದ್ದರೆ ರಾದ್ಧಾಂತ ಮಾಡುವವನೇ. ರತ್ನಾ ಸಹನಾಮೂರ್ತಿ. ನೋವಾದರೂ, ಮರೆತು

ಗಂಡನ ಸೇವೆಗೆ ಸದಾ ಸಿದ್ಧವಾಗಿ ನಿಲ್ಲುವವಳು ಗಂಡನೆಂದರೆ ಅವಳಿಗೆ ಪ್ರತ್ಯಕ್ಷ ದೇವರೇ. ರತ್ನಾಳ ಗಂಡನ ವರ್ತನೆಗೆ ತಂಗಿ ಸರೋಜಾ ಅಸಮಧಾನ ತೋರಿಸಿದರೆ ಗಂಡನಿಗೆ ಪರವಾಗಿ ನಿಲ್ಲುವವಳು ರತ್ನಾಳೇ:

"..ಗಂಡನೆಂದರೆ ಏನೆಂತ ಮಾಡಿದೆ? ಬೇರೆ ದೈವ - ದೇವರು ಬೇಕ? ನಾಳೆ ನಮ್ಮ ಕಷ್ಟಸುಖಕ್ಕೆ ಆಗುವವರು ಗಂಡನೇ ಹೊರತು ಬೇರೆ ಯಾರಲ್ಲ. ಹೊರಗೆ ದುಡಿಯುವವರು ಅವರು ಸಿಟ್ಟು, ಮಾಡಿಕೊಂಡರೆ ನಾವು ಸಮಾಧಾನದಿಂದಿರಬೇಕು.'" (ಅಸ್ಪೃಶ್ಯರು: ಪುಟ: ೬೧). ತಾಯಿಮನೆಗೆ ಗಂಡನ ದೂರನ್ನು ತಂದವಳಲ್ಲ ರತ್ನ, 'ಯಾವುದಕ್ಕೂ ಕಡಿಮೆ ಇಲ್ಲದವರಂತೆ ಗಂಡನ ಸಿಟ್ಟನ್ನು ಒಂದು ಭೂಷಣವೆಂಬಂತೆ' ತಿಳಿದವಳು ರತ್ನಾ, ರತ್ನಾಳ ಗಂಡನ ಸ್ವಭಾವಕ್ಕೆ, ರತ್ನಾಳ ಸನ್ನಡತೆಗೆ ಅವಳ ಮನೆಯವರ ಬೆಂಬಲವಿದೆ. ಪಾರ್ತಕ್ಕ, ಗೌರಮ್ಮನವರಿಗೆ ಹೆಂಡತಿ ಮೇಲೆ ಅಧಿಕಾರ ಚಲಾಯಿಸುವವರು ನಿಜವಾದ ಗಂಡಸರು ಎಂಬ ಭಾವನೆ. ಪಾರ್ತಕ್ಕನ ಮಟ್ಟಿಗೆ 'ಪೌರುಷ ಎಂಬುದಿದ್ದರೆ ಅದು ರತ್ನಾಳ ಗಂಡನಿಗೇ, ಹೇಗೆ ಹೆಂಡತಿಯನ್ನು ಮುಷ್ಠಿಯೊಳಗೆ ಇರಿಸಿಕೊಂಡಿದ್ದಾನೆ! ಹೆಣ್ಣುಮಕ್ಕಳು ಹಾಗೆ ಗಂಡನ ಮುಷ್ಠಿಯೊಳಗೇ ಇದ್ದರೇ ಒಂದು ಮನೆ. ಅಲ್ಲವಾದರೆ ಅದು ಮನೆಯೇ?' ಗೌರಮ್ಮನಿಗೂ ಅಳಿಯನ ಸ್ವಭಾವ ಅಭಿಮಾನವೆನಿಸಿದೆ.

"ಶಿಸ್ತಾಗಿ ಮನೆ ಇಟ್ಟುಕೊಂಡು ಬೇಕಾದ್ದು ಮಾತ್ರ ತಂದು ಹಾಕಿ ಹೆಂಡತಿ, ಮಕ್ಕಳನ್ನು ಹದ್ದುಬಸ್ತಿನಲ್ಲಿಟ್ಟುಕೊಂಡಿರುವ ರತ್ನಳ ಗಂಡ ಸಾವಿರ ಪಾಲಿಗೆ ಬೇಕು". (ಅದೇ ಪುಟ.೬೦) ರತ್ನಾ ತನ್ನ ತಾಯಿ, ಪಾರ್ತಕ್ಕನ ಮಾತಿನ ಪ್ರಭಾವದಿಂದ ತನ್ನನ್ನು ತಾನು ಆದರ್ಶ ಗೃಹಿಣಿಯಾಗಿ ಕಲ್ಪಿಸಿಕೊಂಡಿದ್ದಾಳೆ. ಆದರೆ ಮನಸ್ಸಿನಲ್ಲಿ , ಅವಳ ಒಳಗೆ ಹೆದರಿಕೆಯ, ಬಂಧನದ ವೇದನೆ, ಅಡಗಿದೆ. ಈ ನೋವಿನ, ವೇದನೆಯ ಅರಿವು ರತ್ನ, ಗೌರಮ್ಮ ಇಬ್ಬರಿಗೂ ಇದೆ . ಆದರೆ ಹೆಣ್ಣಾಗಿ ಹುಟ್ಟಿದ ಮೇಲೆ ಅದನ್ನೆಲ್ಲ ಒಟ್ಟಿಗೇ ಹೊತ್ತು ತಂದಂತೆ . ಅದಕ್ಕೆಲ್ಲಾ ಬೇಜಾರು ಪಟ್ಟುಕೊಂಡರೆ ಹೌದೇ? ಎಂದು ಸಮಾಧಾನ ಮಾಡಿಕೊಂಡು ಅದಕ್ಕೆ ಹೊಂದಿಕೊಂಡಿದ್ದಾರೆ. ಮಾಂಕಾಳಿಗೆ ಸ್ವಂತ ವ್ಯಕ್ತಿತ್ವವಿದೆ. ಆದರೆ ಗಂಡನ ಸ್ವಭಾವದಿಂದ ಅವಳು ಅಪಮಾನಿತಳಾಗಿ ಬದುಕಬೇಕಾಗಿದೆ. ಮದುವೆಯಿಂದ ಮಾಂಕಾಳಿ ತನ್ನತನವನ್ನೇ ಕಳೆದುಕೊಳ್ಳುವ ಪರಿಸ್ಥಿತಿಯಲ್ಲಿದಾಳೆ.

"ಜಾಣೆ ಮಾಂಕಾಳಿ ಜಾಣೆಯದರೇನು? ಎಷ್ಟು ಚಂದವಾಗಿ ಹಾಡಿದರೇನು? ಅಟ್ಟರೇನು? ಹೂಕಟ್ಟಿದರೇನು? ಇದ್ದುದರಲ್ಲಿಯೇ ಗಂಜಿಯೋ ನೀರೋ ಮುಟ್ಟಟೆಯಾಗಿ ಬದುಕುವ ಕಲೆಯಲ್ಲಿ ಮುಳುಗಿದ್ದರೇನು? ಪುಟಿಯುವ ಉಲ್ಲಾಸವೇ ಆಗಿದ್ರೆನು? ಆಕೆ ಶ್ರುಳುವಟೆ ನಾರಾಯಣನ ಹೆಂಡತಿ ಎಂದೇ ಗುರುತಿಸಲ್ಪಡುವವಳು. ನಾರಾಯಣನಿಗೆ ಸಿಗುವ ಮರ್ಯಾದೆಗಿಂತ ಅವಳಿಗೆ ಒಂದು ಮುಷ್ಠಿ ಕಮ್ಮಿ ಮರ್ಯಾದೆ ಸಿಕ್ಕಿತೇ ಹೊರತು ಹೆಚ್ಚಲ್ಲ"[೧೦]. (ಅಲ್ಲಲ್ಲಿನ ಲೋಕದವರು: ಪುಟ ೧೫೫)

ಮಾಂಕಾಳಿಗೆ ತನ್ನ ಅಳಲನ್ನು ಹೆತ್ತ ತಂದೆತಾಯಿ ಹತ್ತಿರ ಹೇಳಬೇಕೆನಿಸಿದರು ಆಕೆ ಹಾಗೆ ಮಾಡಲಾರಳು. 'ನಾರಾಯಣನಂಥ ಗಂಡನಲ್ಲಿ ತಾನು ಮುಕ್ತಿ ಕಾಣಬೇಕು ಅಂತ ಇದ್ದರೆ ಯಾರಾದರೂ ಏನು ಮಾಡಿಯಾರು ಅಂತೆಲ್ಲ ಸಮಾಧಾನ ಮಾಡಿಕೊಳ್ಳಲು ಯತ್ನಿಸುವಳು' ಮಾಂಕಾಳಿ. ಮಾಂಕಾಳಿ ಗಂಡನನ್ನು ಹೊಂದಿಕೊಂಡೆ ಬಾಳುವವಳು. ಮೀನಾಕ್ಷತೆ (ಮೀನಾಕ್ಷಿ) ಗಂಡ ತನ್ನೆದುರೇ ಕೆಟ್ಟದಾಗಿ ವರ್ತಿಸಿದರೂ ಪ್ರತಿರೋಧ ತೋರಿಸಲಾಗದ ಮುಗ್ಧೆ. 'ಅದೆಲ್ಲ

ಒಂದು ಕಾಲ ಒಂದು ಚಟ. ಕಡೀಗೆ ಗಂಡಸ್ರೆ ಅವ್ನೆಲ್ಲ ಬಿಡ್ತೋ - ಅವ್ನ ದೊಡ್ಡದು ಮಾಡುಕಾಗ' ಎನ್ನುವ ಉದಾರತೆ ಅವಳದು. ಮೀನಾಕ್ಷತೆ ಆರತಿ ತಟ್ಟೆಯಂತೆ ಬಾಳಿದ ಹೆಂಗಸು. ಗಂಡನನ್ನು ಹೊಂದಿ ಬಾಳುವುದೆ ಸುಖ ಎಂಬ ಮನೋಭಾವದವಳು. ಗಂಡನ ಕೆಟ್ಟ ಚಟಗಳನ್ನು ಅನಿವಾರ್ಯವೆಂಬಂತೆ ಸಹಿಸಿ ಕೊಂಡಿರುವಾಕೆ. ಗಂಡ ತನ್ನನ್ನು ಎರಡು ಮಾತಿನಿಂದ ಮಾತನಾಡಿಸಿದರೆ ಅಷ್ಟಕ್ಕೇ ಅವಳಿಗೆ ತೃಪ್ತಿ.

"ಮೀನಾಕ್ಷತೆ ಮಟ್ಟಿಗೆ ಚಂದವಾಗಿ ಕಾಣವುದೆಂದರೆ (ಕಾಂಬುದೆಂದರೆ) ಯಂತಂತ ಮಾಡಿಯೇ? ಉಂಡಿರಾ? ತಿಂದಿರಾ? ಅಂತೇಳಿ ಗಂಡ ಕೇಂತಿದ್ರೆ ಸೈ ಅವಚಂದಗೋಪ''. (ಆರತಿ ತಟ್ಟೆ: ೧೮೮) ಮೀನಾಕ್ಷತ್ತೆ ದೊಡ್ಡಮ್ಮನಂತಹವರ ಕೈಕೆಳಗೆ ಬಾಳಿದವಳು. ದೊಡ್ಡಮ್ಮನಿಗೆ 'ಹೆಂಗಸೆಂದರೆ ಆರತಿ ತಟ್ಟೆಯಂತೆಯೇ ಎಪ್ಪಿದವರು ಹೇಳಿದಂತೆ ಸುತ್ತು ಹೊಡೆಯುವುದು ಮಾತ್ರ. ಸ್ವಂತ ಬುದ್ದಿ ಇಲ್ಲ'.

ಬಾಬಿಗೆ ಕೆಟ್ಟಚಾಳಿಯ ಗಂಡ, ಬದುಕಿರುವ ಅವನ ಮೊದಲ ಹೆಂಡತಿ, ತನಗೆ ತೌರಿನ ನೆಲೆ ಇಲ್ಲದಿರುವುದು - ಈ ಎಲ್ಲ ವಿಚಾರಗಳಿಂದ ತನ್ನ ಸ್ವಂತ ಬದುಕು ಎನ್ನುವುದಿದ್ದರೆ ಅದು ಗಂಡನಿರುವ ಮನೆಯಲ್ಲಿಯೇ ಎಂಬ ಭಾವನೆ ಬಂದಿದೆ. ನಾಗಮ್ಮ, ಗೌರಕ್ಕನವರೂ ಅವಳು ಗಂಡನೊಟ್ಟಿಗೇ ಬಾಳುವುದಕ್ಕೆ ಉತ್ತೇಜನ ನೀಡಿದ್ದಾರೆ. ತಾನಿರುವ ಸ್ಥಿತಿಯಲ್ಲಿ ಅದರಿಂದ ತಪ್ಪಿಸಿಕೊಂಡ ಬದುಕು ನಡೆಸುವ ಪರ್ಯಾಯನೆಲೆ ಬೇರೆ ಇಲ್ಲದಿರುದರಿಂದ ಬಾಬಿ ಪಾಲಿಗೆ ಬಂದ ಪಂಚಾಮೃತವೆನ್ನುವಂತೆ ಗಂಡನೊಟ್ಟಿಗೆ ಸಂಸಾರ ಮಾಡಿಕೊಂಡಿದ್ದಾಳೆ. ಹೊಂದಾಣಿಕೆ ಮಾಡಿ ಬದುಕನ್ನು ನಡೆಸಬೇಕೆನ್ನುವ ತಾತ್ವಿಕತೆಯಲ್ಲಿ ಬಾಬಿ ತನ್ನ ಮಟ್ಟಿಗೆ ಒಡವೆ ವಸ್ತ್ರ, ಮಗಳ ಮದುವೆ ಎಂದು ಸುಖವಾಗಿದ್ದಾಳೆ. ಗಂಡನನ್ನು ಬಿಟ್ಟು ಬಂದಿರುವ ಕುಸುಮಾಳಿಗೂ ಅವಳು ತನ್ನ ಆದರ್ಶವನ್ನೇ ಉಪದೇಶಿಸುತ್ತಾಳೆ.

ಬಚ್ಚಮ್ಮಳಿಗೆ ಗಂಡ ವಾಚಣ್ಣ ನಿಯತ್ತಿನವನಾಗಿರುವುದರಿಂದಲೇ ಸುಖವಿಲ್ಲದಾಗಿದೆ. ಬಡತನದಲ್ಲೇ ಹುಟ್ಟಿ, ಬೆಳೆದು ದೊಡ್ಡವಳಾದ ಬಚ್ಚಮ್ಮ ಮದುವೆ ನಂತರ ಗಂಡನ ಮನೆಯಲ್ಲಿ ಹೊಟ್ಟೆ ತುಂಬಾ ಉಂಡು ತಿರುಗುವೆ ಎನ್ನುವ ಆಸೆ ಹೊತ್ತವಳು.

ಅಲ್ಲಿ ಊಟಕ್ಕೇ ತತ್ವಾರದ ದಿನಗಳು ಎದುರಾದಾಗ ಆಕೆ ಅಡುಗೆ ಕೆಲಸಕ್ಕೆ ಹೋಗುತ್ತಾಳೆ. ಬಾಯಚಪಲಕ್ಕಾಗಿ ಮಕ್ಕಳಿಗಾಗಿ ತಿಂಡಿತಿನಿಸು ಕದ್ದು ತರುತ್ತಾಳೆ. ತನ್ನ ಕಳವಿನ ಪ್ರಕರಣಗಳಿಂದ ಸಾಕಷ್ಟು ಸಲ ಅವಮಾನಿತಳೂ ಆಗಿದ್ದಾಳೆ. ಮಗ ದೊಡ್ಡವನಾದ ಮೇಲೆ, ಅವಮಾನವಾಗುವ ಪ್ರಸಂಗ ಬೇಡವೆಂದು ಕೆಲಸಕ್ಕೆ ಹೋಗುವುದು ಬೇಡವೆಂದರೆ - 'ಗಂಡನೆಂಬವಗೆ ಯಾವಾಗ ಮನೆ ಮಕ್ಕಳ ಹೊಟ್ಟೆ ಕಾಂತಿಲ್ಯೊ ಅಂಥಲ್ಲಿ ಕೆಲಸಕ್ಕೆ ಹೊಗ್ದಿದ್ರೆ ಯಾರ ಹೊಟ್ಟೆ ಒಣಗಿ ಕಾಯೋದ್ ಹೇಳ್'' "(ಒಂದು ಕಳ್ಳ ವೃತ್ತಾಂತ: ಪುಟ. ೧೧೫) ಎನ್ನುತ್ತಾ ತನ್ನ ಅಸಹಾಯಕತೆ ವ್ಯಕ್ತಪಡಿಸುತ್ತಾಳೆ.

ವಾಚಣ್ಣ, ನಾರಾಯಣರಂತಹ ಗಂಡಂದಿರನ್ನು ಕೈಹಿಡಿದು ಎರಡು ಊಟವನ್ನು ಪಡೆಯದೆ ಕನಿಷ್ಟ ಸುಖಕ್ಕೂ ಪರಿತಪಿಸಿದವರು ಮಾಂಕಾಳಮ್ಮ ಮತ್ತು ಬಚ್ಚಮ್ಮ, ಆದರೂ ಸಮಾಜದಲ್ಲಿ ಗಂಡನೊಡನೆ ಬಾಳುವುದರಿಂದಲೇ ಅವರಿಗೆ ಮರ್ಯಾದೆ ಇದೆ.

ಮಾಂಕಾಳಿ, ಬಚ್ಚಮ್ಮರಿಗಿರುವ ಹಾಗೆ, ಸುಬ್ಬಮ್ಮನಿಗೆ, ಯಾವ, ಕೊರತೆಯೂ ಇಲ್ಲ. ದೊಡ್ಡವರ ಮನೆಗೆ ಕೊಡುವುದೆಂದು ಅವಳ ಅಪ್ಪ ರಾಶಿ ಚಿನ್ನವನ್ನು ಹಾಕಿದರು. ಗಂಡನ ಮನೆಯಲ್ಲಿಯೂ ಆಕೆ ಸುಖವನ್ನೇ ಉಂಡಳು. ಕೈಗೊಂದು, ಕಾಲಿಗೊಂದು ಜನವನ್ನು ಇಟ್ಟುಕೊಂಡು. ವೈಭವಪೂರ್ಣ ಮದುವೆ, ಬೆಲೆಬಾಳುವ ತಗಡಿನಂತಹ ಸೀರೆ, ರಾಶಿ ಒಡವೆ, ಒಳಗೆ, ಹೋದರೆ ತಪ್ಪಿಸೀಲು ಆಗಿ ಬಿಡುವಂತಹ ಮನೆ - ಈ ಎಲ್ಲ ಸಿರಿಸಂಪತ್ತಿನಿಂದ ಸುಬ್ಬಕ್ಕಾ ಸುಖವಾಗಿದ್ದಳೇ? ಇಲ್ಲ!.

ಸುಬಕ್ಕನನ್ನ ಮದುವೆ ಮಾಡಿಕೊಟ್ಟ ಗಂಡು ತಮ್ಮಣ್ಣಯ್ಯ ಯಾರಿಗೂ ಬೇಡವಾದ ವ್ಯಕ್ತಿ. ಪ್ರಾಯದಲ್ಲಿ ಕೆಟ್ಟಸಹವಾಸದಲ್ಲಿ ಬಿದ್ದು ಆರೋಗ್ಯ ಕೆಡಿಸಿಕೊಂಡು ಅವನಿಗೆ ಹೆಣ್ಣು ಕೊಡುವುದಕ್ಕಿಂತ ಕೆರೆಬಾವಿಗೆ ತಳ್ಳುವುದು ವಾಸಿ ಎಂಬ ಟೀಕೆಯೇ ಸುತ್ತುಮುತ್ತಲೆಲ್ಲಾ ಇರುವಾಗ, ಮದುವೆಯಾದರೆ ತಮ್ಮಣ್ಣಯ್ಯ ಸರಿಯಾಗುತ್ತಾನೆ ಎಂಬ ಜೋಯಿಸರ ಭವಿಷ್ಯವಾಣಿಯಂತೆ, ಸುಬ್ಬಕ್ಕನೊಡನೆ ಅವನ ಮದುವೆ ನಡೆದುಹೋಗಿದೆ. ಸುಬ್ಬಕ್ಕ ತನ್ನ ದಾಂಪತ್ಯದ ಕುರಿತು ಯಾರಲ್ಲಿಯೂ ಬಾಯಿ ಬಿಡಲಾರಳು. ಆಕೆ ತನ್ನೆಲ್ಲ ಭಾವನೆಗಳಿಗೆ ಚಿನ್ನಬಣ್ಣದ ಮುಚ್ಚಿಗೆ ಹಾಕಿಬಿಟ್ಟಿದಾಳೆ.

ಹೆಣ್ಣು ಸುಖವಾಗಿ ಬದುಕಬೇಕಾದರೆ ಕೈ ಹಿಡಿದ ಗಂಡು ಸರಿಯಾಗಿರಬೇಕು. ಇಲ್ಲದಿದ್ದರೆ ಅವಳು ಬಾಳು ಗೋಳು. ಆದರೂ ಮದುವೆಯಿಲ್ಲದ ಬದುಕನ್ನು ಇಲ್ಲಿ ಯೊಚಿಸುವಂತಿಲ್ಲ. ವೈವಾಹಿಕ ಬದುಕಿನಲ್ಲಿ ಸುಖವೆನ್ನುವುದು ಮರೀಚಿಕೆಯಾದಾಗ ಹೊಂದಾಣಿಕೆ ಅನಿವಾರ್ಯ. ಈ ಹೊಂದಾಣಿಕೆಯಲ್ಲಿ ಬದುಕುವ ಹೆಂಗಸಿಗೆ ಪ್ರತ್ಯೇಕ ವ್ಯಕ್ತಿತ್ವವೆನ್ನುವುದು ಗೋಚರವಾಗುವುದಿಲ್ಲ. ಅವರ ಪಾತ್ರವೇನಿದರೂ ಹೆಂಡತಿ - ಧರ್ಮ ಅನುಸರಿಸುವುದು. ಅದನ್ನು ವಿರೋಧಿಸಿದವರಿಗೆ ಸಾವು, ಶಿಕ್ಷೆ, ಒಂಟಿತನ - ಇವುಗಳನ್ನೆಲ್ಲ ಅನುಭವಿಸುವ ಕಷ್ಟ.

ತನ್ನ ಪಾಡಿಗೆ ತಾನು ದುಡಿದು ತಿನ್ನುತ್ತಿದ್ದ ಪುಟಮ್ಮತ್ತೆ ತಾಯಿ, ಒಂದು ದಿನ ದಣಿವಿನಲ್ಲಿ ಎದುರು ವಾದಿಸಿದಳೆಂದು, ಅದೇ ಕ್ಷಣದಲ್ಲಿ ಅವಳನ್ನು ಎತ್ತಿ ಬಾವಿಗೆ ಹಾಕಿ ದೇಶಾಂತರ ಹೋದ ಗಂಡ, ತನ್ನ ಜೀವಮಾನವೆಲ್ಲ ಹೆರಿಗೆ, ಬಸಿರು, ಮನೆಗೆಲಸವೆಂದು ಜಾತ್ರೆ ಆಸೆ ವ್ಯಕ್ತ ಪಡಿಸಿದ್ದಾಗಲೆಲ್ಲ ಹೆಂಡತಿಯನ್ನು ಹೊಡೆಯುವ ನಾಗಪ್ಪ - ಈ ಘಟನೆಗಳು ದಾಂಪತ್ಯ ಜೀವನದ ಕ್ರೌರ್ಯದ ಪರಮಾಧಿಗಳು. ಹೆಂಡತಿಯನ್ನು ತನಗೆ ಸಮಾನಳೆಂಬ ಭಾವನೆಯಲ್ಲಿ ಕಾಣದೆ ಅವಳನ್ನು ಅಧೀನತೆಗೆ ಒಳಪಡಿಸುವ ವಿವಿಧ ವಿಧಾನಗಳು.

ದಾಂಪತ್ಯ ಜೀವನದಲ್ಲಿ ಭ್ರಮವಿರಸನ ಹೊಂದಿ, ವಿವಾಹ ಬಂಧನವನ್ನು ತೊರೆದು ಬಂದವರು ಕುಸುಮ, ಪಾರ್ವತಿ, ಸಿರಿ, ಅಕ್ಕು ಮೊದಲಾದವರು. ಸಾಂಪ್ರದಾಯಿಕ ವಾತಾವರಣದಲ್ಲಿ ದಿಟ್ಟತನವೆನಿಸಬಹುದಾದ ನಿರ್ಧಾರವನ್ನು ಈ ಯುವತಿಯರು ತಳೆದಿದ್ದಾರೆ. ಅವರು ತಿರಸ್ಕಾರದಿಂದ ಕಾಣವುದು ಕೈಹಿಡಿದ ಗಂಡಂದಿರನ್ನು. ತಮ್ಮ ಬದುಕಿನ ಕಷ್ಟ ನಷ್ಟಗಳಿಗೆ ದುಃಖ ದುಮ್ಮನಗಳಿಗೆ ಕಾರಣರಾಗಿರುವ ಗಂಡನನ್ನು ತ್ಯಜಿಸುವುದರಲ್ಲಿ, ಓಡಿಸುವುದರಲ್ಲಿ ಅವರಿಗೆ ಯಾವ ಮೂಲಾಜೂ ಇಲ್ಲ. ಭವಿಷ್ಯ ಜೀವನದ ಕುರಿತು ಅನಿಶ್ಚತತೆ ಇದ್ದರೂ ತಮ್ಮ ನಿರ್ಧಾರದ ಕುರಿತು ಅವರಿಗೆ ದುಃಖವಿಲ್ಲ, ಸಿರಿ, ಪಾರ್ವತಿಯರು ಒಂಟಿಯಾಗಿ, ನಿಂತು ತೋಟದ ಕೆಲಸಗಳನ್ನು ಕೈಗೊಳ್ಳುತ್ತ ಸ್ವತಂತ್ರರಾಗಿದ್ದಾರೆ. 'ಗಂಡಿ' ನಂತೆ ದುಡಿಯುವ ಈ ಹೆಣ್ಣುಗಳ ದುಡಿಮೆಯಿಂದ ಮನೆಯವರಿಗೆ ಲಾಭವಿದೆ. ಸಿರಿ ತನ್ನ ದುಡಿಮೆಯಿಂದ ತನ್ನ ಮಕ್ಕಳನ್ನು ಸಲಹುದಲ್ಲದೆ. ಮುದಿತಾಯಿ, ಹುಚ್ಚು ಹಿಡಿದ ತಂಗಿಯನ್ನು

ನೋಡಿಕೊಳ್ಳುತ್ತಿದ್ದಾಳೆ. ಆದರೆ ಸಿರಿಗೆ ಅಣ್ಣ-ನೊಬ್ಬನಿರುವುದರಿಂದ ದುಡಿಮೆಯ ಹಕ್ಕು ಉತ್ತರಾಧಿಕಾರತ್ವದ ಕಾರಣವಾಗಿ ತನಗೆ ಸಿಗಲಾರದು ಎನ್ನುವ ಹೆದರಿಕೆ ಆಕೆಗೆ ಇದೆ. ಅವಳು ಗಂಡಸಿನಂತೆ ದುಡಿಯುತ್ತಾಳೆ, ತಾಯಿ, ತಂಗಿಯನ್ನು ಮಗನ ಸ್ಥಾನದಲ್ಲಿ ನಿಂತುಕೊಂಡು ಸಲಹುತ್ತಾಳೆ. ಆದರೆ ಹೆಣ್ಣಾಗಿ ಇರುವುದರಿಂದ ತನ್ನ ಕೆಲಸಗಳೆಲ್ಲ ಹಕ್ಕಿಲ್ಲದಂತೆ ಕಳೆದುಹೋಗುವ ಹೆದರಿಕೆ ಅವಳಲ್ಲಿದೆ. ಗಂಡನನ್ನು ದೂರಮಾಡಿದಳೆಂಬ ಅಪವಾದವು ಸೇರಿ, ತನಗೆ ಸಿಗಬೇಕಾದ ಮರ್ಯಾದೆಗಳು ಸಿಗಲಾರವು ಎಂಬ ಆತಂಕ ಅವಳದು.

"ಮನೆಯಲ್ಲೇ ಮುಚ್ಚಟೆಯಾಗಿ ಕುಳಿತು, ಗಂಡ ತಂದ ಸಂಪಾದನೆಯಲ್ಲಿ ಜೀವನ ಕಳೆಯುವ ಇವರೇ ಶ್ರೇಷ್ಠರು, ಎಲ್ಲರ ದೃಷ್ಟಿಯಿಂದಲೂ. ಸಂಪಾದನೆ ಮಾಡದ ಪ್ರೀತಿಯೆಂದರೆ ದೇಹ ಎಂದುಕೊಂಡಂತಹ ಗಂಡನನ್ನು ಕಟ್ಟಿಕೊಂಡು, ಗಂಡು ಬಲವಿಲ್ಲದೆ ನೋವನ್ನು ಒಳನುಂಗಿ, ತೋಟಗದ್ದೆ ಎಂದು ಇಪ್ಪತ್ನಾಲ್ಕು ದುಡಿಯುವಂತಹ ತಾನು - ಏನೂ ಅಲ್ಲ..[೧೩]" (ಹಕ್ಕಿಲ್ಲದವರು: ೧೨೭)

ಕುಸುಮಾಳಿಗೆ ತನ್ನ ವರ್ತನೆಗೆ ತನ್ನದೇ ಆದ ಸಮರ್ಥನೆಗಳಿದ್ದರೂ, ಗೌರಕ್ಕ, ಬಾಬಿಯರ ಮಾತುಗಳನ್ನು ಕೇಳಿದಾಗಲೆಲ್ಲಾ ತಾನು ಅಪರಾಧಿ ಸ್ಥಾನದಲ್ಲಿ ನಿಂತು ತನಿಖೆ ಎದುರಿಸುತ್ತಿದ್ದೇನೆ ಎಂಬ ಭಾವ ಕಾಡುತ್ತದೆ. ಆದರೆ ತನಿಖೆಯಲ್ಲಿ ನ್ಯಾಯ ದೊರಕಿಸುವ ಸ್ಥಾನ ಮಾತ್ರ ಖಾಲಿಯಿರುವಂತೆ ಅವಳಿಗೆ ಭಾಸವಾಗುತ್ತದೆ.

ಸಿರಿ, ಪಾರ್ವತಿಯರು ತಮ್ಮ ದುಡಿಮೆ ಕಾರಣದಿಂದ ಹೆಚ್ಚು ಸ್ವತಂತ್ರರಾಗಿದ್ದಾರೆ. ಮಕ್ಕಳು, ಮನೆ ಮತ್ತು ದುಡಿಮೆಯನ್ನು ಆಧರಿಸಿ ಅವರ ಜೀವನದ ನಿರ್ಧಾರಗಳು ನಿಂತಿವೆ. ಅಕ್ಕು ಈ ಸ್ವಾತಂತ್ರ್ಯವನ್ನು ತನ್ನದೇ ಆದ ರೀತಿಯಲ್ಲಿ ಪಡೆದುಕೊಂಡಿದ್ದಾಳೆ. ತಾನಿರುವ ಉನ್ಮಾದದ ಸ್ಥಿತಿಯಲ್ಲಿಯೂ ಗಂಡ-ಹೆಂಡತಿ ಸಂಬಂಧವನ್ನು ಚೆನ್ನಾಗಿ ತಿಳಿದವಳು ಅಕ್ಕು. ಈ ಸಂಬಂಧದ ಪೊಳ್ಳುತನವನ್ನು ಚೆನ್ನಾಗಿ ಅರಿತೇ ಅಕ್ಕುವಿನ ವರ್ತನೆಗಳು ಪ್ರಕಟವಾಗುತ್ತವೆ.

'ಸ್ತ್ರೀ ಸಹಜ'ವೆನಿಸುವ ಲಜ್ಜೆ, ಸಂಕೋಚಗಳು ಅಕ್ಕುವಿನಲ್ಲಿ ಇಲ್ಲ. ಆದರೆ ಮಾನವ ಸಹಜ ಬಯಕೆಗಳು ಅವಳಲ್ಲಿ ಇವೆ. ಗಂಡನಲ್ಲಿ ಅವಳು ಯಾವತ್ತೂ ಆಸಕ್ತಿ ತೋರಿಸಿದವಳು ಅಲ್ಲ. ಗಂಡನಾದವನ್ನು ಹೆಂಡತಿಯನ್ನು ಚೆಂದವಾಗಿ ಕಾಣುವುದಿಲ್ಲ ಎನ್ನುವ ತತ್ವವನ್ನು ಅಕ್ಕು ಅನುಭವವೇದ್ಯವಾಗಿ ಕಂಡುಕೊಂಡಿದ್ದಾಳೆ. ಮದುಮಗಳಾಗಿ ಸಿಂಗರಿಸಿಕೊಂಡು ಕುಳಿತ ತನ್ನ ತಂಗಿ ಸಿರಿಗೆ ಅಕ್ಕು ಹೇಳುತ್ತಾಳೆ ---

"...ನಿನ್ ಚಂದ ಕಂಡ್ ಮದ್ವೆ ಆದಂವ ಖಂಡಿತ ಬಾಳ್ಸದಿಲ್ಲೇ. ಗೋಡೆ ಮೇಲೆ ಬರ್ದಿಟ್ಕೊ[೧೪]" (ಬೆಳ್ಳಿಬಾಗಿನ : ೧೧೯-೧೨೦,೧೯೨) ತನ್ನಕ್ಕ ಖಂಡಿತ ಹುಚ್ಚಿ ಅಲ್ಲ ಎಂದು ಸಿರಿ ಹೇಳುತ್ತಾಳೆ. ಅಕ್ಕುವಿಗೆ ಕುಂಕುಮ ಇಡುವುದರಲ್ಲಿ, ಕರಿಮಣಿ ಕಳೆಯುವುದರಲ್ಲಿ ಯಾವುದೇ ರೀತಿಯ ಸಂಕೋಚ ಕಾಡುವುದಿಲ್ಲ. ಗಂಡ ಎಲ್ಲಿ ಎಂದು ಕೇಳಿದವರಿಗೆ 'ಹೂಳಿಬಂದೆ' ಎನ್ನುವಾಕೆ ಅವಳು. ತನ್ನ ಸ್ಥಿತಿ ಕಂಡು ಮರುಕ ಸೂಚಿಸಲು ಬಂದರವನ್ನು ದಬಾಯಿಸಲು ಅಕ್ಕು ಹಿಂದೆ ಮುಂದೆ ನೋಡಿದವಳಲ್ಲ. "ಯಾರ್ ಪಾಪ? ನಾಯಂತ ಮಾಡ್ನೆ? ನಿನ್ನಾಂಗೆ ನಾನೇನ್ ಗಂಡ ಸತ್ ಮುಂಡೆ ಅಲ್ಲ, ನನ್ನ ಗಂಡ ಬಾಸಾಯಿ ತಿಂಬೋಕೆ ದೇಶಾಂತರ ಹೋದ ಅಂತೇಳಿ ನಾ ಪಾಪ್ವ[೧೫]?" (ಅದೆ ಪುಟ ೧೨೩).

ಬಸಿರು ಬಾಣಂತನ, ಶಿಶು ಆರೈಕೆಯಲ್ಲಿ ಸದಾ ನಿರತಳಾಗುವ ಅಕ್ಕುವಿಗೆ ಗಂಡ ಬಂದೆನೆಂದರೆ ಆಸಕ್ತಿ ಮೂಡುವುದಿಲ್ಲ. 'ಬಸ್ಸುಚಾರ್ಜು ಕೊಟ್ಟು ವಾಪಸ ಕಳ್ಸು'. ಎನ್ನುವಾಕೆ. ಗಂಡನ ದುರಾಚಾರ ಸ್ವಭಾವ ಚೆನ್ನಾಗಿ ಅರಿತಿರುವ ಅಕ್ಕುವುನಲ್ಲಿ ಜಾಗೃತ ಪ್ರಜ್ಞೆ ಸದಾ ಎಚ್ಚರವಾಗಿರುವುದಕ್ಕೆ. ಗಂಡನನ್ನು ಹಿಡಿದು ಓಡಿಸುವುದರಲ್ಲಿ ಗಂಡನ ಜತೆ ನಡೆ ಎಂದ ತಂದೆ, ಅತ್ತೆಯರನ್ನು ಎದುರಿಸುವಲ್ಲಿ, ಬಂಧಿಸಿ ಹಿಡಿಯುವ ಅಣ್ಣನನ್ನು ಟೀಕಿಸುವುದರಲ್ಲಿ ಪ್ರಕಟವಾಗಿದೆ. ಗಂಡನನ್ನು ನಿರಾಕರಿಸಿ ಬೇರೊಬ್ಬ ಗಂಡಿನ ಕುರಿತು ಬಯಕೆ ವ್ಯಕ್ತಪಡಿಸುವ ದೈರ್ಯವೂ ಅಕ್ಕುವಿನಲ್ಲಿ ಇದೆ. ಗಂಡನನ್ನು ಬಿಟ್ಟರೂ, ತಾನಾಯತು ತನ್ನ ದುಡಿಮೆಯಾಯಿತು ಎಂದು ಬಾಳಿದ ಲಿಲ್ಲೀಬಾಯಿ, ಗಂಡ ಸತ್ತ ಕಾರಣದಿಂದಲೇ ತಾನೀ ಸ್ಥಿತಿಯಲ್ಲಿದ್ದೇನೆ ಎಂದು ಕೊರಗುವ ಪುಟ್ಟಮತ್ತೆ ಇವರೆಲ್ಲ ವೈವಾಹಿಕ ಬದುಕಿನ ವಿವಿಧ ಚಿತ್ರಗಳು.

ವಿವಾಹಿತೆಯಾಗಿ, ತನ್ನ ಸ್ವಾತಂತ್ರ್ಯವನ್ನು, ತಾನಿರುವ ಮನೆಯ ನಾಲ್ಕು, ಗೋಡೆಗಳ ಚೌಕಟ್ಟಿನಲ್ಲಿ ಪಡೆಯುವುದು ಅಸಾಧ್ಯವೆಂದು ಮಾಲತಿ ಒಂದು ದಿನದ ತನ್ನ ಪ್ರಾಯೋಗಿಕ ವಿಧಾನದ ಮೂಲಕ ಕಂಡುಕೊಳ್ಳುತ್ತಾಳೆ. ಮದುವೆಯೆನ್ನುವುದು ಹೆಣ್ಣಿನ ಸ್ವಾತಂತ್ರ್ಯ ಹರಣಕ್ಕೆ ಯಾವ ರೀತಿ ಸಹಕರಿಸುವುದು ಎನ್ನುವುದನ್ನು ತನ್ನ ಬದುಕಿನಿಂದಲೇ ತಿಳಿಯುತ್ತಾಳೆ ಮಾಲತಿ. ಮಾಲತಿ ಗಂಡನಿಗೆ ಸುತ್ತಲಿನ ಸಮಾಜದ ಕಾಳಜಿ ಇದೆ. ನಾಲ್ಕು ಜನರ ಮುಂದೆ ತಾನು ಹೆಂಡತಿಯನ್ನು ಯಾವ ರೀತಿ ನಡೆಸುತ್ತಿದ್ದೇವೆ ಎನ್ನುವ ಕಲ್ಪನೆ ಅವನಿಗೆ ಮುಖ್ಯವಾಗುತ್ತದೆ; ಆದರೆ ಮಾಲತಿಯ ಮನಸ್ಥಿತಿ ಅಲ್ಲ. ಮಾಲತಿಯ ಮನಸ್ಸು ಕನಿಷ್ಠ ಒಂದು ದಿನವಾದರೂ ತಾನು ತನಗೆ ಸರಿ ಬಂದಂತೆ ಇರಬೇಕು ಎಂಬ ಆಸೆ ಹುಟ್ಟಿಸುತ್ತದೆ. ಆದರೆ ಈ ಆಸೆ ಎಷ್ಟು ಸಿಮಿತವಾದದು ಎಂದು ಅವಳಿಗೆ ಮನವರಿಕೆಯಾಗಿ ತನಗೆ ತಾನೇ ಅವಳಿಗೆ ಮರುಕ ಹುಟ್ಟುತ್ತದೆ.

"ಈ ನಾಲ್ಕುಗೋಡೆಗಳ ನಡುವೆ ತಾನು ಹೇಗೆ ತಿರುಗಿದ್ದರೇನು? ತಿರುಗುವ ಸಂತೋಷ, ಬಂಧನವೇ ಇಲ್ಲದ ಸಂತೋಷ ತಾನು ಪಡೆಯಬೇಕಾದರೆ ಬಾಗಿಲು ತರೆದು ಬೀದಿಗಿಳಿಯಬೇಕು. ಮೈ ಬೀಸಾಗಿ ನಡೆದು ಹೋಗಬೇಕು. ಬೇಕಾದರೆ ಓಡಿಯಾಡಬೇಕು. - ಹೀಗೆ ಅವರಿಗೆಲ್ಲ ಹೆದರುತ್ತಾ ಗುಟ್ಟಿನಲ್ಲಿ ಅನುಭವಿಸಿದ ಭ್ರಾಂತಿಗೊಳಗಾಗುತ್ತ ಹೋದರೆ ಅದು ಏನು ರುಚಿ? ಏನು ಸುಖ?" (ಗೂಡಿನೊಳಗೆ ಒಂದು ಹಕ್ಕಿ:೯೦) ವಿವಾಹಬಂಧನದಲ್ಲಿ ತನ್ನದು ಎಂಥಾ ಅತಂತ್ರಸ್ಥಿತಿ ಎಂಬ ಮನವರಿಕೆ ಉಂಟಾದಾಗ ಮಾಲತಿಗೆ ದುಃಖವಾಗುತ್ತದೆ.

"ಬದುಕು ತೀರಾ ಇಕ್ಕಟ್ಟಾಗಿದೆಯೆನಿಸಿತ್ತು. ತಾನು ಯಾರಿಗಾಗಿಯೋ ಬದುಕುತ್ತಿದ್ದೇನೆ. ತನಗಾಗಿಯಲ್ಲ, ಎಂತೆಲ್ಲ ಸಹಾನುಭೂತಿ ಹೊಮ್ಮಿಬಂದು ಕಣ್ಣುಗಳು ಕರಿ ಮೋಡಗಳಾದುವು. ಯಾವ ಕ್ಷಣಗಳು ಸ್ವಂತವಲ್ಲ, ಎಲ್ಲ ಬಾಡಿಗೆಯವೇ. ಕೊಡುವ ಬಾಡಿಗೆಯಾದರೂ ಎಷ್ಟು! ತಾನೇ ದಿವಾಳಿಯಾಗುವಷ್ಟು" (ಅದೇ:೯೧) ಮಾಲತಿಗೆ ತಾನಿರುವ ಅಧೀನ ಸ್ಥಿತಿ ತನ್ನ ಸ್ವಾತಂತ್ರ್ಯದ ಕುರಿತು ಉಂಟಾದ ಅರಿವು, ಗೃಹಿಣಿ ವಿಮುಕ್ತಿ ಪರಿಕಲ್ಪನೆಯ ಒಳನೋಟವನ್ನು ಸೂಚಿಸುವ ದಿಕ್ಕಿನಲ್ಲಿ ಇದೆ.

**ಕತೆಯ ಸ್ತ್ರೀ ಮಾದರಿಗಳು**

**ಪಾರಂಪರಿಕ ಪರಿಕಲ್ಪನೆಯಲ್ಲಿರುವ ಸ್ತ್ರೀ ಮಾದರಿ:**

ಪಾರಂಪರಿಕ ಮೌಲ್ಯಗಳನ್ನು ಆದರಪೂರ್ವಕವಾಗಿ ಕಾಣುವ, ಸಂಪ್ರದಾಯವನ್ನು ತಪ್ಪದೆ ಅನುಸರಿಸುವ ಅನೇಕ ಸ್ತ್ರೀಯರು ವೈದೇಹಿ ಕತೆಗಳಲ್ಲಿ ಇದ್ದಾರೆ. ಈ ಕತೆಗಳಲ್ಲಿ ಕಾಣಿಸಿಕೊಂಡಿರುವ ಗೃಹಿಣಿಯರು, ಪತ್ನಿಯರು ಮನೆಯ ಹಿರಿಯ ಸ್ಥಾನದಲ್ಲಿರುವ ವೃದ್ಧೆಯರು ಪಾರಂಪರಿಕ ಪರಿಕಲ್ಪನೆಯಲ್ಲಿರುವ ಸ್ತ್ರೀ ಮಾದರಿಯ ಲಕ್ಷಣವನ್ನು ಹೊಂದಿದವರಾಗಿದ್ದಾರೆ. ಈ ಹೆಂಗಸರ ವ್ಯಕ್ತಿತ್ವ ಅವರು ಬದುಕಿನಲ್ಲಿ ನಿರ್ವಹಿಸುವ ಸಾಮಾಜಿಕ ಪಾತ್ರಗಳ ಮೂಲಕ ವ್ಯಕ್ತವಾಗುತ್ತದೆ. ಇನ್ನೊಬ್ಬರಿಗಾಗಿ ಬದುಕುವ ಈ ಹೆಂಗಸರಿಗೆ ತಮ್ಮ ವೈಯಕ್ತಿಕ ಆಸೆ, ಆಕಾಂಕ್ಷೆ ಅಥವಾ ಬಯಕೆಗಳನ್ನು ನೆರವೇರಿಸಕೊಳ್ಳಬೇಕು ಎನ್ನುವ ಮನಸ್ಸು ಇರುವುದಿಲ್ಲ. ಹೆಣ್ಣಿನ ಕುರಿತು, ಸ್ತ್ರೀ ಬದುಕಿನ ರೀತಿ ನೀತಿ ಕುರಿತು ಪೂರ್ವ ನಿರ್ದೇಶನವಿರುವ ಕೆಲವು ಗೃಹಿಕೆಗಳು ಈ ಸ್ತ್ರೀಯರಲ್ಲಿ ರಕ್ತಗತವಾಗಿದೆ. ಮತ್ತು ಈ ಗೃಹಿಕೆಗಳನ್ನು ಮೌಲ್ಯಗಳ ರೂಪದಲ್ಲಿ ಕಾಪಾಡಿಕೊಂಡು, ಮುಂದಿನ ತಲೆಮಾರುಗಳಲ್ಲಿ ಮುಂದುವರಿಸಲು ಸ್ವತಃ ಈ ಸ್ತ್ರೀಯರೇ ಸಹಕಾರ ನೀಡುತ್ತ ಬಂದಿದ್ದಾರೆ. 'ಅಸ್ಪೃಶ್ಯರು' ವಿನ ಗೌರಮ್ಮ ಪಾರ್ತಕ್ಕ, 'ಚಿಪ್ಪು' ವಿನ ರಂಗಜ್ಜಿ, 'ಒಂದು ಅಪರಾಧ ತನಿಖೆಯ' ಗೌರಕ್ಕ 'ಪುಟ್ಟಮ್ಮತ್ತೆ' ಮೊದಲಾದವರು ತಮ್ಮ ಮುಂದಿನ ಪೀಳಿಗೆಯವರಿಗೆ ಆದರ್ಶವನ್ನು ಬೋಧಿಸುವವರು.

ಇವರಲ್ಲದೆ, ಕೌಟುಂಬಿಕೆ ಮತ್ತು ಸಾಮಾಜಿಕ ಸಂಬಂಧಗಳಿಂದ ತಾವು ನಿರ್ವಹಿಸಿದ ಸಾಮಾಜಿಕ ಪಾತ್ರಗಳ ಮೂಲಕವೇ ಗುರುತಿಸಲ್ಪಡುವ ಬೇರೆ ಬೇರೆ ಹೆಂಗಸರು ಇಲ್ಲಿ ಸಂಬಂಧವಾಚಕಗಳ ಮೂಲಕವೇ ಗುರುತಿಸಲ್ಪಟ್ಟಿದ್ದಾರೆ ವಿನಹ ಅವರಿಗೆ ಪ್ರತ್ಯೇಕ ಹೆಸರಿನ ವ್ಯಕ್ತಿತ್ವವನ್ನು ಇಲ್ಲಿ ಉದ್ದೇಶಪೂರ್ವಕವಾಗಿ ಸೂಚಿಸಲಾಗಿಲ್ಲ ದೊಡ್ಡಮ್ಮ (ಭೂತ), ದೊಡಕ (ಹಕ್ಕಿಲ್ಲದವರು), ಅತ್ತೆ (ಯಾತ್ರೆ), ಚಿಕ್ಕಮ್ಮ (ಅಂತರಾಳದಬದುಕು), ಅಮ್ಮ (ಮರಗಿಡಬಳ್ಳಿ), ದೊಡ್ಡಮ್ಮ (ಆರತಿತಟ್ಟೆ), ದೊಡ್ಡತ್ತೆ (ಅಕ್ಕು). - ಸ್ವಂತ ಬದುಕಿನಲ್ಲಿ ಪ್ರತ್ಯೇಕವಾಗಿ ಗುರುತಿಸಬಹುದಾದ ವ್ಯಕ್ತಿತ್ವವಿಲ್ಲದವರಂತೆ ಬಾಳಿ ಬದುಕಿದ ಹೆಂಗಸರು. ಮೌಲ್ಯಗಳನ್ನು ಪ್ರತಿನಿಧಿಸುವುದು, ಪಾತ್ರನಿರ್ವಹಣೆ ಮತ್ತು ಕೌಟುಂಬಿಕ ನೆಲೆಯಲ್ಲಿ ಕರ್ತವ್ಯವನ್ನು ನಿರ್ವಹಿಸುವುದು ಇವರ ಬದುಕಿನ ರೀತಿನೀತಿಗಳು. ತರ್ಕಕ್ಕಾಗಲೀ, ಸಾಧನೆಗಾಗಲೀ ಇಲ್ಲಿ ಅವಕಾಶವಿಲ್ಲ.

ಹಿರಿತಲೆಮಾರಿನ ಹೆಂಗಸರ ಪ್ರಭಾವ ಮತ್ತು ನೆರಳಿನಲ್ಲಿ ಹುಟ್ಟಿ, ಬೆಳೆದು, ಮದುವೆಯಾಗಿ ತಮ್ಮ ಭವಿಷ್ಯದ ಬದುಕಿನ ಪಾತ್ರನಿರ್ವಹಣೆ ಮಾಡುತ್ತಿರುವ ಎರಡನೇ ತಲೆಮಾರಿನವರಲ್ಲಿ ಸ್ವಲ್ಪ ಮಟ್ಟಿಗೆ ನೋವು, ದುಗುಡಗಳಿಗೆ ಅವಕಾಶ ದೊರೆತಿದೆ. ಹೆಣ್ಣಾಗಿ ಹುಟ್ಟಿದ ಮೇಲೆ ಹೆಂಡತಿಯಾಗಿ, ತಾಯಾಗಿ ತಾನು ಕರ್ತವ್ಯ ನೆರವೇರಿಸಬೇಕು ಎನ್ನುವ ವಿಚಾರಗಳಿದ್ದರೂ ಭಾವನೆಗೆ ಸ್ಪಂದಿಸುವ ಹೃದಯ, ಮನಸ್ಸು ಎರಡನ್ನು ಈ ಪೀಳಿಗೆಯವರು ಪಡೆದಿದ್ದಾರೆ. ಆದುದರಿಂದ ವ್ಯವಸ್ಥೆಯ ನಿರಾಕರಣೆಗಿಂತ ಹೊಂದಿ ಬಾಳುವುದರಲ್ಲಿ ನೆಮ್ಮದಿ ದೊರೆಯಬಹುದೆಂಬ ಆಶಯದಿಂದ ಬದುಕುವವರು. ಆದರೆ ನೆಮ್ಮದಿಗಿಂತ ಮಾನಸಿಕವಾಗಿ ನೋವನ್ನು ಅನುಭವಿಸಿದವರೇ ಇಲ್ಲಿ ಹೆಚ್ಚು. ಈ ತಲೆಮಾರಿಗೆ ಸೇರಿದವರು: ರತ್ನ (ಅಸ್ಪೃಶ್ಯರು), ಮಾಲತಿ (ಗೂಡಿನೊಳಗೆ ಒಂದು ಹಕ್ಕಿ), ಬಾಬಿ (ಒಂದು ಅಪರಾಧ ತನಿಖೆ) ರೋಹಿಣಿ (ಸಪ್ಪಳ ಮಾಡದ ಹೆಜ್ಜೆಗಳು), ರಮು (ಚಂದಲೆ), ಮಾಂಕಾಳಿ (ಅಲ್ಲಿಲ್ಲನ ಲೋಕದವರು)

ಮೊದಲಾದವರು.

ಕುಟುಂಬ ವ್ಯವಸ್ಥೆ ಮತ್ತು ವೈವಾಹಿಕ ಬದುಕಿನ ವಿವರಣೆಯಲ್ಲಿ ಬರುವ ಎಲ್ಲಾ ಗೃಹಿಣಿಯರು, ವಿವಾಹಿತೆಯರೂ ಈ ಮಾದರಿಯೊಳಗೆ ಕಾಣಿಸಿಕೊಳ್ಳುತ್ತಾರೆ.

**ವಿಮೋಚನೆ ಪರಿಕಲ್ಪನೆಯಲ್ಲಿರುವ ಸ್ತ್ರೀ ಮಾದರಿ:**

ಮೂರನೇ ತಲೆಮಾರಿನವರಾಗಿ ಭವಿಷ್ಯದ ಆಯ್ಕೆಯ ಹಂತದಲ್ಲಿರುವ ಯುವತಿಯರ ಪಾತ್ರಭಿವ್ಯಕ್ತಿಯ ಮೂಲಕ ವೈದೇಹಿ ವಿಮೋಚಿತ ಸ್ತ್ರೀ ಪರಿಕಲ್ಪನೆಯನ್ನು ಕಟ್ಟಿಕೊಡುತ್ತಾರೆ.

ಸಂಪ್ರದಾಯ, ಪರಂಪರೆಗಳಲ್ಲಿ ನಂಬಿಕೆ ಕಳೆದುಕೊಂಡು, ಹೊಸತನದ ಬಾಳುವೆಗಾಗಿ ನಿರೀಕ್ಷೆಯನ್ನು ಇಟ್ಟುಕೊಂಡಿರುವ ಈ ಯುವತಿಯರಲ್ಲಿ ಮನಸ್ಸಿನ ಭಾವನೆಗಳನ್ನು ಮೂರ್ತವಾಗಿಸುವ ಆಸಕ್ತಿ ಇದೆ. ಇಲ್ಲಿರುವ ಅನೇಕ ಕತೆಗಳು ಅನಾವರಣಗೊಳ್ಳುವುದು ಈ ಯುವತಿಯರ ಸಾಕ್ಷಿ ಪ್ರಜ್ಞೆಯಲ್ಲಿಯೇ. ಮೀರಾ, ಯಶವಂತಿ, ಸರಸ, ಸರೋಜ, ಇಂದಿ, ಯಶೀ ಮೊದಲಾದವರು ಮನೆಯಲ್ಲಿ ನಾಲ್ಕುಗೋಡೆಗಳ ನಡುವೆ, ದಿನನಿತ್ಯ ನಡೆಯುವ ಘಟನೆಗಳು, ಹಗರಣಗಳು ನೋವು, ನಲಿವು, ಹಿರಿಯರು ಬದುಕುವ ರೀತಿ ಇವುಗಳನ್ನೆಲ್ಲ ಬಹಳ ಹತ್ತಿರದಿಂದ ವೀಕ್ಷಿಸುತ್ತ ಬಂದವರು; ಈ ಪೀಳಿಗೆಯವರು. ಮನೆಯ ಹೊರಗೆ ನಡೆಯುವ ವಿದ್ಯಮಾನಗಳನ್ನು ಟಿಪ್ಪಣಿಮಾಡುವ ಸಮಾಜಶಾಸ್ತ್ರಜ್ಞೆ, ಅವಳ ಗೆಳತಿ ಲತ - ಇದೇ ಗುಂಪಿವ ಸದಸ್ಯೆಯರು. ಸಂದಿಗ್ಧತೆ, ಸಾಂಸ್ಕೃತಿಕ ಹಿಂಜರಿತಗಳು, ಬಿಡುಗಡೆಯ ಅಪೇಕ್ಷೆ ಇವರನ್ನು ಸತತವಾಗಿ ಕಾಡುವ ವಿಚಾರಗಳು.

ಈ ಯುವತಿಯರು ಹುಟ್ಟಿ ಬೆಳೆದ ಪರಿಸರ ಸಾಂಪ್ರದಾಯಕವಾದುದು. ತಮ್ಮೊಳಗೆ ಹುಟ್ಟಿಕೊಂಡ ಆಧುನಿಕ ಪ್ರಜ್ಞೆಯ ಮೂಲಕ ಇವರು ಪರಿಸರವನ್ನು ವಿರೋಧಿಸಿ, ಆಪ್ತರೆನಿಸಿಕೊಂಡವರ ವಿರೋಧ ಕಟ್ಟಿಕೊಂಡು ಮುಂದುವರೆಯಬೇಕಾಗಿದೆ. ವೈದೇಹಿ ತಮ್ಮ ಕತೆಗಳಲ್ಲಿ. ತ್ರಿವೇಣಿಯವರಂತೆ ಶಿಕ್ಷಣ, ಉದ್ಯೋಗ ಮೊದಲಾದ ಬದುಕಿನ ಇನ್ನಿತರ ಸಾಧ್ಯತೆಗಳತ್ತ ಮುಖಮಾಡುವ ಪ್ರಯತ್ನಗಳತ್ತ ಗಮನ ಹರಿಸಿದುದು ಕಡಿಮೆ. ಇದಕ್ಕೆ ಅವರ ಕತೆಗಳಲ್ಲಿ ಆಯ್ಕೆಕೊಂಡ ಭೌಗೋಳಿಕ ಪರಿಸರವು ಕಾರಣವಾಗಿರಬಹುದು. ಅತ್ತ ನಗರವೂ ಅಲ್ಲದ ಇತ್ತ ಗ್ರಾಮೀಣವು ಎನ್ನಲಾಗದ ಸಣ್ಣಪುಟ್ಟ ಊರುಗಳಲ್ಲಿ ಈ ಕತೆಗಳು ಉದ್ದೇಶಿಸಿ ಇರುವಂತೆ ಭಾಸವಾಗುತ್ತದೆ. ವೈವಾಹಿಕ ಬದುಕಿನ ಆಯ್ಕೆಯಲ್ಲಿಯೇ ಸ್ವಾತಂತ್ರ್ಯದ ಅಭಿಲಾಶೆಯನ್ನು ವ್ಯಕ್ತಪಡಿಸುವ ಹೆಣ್ಣುಗಳೆ ಇಲ್ಲಿ ಮುಖ್ಯ ಭೂಮಿಕೆಯಲ್ಲಿ ಇರುವುದರಿಂದ, ಸ್ವ-ಅಭಿವ್ಯಕ್ತಿಯನ್ನುವುದು ಇಲ್ಲಿನ ಪಾತ್ರಗಳಲ್ಲಿ ಪೂರ್ಣಪ್ರಮಾಣದಲ್ಲಿ ಕಾಣಿಸಿಕೊಂಡಿಲ್ಲ ಎನ್ನಬಹುದು. ಗಮನಿಸಬಹುದಾದ ಅಂಶವೆಂದರೆ - ಇಲ್ಲಿರುವ ಯುವತಿಯರು ಯೋಚಿಸುತ್ತಾರೆ. ಪ್ರತಿಕ್ರಿಯೆ, ಪ್ರತಿರೋಧ ತೋರಿಸುವುಷ್ಟು ಧೈರ್ಯವನ್ನು ವ್ಯಕ್ತಪಡಿಸಿದ್ದರೂ. ಇವರಲ್ಲ ಸ್ವಪ್ರಜ್ಞೆ ಜಾಗೃತವಾಗಿರುವುದಕ್ಕೆ ಅನೇಕ ಘಟನೆಗಳು ಸಾಕ್ಷಿ ನೀಡುತ್ತವೆ. ಹೆಣ್ಣಿನ ಸ್ವ-ಅಭಿವ್ಯಕ್ತಿಯ ಮೊದಲ ಹಂತವಾಗಿ ಈ ಯುವತಿಯರ ಮಾನಸಿಕ ಸಿದ್ಧತೆಗಳನ್ನು ಪರಿಗಣಿಸುವುದು ಸಾಧ್ಯವಿದೆ.

ಹದಿಹರೆಯದ ಹುಡುಗಿಯರು ಬೆಳೆದು ಅನುಭವ, ಪ್ರಾಪಂಚಿಕ ಜ್ಞಾನ ಇವುಗಳಿಗೆಲ್ಲ ತಮ್ಮನ್ನು ತಾವು

ತೆರೆದುಕೊಳ್ಳುವ ವಿವಿಧ ಹಂತಗಳನ್ನು ಕತೆಗಳು ಮನೋಜ್ಞವಾಗಿ ನಿರೂಪಿಸುತ್ತವೆ. ಸ್ತ್ರೀ ವಿಮೋಚನೆಯ ಪರಿಕಲ್ಪನೆಯ ಮಾದರಿಯಲ್ಲಿರುವ ಸ್ತ್ರೀ ಪಾತ್ರಗಳು: ಕಮಲಾವತಿ (ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು), ಅಂಬುಜ (ಒಂದು ಕಳ್ಳ ವೃತಾಂತ), ಯಶೋಧ (ಚಿಪ್ಪು) ಸರೋಜ (ಅಸ್ಪೃಶ್ಯರು), ಸೌಗಂಧಿ (ಸೌಗಂಧಿದ ಸ್ವಗತಗಳು), ಅಚಲ (ಅಂತರಂಗದ ಪು: ಟಗಳು)

ಈ ಮುಖ್ಯ ಪಾತ್ರಗಳಲ್ಲದೆ ಮಾಲತಿ (ಗೂಡಿನೊಳಗೆ ಒಂದು ಹಕ್ಕಿ), ಸುಮಾ (ಅತ), ಸರಿತ (ಗುಲಾಬಿ ಮೃದು ಪಾದಗಳು), ರೋಹಿಣಿ (ಸಪ್ಪಳ ಮಾಡದ ಹೆಜ್ಜೆಗಳು) ಭಾರತಿ, ಕೃಷ್ಣಾ (ಶೋಧ), ಕಮಲಾವತಿ (ಪುಟ್ಟಮ್ಮತ್ತೆ ಮೊಮ್ಮಗಳು). ತಂದೆ, ತಾಯಿ ಇಲ್ಲದ ಕಮಲಾವತಿ ಓದಿದ್ದು ಏಳನೇ ತರಗತಿ ಮಾತ್ರ. ಆದರೆ ಅವಳ ಆಸೆ ಆಕಾಂಕ್ಷೆಗಳು ನೂರುಪಾಲು ಹೆಚ್ಚು. 'ನಾನು ನಿಮ್ಮಂತಹವಳಲ್ಲ' ಎನ್ನುತ್ತಲೇ ಹೆಜ್ಜೆಹಾಕಿದವಳು ಕಮಲಾವತಿ ತನ್ನ ಹಿರಿಯರಂತೆ ಮನೆಕೆಲಸಕ್ಕೆ ಸೇರದೆ ತಾನು ಸ್ವತಂತ್ರವಾಗಿ ದುಡಿದು ತನ್ನ ಅಜ್ಜಿಯನ್ನು ಸಾಕುವುದು ಆಗಬೇಕು ಎಂದುಕೊಂಡ ಅವಳಿಗೆ ತನ್ನ ಹಂಬಲವನ್ನು ಈಡೇರಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ ಹೆಣ್ಣಿನ ಸ್ಥಿತಿ ಸುಧಾರಿಸಬೇಕಾದರೆ ಏನೆಲ್ಲ ಇರಬೇಕು ಎನ್ನುವುದನ್ನು ಪುಟ್ಟಮ್ಮತ್ತೆ ತನ್ನ ಅನುಭವದಿಂದ ತಿಳಿದಿದ್ದಾರೆ. ಕೈಹಿಡಿದಗಂಡ ಒಳ್ಳೆಯವನಾಗಿರಬೇಕು ಒಳ್ಳೆ ವಿದ್ಯೆ, ಉತ್ತಮ ಉದ್ಯೋಗ ಹೆಣ್ಣಿಗೆ ಇರಬೇಕು. ಇವುಗಳಲ್ಲಿ ಯಾವುದು ಇಲ್ಲದಿರುವುದರಿಂದಲೇ ಮನಸ್ಸಿದ್ದರೂ ಕಮಲಾವತಿಗೆ ತಾನು ಬಯಸಿದ ಬದುಕು ಪಡೆಯಲು ಸಾಧ್ಯವಾಗಿಲ್ಲ ಎನ್ನುವುದು ಇಲ್ಲ ಸೂಚ್ಯವಾಗಿ ಬಂದಿದೆ.

ಅಂಬುಜಾ, ಕಮಲಾವತಿಯಂತೇ ಕಷ್ಟದಲ್ಲಿಯೇ ಬೆಳೆದವಳು. ಅವಳಂತೆ ಕನಸು ಕಂಡವಳು. ಬಡತನ, ಅವಮಾನ ಮೂದಲಿಕೆ, ನಿಂದನೆಗಳ ಬದುಕಿನಿಂದ ತಾನು ಸುಧಾರಿಸಿಕೊಳ್ಳಬೇಕು, ಮುಂದೆ ನಡೆಯಬೇಕೆನ್ನುವ ಬಯಕೆ ಅಂಬುಜಗೆ ಇದೆ. ಎಲ್ಲರೂ ಮುಂದುವರಿಯುತ್ತಿದ್ದರೆ, ನಾವು ಹಿಂದೆ ಕ್ರಿಸ್ತಪೂರ್ವಕ್ಕೆ ಹೋಗುವವರು. ನಾವು ಕಾಲದೊಟ್ಟಿಗೆ ಹೆಜ್ಜೆ ಹಾಕಬೇಕು, ಎಲ್ಲವನ್ನು ತಿಳಿದವರಾಗಬೇಕು, ಮೊದಲಾದ ಚಿಂತನೆಗಳು ಅಂಬುಜಾ, ಕಮಲಾವತಿಯರಲ್ಲಿ ಇದೆ. ಆದರೆ ಅವರ ಚಿಂತನೆಯೇನಿದ್ದರೂ ಎರಡು ಹೊತ್ತಿನ ನೆಮ್ಮದಿ, ಊಟ, ಮತ್ತು ಸ್ವಾವಲಂಬನದ ಬದುಕಿಗೆ ಸೀಮಿತವಾಗಿದೆ. ಅವರ ಮುಖ್ಯ ಜೀವನದ ಉದ್ದೇಶ: ನೆಮ್ಮದಿಯ ಬದುಕು. ಬಚ್ಚಮ್ಮನ ಮಗಳು. ಪುಟ್ಟಮ್ಮತ್ತೆ ಮೊಮ್ಮಗಳು ತಮ್ಮತಾಯಿ, ಅಜ್ಜಿಯರನ್ನು, ಅವಮಾನಕರ ವಾತಾವರಣದಿಂದ ರಕ್ಷಿಸಬೇಕು ಎನ್ನುವ ಉದ್ದೇಶವನ್ನು ಇಟ್ಟುಕೊಂಡೇ ಮುಂದುವರೆಯುತ್ತಾರೆ.

ಯಶೋದಾಳಿಗೆ ತನ್ನ ಮನಸ್ಸಿನಲ್ಲಿ ಹುಟ್ಟುವ ಯೋಚನೆಗಳನ್ನು ಮೂರ್ತರೂಪಕ್ಕೆ ತರಬೇಕಾದರೆ ತಾನಿರುವ ಸ್ಥಿತಿದಿಂದ ಮುಕ್ತವಾಗಲು ದಾರಿ ಹುಡುಕಬೇಕು ಎನ್ನುವುದು ಮನಗಂಡಿದೆ. "ಅಜ್ಜಿ, ಅಮ್ಮ, ಅಪ್ಪ, ನೆರೆಹೊರೆಯವರು ತಾವು ಹುಟ್ಟುವ ಮೊದಲೇ ಸೃಷ್ಟಿಸಿ ಇಟ್ಟ ಆ ಹಳೆಯ ನಾರುವ ಬೀಳು ಬೇಲಿಯ ಒಳಗೆ ತನ್ನ ನಾಲಿಗೆ ಬಂಧಿತವಾಗಬೇಕೇ? ಈ ಬೇಲಿ ಹರಿದುಕೊಂಡು ಹೊರಗೆ ಬರಬೇಕು. ನಾನು....[೧೮]" (ಪುಟ ೧೦೨)

ತನ್ನ ಅಜ್ಜಿಯ ಬಾಯಿಂದ ಉದುರುವ ಹುಡುಗಿಯೆಂದರೆ ಹೀಗಿರಬೇಕು, ಹಾಗಿರಬೇಕು ಎನ್ನುವ ಮಾತುಕೇಳಿ ಕೇಳಿ ತನಗೆ ಅರಿಯದಂತೆ ಅಜ್ಜಿಯ ಸಿದ್ಧಾಂತಗಳಿಗೆ ಬಾಗಿರುವ ತನ್ನ ವ್ಯಕ್ತಿತ್ವವನ್ನು ಬದಲಾಯಿಸಬೇಕು ಎನ್ನುವ

ಪ್ರಜ್ಞೆ ಯಶಿಯಲ್ಲಿ ಮೂಡಿದೆ. ತನ್ನ ಮದುವೆ ವಿಚಾರವಾಗಿ ಮನೆಯಲ್ಲಿ ನಡೆಯುವ ಮಾತುಕತೆಗಳಲ್ಲಿ ತಾನು ಭಾಗವಹಿಸಿ ತನ್ನ ಭವಿಷ್ಯದ ಚಿಂತನೆಯಲ್ಲಿ ಭಾಗಿಯಾಗಬೇಕು ಎನ್ನುವ ಮನಸ್ಸು ಅವಳಿಗಿದೆ. ಆದರ ತಂದೆ, ತಾಯಿ, ರಂಗಜ್ಜಿ ಎದುರು ತನ್ನ ಮನಸ್ಸನ್ನು ತಿಳಿಸುವ ಧೈರ್ಯ ಅವಳಲ್ಲಿ ಇಲ್ಲ. ಏನಿದ್ದರೂ ಮನಸ್ಸಿನಲ್ಲಿಯೇ ಅವಳು ಯೋಚಿಸಬಲ್ಲಳು. ಅವಳ ಮನಸ್ಸಿನಲ್ಲಿ ಮೂಡುವ ವಿಚಾರ ಸಂಘರ್ಷದ ದ್ವಂದ್ವದಲ್ಲಿ ಸಂಪ್ರದಾಯದತ್ತ ಹರಿಯುವ ಮನಸ್ಸೇ ಮುಖ್ಯ ನೆಲೆಯಲ್ಲಿರುವುದು ಮತ್ತು ಆಧುನಿಕ ವಿಚಾರಗಳಿಂದ ಪ್ರಭಾವಿತವಾಗಿ ರೂಪುಗೊಳ್ಳುತ್ತಿರುವ ವ್ಯಕ್ತಿತ್ವ ಇನ್ನು ಗಟ್ಟಿಗೊಳ್ಳದಿರುವುದು, ಯಶಿಯಂತಹ ಹುಡುಗಿಯರ ಮನಸ್ಸಿನ ಅನಿಶ್ಚಿತತೆಯನ್ನು ಸೂಚಿಸುತ್ತದೆ. ಯಶಿ ತನ್ನಲ್ಲಿ ಚಿಂತನೆಯನ್ನು ಬೆಳೆಸುವ ಅವಕಾಶ ನೀಡಿರುವುದು ಮಾತ್ರ ಒಂದು ಇತ್ಯಾತ್ಮಕ ಸೂಚನೆಯಾಗುತ್ತದೆ. ಅವಳು ಯೋಚಿಸುತ್ತಿರುತ್ತಾಳೆ.

"ತನಗೆ ಹೊಸತುಬೇಕು. ಹೊಚ್ಚ ಹೊಸ ಬಾಳುವೆ ಬೇಕು. ತಾನೂ ತನ್ನವನಾಗುವವನ ಮುಖದಲ್ಲಿ ನಗುವನ್ನು ಕಂಡು ಜೀವನದಲ್ಲಿ ಸಾರ್ಥಕತೆಯ ಭಾವವನ್ನು ಅನುಭವಿಸುವವಳಲ್ಲ. ತನ್ನ ದಾಂಪತ್ಯ ತಾನು ಕಂಡ ಅನೇಕ ದಾಂಪತ್ಯಗಳಂತೆ ಇರಬಾರದು. ಅಲ್ಲಿ ಪ್ರಿತಿ ವಿಶ್ವಾಸಗಳೆಲ್ಲ ಯಾಂತ್ರಿಕವಾಗಿದೆ. ಈ ಯಾಂತ್ರಿಕತೆಯನ್ನು ಒಡೆಯಬೇಕು ಅದಕ್ಕೆ ಜೀವ ತುಂಬಬೇಕು. ....ತಾನು ಮೇಲೆರಬೇಕು.'' (ಅದೇ ಪುಟ ೧೧೧-೧೧೨)

ಚಿಪ್ಪಿನಲ್ಲಿ ಬದುಕುವುದನ್ನು ತೊರೆದು ತಾನು ಸ್ವತಂತ್ರ್ಯವಾಗಿ ಇರಬೇಕು ಎಂದೆಲ್ಲಾ ಯಶೀ ಯೋಚಿಸುತ್ತಾಳೆ. ಸರೋಜಾ ಸಂಪ್ರದಾಯ ಮತ್ತು ಆಧುನಿಕತೆ ಎರಡೂ ಸೇರಿಕೊಂಡ ವಾತಾವರಣದಲ್ಲಿ ಬೆಳೆದ ಯುವತಿ. ಸರೋಜಾ ಮೇಲೆ ತಂದೆ, ಅಣ್ಣ ಮತ್ತು ಭಾಸ್ಕರ - ಇವರ ಪ್ರಭಾವ ಹೆಚ್ಚಿನದು. ರತ್ನ, ತಾಯಿ, ಪಾರ್ತಕ, ಭಾವ ಇವರ ಆಚಾರವಿಚಾರಗಳು, ಕಂದಾಚಾರಗಳು, ಸರೋಜಾಳಿಗೆ ಹಿಡಿಸುವುದಿಲ್ಲ. ಶಿವುನ ಆಧುನಿಕತೆ, ಭಾಸ್ಕರನ ಬಂಡಾಯಧೋರಣೆ ಮತ್ತು ತಂದೆಯ ಪುರೋಗಾಮಿ ವಿಚಾರಗಳಲ್ಲಿ ಅವಳ ಆಸಕ್ತಿ ಹೆಚ್ಚು. ಸರೋಜಾಳಲ್ಲಿ ತನ್ನ ಭವಿಷ್ಯದ ಕುರಿತು ಅನೇಕ ಹೊಸ ವಿಚಾರಗಳಿವೆ. ಸರೋಜಳಲ್ಲಿ ಯಶಿಗಿಂತ ಹೆಚ್ಚು ಧೈರ್ಯ ಇದೆ. ಮನಸ್ಸಿನ ಭಾವನೆಗಳನ್ನು ಮಾತಿನ ಮೂಲಕ ವ್ಯಕ್ತಪಡಿಸಲು ಆಕೆ ಸಮರ್ಥಳಾಗಿದ್ದಾಳೆ. ಯಶಿ ಮನೆಯಲ್ಲಿ ಚಿಪ್ಪಿನಂತಹ ವಾತಾವರಣವಿದ್ದರೆ ಸರೋಜ ಮನೆಯಲ್ಲಿ ಪರಿವರ್ತನೆಯ ಗಾಳಿ ಇರುವ ವಾತಾವರಣ ಇದೆ. ತಂದೆ, ಅಣ್ಣ, ಭಾಸ್ಕರರಂತಹವರು ನಡೆಸುವ ಕಾರ್ಯಚರಣೆಗಳ ಆದರ್ಶ ಇದೆ. ಯಶೀಯಲ್ಲಿ ಜಾಗೃತವಾಗಿರುವ ಸ್ವಪ್ರಜ್ಞೆ ಸರೋಜಾಳಲ್ಲಿ ವಿಚಾರಗಳ ಮೂಲಕ ಬಹಿರಂಗರೂಪ ತಳೆದಿವೆ. ಸರೋಜಾಳ ಧ್ವನಿಯನ್ನು ತಗ್ಗಿಸುವ ಪ್ರಯತ್ನಗಳು ಪದೇಪದೇ ಮನೆ ವಾತಾವರಣದಲ್ಲಿ ಮೂಡಿದರೂ, ಸರೋಜಾ ತನ್ನ ದಿಟ್ಟತನದ ಮೂಲಕ ತನ್ನನ್ನು ತಾನು ಗುರುತಿಸಿಕೊಳ್ಳುವ ಪ್ರಯತ್ನ ಮಾಡುವುದರಿಂದ, ಅವಳಿಗೆ ತಂದೆ ಅಣ್ಣಂದಿರ ಬೆಂಬಲವು ಇದೆ. ವಾಸುದೇವರಾಯರ ಮನೆಯ ವಾತಾವರಣ ಇತರ ಕತೆಗಳಲ್ಲಿ ಇರುವ ಮನೆವಾತಾವರಣಕ್ಕಿಂತ ಭಿನ್ನವಾಗಿದೆ. ಸುಧಾರಣ ಕ್ರಮವನ್ನು ಸ್ವತಃ ಮನೆಯ ಹಿರಿಯರಾದ ವಾಸುದೇವರಾಯರೇ ಒಪ್ಪಿಕೊಂಡಿದ್ದಾರೆ. ಆದುದರಿಂದ ಗೌರಮ್ಮ, ಪಾರ್ತಕ್ಕನವರ ವಿರೋಧಗಳು ತೆರೆಮರೆಯಲ್ಲಿಯೇ ನಡೆಯುತ್ತವೆ. ಗೌರಮ್ಮ ತಾವು ಬೆಳೆದ ಪರಿಸರವನ್ನು ನೆನೆಯುವರಾದರೂ, ಈಗ ಹಾಗಿಲ್ಲ, ಕಾಲ ಬದಲಾಗಿದೆ ಎಂದೆಲ್ಲ ಯೋಚಿಸುವಂತಾಗಿದ್ದಾರೆ. ಪಾರ್ತಕ್ಕನಿಗೆ ಅಸ್ಪೃಶ್ಯತೆ ಆಚರಣೆಯನ್ನುವುದು ಜೀವನ ವಿಧಾನದಲ್ಲಿ ಒಂದಾಗಿ ಬೆರೆತಿರುವುದು ಈಗ ಸ್ವಂತ ಮಗನ ಬಂಡಾಯದಿಂದಾಗಿ,

ಇತರರಿಂದ ತಾನೆ ಅಸ್ಪೃಶ್ಯರಾಗುವ ಅಸಹನೀಯ ಸ್ಥಿತಿ ಬಂದಿದೆ. ಆದುದರಿಂದ ಅವರೂ ಸರೋಜಾಳನ್ನು ವಿರೋಧಿಸಲು ಸಾಧ್ಯವಾಗದ ಪರಿಸ್ಥಿತಿಯಲ್ಲಿ ಇದ್ದಾರೆ. ತನ್ನಕ್ಕ ರತ್ನಾಳ ಬದುಕಿನ ಉದಾಹರಣೆಯನ್ನು ತನ್ನ ಮುಂದಿಟ್ಟು ಸರೋಜಾ ತನ್ನ ವಿವಾಹಜೀವನದ ಆಯ್ಕೆ ಕುರಿತು ಸ್ವತಂತ್ರ ಕಲ್ಪನೆ ಬೆಳಿಸಿಕೊಂಡಿದ್ದಾಳೆ. "...ಒಟ್ಟು ಬದುಕೇ ಎಷ್ಟು ಚಂದ ಎಂದು ಬದುಕುವುದನ್ನೇ ಪ್ರೀತಿಸುತ್ತ ಗೌರವಿಸುತ್ತ ಇರುವಾತನನ್ನು ತಾನು ಮದುವೆಯಾಗಬೇಕು.[೨೦]" (ಅಸ್ಪೃಶ್ಯರು: ೬೫)

ಹೆಣ್ಣಿನ ಬದುಕು ಕಷ್ಟ ಪರಂಪರೆಗಳಿಂದ ಮುಕ್ತವಾಗಬೇಕಾದರೆ ಕೈಹಿಡಿದ ಗಂಡ, ವಿದ್ಯೆ ಮತ್ತು ಉದ್ಯೋಗಗಳು ಸರಿಯಾದ ರೀತಿಯಲ್ಲಿ ಇರಬೇಕು ಎನ್ನುವ ಪುಟ್ಟಮ್ಮತ್ತೆ ಸಿದ್ಧಾಂತವನ್ನು ಇಲ್ಲಿ ಅನ್ವಯಿಸಿಕೊಂಡರೆ ಉನ್ನತ ವ್ಯಾಸಂಗ, ಉದ್ಯೋಗ ಪಡೆಯಲಾಗದ ಸ್ಥಿತಿಯಲ್ಲಿರುವ ಕಮಲಾವತಿ, ಅಂಭುಜ, ಯಶೋದ, ಸರೋಜಾರ ಭವಿಷ್ಯ ಬದುಕಿನ ನಿರ್ಧಾರಗಳು ಮದುವೆ ಆಯ್ಕೆ ಸ್ವಾತಂತ್ರ್ಯದ ಮೂಲಕವೇ ವ್ಯಕ್ತವಾಗಿದೆ ಎಂದು ತಿಳಿಯಬಹುದು ವಿಮೋಚನಾ ಕಲ್ಪನೆಯ ಮೊದಲ ಹಂತದ ಸ್ಥಿತಿಯಲ್ಲಿ ಅದನ್ನು ಪೂರ್ಣರೂಪದಲ್ಲಿ ಸ್ವೀಕರಿಸಲು ಅಸಮರ್ಥವಾಗುದಕ್ಕೆ ಮುಖ್ಯ ಕಾರಣ 'ಅವಲಂಬಿತರು' ಆಗಿರುವುದು. ನಾನಾ ಕಾರಣಗಳಿಂದಾಗಿ ಈ ಯುವತಿಯರು ಕುಟುಂಬದಿಂದ, ಸಮಾಜದಿಂದ, ತಮ್ಮನ್ನು ತಾವು ಪ್ರತ್ಯೇಕವಾಗಿ ಗುರುತಿಸಿಕೊಳ್ಳಲಾಗದ ಪರಿಸ್ಥಿತಿಯಲ್ಲಿ ಇದ್ದಾರೆ. ಹೆಣ್ಣನ್ನು ಕಾಡುವ ಅಸಹಾಯಕತೆ ಸಮಯಸಾಧಕತನದ ಒಂದು ರೂಪವೆಂದೇ ವಿಶದಪಡಿಸುತ್ತಾಳೆ, ಯಶಿ ಗೆಳತಿ, ಉಷಾ. ಪಡೆದು ಬಂದದ್ದು, ಪಾಲಿಗೆ ಬಂದಿದ್ದು ಎಂದು ಹೊಂದಾಣಿಕೆ ಮಾಡಿಕೊಳ್ಳುವವರು ಉಷಾಳ ಪ್ರಕಾರ ಪುಕ್ಕರು. ಅವಳ ಪ್ರಕಾರ:- "...ಮನಸ್ಸಿಗೊಪ್ಪಿಗೆಯಾಗುವವರೆಗೂ ನಾವು ಬಯಸುವ ವಿಷಯ, ವಸ್ತು, ವ್ಯಕ್ತಿ, ಏನೇ ಇರಲಿ ಇದನ್ನು ಅರಸುತ್ತಿರಬೇಕು[೨೧]". (ಚಿಪ್ಪು:೯೯)

ನಿರಂತರ ಶೋಧವಿದ್ದರೆ ಬದುಕಿನಲ್ಲಿ ಬೇಕಾದುದನ್ನು ಸಾಧಿಸುವುದು ಸಾಧ್ಯ ಎನ್ನುವ ಉಷಾಳ ತತ್ತ್ವವನ್ನು ಅಳವಡಿಸಿಕೊಂಡವಳು ಅಚಲ. ಸೌಗಂಧಿ, ಅಚಲಳಂತೇ ತನ್ನ ಸರದಿಯಲ್ಲಿ ನಿಂತು ಪ್ರಯತ್ನ ಮುಂದುವರಿಸುವಾಕೆ.

ಮದುವೆ ವಿಚಾರದಲ್ಲಿ ತನ್ನ ಭಾವನೆಗಳಿಗೆ, ಸ್ಪಂದನೆಗಳಿಗೆ ಆದ್ಯತೆ ಇರುಬೇಕೆಂದುಕೊಂಡ ಅಚಲ ವಧುಪರೀಕ್ಷೆಯಲ್ಲಿ ಎಲ್ಲ ವರನನ್ನು ನಿರಾಕರಿಸಿದವಳು. ಹೆಣ್ಣನ್ನು ಒಂದು ವಸ್ತುವಿನಂತೆ, ಪ್ರದರ್ಶನದ ಗೊಂಬೆಯಂತೆ ಮನೆಯ ಅಗತ್ಯಗಳಲ್ಲಿ ಒಂದು ಎನ್ನುವಂತೆ ಕಾಣುವ ಮದುವೆ ವ್ಯವಸ್ಥೆಯಲ್ಲಿ ಅವಳಿಗೆ ನಂಬಿಕೆ ಇಲ್ಲ. ಅಚಲಾಳ ಮುಂದೆ ತನ್ನದೇ ಓರಗೆಯ ಗೆಳತಿಯರ ಬದುಕಿನ ಅನೇಕ ಕತೆಗಳಿವೆ. ಚಪ್ಪರ, ವಾದ್ಯ, ಉಡುಪು, ಶೃಂಗಾರ, ಆಭರಣ, ಅಂತಸ್ತು, ಆಶಿರ್ವಾದ, ಅಕ್ಷತೆಕಾಳುಗಳಿಗಾಗಿ ನಡೆಯುವ ಮದುವೆಯಲ್ಲಿ ಅವಳಿಗೆ ಯಾವ ಆಸಕ್ತಿಯು ಇಲ್ಲ. ಅಚಲಾಳಂತೆ, ಲತ, ಸಮಾಜಶಾಸ್ತ್ರಜ್ಞೆಯರಲ್ಲಿಯೂ ಈ ಭಾವನೆಗಳು ಕಾಡಿವೆ. ಅಚಲ ತನಗೆ ಲಭಿಸಿದ ಅವಕಾಶಗಳ ಮೂಲಕವೇ ಅವುಗಳನ್ನೆಲ್ಲ, ನಿರಾಕರಿಸಿದವಳಾದರೆ. ಸೌಗಂಧಿ ಅತಿಗ್ ಹ ಅನುಭವಕ್ಕೆ ಎರವಾಗಿ ಕಾದುಕುಳಿತವಳು. ಅಚಲಾಳ ಮುಂದಿರುವ ಉದಾಹರಣೆಗಳಲ್ಲಿ ಬೇರೆ ಬೇರೆ ರೀತಿ ಸ್ತ್ರೀ ಪುರುಷ ಸಂಬಂಧಗಳಿವೆ. ಸುಬ್ಬಿಯ ವಿವಾಹವಿಲ್ಲದ ತಾಯ್ತನ, ಮಂಜುಳೆಯ ವಿವಾಹೇತರ ಸಂಬಂಧ, ಸರಿತಾಳ ವ್ಯಾಪಾರದಂತೆ ತೋರುವ ಹೊಂದಾಣಿಕೆಯ ಮದುವೆ ಸಂಬಂಧ, ಮೊದಲಾದವುಗಳು.

ನೈತಿಕ ಚೌಕಟ್ಟಿಲ್ಲದ ಸಂಬಂಧಗಳಲ್ಲಿ ತೃಪ್ತಿ ಸಿಗುವುದಾದರೆ ಅಚಲಾಳಿಗೆ ಅದರಲ್ಲಿ ತಪ್ಪು ಕಾಣಿಸುವುದಿಲ್ಲ. ಸಾಂಪ್ರದಾಯಕವಲ್ಲದ ರೀತಿಯಲ್ಲಿ ಅಚಲ, ಸೌಗಂಧಿಯರ ಯೋಚನೆಗಳು ಸಾಗುತ್ತವೆ. ಸೌಗಂಧಿ ತಾನಿದ್ದ ಪರಿಸರದಿಂದ ದೂರ ಹೋರಟು ಮನೆ ಮಾಡಿಕೊಂಡು ತನ್ನ ಸ್ವಂತದ ಗುರುತನ್ನು ಉಳಿಸುವ ಪ್ರಯತ್ನಮಾಡುತ್ತಿರುತ್ತಾಳೆ. "ಎಲ್ಲರನ್ನು ದೂರೀಕರಿಸಿ ಒಬ್ಬಂಟಿಯಾಗಿರುವುದು ತನ್ನನ್ನ ತಾನು ಕಂಡುಕೊಳ್ಳಲು ಅನುವು ಮಾಡಿಕೊಡುತ್ತದೆ. ಇಲ್ಲವಾದರೆ ಅವರೆಲ್ಲರ ಗದ್ದಲದಲ್ಲಿ ಮತ್ತೆ ಮುಳುಗಿಹೋಗುತ್ತೇನ್ನೆ ಅಗ ಎಲ್ಲಿದ್ದೇನೆ ತಾನು ಎಂದು ಮತ್ತೆ ಕೂಗಿಕೊಳ್ಳಬೇಕಾಗುತ್ತದೆ". (ಸೌಗಂಧಿಯ ಸ್ವಾಗತಗಳು ೨೦೪).

ಕುಟುಂಬ ಸಂಬಂಧಗಳಲ್ಲಿ ಬಂಧಿಯಾಗಿರುವುದಕಿಂತ ಸ್ವತಂತ್ರಗಳಾಗಿ ತನ್ನ ಪಾಡಿಗೆ ತಾನಿರುವುದರಲ್ಲಿ ಹೆಚ್ಚಿನ ತೃಪ್ತಿ ಇದೆ ಎಂದುಕೊಂಡಿರುವ ಸೌಗಂಧಿಗೆ ಗದ್ದಲದಲ್ಲಿ ಕಳೆದುಹೊಗುವ ಮನಸ್ಸು ಇಲ್ಲ. ಆದರೂ ಅವಳ ಸ್ವಾತಂತ್ರ್ಯವನ್ನು ಕಸಿಯಲು, ಅವಳಿಗೆ ಬೇಡವಾದ ರಕ್ಷಣೆ ನೀಡಲು, ಮನೆಯೊಡತಿ, ತಂದೆ, ತಾಯಿ ಕಾವಲು ನಿಲ್ಲುತ್ತಾರೆ. ಸೌಗಂಧಿಗೆ ಬಂಧನ ಅನಿವಾರ್ಯವೆನಿಸುವಂತೆ.

ಅಚಲಾ, ಸೌಗಂಧಿಯರು ಬಂಡುತನವನ್ನು ವೈಯಕ್ತಿಕ ಸ್ವಾತಂತ್ರ್ಯವೆಂಬ ಭಾವದಿಂದ ತಮ್ಮದಾಗಿಸಿಕೊಳ್ಳುತ್ತಾರೆ. ಒಂಟಿತನದಲ್ಲಿ ತಮ್ಮ ಪಾಡಿಗೆ ಬದುಕುವ ಆಯ್ಕೆ ಸ್ವತಂತ್ರ್ಯದಲ್ಲಿ ಹೆಚ್ಚಿನ ನೆಮ್ಮದಿ ಸಂತೋಷವನ್ನು ಕಾಣುತ್ತಾರೆ. ಸವಿತ ನೆರವೇರದ ತಾಯ್ತತನದ ಹಂಬಲದಲ್ಲಿ ಅತೃಪ್ತ ಭಾವನೆಯಲ್ಲಿರುವ ಯುವತಿ. ಸವಿತ ಅವಿವಾಹಿತೆ. ಆಕೆಯ ತಾಯ್ತನದ ಕನಸು ನಡುವಲ್ಲೇ ಮುರಿದು ಬಿದ್ದಿದೆ. ಮತ್ತೆ ಅದನ್ನು ಪಡೆಯಲಾಗದ ಸ್ಥಿತಿಯಲ್ಲಿದ್ದಾಳೆ ಸವಿತ ಮಗುವಿನ ಹಂಬಲವನ್ನು ಏನಿದ್ದರು ಹೊರಗೆ ನಿಂತು ವೀಕ್ಷಿಸಬೇಕಾದ ಪರಿಸ್ಥಿತಿ ಅವಳದು. 'ಮೋಡ ಕವುಚಿದರೂ ಮಳೆ ಸುರಿಯದಂಥ ಸ್ಥಿತಿ'.

ಮದುವೆ ಬಂಧನವಿಲ್ಲದೆ ಮಗುವಿನ (ತಾಯ್ತನದ) ಸುಖವನ್ನು ಪಡೆಯಲು ಅವಳಿರುವ ಪರಿಸರ ಅವಕಾಶ ನೀಡುವುದಿಲ್ಲ. ಸಾಧ್ಯತೆಗಳೇನಿದ್ದರೂ ನೆರವೇರಿಸಲಾಗದ, ಪೂರ್ತಿಗೊಳಿಸಲು ಅಸಾಧ್ಯವಾಗಿರುವ ಪರಿಸ್ಥಿತಿಯಲ್ಲಿ, ಅವಳು ಉಳಿದವರಿಗಾಗಿ ತನ್ನ ಆಸೆಯನ್ನು ತೊರೆಯಬೇಕಾಗಿದೆ.

"...ತಾನು ಒಂದೆ ಒಳಗೆ ಹೋಗಬೇಕು ಇಲ್ಲ ಸೀದ ಮುಂದುವರಿಯಬೇಕು. ಅವಳು ಮುಂದುವರಿಯುತ್ತಿದ್ದಳು. ಪ್ರಪಂಚದಲ್ಲಿ ಬಹಳ ಹೊತ್ತು ನಮಗಾಗಿ ನಾವು ಏನೂ ಮಾಡುವಂತಿಲ್ಲ. ಕದ್ದುಪಡೆದ ಒಂದಷ್ಟು ನಿಮಿಷಗಳು ಮಾತ್ರ ನಮ್ಮವು ಉಳದೆಲ್ಲವು, ಸಮಾಜದ್ದು, ಬಂಧುಗಳದ್ದು...'" (ಗುಲಾಬಿ ಮೃದು ಪಾದಗಳು - ೧೪೦)

ಸರಿತ, ಅಚಲ, ಸೌಗಂಧಿಯರು ಸಾಂಪ್ರದಾಯಿಕ ಸ್ತ್ರೀ ಮಾದರಿಗೆ ವಿರುದ್ಧ ದಿಕ್ಕಿನಲ್ಲಿರುವ ವ್ಯಕ್ತಿತ್ವಗಳು. ಸಂಪ್ರದಾಯದ ಕೋಟೆಯನ್ನು ಬಿಟ್ಟು ಹೊರಗೆ ನಡೆದು ಮನಸ್ಸಿನ ಮತ್ತು ದೇಹದ ಸುಖ, ಶಾಂತಿ, ನೆಮ್ಮದಿಗಳನ್ನು ಪಡೆಯುವ ಮೂಲಕ ಪರಿಪೂರ್ಣತೆಯನ್ನು ಒಪ್ಪಿಕೊಳ್ಳುವ ಮಾದರಿಗಳು. ಅಹಲ್ಯೆ, ಬೀನ, ಚಂದಲೆ, ವಾರಿಜ, ಶಾಮ ಮೊದಲಾದ ಸಣ್ಣಪುಟ್ಟ ಹುಡುಗಿಯರು ಬೆಳೆಯುವ ಹಂತದಲ್ಲೇ ಅವರ ಭವಿಷ್ಯವನ್ನು ನಿರ್ಧರಿಸುವ ಹಕ್ಕನ್ನು ಹಿರಿಯರು ಪಡೆದುಕೊಂಡುದರಿಂದ ಅವರ ಮನಸ್ಸಿನ ಭಾವನೆಗಳು ಹುಟ್ಟುವ ಮೊದಲೇ ಇನ್ನೊಬ್ಬರಿಂದ

ಕಸಿದುಕೊಳ್ಳಲ್ಪಡುತ್ತವೆ. ಭವಿಷ್ಯ ಬದುಕಿನಲ್ಲಿ ಅವರಿಗೆ ಆಯ್ಕೆ ಎನ್ನುವುದು ಇಲ್ಲವಾಗಿದೆ.

ಮುಕ್ತ ಜೀವನವನ್ನು ಹೋರಾಟಕ್ಕಿಂತಲೂ ಹೆಚ್ಚಾಗಿ ಬದುಕಿನ ವಿಧಾನವೆನ್ನುವಂತೆ ಪಡೆದ ಅನೇಕ ಹೆಣ್ಣಾಳುಗಳ ಜೀವನ, ಕತೆಗಳಲ್ಲಿ ಅವಕಾಶ ಪಡೆದಿದೆ. ಚಂದು, ದುಗ್ಗು, ಸಣ್ಣಿ, ಮಂಜಿ, ಗೌರಿ, ಕಾಶಿ ಸುಬ್ಬಿ, ಗುಲಾಬಿ ಮೊದಲಾದ ಹೆಣ್ಣಾಳಗಳು, ಅಂಗರೆ, ನರಪಟೆ ಮೊದಲಾದ ಕೆಳಸ್ತರದ ಹೆಣ್ಣುಗಳು ಕತೆಯ ಒಂದು ಭಾಗವಾಗಿಯೆ ಬಂದು ಹೋಗುವ ಪಾತ್ರಗಳು.

ಹೊಟ್ಟೆ ಪಾಡಿಗಾಗಿ ಮೇಲುವರ್ಗವನ್ನು ಅವಲಂಬಿಸಿರುವ, ಆದರೆ ದುಡಿಮೆ, ಸಂಪಾದನೆ ಮತ್ತು ವೈಯಕ್ತಿಕತೆಗಳಲ್ಲಿ ಹೆಚ್ಚು ಸ್ವಾತಂತ್ರ್ಯವನ್ನು ಅನುಭವಿಸುವ ಈ ಹೆಣ್ಣುಗಳನ್ನು ಸಮಾಜ, ಪರಂಪರೆ, ಸಂಪ್ರದಾಯ, ಮೊದಲಾದುವುಗಳು ಇತರರಿಗೆ ಕಾಡಿದಷ್ಟು ಇವರನ್ನು ಕಾಡುವುದಿಲ್ಲ. ತಮ್ಮದೇ ಆದ ವಿಶಿಷ್ಟರೀತಿಯ ಬದುಕನ್ನು ನಡೆಸುವ ಈ ಹೆಣ್ಣುಗಳು ಬಾಹ್ಯ ಒತ್ತಡವಿಲ್ಲದೆ ತಮಗೆ ಇಷ್ಟಬಂದ ರೀತಿಯಲ್ಲಿ ಬದುಕನ್ನು ನಡೆಸಲು ಸ್ವತಂತ್ರರಾಗಿದ್ದಾರೆ.

ಸಾಮಾಜಿಕ ಮತ್ತು ಆರ್ಥಿಕ ಕಾರಣಗಳಿಂದ ಉಂಟಾಗಿರುವ ಶ್ರೇಣೀಕರಣ ವ್ಯವಸ್ಥೆಯು ಮನುಷ್ಯನನ್ನು ಮನುಷ್ಯನಿಂದ ಪ್ರತ್ಯೇಕಿಸಿಕೊಂಡು ಶತಮಾನಗಳವರೆಗೆ ಮುಂದುವರಿದು ಬಂದಿರುವುದು ಹೇಗೆ ಕಾಲಾನುಕ್ರಮದಲ್ಲಿ ತಾನು ಉಂಟುಮಾಡಿರುವ ಅಂತರವನ್ನು ಕಡಿಮೆ ಮಾಡುತ್ತಾ ಬಂದಿರುವುದು, ಅದೇ ರೀತಿ ಸ್ತ್ರೀ-ಪುರುಷರ ನಡುವಿನ ಅಂತರವು ಕಡಿಮೆಯಾಗಬೇಕಾದ ಕಾಲ ಒದಗಿ ಬಂದಿದೆ ಎನ್ನುವುದನ್ನು ವೈದೇಹಿ ಕತೆಗಳು ಸ್ಪಷ್ಟಪಡಿಸುತ್ತದೆ. ಈ ಅಂತರವನ್ನು ಕಡಿಮೆ ಮಾಡುತ್ತಿರುವುದು ಬಾಹ್ಯ ವಿಚಾರಗಳ ಮೂಲಕವಲ್ಲ, ಮನುಷ್ಯನಲ್ಲಿ ಆಂತರಿಕವಾಗಿ ಮೂಡಿದ ಎಚ್ಚರದ ಮೂಲಕ. ಈ ವಿಚಾರದಲ್ಲಿ ಸಂಘರ್ಷದ ಅವಧಿ ಪ್ರಾರಂಭದಲ್ಲಿದ್ದರೆ ನಂತರ ಕಾಣಿಸಿಕೊಳ್ಳುವುದು ಬಿಡುಗಡೆಯ ಸ್ಥಿತಿ.

ಸಂಘರ್ಷದ ಪೂರ್ವಸ್ಥಿತಿಯಲ್ಲಿ ತನ್ನನ್ನು ತಾನು ಅರ್ಥಮಾಡಿಕೊಳ್ಳದ ಸ್ಥಿತಿ ಇರುತ್ತದೆ. ಪೂರ್ವ ನಿರ್ಧಾರಿತ ಅಂಶಗಳಿಗೆ ಹೊಂದಿಕೊಂಡಿರುವ ತಮ್ಮ ವ್ಯಕ್ತಿತ್ವವನ್ನು ಇವರು ಬದಲಾಯಿಸಲಾರರು. ಪಾರಂಪರಿಕ ಸ್ತ್ರೀ ಮಾದರಿಯಲ್ಲಿ ಕಾಣಿಸಿಕೊಳ್ಳುವ ಸ್ತ್ರೀಯರೆಲ್ಲ ತಮ್ಮ ಸ್ಥಿತಿಯನ್ನು ಒಪ್ಪಿಕೊಂಡವರೇ ಆಗಿದ್ದಾರೆ. ಅಧೀನತೆಯನ್ನುವುದು, ಅವರಿಗೆ ಅನಿವಾರ್ಯವಾಗಿದೆ. 'ಮರಗಿಡ ಬಳ್ಳಿ' ಕತೆಯಲ್ಲಿ ತನ್ನ ಮನೆ, ಮಕ್ಕಳು ಎಂದು ಜೀವಮಾನವಿಡೀ ಬದುಕನ್ನು ಮೀಸಲು ಇಟ್ಟು, ಮರಣಶಯ್ಯೆಯಲ್ಲಿ ಮಕ್ಕಳಿಂದ ಅನಾದಾರಕ್ಕೆ ಒಳಗಾದ ತಾಯಿ ಯೊಚಿಸುತ್ತಾಳೆ. "...ನಿಮ್ಮನ್ನೆಲ್ಲ ಕಂಡು, ಇಷ್ಟರವರೆಗೆ ಸತ್ಯವೆಂದೆ ಗಟ್ಟಿಯಾಗಿ ನಂಬಿದವುಗಳೆಲ್ಲ ಮಿಥ್ಯೆಯಲ್ಲಿ ಮಿಥ್ಯೆ. ಈ ಮಿಥ್ಯೆಗಾಗಿ ಜೀವನವಿಡೀ ಸವೆಸಿ ಹೇಗೆ ಮರುಕಾದೆನಲ್ಲ ಎಂದು ವ್ಯಥೆಯಾಗುತ್ತದೆ. ಆದರೆ ಹಾಗೆ ಸವೆಸುವುದೂ ಅನಿವಾರ್ಯವಾಗಿತ್ತು ಎನ್ನು. ಹಾಗೆ ಸವೆಸದೆ ನನಗೆ ಬೇರೆ ಮಾರ್ಗವಿದ್ದಿತೆ"?" (ಮರಗಿಡ ಬಳ್ಳಿ: ಪುಟ:೧೪)

ಹೆಂಡತಿ, ತಾಯಿ ಮುಂತಾದ ಸಾಮಾಜಿಕ, ಕೌಟುಂಬಿಕ ಪಾತ್ರಗಳಿಗೆ ಪ್ರಾಮುಖ್ಯತೆ ಹೆಚ್ಚು ಹೆಚ್ಚು ದೊರೆತಾಗಲೆಲ್ಲ ಸ್ವಂತಿಕೆ ಕಳೆದುಕೊಳ್ಳುವುದು ಇಲ್ಲಿ ಸಾಮಾನ್ಯ ವಿಚಾರ. ತನ್ನ ಬದುಕನ್ನಿಡೀ ವ್ಯರ್ಥವಾಗಿ ಕಳೆದೆನೆಂದು ಪರಿತಪಿಸುವ ರೋಹಿಣಿ (ಸಪ್ಪಳ ಮಾಡದ ಹೆಜ್ಜೆಗಳು), ಸ್ವಾತಂತ್ರ್ಯದ ಅಭಿಲಾಶೆ ವ್ಯಕ್ತಪಡಿಸಿದ ಮಾಲತಿ (ಗೂಡಿನೊಳಗೆ ಒಂದು

ಹಕ್ಕಿ), ತನ್ನದೇ ಮನೆಯಲ್ಲಿ ಗಂಡನಲ್ಲದ ಅಪರಿಚಿತ–ನೊಬ್ಬನೊಡನೆ ಬಾಳುತ್ತಿದ್ದೇನೆ ಎನ್ನುವ ಭಾವನೆ ಹುಟ್ಟಿಸಿಕೊಂಡ ಕುಸುಮ(ಕಾಣೆಯಾದವರು) ಸಂಘರ್ಷದ ಪೂರ್ವಸ್ಥಿತಿಯಲ್ಲಿ ಇರುವವರು. ತನ್ನತನದ ಅರಿವನ್ನು ಕಳೆದುಕೊಂಡ ಸ್ಥಿತಿಯಲ್ಲಿರುವರು. ಅಚಲ, ಸೌಗಂಧಿ, ಸರೋಜಾ ಮೊದಲಾದವರು ಸಂಘರ್ಷಕ್ಕೆ ಸಿದ್ಧರಾಗಿರುವವರು. ಈ ಸ್ಥಿತಿಯಲ್ಲಿ ತಮ್ಮತನದ ಅರಿವಿನೊಂದಿಗೆ, ಸ್ವಂತಿಕೆಯ ಶೋಧವು ಮುಖ್ಯವಾಗುತ್ತದೆ. ಭಾರತಿಯ ಶೋಧದಲ್ಲಿ ತೊಡಗಿದ ಕೃಷ್ಣಾಳ ಪ್ರಯತ್ನದಲ್ಲಿ ಈ ಶೋಧವನ್ನು ವ್ಯಕ್ತಪಡಿಸಲಾಗಿದೆ (ಶೋಧ) ಗತ, ವರ್ತಮಾನವನ್ನು ಒಳಗೊಂಡಂತೆ ಈ ಶೋಧವು ಮುಂದುವರಿಯಬೇಕಾಗಿದೆ. ಹೀಗೆ ತಲೆಮಾರುಗಳು ಬದುಕಿದ ಸ್ಥಿತಿಯನ್ನು ಮಾದರಿಯಾಗಿಟ್ಟುಕೊಂಡೇ ನಾವು ಮುಂದುವರಿಯಬೇಕಾಗಿದೆ, ಎನ್ನುವುದನ್ನು ವೈದೇಹಿ ಕತೆಗಳ ಸೂಚಿಸುತ್ತವೆ. ಹೆಣ್ಣು ಬದುಕಿದ ರೀತಿಯ ಗತ ಇತಿಹಾಸದ ನೆಲೆಗಟ್ಟಿನ ಮೇಲೆಯೇ ಇಂದಿನ ಹೆಣ್ಣು ಬದುಕುವ ನೆಲೆಯನ್ನು ಕಂಡುಕೊಳ್ಳುವ ಪ್ರಯತ್ನ ನಡೆಯಬೇಕಾಗಿದೆ ಎಂಬುದು ಅವರ ಮುಖ್ಯ ಉದ್ದೇಶವಾಗಿದೆ.

**ಅಡಿಟಿಪ್ಪಣಿಗಳು:**

೧. ವೈದೇಹಿ, **ಅಸ್ಪೃಶ್ಯರು**, ನವಕರ್ನಾಟಕ ಪ್ರಕಾಶನ, ಬೆಂಗಳೂರು. ೧೯೯೨, ಪುಟ: ೧೨೦.

೨. ಪೂರ್ವೋಕ್ತ ಪುಟ: ೧೨೧.

೩. ಪೂರ್ವೋಕ್ತ ಪುಟ: ೫೯.

೪. ವೈದೇಹಿ (೧೯೮೪), **'ಅಕ್ಕು'**, ಬೆಳ್ಳಿಬಾಗಿನ ಕತಾಸಂಕಲನ, ಜ್ಯೋತಿನಿವಾಸ ಕಾಲೇಜು, ಬೆಂಗಳೂರು ೧೯೯೨, ಪುಟ: ೧೧೮.

೫. ವೈದೇಹಿ, **'ಚಿಪ್ಪು'**, ಮರಗಿಡಬಳ್ಳಿ ಕತಾಸಂಕಲನ, ಅಕ್ಷರ ಪ್ರಕಾಶನ, ಹೆಗ್ಗೋಡು. ೧೯೭೯, ಪುಟ: ೧೦೩.

೬. ವೈದೇಹಿ, **'ಒಂದು ಕಳ್ಳ ವೃತ್ತಾಂತ'**, ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗೆ ಕತಾಸಂಕಲನ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೧, ಪುಟ: ೧೨೦.

೭. ಪೂರ್ವೋಕ್ತ ಪುಟ: ೧೨೧.

೮. **ಅಸ್ಪೃಶ್ಯರು**, ೧೯೯೨, ಪುಟ: ೬೧.

೯. ಪೂರ್ವೋಕ್ತ ಪುಟ: ೬೦.

೧೦. ವೈದೇಹಿ, **'ಅಲ್ಲಲ್ಲಿನ ಲೋಕದವರು'**, ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ ಕತಾ ಸಂಕಲನ, ೧೯೯೧, ಪುಟ: ೧೫೯.

೧೧. ವೈದೇಹಿ, **'ಆರತಿತಟ್ಟೆ'**, ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ ಕತಾಸಂಕಲನ. ೧೯೯೧ ಪುಟ: ೧೧೮.

೧೨. **'ಒಂದು ಕಳ್ಳವೃತ್ತಾಂತ'**, ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ ಕತಾಸಂಕಲನ, ೧೯೯೧. ಪುಟ: ೧೧೫.

೧೩. ವೈದೇಹಿ, **'ಹಕ್ಕಿಲ್ಲದವರು'**, ಪೂರ್ವೋಕ್ತ ಪುಟ: ೧೩೭.

೧೪. **'ಅಕ್ಕು'**, ಬೆಳ್ಳಿಬಾಗಿನ, ೧೯೯೨, ಪುಟ: ೧೯೯-೧೨೦.

೧೫. ಪೂರ್ವೋಕ್ತ ಪುಟ: ೧೨೩.

೧೬. ವೈದೇಹಿ, **'ಗೂಡಿನೊಳಗೆ ಒಂದು ಹಕ್ಕಿ'**, 'ಅಂತರಂಗದ ಪುಟಗಳು' ಕತಾ ಸಂಕಲನ. ಅಕ್ಷರ ಪ್ರಕಾಶನ, ಹೆಗ್ಗೋಡು. ೧೯೮೪. ಪುಟ: ೯೦.

೧೭. ಪೂರ್ವೋಕ್ತ ಪುಟ: ೯೧.

೧೮. **ಚಿಪ್ಪು**, ಮರಗಿಡಬಳ್ಳಿ, ೧೯೭೯ ಪುಟ: ೧೦೩.

೧೯. **ಪೂರ್ವೋಕ್ತ** ಪುಟ: ೧೦೧ -೧೦೨.

೨೦. **ಅಸ್ಪೃಶ್ಯರು,** ೧೯೯೨, ಪುಟ: ೬೫.

೨೧. **ಚಿಪ್ಪು,** ಮರಗಡಬಳ್ಳಿ, ೧೯೭೯ ಪುಟ: ೯೯.

೨೨. ವೈದೇಹಿ, **'ಸೌಗಂಧಿಯ ಸ್ವಗತಗಳು'** ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ, ೧೯೯೧. ಪುಟ: ೨೦೪.

೨೩. ವೈದೇಹಿ, **'ಗುಲಾಬಿಯ ಮೃದು ಪಾದಗಳು'** ಅಂತರಂಗದ ಪುಟಗಳು, ೧೯೮೪. ಪುಟ: ೧೪೦.

೨೪. **ಮರಗಿಡಬಳ್ಳಿ,** ೧೯೭೯, ಪುಟ: ೧೪.

# ಅಧ್ಯಾಯ ೭

# ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಸ್ತ್ರೀಪಾತ್ರಗಳು

ಕಾರಂತರ ಕಾದಂಬರಿಗಳಲ್ಲಿ ಸ್ಥಿರಮೌಲ್ಯದ ಗ್ರಾಮೀಣ ಸಮಾಜ ಮತ್ತು ಸ್ಥಿತ್ಯಂತರ ಪ್ರಕ್ರಿಯೆಯಲ್ಲಿರುವ, ಹೊಸ ಮೌಲ್ಯದ ಹುಡುಕಾಟದಲ್ಲಿರುವ ಸಮಾಜದ ಚಿತ್ರ ಇದೆ. ಈ ರೀತಿಯ ಎರಡು ಭಿನ್ನಸ್ವರೂಪದ ಸಾಮಾಜಿಕ ವ್ಯವಸ್ಥೆಯಲ್ಲಿ, ಆ ವ್ಯವಸ್ಥೆಗೆ ಅನುಗುಣವಾದ ರೀತಿಯಲ್ಲಿ ಬದುಕುವ ಸ್ತ್ರೀಪಾತ್ರ ಚಿತ್ರಣ ಈ ಕಾದಂಬರಿಗಳಲ್ಲಿ ಇದೆ. ಬಹುಪಾಲು ಸ್ತ್ರೀಪಾತ್ರಗಳು ಪ್ರತೀಕವಾಗಿ ಕಾಣಿಸಿಕೊಳ್ಳುತ್ತವೆ. ತಾವು ಬದುಕುವ ಸಾಮಾಜಿಕ ಪರಿಸರದೊಡನೆ ತಾದ್ಯಾತ್ಮತೆ ಹೊಂದಿ, ಪರಿಸರವನ್ನು ಪ್ರತಿನಿಧಿಸುವ ರೂಪದಲ್ಲಿ ಈ ಸ್ತ್ರೀಯರ ವ್ಯಕ್ತಿತ್ವವಿದೆ. ವಾಸ್ತವಿಕತೆಗೆ ಆದ್ಯತೆ ನೀಡುವ ಲೇಖಕರು ಸ್ತ್ರೀವ್ಯಕ್ತಿತ್ವವನ್ನು ವಾಸ್ತವಿಕ ಅಂಶಗಳಿಂದ ನೋಡುವರಾದರೂ, ಲೇಖಕರ ನಿಲುವಿನಿಂದ ಅವರು ಬಯಸುವ ಆದರ್ಶ ಸ್ಥಿತಿಯನ್ನು ಕೂಡಾ ಅಂತರ್ಗತಗೊಳಿಸಿಕೊಂಡ ರೀತಿಯಲ್ಲಿ ಈ ಪಾತ್ರಗಳು ಇವೆ.

ಕಾರಂತರ ಕಾದಂಬರಿಗಳಲ್ಲಿ ದುಡಿಮೆಯ ಕ್ಷೇತ್ರದಲ್ಲಿ ಹೆಂಗಸರು ಹೆಚ್ಚು ಕಾಣಿಸಿಕೊಂಡಿದ್ದಾರೆ. ಮನುಷ್ಯನ ದುಡಿಮೆಯ ಪರಿಸರಕ್ಕೆ ಆದ್ಯತೆ ಸಂದ ಕಾರಣವಾಗಿ ಮತ್ತು ಕುಟುಂಬವ್ಯವಸ್ಥೆ ಕೂಡಾ ದುಡಿಮೆ ಪರಿಸರದ ಒಂದು ಭಾಗವೇ ಆಗಿರುವುದರಿಂದ ಮನುಷ್ಯ ಈ ಪರಿಸರದಲ್ಲಿ ಬದುಕುವ ಸಂದರ್ಭಗಳು, ವ್ಯಕ್ತಿಯ ಸೋಲುಗೆಲವುಗಳು, ಸಾಧನೆಗಳು, ಕೂಡು ಜೀವನ, ಈ ವಿವರಗಳಿಗೆ ಪ್ರಾಮುಖ್ಯತೆ ನೀಡಿರುವುದು ಗೋಚರವಾಗುತ್ತದೆ. ದುಡಿಮೆಯ ಕ್ಷೇತ್ರದಲ್ಲಿ ಸ್ತ್ರೀ-ಪುರುಷರಲ್ಲಿ ಲೇಖಕರು ಭೇದವನ್ನು ಕಾಣಿಸಿಲ್ಲ. ಪುರುಷಪಾತ್ರಗಳಿಗಿರುವಷ್ಟೇ ಪ್ರಾಧಾನ್ಯತೆ ಸ್ತ್ರೀ ಪಾತ್ರಗಳಿಗೂ ನೀಡಲಾಗಿದೆ.

## ಪಾತ್ರಚಿತ್ರಣ

ಗ್ರಾಮೀಣ ಸಮಾಜದ ಸಾಮಾಜಿಕ ವ್ಯವಸ್ಥೆಯಿರುವ ಪರಿಸರ ಹೆಚ್ಚಿನ ಕಾದಂಬರಿಗಳಲ್ಲಿ ಇದೆ. ಶಾಶ್ವತ ಮೌಲ್ಯಗಳನ್ನು ಹೊಂದಿರುವ ಗ್ರಾಮೀಣ ಸಮಾಜದಲ್ಲಿ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ನಿರ್ದಿಷ್ಟತೆ ಇರುತ್ತದೆ. ಈ ಪರಿಸರದ ಅಂತಃಶಕ್ತಿಗಳಾಗಿ ಪರಂಪರೆ ಮತ್ತು ಸಂಪ್ರದಾಯವಿರುತ್ತದೆ.

ನಿಶ್ಚಿತ ಸ್ವರೂಪದ ಗ್ರಾಮೀಣ ಸಮಾಜದಲ್ಲಿ ಕಾಣಿಸಿಕೊಳ್ಳುವ ಸ್ತ್ರೀ ವ್ಯಕ್ತಿತ್ವವನ್ನು ಆ ಪರಿಸರದ ಪ್ರತಿನಿಧೀಕರಣರೂಪದಲ್ಲಿ ಚಿತ್ರಿಸಲಾಗಿದೆ. ಕಾದಂಬರಿಯಲ್ಲಿ ಬರುವ ಹಿರಿಯ ತಲೆಮಾರಿನ ಹೆಂಗಸರನ್ನು ಈ ವಿಧಾನದಲ್ಲಿ ಕಾದಂಬರಿ ಬಳಸುತ್ತದೆ. ಕಾಲಾನುಕ್ರಮದಲ್ಲಿ ಸಾಮಾಜಿಕ ಸ್ವರೂಪವು ಬದಲಾವಣೆಗೆ ಒಳಗಾಗುವ ಪ್ರಕ್ರಿಯೆಯಲ್ಲಿ ಸಮಾಜದ ಪೂರ್ವಸ್ಥಿತಿಯನ್ನು ವ್ಯಕ್ತಪಡಿಸುವ ರೀತಿಯಲ್ಲಿ ಹಿರಿಯ ಹೆಂಗಸರನ್ನು, ಅವರ ವ್ಯಕ್ತಿತ್ವದ ಶೀಲಗಳನ್ನು ನೋಡಲಾಗಿದೆ. ಸಮಾಜದ ಪೂರ್ವಸ್ಥಿತಿಗೆ, ಪರಂಪರೆಗೆ, ಸಲ್ಲುವ ರೀತಿಯಲ್ಲಿ ವಯಸ್ಸಾದ ಹಿರಿಯ ಸ್ತ್ರೀ ವ್ಯಕ್ತಿತ್ವಕ್ಕೆ ಆದರ, ಗೌರವಗಳು ಸಲ್ಲುತ್ತವೆ. ಈ ಹೆಂಗಸರ ವ್ಯಕ್ತಿತ್ವ ಸ್ಥಿರತೆ ಪ್ರಶ್ನಾತೀತವಾಗಿ ಉಳಿಯುತ್ತದೆ. ಪರಂಪರಾಗತ ಮೌಲ್ಯಗಳನ್ನು ಪ್ರತಿನಿಧಿಸುವ ಗುಣಶೀಲಗಳನ್ನು ಮನೋದೈಹಿಕ ನೆಲೆಯಲ್ಲಿ ಈ ಹೆಂಗಸರಲ್ಲಿ ಕಾಣಿಸುವುದರ ಮೂಲಕ ಅಪೇಕ್ಷಿತ ಮಾದರಿಯನ್ನು ಕಟ್ಟಿಕೊಡಲಾಗಿದೆ. ಈ ಮಾದರಿರೂಪದಲ್ಲಿ ಕಾಣಿಸಿಕೊಳ್ಳುವ

ಕಾದಂಬರಿ ಸ್ತ್ರೀಪಾತ್ರಗಳು: ಮೂಕಜ್ಜಿ, ಪಾರೋತಿ, ಮೂಕಾಂಬು, ಹೊನ್ನಜ್ಜಿ, ವೆಂಕಮ್ಮ, ಗಂಗಜ್ಜಿ, ಪಾರೋತಿ, ಸರಸೋತಿ, ರುಕ್ಮಾಯಿ, ಮೊದಲಾದವರು.

ಪರಂಪರೆ ಮತ್ತು ಸಂಪ್ರದಾಯಗಳಲ್ಲಿ ಅಚಲವಾದ ನಂಬಿಕೆ; ಈ ನಂಬಿಕೆ ಆಧಾರದಲ್ಲಿ ಪ್ರಾಮಾಣಿಕವಾಗಿ ಬದುಕುವುದು ಇವರ ಜೀವನ ವಿಧಾನ. ವ್ಯಕ್ತಿ ಬದುಕಿನ ಪಾವಿತ್ರ್ಯತೆಗೆ ಹೆಚ್ಚಿನ ಆದರವನ್ನು ಸೂಚಿಸುವ ಈ ಹೆಂಗಸರಿಗೆ ತಮ್ಮ ಸುತ್ತಲೂ ನಿರ್ಮಿಸಿಕೊಳ್ಳಲಾದ ಸಾಮಾಜಿಕ ಸಾಂಸ್ಕೃತಿಕ ಪರಿಸರವನ್ನು ಕಾಪಾಡಿಕೊಳ್ಳುವ ಜವಾಬ್ದಾರಿ ಇದೆ. ಈ ಕಾರಣವಾಗಿಯೇ ಪರಂಪರಾಗತ ಮೌಲ್ಯಗಳಿಗೆ ಧಕ್ಕೆ ಒದಗಿದಾಗ ಈ ಸ್ತ್ರೀ ವ್ಯಕ್ತಿತ್ವ ಸಂಕಟಕ್ಕೆ, ತಳಮಳಕ್ಕೆ ಗುರಿಯಾಗುತ್ತದೆ.

ಈ ಸ್ತ್ರೀಯರಲ್ಲಿ ಮಾನವ ಸಹಜ ದೌರ್ಬಲ್ಯಗಳು, ಬಯಕೆಗಳು, ಯಾವ ಹಂತದಲ್ಲಿಯೂ ಗೋಚರವಾಗದೆ ಉಳಿಯುವುದರಿಂದ ಇದನ್ನು ಆದರ್ಶಸ್ಥಿತಿ ಎನ್ನಬಹುದು. ಆದರ್ಶೀಕರಣದಲ್ಲಿ ಗುಣಾವಗುಣಗಳ ಸ್ಪಷ್ಟತೆ ಇಲ್ಲದಿರುವುದು ಮತ್ತು ಕಥಾನಕದಲ್ಲಿ ಮೊದಲ ತಲೆಮಾರಿನಲ್ಲಿ ಹೆಂಗಸರನ್ನಷ್ಟೇ ಪ್ರತಿನಿಧಿಗಳಾಗಿ ಉಳಿಸಿರುವುದು ಲೇಖಕರ ನಿಲುವನ್ನು ಸ್ಪಷ್ಟ ಪಡಿಸುವ ಅಂಶಗಳಾಗುತ್ತವೆ. ಲೇಖಕರು ಸ್ತ್ರೀಪಾತ್ರಗಳಿಗೆ ನೀಡಿರಬಹುದಾದ ಆದ್ಯತೆ ಮತ್ತು ಹಿರಿಯ ಹೆಂಗಸರನ್ನು ಚಿತ್ರಿಸುವಾಗ ಸಹಜ ಸ್ವಭಾವಕ್ಕಿಂತ ದೂರವಾಗಿ ನೋಡಿರುವುದನ್ನು ಹೀಗೆ ಅರ್ಥೈಸುವುದಕ್ಕೆ ಸಾಧ್ಯವಿದೆ :-

ಅಜ್ಜಿ ಅಥವಾ ಕುಟುಂಬ ಹಿರಿಯ ಸ್ಥಾನದಲ್ಲಿರುವ ಹೆಂಗಸರಲ್ಲಿ ಹೆಚ್ಚಿನವರು ವಿಧವೆಯರು/ಬಾಲವಿಧವೆಯರು. ತನ್ನ ಮನೆ, ತನ್ನಸಂಸಾರ ಎನ್ನುವ ವೈಯಕ್ತಿಕ ಬದುಕಿನಿಂದ ವಂಚಿತರಾದವರು. ಸ್ವಂತ ಅನುಭವಗಳಿಗೆ ಎರವಾಗಿ ಬದುಕುವ ಸಂದರ್ಭದಲ್ಲಿ ಸುತ್ತಲಿನವರ ಒಳಿತಿಗಾಗಿ ಬದುಕುವುದು ಅವರಿಗೆ ಸಹಜವಾಗುತ್ತದೆ. ಪರಾಶ್ರಯದಲ್ಲಿ ಬದುಕುವ ಸ್ಥಿತಿಯಲ್ಲಿ ತ್ಯಾಗ, ಸಹನೆ, ದುಡಿಮೆ ಅವರ ಜೀವನ ವಿಧಾನವಾಗುತ್ತದೆ. ತ್ಯಾಗಮಯ ಬದುಕಿನ ಆಯ್ಕೆ ಗೌರವ ಅಭಿಮಾನಗಳನ್ನು ಪಡೆಯುವುದರಿಂದ ಇನ್ನೊಬ್ಬರಿಗೆ ಇದು ಆದರ್ಶವಾಗುತ್ತದೆ. ಆದರ್ಶ ಮಾದರಿ ಸೃಷ್ಟಿಗೆ ಮೂಲವಾಗುತ್ತದೆ. ಮಾದರಿಯಲ್ಲಿರುವ ಪ್ರತಿಯೊಂದು ಲಕ್ಷಣವೂ ಮೌಲ್ಯ ಪ್ರತಿನಿಧಿಕರಣಕ್ಕೆ ಒಳಗಾಗುವ ಪ್ರಕ್ರಿಯೆ ನಡೆಯುತ್ತದೆ. ಈ ಹೆಂಗಸರಲ್ಲಿ ಹೆಚ್ಚಿನವರು ಸಾಂಪ್ರದಾಯಿಕ ಶಿಕ್ಷಣವನ್ನು ಪಡೆದವರು ಅಲ್ಲ. ಆದರೆ ದೀರ್ಘ ಬದುಕಿನ ಅನುಭವದಿಂದ ಅಪಾರವಾದ ತಿಳುವಳಿಕೆ ಉಳ್ಳವರಾಗಿ ಇನ್ನೊಬ್ಬರಿಗೆ ಮಾರ್ಗದರ್ಶನ ನೀಡುವಷ್ಟು ಜ್ಞಾನ ಅವರಲ್ಲಿರುತ್ತದೆ. ಈ ಮಾತಿಗೆ ಅಪೂರ್ವ ಉದಾಹರಣೆ - ಮೂಕಜ್ಜಿ. ಕಾದಂಬರಿ: ಮೂಕಜ್ಜಿಯ ಕನಸುಗಳು

ಬದುಕಿನ ವಿಧಾನದಿಂದಲೇ ವ್ಯಕ್ತಿತ್ವ ಪಕ್ವತೆ ಇವರಿಗೆ ಸಾಧಿಸುತ್ತವೆ. ಬದುಕು ಮತ್ತು ಸಾವನ್ನು ಒಂದೇ ಭಾವದಿಂದ ಸ್ವೀಕರಿಸುವ ಮಾನಸಿಕ ಸ್ಥಿರತೆ, ಇಚ್ಛಾಮರಣವನ್ನು ಪಡೆಯುವ ಅಂತಃಶಕ್ತಿ ಅವರಲ್ಲಿರುತ್ತದೆ. ಉದಾ: ಪಾರೋತಿ. ಕಾದಂಬರಿ: ಅಳಿದ ಮೇಲೆ. ವೈಯಕ್ತಿಕ ಸಾಧನೆಗಿಂತಲೂ ಜೀವನಾನುಭವ ಮುಖ್ಯವಾಗುವುದರಿಂದ ಜೀವನವನ್ನು ಸಮಭಾವದಿಂದ ಎದುರಿಸುವ ಶಕ್ತಿ ಮತ್ತು ಮನೋಭಾವ ಇವರಲ್ಲಿರುತ್ತದೆ. ಉದಾ: ಹೊನ್ನಜ್ಜಿ, ಕಾದಂಬರಿ : ಇನ್ನೊಂದು ದಾರಿ.

ನಿಶ್ಚಿತರೂಪದ ನಂಬಿಕೆಗಳನ್ನು ರೂಢಿಸಿಕೊಂಡ ಕಾರಣ ವ್ಯಕ್ತಿತ್ವಕ್ಕೆ ಸಂಪ್ರದಾಯ ಬದ್ಧತೆ ಇರುತ್ತದೆ. ತಾನಿರುವ

ರೀತಿಯಲ್ಲಿಯೇ ಇತರರಿಂದಲೂ ಈ ಬದ್ಧತೆಯನ್ನು ನಿರೀಕ್ಷಿಸುವುದು ಈ ವ್ಯಕ್ತಿತ್ವಕ್ಕೆ ಸಹಜ ಸ್ವಭಾವವಾಗಿ ಇದೆ. ನಂಬಿಕೆಗೆ ಧಕ್ಕೆ ಉಂಟಾದಾಗ, ಇತರರು ತಮ್ಮಲ್ಲಿ ವಿಶ್ವಾಸವನ್ನು ಕಳೆದುಕೊಂಡಾಗ ಇಲ್ಲಿ ಪ್ರತಿರೋಧಗಳು ವ್ಯಕ್ತವಾಗುತ್ತವೆ. ಉದಾ: ಸರಸೋತಿ, ಕಾದಂಬರಿ: ಮರಳಿಮಣ್ಣಿಗೆ.

ಮೌಲ್ಯಾಧಾರಿತವಾಗಿ, ಸಂಪ್ರದಾಯದ ಪ್ರತೀಕಗಳಾಗಿರುವ ಈ ಸ್ತ್ರೀವ್ಯಕ್ತಿತ್ವಗಳಲ್ಲಿ ದೌರ್ಬಲ್ಯಗಳು ಕಾಣಿಸುವುದಿಲ್ಲ. ಪರಿಪೂರ್ಣತೆಯನ್ನು ಸಾಧಿಸುವ ಹಂತದಲ್ಲಿ ದೌರ್ಬಲ್ಯಗಳನ್ನು ಮೆಟ್ಟಿ ಮುಂದುವರಿಯುವುದು ಸಹಜ ಸ್ಥಿತಿ ಎನ್ನುವ ನಿಲುವು ಇಲ್ಲಿ ವ್ಯಕ್ತವಾಗಿದೆ. ಮನಸ್ಸಿನ ಭಾವನೆಗಳಿಗೆ, ಸುಖದ ಅಪೇಕ್ಷೆಗೆ, ಮನೋದೈಹಿಕ ಸೂಕ್ಷ್ಮಭಾವಗಳಿಗೆ - ಈ ವ್ಯಕ್ತಿತ್ವಸ್ವರೂಪದ ನಿರ್ವಚನದಲ್ಲಿ, ವೈಯಕ್ತಿಕವೆನ್ನಬಹುದಾದ ಈ ಅಂಶಗಳನ್ನು ನಿರ್ಲಕ್ಷ್ಯಕ್ಕೆ ನಿರಾಕರಣೆಗೆ ಒಳಪಡಿಸಲಾಗಿದೆ ಎಂದು ತಿಳಿಯುವುದು ಸಾಧ್ಯವಿದೆ. ದೀರ್ಘಾಯಸ್ಸು ಹೊಂದಿದ ಸುಧೀರ್ಘ ಬಾಳುವೆಯಲ್ಲಿ ಯಾವುದೇ ಸ್ವಂತಿಕೆಯ ಭಾವನೆಗೆ ಅವಕಾಶ ಕೊಡದೆ ಪರಾಶ್ರಯದ ಬದುಕಿನಲ್ಲಿ ಅವರು ತೃಪ್ತಿ, ಸಮಾಧಾನದಿಂದ ಇರುವುದು ಅವಾಸ್ತವಿಕವೆನ್ನಿಸುವುದು ಈ ಹಿನ್ನೆಲೆಯಲ್ಲಿ ಮಾತ್ರ. ಆದರೆ ಈ ದಿಕ್ಕಿನಲ್ಲಿ ಹೆಣ್ಣಿನಲ್ಲಿ ಇದೆ ಎಂದು ಒಪ್ಪಿರುವ ಮಾತೃತ್ವದ ಕಲ್ಪನೆಯನ್ನು, ತಾಯ್ತನದ ತುಡಿತವನ್ನು ಮಾತ್ರ ಈ ಹೆಂಗಸರು ಪಡೆದವರಾಗಿದ್ದಾರೆ. ತಾಯ ಮಮತೆ, ರಕ್ಷಕಭಾವ ಮತ್ತು ಹಿತಚಿಂತನಾ ಸ್ವಭಾವದಲ್ಲಿ ಈ ಹೆಂಗಸರು 'ಮಾತೃದೇವತಾಸ್ವರೂಪ'ವನ್ನು ಪಡೆದಿದ್ದಾರೆ. 'ಅಳಿದಮೇಲೆ' ಕಾದಂಬರಿಯ ಪಾರೋತಿ-ಯಶವಂತರಾಯ ಸಂಬಂಧದಲ್ಲಿ ಇದು ಸ್ಪಷ್ಟವಾಗಿ ಕಾಣಿಸಿದೆ. ಮೂಕಾಂಬು, ಪಾರೋತಿ, ಮೂಕಜ್ಜಿ, ಸರಸೋತಿಯರನ್ನು ತಾಯ ಸ್ಥಾನದಲ್ಲಿಟ್ಟು ಗೌರವಸೂಚಿಸುವ, ಆದರಪೂರ್ವಕವಾಗಿ ನೋಡಿಕೊಳ್ಳುವ 'ಸಾಕುಮಕ್ಕಳು' ಇಲ್ಲಿ ಇದ್ದಾರೆ.

ಇಡೀ ಸಮುದಾಯದಲ್ಲಿ ಈ ಹಿರಿಯ ತಲೆಮಾರಿನವರಷ್ಟೇ ಪ್ರತ್ಯೇಕವಾಗಿ ಗುರುತಿಸಿಕೊಳ್ಳುವಂತಾಗುವುದಕ್ಕೆ ಅವರ ಅಪೂರ್ವವ್ಯಕ್ತಿತ್ವವೇ ಕಾರಣವಾಗಿದೆ. ಪರಂಪರೆ, ಸಂಪ್ರದಾಯ ಮತ್ತು ನಂಬಿಕೆ ಈ ಮೂರನ್ನು ಅಂತರ್ಗತಗೊಳಿಸಿರುವ ಈ ಸ್ತ್ರೀ ವ್ಯಕ್ತಿತ್ವದ ಆದರ್ಶ ಸ್ಥಿತಿಯನ್ನು ಸ್ಥೂಲವಾಗಿ ಈ ಕೆಳಗಿನಂತೆ ವಿವರಿಸಿಕೊಳ್ಳಬಹುದಾಗಿದೆ. 'ಇಲ್ಲದಕ್ಕೆ ಹಾತೊರೆಯದೆ, ಕಳೆದು ಹೋದುದಕ್ಕೆ ದುಃಖಿಸದೆ, ಬದುಕನ್ನು ಸೌಹಾರ್ದಪೂರ್ವಕವಾಗಿ ನಡೆಸುವ ವಿವೇಚನೆ ಮತ್ತು ನಿರ್ಧಾರ, ಇನ್ನೊಬ್ಬರ ಒಳಿತಿಗಾಗಿ ದುಡಿಯುವ ನಿರ್ಧಾರ ಮತ್ತು ಸಂಕಲ್ಪ, ಸಾವು-ಬದುಕನ್ನು ಸಮಭಾವದಿಂದ ಸ್ವೀಕರಿಸುವ ಸ್ಥಿರಭಾವ, ಮಾನವ ದೌರ್ಬಲ್ಯದಿಂದ ಅತೀತವೆನಿಸುವ ಸಹಜತೆ'.

ಸ್ತ್ರೀ ವ್ಯಕ್ತಿತ್ವವನ್ನು ಉನ್ನತೀಕರಣ ಪ್ರಕ್ರಿಯೆಗೆ ಒಳಪಡಿಸದೆ, ಆದರ್ಶಸ್ಥಿತಿಯ ಮೂಲಕ ಸ್ವರೂಪ ನಿರ್ಧಾರವನ್ನು ಕಾರಂತರು ಇಲ್ಲಿ ಸಾಧಿಸಿದ್ದಾರೆ. ವಯಸ್ಸಿನ ಪಕ್ವತೆ, ಮೌಲ್ಯಧಾರಿತ ಬದುಕು ಮತ್ತು ಮಾರ್ಗದರ್ಶಕ ಆದರ್ಶಗುಣಗಳಿಂದ ಮುಂದಿನ ಪೀಳಿಗೆಗೆ ಈ ಹೆಂಗಸರು ಆದರ್ಶದ ಮಾದರಿಗಳಾಗುತ್ತಾರೆ. ಈ ಆದರ್ಶ ಮಾದರಿಗಳ ಪ್ರಭಾವದಲ್ಲಿ ಇತರ ಸ್ತ್ರೀ ಪುರುಷರಿಬ್ಬರೂ ಹುಟ್ಟಿನಿಂದ ತಮ್ಮ ಬೆಳವಣಿಗೆಯ ಉದ್ದಕ್ಕೆ ಬದುಕುವವರಾದರೂ, ಈ ಹೆಂಗಸರು ನಿರ್ಮಿಸುವ ಸಾಂಸ್ಕೃತಿಕ ಪರಿಸರದಲ್ಲಿ ಕಿರಿಪೀಳಿಗೆಯ ಹೆಂಗಸರಷ್ಟೇ ಉಳಿಯುತ್ತಾರೆ. ಗಂಡಸರು ತಮ್ಮ ಪಾಡಿಗೆ, ತಾವು ಬಯಸಿದ ರೀತಿಯ ಬದುಕಿನ ಆಯ್ಕೆಯಲ್ಲಿ ಸ್ವಾತಂತ್ರ್ಯ ಪಡೆಯುತ್ತಾರೆ. ಹೆಂಗಸರು ಮಾತ್ರ ಈ ಹೊಣೆಗಾರಿಕೆಯಲ್ಲಿ ಮುಂದುವರಿಯುತ್ತಾರೆ. ಹಿರಿಹೆಂಗಸರ ನೆರಳಲ್ಲಿ ಬೆಳೆದು ಅವರು ಕ್ರಮಿಸಿದ ಹಾದಿಯಲ್ಲಿ ಕ್ರಮಿಸುವ ಸೊಸೆಯಂದಿರು, ಮಗಳಂದಿರು ಈ ಆದರ್ಶವನ್ನು ತಮ್ಮದಾಗಿಸುತ್ತಾರೆ.

ಹಿರಿಯ ಹೆಂಗಸರನ್ನು ಅನುಸರಿಸುವಲ್ಲಿ ಪರಂಪರೆ, ಸಂಪ್ರದಾಯಗಳನ್ನು ಪ್ರಶ್ನಾತೀತವಾಗಿ ಸ್ವೀಕರಿಸುವ ಮನೋಭಾವದ ಕಾರಣವಾಗಿ ಪ್ರತಿಭಟನೆ, ಪ್ರತಿರೋಧಗಳು ಅವಕಾಶ ಪಡೆಯಲಾರವು. ತಾವಿರುವ ಪರಿಸರದೊಡನೆ ತಾದ್ಯಾತ್ಮತೆ ಪಡೆಯಲು ಹೊಂದಾಣಿಕೆ ನಡೆಸುವ ಪ್ರಯತ್ನದಲ್ಲಿಯೇ ಸುಖವನ್ನು ಕಾಣಬೇಕಾದುದು ಇಲ್ಲಿ ಅನಿವಾರ್ಯವಾಗುತ್ತದೆ. ಹಿರಿಯರಿಂದ ಪ್ರೇರಣೆ ಪಡೆದು, ಹಿರಿಯರು ನಡೆದ ದಾರಿಯಲ್ಲಿ ನಡೆದು ಬದುಕು ಸಾರ್ಥಕ ಮಾಡಿಕೊಂಡ ಭಾವದಲ್ಲಿದ್ದ ಕೆಲವು ಉದಾಹರಣೆಗಳು: ಸೀತೆ, ಕಾದಂಬರಿ: ಮುಗಿದ ಯುದ್ಧ, ನಾಗವೇಣಿ, ಕಾದಂಬರಿ: ಮರಳಿಮಣ್ಣಿಗೆ, ಸೀತೆ ತನ್ನ ತಾಯಿ ಲಕ್ಷ್ಮಮ್ಮನ ಮಾರ್ಗದರ್ಶನದಲ್ಲಿ ನೆಮ್ಮದಿ ಕಾಣುತ್ತಾಳೆ. ನಾಗವೇಣಿ, ಅತ್ತೆ, ಮುತ್ತತ್ತೆ, ಪ್ರಭಾವದಿಂದ ಪರಿಪೂರ್ಣತೆ ಪಡೆಯುತ್ತಾಳೆ. ಮೂಕಜ್ಜಿಯ ಮೊಮ್ಮಗನ ಹೆಂಡತಿ ಸೀತ ನಿಧಾನವಾಗಿ ಮೂಕಜ್ಜಿಯಲ್ಲಿ ಆಕರ್ಷಣೆ ಬೆಳೆಸುತ್ತಾಳೆ.

ಹೆಣ್ಣನ್ನು ಆದರ್ಶಸ್ಥಿತಿಯಲ್ಲಿ ಪರಿಗಣಿಸಿದ ನಂತರ ಅವಳ ಸಾಮಾಜಿಕ ವ್ಯಕ್ತಿತ್ವಕ್ಕೆ ಪ್ರಧಾನ ಸ್ಥಾನವನ್ನು ಲೇಖಕರು ಕಲ್ಪಿಸಿಕೊಡುತ್ತಾರೆ. 'ಮನುಷ್ಯ ಸಾಧನೆಯೆನ್ನುವುದಿದ್ದರೆ ಅದು ಸಮಾಜದ ಋಣವನ್ನು ತೀರಿಸುವ ವಿಧಾನದಲ್ಲಿರುವ ಬದುಕುವ ರೀತಿಯಲ್ಲಿದೆ' ಎನ್ನುವ ಪ್ರಧಾನ ಧೋರಣೆಯ ಈ ಹಂತದಲ್ಲಿ ಕಾರಂತರು ಚಿತ್ರಿಸುವ ಅನೇಕ ಪಾತ್ರಗಳಲ್ಲಿ ಆದರ್ಶಸ್ಥಿತಿಯನ್ನು ಪುರುಷ ಪಾತ್ರಗಳಲ್ಲಿಯೂ, ವಾಸ್ತವಿಕ ಸ್ಥಿತಿಯನ್ನು ಸ್ತ್ರೀಪಾತ್ರಗಳಲ್ಲಿಯೂ ಕಂಡರಿಸಿದ್ದಾರೆ. (ಔದಾರ್ಯದ ಉರುಳಲ್ಲಿ, ಬೆಟ್ಟದ ಜೀವ, ಅಳಿದ ಮೇಲೆ, ಒಂಟಿದನಿ, ಜಾರುವ ದಾರಿಯಲ್ಲಿ) ಪುರುಷಪಾತ್ರಗಳನ್ನು ಆದರ್ಶನೆಲೆಯಲ್ಲಿ, ಸ್ತ್ರೀಯರನ್ನು ಸಾಮಾಜಿಕ ವ್ಯಕ್ತಿತ್ವವಾಗಿ ಕಾಣಿಸಲಾಗಿದೆ.

ಎರಡನೇ ತಲೆಮಾರಿನ ಹೆಂಗಸರನ್ನು ಕಾದಂಬರಿಯಲ್ಲಿ ಅವರ ಸಾಮಾಜಿಕ ವ್ಯಕ್ತಿತ್ವದ ಹಿನ್ನೆಲೆಯಲ್ಲಿಯೇ ಚಿತ್ರಿಸಲಾಗಿದೆ. ಇಲ್ಲಿ ಹೆಣ್ಣಿನ ವ್ಯಕ್ತಿತ್ವ ಮತ್ತು ಬದುಕಿನ ವೈಯಕ್ತಿಕ ವಿವರಗಳೇನಿದ್ದರೂ, ಅವು ಸಾಮಾಜಿಕ ನೆಲೆಯಿಂದಲೇ ನಿರ್ವಚನಕ್ಕೆ ಒಳಗಾಗಿವೆ. ತಾಯಿತನ, ಹೆಂಡತಿತನ, ಗೃಹಿಣಿತನ ಮತ್ತು ವೇಶ್ಯೆಗಾರಿಕೆ - ಈ ಕಥಾನಕದಲ್ಲಿ ಸ್ತ್ರೀ ವ್ಯಕ್ತಿತ್ವ ನಿರ್ವಚನದಲ್ಲಿ ಪ್ರಧಾನಭೂಮಿಕೆ ನಿರ್ವಹಿಸುತ್ತವೆ. ತಾಯ್ತನವನ್ನು ಹೆಣ್ಣಿನ ಮೂಲಸ್ವರೂಪದಲ್ಲಿರುವ ಜೈವಿಕ ಕಾರ್ಯವಾಗಿ ಕಾರಂತರು ಒಪ್ಪಿಕೊಳ್ಳುವರಾದರೂ ಕೂಡ ಸಾಂಸ್ಕೃತಿಕ ಕಾರಣಗಳನ್ನು ಮುಂದಿಟ್ಟು ವೈಭವೀಕರಿಸುವ ಕಾರ್ಯದಲ್ಲಿ ಅವರೂ ಭಾಗಿಯಾಗುತ್ತಾರೆ.

ಮೊದಲನೆ ತಲೆಮಾರಿನಲ್ಲಿ ವಿಧವೆಯರಿರುವಂತೆ, ಈ ತಲೆಮಾರಿನಲ್ಲಿ ಪರಿತ್ಯಕ್ತೆಯರು ಬರುತ್ತಾರೆ. ಗಂಡಸರ ಬೇಜವಬ್ದಾರಿ, ಹೆಂಗಸರ ಹೊಣೆಗಾರಿಕೆಯಲ್ಲಿ ಸಾಮಾಜಿಕ ಜೀವನ ಸ್ವರೂಪ ಸ್ಥಿತ್ಯಂತಕ್ಕೆ ಒಳಗಾಗುತ್ತಿರುವ ಸಾಮಾಜಿಕ ವ್ಯವಸ್ಥೆಯ ಸೂಚನೆಯಾಗಿ ಬಂದಿದೆ.

ಇಲ್ಲಿಯೂ ಗಂಡಸರ ಅನುಪಸ್ಥಿತಿಯಲ್ಲಿ ಜೀವನ ನಡೆಸುವ ಅನಿವಾರ್ಯ ಪರಿಸ್ಥಿತಿ ಹೆಂಗಸರಿಗೆ ಬಂದಿದೆ. ಆದರೆ ಹಿಂದೆ ಇರುವಂತೆ ಈ ಹೆಂಗಸರು ಪರಾವಲಂಬನದ ಜೀವನವನ್ನು ನಂಬಿಕೊಳ್ಳದೆ ಸ್ವತಂತ್ರವಾಗಿ ದುಡಿದು ತಮ್ಮ ಮತ್ತು ಮಕ್ಕಳ ಪೋಷಣೆಗೆ ಭಾರವನ್ನು ಜವಾಬ್ದಾರಿ ಪೂರ್ವಕವಾಗಿ ನಿಭಾಯಿಸುತ್ತಾರೆ. ಕೈಹಿಡಿದ ಗಂಡನೊಡನೆ ಬದುಕು ನಡೆಸುವಲ್ಲಿ ನಾನಾತರದ ಕಷ್ಟ, ನಷ್ಟ,ನೋವು ಅಪಮಾನಗಳನ್ನು ಸಹಿಸಿಕೊಂಡು ಅಸಹಾಯಕರೆನಿಸಿಕೊಳ್ಳುವವರ ಮುಂದೆ ಸ್ವಂತ ಪ್ರಯತ್ನದಲ್ಲಿ ಸ್ವಾವಲಂಬಿ ಜೀವನ ನಡೆಸುವ ಪರಿತ್ಯಕ್ತೆಯರು ಹೆಚ್ಚು ಸ್ವತಂತ್ರರಾಗಿ ಕಾಣಿಸುತ್ತಾರೆ.

ಕರ್ತವ್ಯವಿಮುಖ ಗಂಡಸರ ಮುಂದೆ ದುಡಿಮೆಕ್ಷೇತ್ರಕ್ಕೆ ತಮ್ಮನ್ನು ಒಪ್ಪಿಸಿಕೊಂಡು ಕರ್ತವ್ಯಶೀಲತೆಯಿಂದ ಬದುಕನ್ನು ಎದುರಿಸುವ ಈ ಸ್ತ್ರೀಯರಲ್ಲಿ ಸ್ವಾಯತ್ತತೆಯನ್ನು ಗುರುತಿಸುವುದು ಸಾಧ್ಯವಿದೆ. ಪರಿತ್ಯಕ್ತೆಯರು ಸಾಂಪ್ರದಾಯಕ ಚೌಕಟ್ಟನ್ನು ಮೀರದಂತೆ ಬಾಳುತ್ತಾರೆ. ಆದುದರಿಂದ ವೈಯಕ್ತಿಕ ಕಷ್ಟ, ನಷ್ಟಗಳ ಪರಿವೆ ಇಲ್ಲದಂತೆ ಸಮಾಜದ ಮನ್ನಣೆ ಪಡೆಯುತ್ತಾರೆ. ಪರಿತ್ಯಕ್ತೆಯಾಗಿ ಕಾಣಿಸಕೊಂಡವರು: ಸುಮಿತ್ರೆ - ಸನ್ಯಾಸಿಯ ಬದುಕು, ವಿನತೆ - ಬತ್ತದ ತೊರೆ, ಕಾವೇರಿ-ಕನ್ನಡಿಯಲ್ಲಿ ಕಂಡಾತ, ಅರುಂಧತಿ ಪಾಟೀಲ - ಇಳೆಯೆಂಬ, ವಾಸಂತಿ - ಒಡಹುಟ್ಟಿದವರು, ಹೊನ್ನಿ - ಇನ್ನೊಂದೇ ದಾರಿ.

ಪರಿತ್ಯಕ್ತೆಯ ನಂತರ ವಿಧೇಯ ಪತ್ನಿಯರು, ನಿಷ್ಠಾವಂತ ಗೃಹಿಣಿಯರು ಮತ್ತು ಕುಲವೃತ್ತಿಯಲ್ಲಿರುವ ವೇಶ್ಯೆಯರು ಬರುತ್ತಾರೆ. ಕೌಟುಂಬಿಕ ವಲಯದಲ್ಲಿ ತಾಯಿತನ, ಹೆಂಡತಿತನ, ಗೃಹಿಣಿತನಗಳಿಗೆ, ಸಾಮಾಜಿಕ ವಲಯದಲ್ಲಿ ವೇಶ್ಯೆಗೆ, ಗೌರವ, ಆದರಗಳನ್ನು ಇಲ್ಲಿ ಸಲ್ಲಿಸಲಾಗಿದೆ. ಸ್ತ್ರೀಪಾತ್ರಗಳ ವೈಯಕ್ತಿಕ ಅಭಿವ್ಯಕ್ತಿಗಿಂತ ಈ ಸಾಮಾಜಿಕ ವ್ಯಕ್ತಿತ್ವಕ್ಕೆ ಮನ್ನಣೆ ಸಲ್ಲಿಸುವುದರ ಮೂಲಕ ಸ್ತ್ರೀಯನ್ನು ಈ ಮಾದರಿಯಲ್ಲಿಯೇ ನಿರ್ವಚಿಸಲಾಗಿದೆ.

ತಾಯ್ತನವನ್ನು ಸ್ತ್ರೀ ಬದುಕಿನ ಪರಮಸಾಧನೆಯಾಗಿ ಕಾರಂತರೂ ಒಪ್ಪಿಕೊಳ್ಳುತ್ತಾರೆ. ಹಳೆತಲೆಮಾರಿನವರಿಂದ ಹಿಡಿದು ಆಧುನಿಕ ಕಾಲದ ವಿದ್ಯಾವಂತ ಮಹಿಳೆಯರವರೆಗೆ ತಾಯ್ತನದ ಬಯಕೆ ಏಕಪ್ರಕಾರವಾಗಿರುವಂತೆ, ಆ ಮೂಲಕ ಹೆಣ್ಣಿನ ಮೂಲಸ್ವಭಾವವೆನಿಸಿರುವ ತಾಯ್ತನವನ್ನು ಅವಳ ವ್ಯಕ್ತಿತ್ವಸ್ವರೂಪದ ನಿರ್ಣಾಯಕ ಅಂಶವಾಗಿಯೂ ಪರಿಗಣಿಸುತ್ತಾರೆ.

ಇಳಿವಯಸ್ಸಿನವರಲ್ಲಿ, ಬಾಲವಿಧವೆಯರಲ್ಲಿ ತಾಯ್ತನದ ಬಯಕೆಗಳು ಕೂಡುಕುಟುಂಬದಲ್ಲಿ ಸಂಬಂಧಿಕರ ಮಕ್ಕಳ ಸಂಗೋಪನೆಯಲ್ಲಿ ಪರಿಹಾರವಾಗುತ್ತವೆ. ಮೂಕಜ್ಜಿ, ಗಂಗಮ್ಮ, ಪಾರೋತಿ, ಮೂಕಾಂಬುರಿಗೆ ತಮ್ಮದಲ್ಲದ ಮಕ್ಕಳನ್ನು ಪ್ರೀತಿಯಿಂದ ನೋಡಿಕೊಳ್ಳುವುದರಲ್ಲಿ, ಅವರ ಶುಭಚಿಂತನೆಯಲ್ಲಿ, ಶೇಷಾಯಸ್ಸನ್ನು ಕಳೆಯುವುದರಲ್ಲಿ ಹೆಚ್ಚಿನ ಸುಖ, ಮಾನಸಿನ ತೃಪ್ತಿ ದೊರಕಿದೆ. 'ಅಳಿದಮೇಲೆ'ಯಲ್ಲಿ ಯಶವಂತರಾಯರ ಬದುಕಿನಲ್ಲಿ ಸ್ವಂತತಾಯಿಗಿಂತಲೂ ಹೆಚ್ಚಿನ ಸ್ಥಾನ ಸಾಕುತಾಯಿಯಾಗಿ ಪೋಷಕಸ್ಥಾನದಲ್ಲಿ ನಿಂತ ಪಾರೋತಿಗೆ ಸಂದಿದೆ.

ಗಂಡನ ಅನುಪಸ್ಥಿತಿಯಲ್ಲಿ ಮಕ್ಕಳ ಚಿಂತನೆಯಲ್ಲಿ, ತ್ಯಾಗಮಯಿಗಳಾದ ತಾಯಂದಿರು ಅವರ ಕ್ಷೇಮ ಅಭ್ಯುದಯದಲ್ಲಿ ತಮ್ಮ ಬದುಕನ್ನು ಸಾರ್ಥಕಗೊಳಿಸುತ್ತಾರೆ. 'ಮರಳಿಮಣ್ಣಿಗೆ'ಯ ನಾಗವೇಣಿ ಮಗ ರಾಮನ ವ್ಯಕ್ತಿತ್ವದಲ್ಲಿ ತನ್ನತನವನ್ನು ಮೂಡಿಸುವುದರಲ್ಲಿ ಸಫಲಳಾಗುತ್ತಾಳೆ. 'ಮೊಗಪಡೆದ ಮನ'ದ ನಂದಿನಿ ಗಂಡ ಸತ್ತ ಬಳಿಕ ಮಗ ವ್ಯಾಸನನ್ನು ನಗರದಲ್ಲಿ ಓದಿಸಿ, ಅವನ ಕಲಾವಿದ ವ್ಯಕ್ತಿತ್ವರೂಪಣೆಯಲ್ಲಿ ಮಹತ್ವದ ಪಾತ್ರ ನಿರ್ವಹಿಸುತ್ತಾಳೆ 'ಬತ್ತದ ತೊರೆ'ಯ ವಿನತೆ ಗಂಡನ ಅನಾಗರಿಕ ವರ್ತನೆಯನ್ನು ಸಹಿಸಿಕೊಂಡು ಅವನ ಮಕ್ಕಳನ್ನು ಮಲತಾಯಿಯಾಗಿಯೂ ಪ್ರೀತಿಯಿಂದ ಸಾಕಿ, ಸಲಹುತ್ತಾಳೆ. 'ಮುಗಿದಯುದ್ಧ'ದ ಲಕ್ಷ್ಮಮ್ಮ(ತಾಯಿ), ಸೀತೆ (ಮಗಳು) ಮತ್ತು ರುಕ್ಮಿಣಿ (ಸೊಸೆ)ಯರು ಗಂಡಸರ ಸಹಕಾರವಿಲ್ಲದೆ ಒಗ್ಗಟ್ಟಿನಲ್ಲಿ ದುಡಿದು ಮಕ್ಕಳ ಏಳಿಗೆ ಕಾರ್ಯದಲ್ಲಿ ಮಗ್ನರಾಗಿರುತ್ತಾರೆ. ಈ ಎಲ್ಲಾ ಪಾತ್ರಗಳು ತಾಯ್ತನದಲ್ಲಿ ಬದುಕಿನ ಸಾಧನೆಯನ್ನು ಗುರುತಿಸಿಕೊಳ್ಳುವ ಪಾತ್ರಗಳಾಗಿವೆ. ಸಹನೆ, ತ್ಯಾಗ, ನಿಷ್ಠೆ ಇವರು ನಂಬಿಕೊಂಡ ಮೌಲ್ಯಗಳು.

ಸಂತಾನಾಪೇಕ್ಷೆಯಿಂದ ವೈವಾಹಿಕ ಚೌಕಟ್ಟನ್ನು ಮೀರಿದ ಹೆಂಗಸರೂ ಇದ್ದಾರೆ. 'ಹೆತ್ತತಾಯಿ'ಯ ಕುಸುಮ, ಒಂಟಿದನಿಯ 'ಧರ್ಮರಾಯನ ಸಂಸಾರ'ದ ಸರಸ್ವತಿ, ಕಾಂತಿಬೆನ್ ತಮ್ಮ ತಾಯ್ತನದ ಬಯಕೆಯನ್ನು ವಿವಾಹೇತರ ಸಂಬಂಧದ ಮೂಲಕ ಸಾಧಿಸುತ್ತಾರೆ.

'ಬತ್ತದ ತೊರೆ', 'ಮೈಮನಗಳ ಸುಳಿಯಲ್ಲಿ'ನ ಮಂಜುಳೆಯರು ಮಗುವಿನ ಹಂಬಲದಿಂದ ಕೊರಗು ಹಚ್ಚಿಕೊಂಡು ನತದೃಷ್ಟೆಯೆನಿಸಿಕೊಂಡವರು. ವಿದ್ಯೆ ಇದ್ದು, ವಿದ್ವಾಂಸ ಪತಿಯನ್ನೂ ಪಡೆದು ತನ್ನ ತಾಯ್ತನದ ಬಯಕೆಗೆ ಗಂಡ ಅಡ್ಡಿ ವ್ಯಕ್ತಪಡಿಸಿದಾಗ, ಪರ್ಯಾಯ ಸಾಧ್ಯತೆ ಯಾವುದರ ಕುರಿತೂ ಯೋಚಿಸದೆ, 'ಒಂಟಿದನಿ'ಯ ಶಾಲಿನಿ ಆತ್ಮಹತ್ಯೆ ಮೂಲಕ ಬದುಕನ್ನು ಅಂತ್ಯಗೊಳಿಸುತ್ತಾಳೆ. ವಿಧೇಯ ಪತ್ನಿಯರು, ಒಂಟಿ ತಾಯಂದಿರು, ಪರಿತ್ಯಕ್ತೆಯರು, ಗೃಹಿಣಿತನವನ್ನು ಮೆರೆಸುವ ಗೃಹವಾದಿನಿಯರಾಗಿ ಕಾಣಿಸಿಕೊಳ್ಳುತ್ತಾರೆ.

ಕೈಹಿಡಿದ ಗಂಡ ದುಷ್ಟನಾದರೂ, ಮನಸ್ಸಿಗೆ, ದೇಹಕ್ಕೆ ಸತತವಾಗಿ ಹಿಂಸೆ, ನೋವನ್ನು ನೀಡುವವನಾದರೂ, ಅಪಾರ ಸಹನೆ, ತಾಳ್ಮೆ ಮತ್ತು ಆದರಾಭಿಮಾನಗಳಿಂದ ಉಪಚರಿಸುವ ಪರಿತಿವ್ರತಾಧರ್ಮ ವಿಧೇಯ ಪತ್ನಿಯರದು. ಈ ವಿಧೇಯ ವ್ಯಕ್ತಿತ್ವದಲ್ಲಿ ನಿರ್ವಚನಕ್ಕೊಳಗಾಗುವ ಹೆಣ್ಣಿಗೆ ಸಮಾಜದ ನಿರೀಕ್ಷೆಯಲ್ಲಿರುವ ಗುಣಲಕ್ಷಣಗಳು ಕಾಣಿಸಿಕೊಂಡಿವೆ.

ವಿರಸ, ದಾಸ್ಯ, ಹಿಂಸೆ- ಹೀಗೆ ಪ್ರತಿಯೊಂದೂ ಜೀವವಿರೋಧಿಕಾರ್ಯಗಳಿಗೆ ತಮ್ಮನ್ನು ಒಪ್ಪಿಸಿಕೊಳ್ಳುತ್ತ, ತಾಳ್ಮೆ, ಸಂಯಮದಿಂದ ತಾವಿರುವ ಸ್ಥಿತಿಯನ್ನು ಅನಿವಾರ್ಯವೆಂಬಂತೆ ಸ್ವೀಕರಿಸುವ ಗುಣಧರ್ಮ ಇಲ್ಲಿ ಪ್ರದಾನ ಲಕ್ಷಣವೆನಿಸಿದೆ. ಹೆಂಡತಿ ಸ್ಥಾನದಲ್ಲಿರುವರ ವಿಧೇಯತೆ ಕೌಟುಂಬಿಕ ಪರಿಸರದಲ್ಲಿ ಕೆಲವು ನಿರೀಕ್ಷೆಗಳನ್ನು ಇಟ್ಟಿರುವುದು ಈ ಪಾತ್ರಾಭಿವ್ಯಕ್ತಿಯ ಮೂಲಕ ಸೂಚಿತವಾಗಿದೆ. ಹೆಂಡತಿಯ ವರ್ತನಾ ವಿಶೇಷಗಳು ಗಂಡನನ್ನು ಸರಿದಾರಿಗೆ ತರಲು, ಗೃಹಸ್ವಾಸ್ಥ್ಯಕ್ಕೆ ಮತ್ತು ಮಕ್ಕಳ ಹಿತಚಿಂತನೆಗೆ - ಎನ್ನುವ ಇತ್ಯಾತ್ಮಕ ಧೋರಣೆಯಲ್ಲಿ ಕಾಣಬೇಕೆನ್ನುವುದರಲ್ಲಿ ಸ್ತ್ರೀವ್ಯಕ್ತಿತ್ವ ವಿಕಾಸಕ್ಕೆ, ಅವಳ ಬದುಕಿನ ಸ್ವಾತಂತ್ರ್ಯಕ್ಕೆ ಚೌಕಟ್ಟಿನ ಸೀಮಿತತೆಯನ್ನು ಹಾಕಿರುವುದನ್ನು ಗುರುತಿಸುವ ಸಾಧ್ಯತೆಗಳೂ ಇವೆ. ವಿಧೇಯ ಪತ್ನಿಯರಿಗೆ ಕೆಲವು ಉದಾಹರಣೆಗಳು : ಪಾರೋತಿ, ನಾಗವೇಣಿ - ಮರಳಿಮಣ್ಣಿಗೆ, ಇಂದುಮತಿ - ಜಾರುವ ದಾರಿಯಲ್ಲಿ, ವಾಸಂತಿ - ಒಡಹುಟ್ಟಿದವರು.

ಪಾರೋತಿ ಗಂಡನ ಮರುವಿವಾಹವನ್ನು, ನಾಗವೇಣಿ ಗಂಡನ ಲಂಪಟತನವನ್ನು ವಿರೋಧಿಸುವ ಅಧಿಕಾರವನ್ನಾಗಲೀ, ಹಕ್ಕನ್ನಾಗಲೀ ಪಡೆದವರಲ್ಲ. ವಾಸಂತಿ ತನ್ನ ಪತಿನಿಷ್ಠೆ, ತ್ಯಾಗ, ಸಂಯಮ ಮತ್ತು ಕ್ಷಮಾಶೀಲತೆಯಿಂದ ದಾರಿ ತಪ್ಪಿದ ಗಂಡನನ್ನು ಸರಿದಾರಿಗೆ ತರಲು ಅಪಾರ ಶ್ರಮ ಪಡುತ್ತಾಳೆ. ವಿದ್ಯಾವತಿಯಾಗಿ, ಆರ್ಥಿಕವಾಗಿ ಸ್ವತಂತ್ರಳಾಗಿದ್ದರೂ, ಅವಳ ವ್ಯಕ್ತಿತ್ವ ಸಾಧನೆಯಾಗಿ ಅವಳ ಹೆಂಡತಿತನಕ್ಕೆ ಮೊದಲ ಆದ್ಯತೆ ಸಲ್ಲುತ್ತದೆ.

ಇಂದುಮತಿ ಗಂಡನ ಆದರ್ಶದಿಂದ ಪಡಬಾರದ ಕಷ್ಟಗಳಿಗೆ, ಮಾನಸಿಕ ಯಾತನೆಗೆ ಗುರಿಯಾಗುತ್ತಾಳೆ. ಅವಳ ಕಷ್ಟದ ದಿನಗಳಲ್ಲಿ ಗಂಡನ ನೆರವು ಸಹಕಾರಗಳು ಕಿಂಚಿತ್ತೂ ದೊರೆಯದಿದ್ದರೂ, ಅವನ ಆದರ್ಶಕ್ಕೆ ಹೊಂದಿಕೊಳ್ಳುವುದೇ ಅವಳ ಕರ್ತವ್ಯವಾಗಿರುತ್ತದೆ.

ಮನೆಗಂಡಸು ಹೊಣೆಗೇಡಿಯಾದಾಗ, ಕೆಟ್ಟಸ್ವಭಾವ ತೋರಿದಾಗ ಬದುಕು ಕರ್ತವ್ಯವಾಗುತ್ತದೆ, ಹೆಂಗಸರಿಗೆ. ಗೃಹಿಣಿಯರಲ್ಲಿ ಆತ್ಮಸಮರ್ಪಣಾಭಾವವಿದ್ದರೂ ಕೂಡಾ ಸ್ವಾವಲಂಬಿತ ಬದುಕಿನ ಕಾಳಜಿಗಳ ಮೂಲಕ ಪಾರಂಪರಿಕವಾದ ಸ್ತ್ರೀ ಮಾದರಿ ಸ್ವರೂಪದಿಂದ ಈ ಹೆಂಗಸರು ಭಿನ್ನರಾಗುತ್ತಾರೆ. ಅವರ ದುಡಿಮೆ ಕ್ಷೇತ್ರ ಮನೆಯ ಹೊರಗೆ ಕಾಣಿಸುವುದರ ಮೂಲಕ ಇದು ಸಾಧ್ಯವಾಗಿದೆ.

ವಂಶಪಾರಂಪರಿಕವಾಗಿ ಮತ್ತು ಶೋಷಣಾ ವಿಧಾನಗಳ ಕಾರಣವಾಗಿ ಹೆಣ್ಣು ವೇಶ್ಯಾಜೀವನವನ್ನು ಆಯ್ಕೆಮಾಡುತ್ತಾಳೆ. ವೇಶ್ಯೆಯನ್ನು ವ್ಯಕ್ತಿಗತ ನೆಲೆಯಲ್ಲಿ, ವೇಶ್ಯಾವೃತ್ತಿಯನ್ನು ಸಾಮಾಜಿಕ ನೆಲೆಯಲ್ಲಿ ಕಾರಂತರು ಕಾಣುತ್ತಾರೆ. ವೇಶ್ಯೆಯಾಗಿರುವ ಹೆಣ್ಣಿನ ವೈಯಕ್ತಿಕ ಭಾವಗಳು, ಆಸೆ-ಆಕಾಂಕ್ಷೆಗಳು, ತೃಪ್ತಿ-ಅತೃಪ್ತಿಗಳು, ಸಂಕಟ-ತಳಮಳಗಳು, ಮೈಮನಸ್ಸಿನ ಯಾತನೆಗಳು - ಇವುಗಳ ಅನಾವರಣ ಈ ಕಾದಂಬರಿಗಳಲ್ಲಿ ಸಾಧ್ಯವಾಗಿರುವುದರಿಂದ, ಇಲ್ಲಿವರೆಗೆ ಸಾಮಾಜಿಕ ನೆಲೆಯಲ್ಲಿ ನಿರ್ವಚನಗೊಳ್ಳುತ್ತಿದ್ದ ವೇಶ್ಯೆ, ಇಲ್ಲಿ ವ್ಯಕ್ತಿಸ್ವರೂಪದಲ್ಲಿ ನಿರ್ವಚಿಸಿಕೊಂಡಿರುವುದು ಸ್ಪಷ್ಟವಾಗಿದೆ. ಆದರೆ ಕೌಟುಂಬಿಕ ವಲಯದಲ್ಲಿ ವೇಶ್ಯಾಸಂಬಂಧವನ್ನು ವಿವಿಧ ಸಂದರ್ಭಗಳಲ್ಲಿ ಸಹ್ಯವೆನಿಸುವ ಸ್ವೀಕೃತಭಾವದಿಂದ ಚಿತ್ರಿಸಿರುವುದರಿಂದ ಈ ವೃತ್ತಿಯ ಕಾರಣವಾಗಿಯೇ ವೇಶ್ಯೆಯಿರುವ ಸಾಮಾಜಿಕ ಸಂದರ್ಭಗಳು ಸೃಷ್ಟಿಯಾಗಿರುಬಹುದಾದ ಸಾಧ್ಯತೆಗಳಿದ್ದರೂ ಕೂಡ, ವೇಶ್ಯೆಯಾಗಿರುವ ವೇಶ್ಯೆಕುಲದಲ್ಲಿ ಹುಟ್ಟುವ ಅನಿವಾರ್ಯತೆಯನ್ನು ಒಪ್ಪಲಾಗದೆ, ಪರ್ಯಾಯ ಸಾಧ್ಯತೆಗಳತ್ತ ಮುಖ ಮಾಡಿದವರಿಗೆಲ್ಲಾ ಕಾದಂಬರಿ ಅಂಥ ಅವಕಾಶವನ್ನು ಒದಗಿಸಿ ಕೊಟ್ಟಿದೆ; ವೇಶ್ಯೆಯ ಪ್ರತ್ಯೇಕಿಕರಣವನ್ನು ಒಪ್ಪದಂತೆ ಶಿಕ್ಷಣ, ಉದ್ಯೋಗ ಮತ್ತು ವಿವಾಹದ ಆಯ್ಕೆಯಲ್ಲಿ ವೇಶ್ಯೆ ಅವಕಾಶ ಪಡೆದು ಮುಖ್ಯವಾಹಿನಿಯಲ್ಲಿ ಗುರುತಿಸುವಂತೆ ಲೇಖಕರ ನಿಲುವು ವ್ಯಕ್ತವಾಗಿದೆ.

ಹೆಣ್ಣನ್ನು ವ್ಯಕ್ತಿಗತ ನೆಲೆಯಲ್ಲಿ ನಿರ್ವಚಿಸುವುದು ಪರಂಪರೆಯನ್ನು ಬಿಟ್ಟು ಹೊಸ ಮೌಲ್ಯಗಳಿಗೆ ಅವಕಾಶ ನೀಡಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಮಾತ್ರ ಸಾಧ್ಯ ಎನ್ನುವ ರೀತಿಯಲ್ಲಿ ಕಾರಂತರು ನಗರವಾಸಿ, ವಿದ್ಯಾವಂತ ಮಹಿಳೆಯರನ್ನು ಚಿತ್ರಿಸುತ್ತಾರೆ. ಮೂರನೇ ತಲೆಮಾರಿನವರಾಗಿ ಈ ಕಾದಂಬರಿಯಲ್ಲಿ ಗುರುತಿಸಬಹುದಾದ ಸ್ತ್ರೀ ಸಮುದಾಯದ ಬದುಕುವ ರೀತಿಯಲ್ಲಿ ಪೂರ್ಣಪ್ರಮಾಣದಲ್ಲಿ ಬದಲಾದ ಸಾಮಾಜಿಕ ಪರಿಸರದ ಪ್ರಭಾವವನ್ನು ಗುರುತಿಸಬಹುದಾಗಿದೆ.

ಹೊಸ ಮೌಲ್ಯಗಳ ಹುಡುಕಾಟದಲ್ಲಿ ಆದರ್ಶದ ಬೆನ್ನು ಹತ್ತಿ ಹೋಗುವ ಯುವಕರು ಮತ್ತು ಸಾಂಸ್ಕೃತಿಕ ಪರಿಸರವನ್ನು ಮೀರುವ ಪ್ರಯತ್ನದಲ್ಲಿರುವ ಯುವತಿಯರು ಈ ಪರಿಸರವನ್ನು ಪ್ರತಿನಿಧಿಸುತ್ತಾರೆ. ಸೀಮೋಲ್ಲಂಘನೆ ಮತ್ತು ಪ್ರತಿಭಟನೆಗಳು ಹೆಣ್ಣಿನ ವ್ಯಕ್ತಿತ್ವದಲ್ಲಿ ಕಾಣಿಸಿದ ಹಂತವಿದು.

ಹಿಂದಿನ ತಲೆಮಾರಿನ ಹೆಂಗಸರಲ್ಲಿ ಅನಪೇಕ್ಷಿತಭಾವವಾಗಿದ್ದ ಮೈ, ಮನಸ್ಸಿನ ಬಯಕೆಗಳು, ಸ್ವತಂತ್ರ ಪ್ರವೃತ್ತಿ, ಶೋಷಣೆ ವಿರುದ್ಧ ಪ್ರತಿಭಟನೆ ಮತ್ತು ಸ್ವಾಯತ್ತತೆಯ ಪ್ರಯತ್ನಗಳು ಈ ಹೆಂಗಸರ ಪ್ರಧಾನ ಲಕ್ಷಣಗಳು. ಲೈಂಗಿಕ ಸ್ವಾತಂತ್ರ್ಯ ಗಂಡಿಗಿರುವಷ್ಟೇ ಹೆಣ್ಣಿಗೂ ಇರಬೇಕಾಗಿದೆ ಎನ್ನುವುದನ್ನು 'ಮೈಮನಗಳ ಸುಳಿಯಲ್ಲಿ', 'ಸರಸಮ್ಮನ ಸಮಾಧಿ' ಕಾದಂಬರಿಯ ಸ್ತ್ರೀ ಪಾತ್ರಗಳ ಮೂಲಕ ವ್ಯಕ್ತಪಡಿಸಲಾಗಿದೆ. ಸ್ವೇಚ್ಛಾಚಾರ, ಅತಿ ಸ್ವಾತಂತ್ರ್ಯ ದುರಂತದ ಬದುಕಿಗೆ ಕಾರಣವೆನ್ನುವುದನ್ನು 'ಬತ್ತದ ತೊರೆ'ಯ ವಿನತೆ, ಅಂಜಲಿ, ಮಂಜುಳೆಯರ ಬದುಕು ಹಿಡಿದ ದಾರಿಯ

ಮೂಲಕ ಆಧುನಿಕತೆಯನ್ನು ಹೆಣ್ಣಿನ ಮೇಲೆ ಎಷ್ಟರ ಮಟ್ಟಿಗೆ ಆರೋಪಿಸಬಹುದೆನ್ನುವುದನ್ನು ಇಲ್ಲಿ ಚರ್ಚೆಗೆ ತಂದುಕೊಳ್ಳಲಾಗಿದೆ. ಆದರೂ ಅಪವಾದವೆನ್ನುವಂತೆ ಕೆಲವು ಸ್ತ್ರೀಪಾತ್ರಗಳಲ್ಲಿ ಸ್ವತಂತ್ರವ್ಯಕ್ತಿತ್ವವನ್ನು ಧನಾತ್ಮಕವಾಗಿಯೂ ರೂಪಿಸಿದ್ದಾರೆ. ಉದಾ: ಸುನಾಲಿನಿ - ಕಣ್ಣಿದ್ದೂ ಕುರುಡರು, ಜ್ವಾಲಾಕುಲಕರ್ಣಿ, ಅರುಂಧತಿ ಪಾಟೇಲ - ಇಳೆಯೆಂಬ, ಭಾಗೀರಥಿ, ಸುನಾಲಿನಿ-ಸರಸಮ್ಮನ ಸಮಾಧಿ.

ವಿದ್ಯೆಪಡೆದು, ಆರ್ಥಿಕವಾಗಿ ಸ್ವತಂತ್ರರಾಗಿರುವವರಲ್ಲಿ ಆತ್ಮ ವಿಶ್ವಾಸವಿದೆ. ಈ ಆತ್ಮವಿಶ್ವಾಸದ ಮೂಲಕ ತಾವಿರುವ ಪರಿಸರವನ್ನು ತ್ಯಜಿಸಿ ಹೊಸತನದ ಹುಡುಕಾಟದಲ್ಲಿ ತೊಡಗಿಕೊಂಡು ಯಶಸ್ವಿಯಾಗುವುದು ಅವರಿಗೆ ಸಾಧ್ಯವಾಗುತ್ತದೆ. ಬದಲಾದ ಪರಿಸರ, ಬದಲಾದ ಜೀವನ ಕ್ರಮ ಮತ್ತು ಹೊಸಸಂಬಂಧಗಳಲ್ಲಿ ವ್ಯಕ್ತಿತ್ವ ವಿಕಾಸಕ್ಕೆ ಈ ಸ್ತ್ರೀಯರು ಅವಕಾಶ ಪಡೆಯುತ್ತಾರೆ. ತಮ್ಮ ಬದುಕಿನ ಆಯ್ಕೆಯಲ್ಲಿ ಸ್ವತಂತ್ರರಾಗಿರುವುದು ಇವರ ಸಾಧನೆಯಾಗಿದೆ. ಈ ದಿಕ್ಕಿನಲ್ಲಿ ಕಾಣಿಸಿಕೊಂಡಿರುವ ಸ್ತ್ರೀ ಪಾತ್ರಗಳಾದ - ನಯನತಾರೆಯ ಕಲಾಜಗತ್ತಿನ ಸಾಧನೆಗಳು, ಬನ್ನಿ, ಕೀರ್ತಿಯರ ಲಲಿತಕಲೆಗಳಲ್ಲಿ ತೊಡಗಿಸಿಕೊಳ್ಳುವ ಹವ್ಯಾಸಗಳು, ನಾಗವೇಣಿ, ಮಂಜುಳೆಯರ ಸಂಗೀತದ ಅಭಿರುಚಿ - ಇವೆಲ್ಲ ಇದೇ ಹಿನ್ನೆಲೆಯ ಸಾಧನಾಕ್ರಮಗಳಾಗಿವೆ.

ಒಟ್ಟು ಕಾದಂಬರಿ ವಿವೇಚನೆಯಿಂದ ಕಾದಂಬರಿಯ ಸ್ತ್ರೀ ಪಾತ್ರ ಚಿತ್ರಣದಲ್ಲಿ ಸ್ತ್ರೀಯ ನಿರ್ವಚನವನ್ನು ಮೂರು ವಿಧಾನದಲ್ಲಿ ಲೇಖಕರು ನಿರ್ವಹಿಸಿರುವುದು ಕಂಡು ಬರುತ್ತದೆ. ಕಾದಂಬರಿಯಲ್ಲಿ ಬರುವ ಆದರ್ಶ ಸ್ಥಿತಿಯಲ್ಲಿರುವ ಹಿರಿಯ ಹೆಂಗಸರ ವ್ಯಕ್ತಿತ್ವ ಪರಂಪರೆ ಸ್ತ್ರೀಯನ್ನು ನಿರ್ವಚಿಸಿರುವ ವಿಧಾನದಲ್ಲಿದೆ. ಮಾನವ ಸಹಜ ದೌರ್ಬಲ್ಯಗಳಿಗೆ ಅತೀತವೆನಿಸಿವ ಈ ವ್ಯಕ್ತಿ ಚಿತ್ರಣದಲ್ಲಿ ಮೌಲ್ಯ ಪ್ರತಿನಿಧಿಕರಣ ಪ್ರಕ್ರಿಯೆ ಇರುವುದರಿಂದ ವಾಸ್ತವಿಕತೆ ಇದ್ದರೂ ಇದು ಆದರ್ಶವನ್ನು ಸೂಚಿಸುತ್ತದೆ. ಮತ್ತು ಸ್ತ್ರೀತ್ವದ ಪಾರಂಪರಿಕ ಮಾದರಿ ರೂಪದ್ದಾಗಿರುತ್ತದೆ. ಎರಡನೇ ವಿಧಾನದಲ್ಲಿ ಸ್ತ್ರೀಯನ್ನು ಅಧೀನ ನೆಲೆಯಲ್ಲಿ ನಿರ್ವಚಿಸಲಾಗಿದೆ. ಅಸಹಾಯಕ ವ್ಯಕ್ತಿತ್ವದವರಾಗಿ ಇಲ್ಲಿನ ಹೆಂಗಸರು ತಮ್ಮ ಮೇಲೆ ನಡೆಯುವ ಅನ್ಯಾಯ, ಶೋಷಣೆಗಳನ್ನು ಮಾತಿಲ್ಲದೆ ಒಪ್ಪಿಕೊಳ್ಳುತ್ತಾರೆ. ಅಧೀನ ಸ್ತ್ರೀಪರಿಕಲ್ಪನೆಯಲ್ಲಿ ಅಸಹಾಯಕತೆಯೆನ್ನುವುದು, ಪರಿಸ್ಥಿತಿ ಕಲ್ಪಿಸುವ ತಾತ್ಕಾಲಿಕ ಸ್ಥಿತಿಯಾಗಿರುತ್ತದೆ. ಈ ಸ್ಥಿತಿಯಿಂದ ಮುಕ್ತವಾದರೆ ವ್ಯಕ್ತಿತ್ವದಲ್ಲಿ ಹಿಂದಿನ ಸ್ಥಿತಿ ಅಥವಾ ಲಕ್ಷಣಗಳು ಗೋಚರವಾಗುತ್ತದೆ. ಹೀಗಾಗಿ ಅಧೀನ ಸ್ತ್ರೀ ಪರಿಕಲ್ಪನೆಯ ಹೆಣ್ಣಿನ ನಿರ್ವಚನದಲ್ಲಿ, ಅಧೀನತೆ ಕಾರಣವಾಗುವ ನೆಲೆಗಳನ್ನು, ಅವುಗಳನ್ನು ಶೋಷಣಾನೆಲೆಗಳೆಂದು ಕರೆಯುವಂತಿದ್ದರೆ, ಈ ಶೋಷಣಾನೆಲೆಗಳನ್ನು ಗುರುತಿಸಿಕೊಳ್ಳುವುದು ಅಗತ್ಯವಾಗುತ್ತದೆ. ಕಾರಂತರು ಅಧೀನ ಪರಿಕಲ್ಪನೆಯ ಸ್ತ್ರೀಯನ್ನು ಕಾಣಿಸಿದಾಗಲೆಲ್ಲಾ, ಈ ಶೋಷಣಾನೆಲೆಗಳನ್ನು ಪರಿಶೋಧಿಸುವ ಕಾರ್ಯವನ್ನು ಕೂಡ ನಿರ್ವಹಿಸುತ್ತಾರೆ. ಈ ಕೆಳಗಿನ ಕಾದಂಬರಿಗಳಲ್ಲಿ ಈ ಪ್ರಯತ್ನವಿದೆ.

ಉದಾ: ಕನ್ಯಾಬಲಿ, ಚೋಮನದುಡಿ, ಸರಸಮ್ಮನ ಸಮಾಧಿ, ಕುಡಿಯರ ಕೂಸು, ನಂಬಿದವರ ನಾಕನರಕ, ಸನ್ಯಾಸಿಯ ಬದುಕು, ಧರ್ಮರಾಯನ ಸಂಸಾರ.

ಶೋಷಣಾ ವಿಧಾನವಾದ ಪುರುಷ ದೌರ್ಜನ್ಯ , ಸಾಮಾಜಿಕ ವ್ಯವಸ್ಥೆ ಮತ್ತು ಕೌಟುಂಬಿಕ ನಿರೀಕ್ಷೆಗಳು ಹೆಣ್ಣನ್ನು ಅಸಹಾಯಕ ವ್ಯಕ್ತಿತ್ವವಾಗಿ ನಿರ್ವಚಿಸುತ್ತವೆ. ಇದನ್ನು ಕಾರಂತರ ಕಾದಂಬರಿಯ ಸ್ತ್ರೀಪಾತ್ರಗಳ ಅಸಹಾಯಕತೆಯಲ್ಲಿ ಗುರುತಿಸಬಹುದು. ಬೆಳ್ಳಿ ಕೆಳವರ್ಗದವಳಾಗಿ, ಹೆಣ್ಣಾಗಿ, ಪರಿಸ್ಥಿತಿಯ ಕಾರಣದಿಂದ ಅಸಹಾಯಕಳಾಗುತ್ತಾಳೆ. ತಂದೆ ಮಾಡಿದ ಸಾಲಕ್ಕೆ ಅವಳ ಗುಲಾಮಗಿರಿ ಅನಿವಾರ್ಯವಾಗುತ್ತದೆ. ದುಡಿದು ಬದುಕುವ ಬೆಳ್ಳಿ ಅಸಹಾಯಕಳಲ್ಲ.

ದೈಹಿಕವಾಗಿ, ಮಾನಸಿಕವಾಗಿ ಸ್ವಸ್ಥಳಾಗಿರುವ ಬೆಳ್ಳಿಯ ಮೇಲೆ ದೌರ್ಜನ್ಯಗಳು ಅವಳು ದುಡಿಯುವ ಕ್ಷೇತ್ರದಲ್ಲಿಯೇ ನಡೆಯುತ್ತವೆ. ತಂದೆಯ ಆರ್ಥಿಕ ದುಸ್ಥಿತಿ ಅವಳನ್ನು ಈ ಪರಿಸ್ಥಿತಿಗೆ ಒಡ್ಡುತ್ತದೆ. ತಾಸಿರುವ ಸ್ಥಿತಿಯಿಂದ ಕಳಚಿಕೊಳ್ಳುವುದು ಅವಳಣ್ಣ ಗುರುವನಿಗೆ ಸಾಧ್ಯವಾದುದು ಹೆಣ್ಣಾಗಿ ಅವಳಿಗೆ ಸಾಧ್ಯವಾಗುವುದಿಲ್ಲ. ಅವಳ ಅಸಹಾಯಕತೆ ಮತ್ತು ಒಂಟಿತನ ಮದುವೆಯಾಗದ ಸ್ಥಿತಿಕಾರಣವಾಗಿಯೇ ಎನ್ನುವುದುದನ್ನು ಸ್ವತಃ ಅವಳ ತಂದೆ ಚೋಮನೇ ಒಪ್ಪಿಕೊಳ್ಳುತ್ತಾನೆ.

'ಕುಡಿಯರ ಕೂಸು' ಏನಲ್ಲಿನ ಸ್ತ್ರೀಯರು ತಮ್ಮದೇ ಪಂಗಡದ ಸದಸ್ಯರಿಂದ ಮತ್ತು ಮೇಲುವರ್ಗದ ಪುರುಷರಿಂದ ನಿರಂತರವಾಗಿ ಶೋಷಣೆಗೆ ಗುರಿಯಾಗುತ್ತಾರೆ. ಅವರು ಬದುಕುವ ಸಾಮಾಜಿಕ ವ್ಯವಸ್ಥೆಯಲ್ಲಿ ಈ ಸ್ಥಿತಿ ಅನಿವಾರ್ಯ. ಬಹುಪತಿತ್ವ, ಬಹುಪತ್ನಿತ್ವಕ್ಕೆ ಅವಕಾಶವಿರುವ ವ್ಯವಸ್ಥೆಯಲ್ಲಿ ಹೆಣ್ಣನ್ನು ವ್ಯಕ್ತಿಗತನೆಲೆಯಿಂದ ಕೆಳಗೆ, ವಸ್ತುವಿನಂತೆ ವ್ಯವಹರಿಸುವುದು ಒಪ್ಪಿತ ವಿಚಾರವಾಗಿದೆ.

ಕೌಟುಂಬಿಕ ಚೌಕಟ್ಟಿನೊಳಗೆ, ವಿವಾಹ ಬಂಧನದಲ್ಲಿ ನಡೆಯುವ ಪುರುಷ ದೌರ್ಜನ್ಯಕ್ಕೆ ಸಮಾಜದ ವಿರೋಧ ವ್ಯಕ್ತವಾಗುವುದು ಕಡಿಮೆ, ಇಲ್ಲಿ ಹೆಣ್ಣಿನ ಅಸಹಾಯಕ ಸ್ಥಿತಿಗೆ ಸಾಂಸ್ಕೃತಿಕ ಅಂಶಗಳು ಕಾರಣವಾಗಿವೆ. ಗಂಡಿನ ಅಧಿಕಾರ, ಮತ್ತು ಹೆಣ್ಣಿನ ಪರಾವಂಬಿತ ಸ್ಥಿತಿಯನ್ನು ದಾಂಪತ್ಯಜೀವನದಲ್ಲಿ ಗುರುತಿಸಲು ಅಸಮದಾಂಪತ್ಯ, ವಿರಸದಾಂಪತ್ಯ ಮತ್ತು ವಿಷಮದಾಂಪತ್ಯಗಳ ಉದಾಹರಣೆಗಳು ಇಲ್ಲಿ ದಾರಾಳವಾಗಿ ದೊರೆಯುತ್ತವೆ.

ಮಾಲತಿ, ಸತ್ಯಭಾಮೆ, ಕುಸುಮ, ಶಾಲಿನಿ, ಸರಸ್ವತಿ, ವಿನತೆ, ಕಾಂತಿಬೆನ್, ಸುಮಿತ್ರೆ, ವಾಗ್ದೇವಿ, ಮೊದಲಾದವರೆಲ್ಲ ತಮ್ಮದಲ್ಲದ ತಪ್ಪಿಗೆ, ವಿವಾಹದ ಕಾರಣವಾಗಿ ನೋವನ್ನು ಉಣ್ಣುವ, ಹಿಂಸೆಯನ್ನು ಸಹಿಸುವ 'ಅಸಹಾಯಕ ವ್ಯಕ್ತಿತ್ವ'ವಾಗಿದ್ದಾರೆ. ವಿವಾಹ ಕೇಂದ್ರವಾಗಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಈ ಕೇಂದ್ರವನ್ನು ಭೇದಿಸಿ ಹೊರಬರುವುದಾಗಲಿ, ಉಲ್ಲಂಘಿಸುವುದಾಗಲಿ ಸಮ್ಮತವಾಗುವುದಿಲ್ಲ. ಸಾಮಾಜಿಕ ನೀತಿಸಂಹಿತೆಯಲ್ಲಿ ಹೆಣ್ಣಿನ ಅತಿಕ್ರಮಣ ಪುರಸ್ಕಾರ ಯೋಗ್ಯವಲ್ಲ.

ಕೌಟುಂಬಿಕ ನೆಲೆ ಮತ್ತು ಸಾಮಾಜಿಕ ನೆಲೆಯಲ್ಲಿ ಹೆಣ್ಣನ್ನು ನಿರ್ವಚಿಸುವಾಗ ಸಮಾಜದ ನಿರೀಕ್ಷೆಯಂತಿರುವ ಹೆಣ್ಣನ್ನು ಅವಳ ಅಸಹಾಯಕತೆಯೊಂದಿಗೆ ಕಾರಂತರು ಚಿತ್ರಿಸಿದರೂ ಕೂಡಾ ಈ ಪಾರಂಪರಿಕ ಸ್ತ್ರೀ ವ್ಯಕ್ತಿತ್ವಕ್ಕೆ ಭಿನ್ನಸ್ವರೂಪವನ್ನು ನೀಡುವ ದಿಕ್ಕಿನಲ್ಲಿಯೂ ಪ್ರಯತ್ನಿಸಿರುವುದು ಗೋಚರವಾಗಿದೆ.

ಮೊದಲನೆಯದಾಗಿ ಹೆಣ್ಣಿನ ಅಧೀನಸ್ಥಿತಿಗೆ ಕಾರಣವನ್ನು ಶೋಧಿಸುತ್ತ, ತಮ್ಮ ಗುರಿಯನ್ನು ಪುರುಷಪ್ರಧಾನ ಸಮಾಜ ಮತ್ತು ಪುರುಷಾಧಿಕಾರ ವ್ಯವಸ್ಥೆಯತ್ತ ಬೀರುತ್ತಾರೆ. ಈ ಪ್ರಯತ್ನದಲ್ಲಿ ಲೇಖಕ ಪುರುಷ ದೌರ್ಬಲ್ಯಗಳನ್ನು ಪ್ರಧಾನನೆಲೆಯಲ್ಲಿ ಚರ್ಚಿಸುತ್ತಾರೆ. ಹೊಣೆಗೇಡಿತನ, ಪಲಾಯನವಾದಿತ್ವ, ಹುಂಬತನ, ಕಪಟ ಸ್ವಭಾವದೊಂದಿಗೆ ಲಂಪಟತೆ, ಅತಿಕಾಮುಕತೆ, ಅಧಿಕಾರೀ ಪ್ರವೃತ್ತಿ, ದರ್ಪ ಮುಂತಾದುವುಗಳ ವಿಶ್ಲೇಷಣೆಯಲ್ಲಿ ಪುರುಷವರ್ಗದ ದೌರ್ಬಲ್ಯಗಳನ್ನು ಸ್ಪಷ್ಟೀಕರಿಸುತ್ತ ಪುರುಷ ಸ್ವಾಮಿತ್ವವನ್ನೇ ಪ್ರಶ್ನೆಗೆ ಗುರಿಪಡಿಸುತ್ತಾರೆ.

ಇದಕ್ಕೆ ಉದಾಹರಣೆಯಾಗಿ ಸಂಸಾರ, ಮನೆ, ಊರು ಬಿಟ್ಟು ನಡೆಯುವ, ಸ್ಥಿರನೆಲೆ ಇಲ್ಲದೆ ತಿರುಗುವ, ಸಾಮಾಜಿಕ ಗೌರವವನ್ನು ಪಡೆಯದ ಗಂಡಸರನ್ನು ಚಿತ್ರಿಸಿದ್ದಾರೆ. ಪುರುಷವರ್ಗದ ಅನುಪಸ್ಥಿತಿಯಲ್ಲಿ ಹೆಣ್ಣಿನ ಅಧಿಕಾರ ಸ್ಥಾಪನೆ ಕೌಟುಂಬಿಕ ವಲಯದಲ್ಲಿ ಕಾಣುವಂತಾಗಿರುವುದು ಈ ಹಿನ್ನೆಲೆಯಲ್ಲಿ ಗಮನಾರ್ಹ. ಯಾವುದೇ ರೀತಿಯ ಸಾಮಾಜಿಕ

ವ್ಯವಸ್ಥೆಯಲ್ಲಿ ಸ್ತ್ರೀ-ಪುರುಷ ಜಂಟಿ ಪ್ರಯತ್ನಗಳು ಪರಸ್ಪರ ಪೂರಕ ನೆಲೆಯಲ್ಲಿ ಇರಬೇಕಾದುದಾದರೆ, ಇಲ್ಲಿ ಪುರುಷವರ್ಗ ನಿಷ್ಕ್ರಿಯವಾದಾಗಲೆಲ್ಲ ಸ್ತ್ರೀತ್ವ ವಿಜೃಂಭಿಸಿರುವುದು ಪದೇ ಪದೇ ನಡೆದಿದೆ. ಗಂಡಿನಾಸರೆ ಕಳೆದುಕೊಂಡಾಗ ಇಲ್ಲಿಯ ಹೆಂಗಸರು ಒಂಟಿಯಾಗುವುದಿಲ್ಲ. ಪರಸ್ಪರ ಸ್ನೇಹಭಾವದಿಂದ ಕೂಡಿ ಬಾಳುವುದರ ಮೂಲಕ ಗಂಡಿನ ಆವಶ್ಯಕತೆಯನ್ನು ಕನಿಷ್ಠವಾಗಿಸುವುದು ಅವರಿಂದ ಸಾಧ್ಯವಾಗುತ್ತದೆ. ಈ ಸ್ತ್ರೀ - ಸ್ತ್ರೀ ಸಂಬಂಧಗಳಲ್ಲಿ ಜಾತಿ, ಕುಲ ಅಥವಾ ಸಾಮಾಜಿಕ ಸ್ಥಾನಮಾನಗಳು ಕನಿಷ್ಠ ಆವಶ್ಯಕತೆಗಳಾಗುತ್ತವೆ. ಹೆಂಗಸರು ಒಂದು ಸಮುದಾಯದ ರೀತಿಯಲ್ಲಿ ಒಂದೇ ಮಟ್ಟ ಮತ್ತು ಸಮಾನಭಾವದಿಂದ ಗುರುತಿಸಿಕೊಳ್ಳುವುದು ಆದರ್ಶ ಸ್ಥಿತಿಗಿಂತಲೂ ಹೆಚ್ಚಾಗಿ ವಾಸ್ತವಿಕ ನೆಲೆಯಲ್ಲಿರುವುದು ಕಂಡು ಬರುತ್ತದೆ. ಸಾಮಾಜಿಕ ಸಂಬಂಧಗಳಲ್ಲಿ ಅವಶ್ಯಕವೆನಿಸುವ ಅಂಶಗಳೆಲ್ಲ ಇಲ್ಲಿ ಕನಿಷ್ಠವಾಗುತ್ತವೆ. ಅಥವಾ ಗಣನೆಗೆ ಬರುವುದಿಲ್ಲ. 'ಸನ್ಯಾಸಿಯ ಬದುಕು' ವಿನಲ್ಲಿ ಸುಮಿತ್ರೆಗೆ ನೆರವಾಗುವುದರಲ್ಲಿ, ಆತ್ಮವಿಶ್ವಾಸ ತುಂಬುವುದರಲ್ಲಿ, ಮುಖ್ಯ ಭೂಮಿಕೆ ನಿರ್ವಹಿಸಿರುವ ರುಕ್ಮಾಯಿ, 'ಜಾರುವ ದಾರಿ'ಯಲ್ಲಿ ಇಂದುಮತಿಗೆ ಆರೈಕೆ ಮಾಡುವ, ಆರ್ಥಿಕ ನೆರವು ನೀಡುವ ಗುಲಾಬಿ - ಈ ಸಂಬಂಧಗಳಲ್ಲಿ ಜಾತಿ, ಕುಲ ಅಂತಸ್ತುಗಳು ನಗಣ್ಯವಾಗಿವೆ. ರೂಢಿಯಲ್ಲಿರುವ ನಂಬಿಕೆಯಲ್ಲಿ ಇರುವಂತೆ ವೈರತ್ವಬಾವನೆ ಇರುವ ಅತ್ತೆ-ಸೊಸೆ, ಅತ್ತಿಗೆ ನಾದಿನಿ, ಪತ್ನಿ-ವೇಶ್ಯೆ, ಸವತಿ ಸಂಬಂಧಗಳಲ್ಲಿ ಇಲ್ಲಿ ಪರಸ್ಪರ ಗೌರವ-ಪ್ರೀತಿ-ಆದರದ ಭಾವನೆಗಳಿವೆ. ಹಾರ್ದಿಕತೆ ಮತ್ತು ಸ್ನೇಹಪರತೆಯ ಮತ್ತು ಪರಸ್ಪರ ಅವಲಂಬನಾ ಪ್ರವೃತ್ತಿಯುಳ್ಳ ಈ ಸಂಬಂಧಗಳು ಸ್ತ್ರೀಯನ್ನು ಗುಂಪಿನ ನಿರ್ದಿಷ್ಟತೆಯಲ್ಲಿ ಕಾಣಲು ಅಗತ್ಯವಾಗುತ್ತವೆ. ಕುಟುಂಬ ವ್ಯವಸ್ಥೆಯನ್ನು ಒಳಗೊಂಡಂತೆ, ಸಾಮಾಜಿಕ ವ್ಯವಸ್ಥೆಯ ಒಳಾವರಣದಲ್ಲಿ ತೆರೆದುಕೊಳ್ಳುವ ಈ ಸಂಬಂಧಗಳಲ್ಲಿ ಪರಸ್ಪರ ಅವಲಂಬನೆಗಿಂತ ಹೆಚ್ಚಿನ ನಿರೀಕ್ಷೆ ಇರುವುದರಿಂದ ಇದರ ವ್ಯಾಪಕತೆಯನ್ನು ಗುರುತಿಸುವ ಅವಶ್ಯಕತೆ ಇದೆ.

ಕಾದಂಬರಿಯಲ್ಲಿರುವ ಸ್ತ್ರೀಪಾತ್ರಗಳ ಈ ಸಂಬಂಧದ ಉದಾಹರಣೆ ಹೀಗಿವೆ:

ಮನೋರಮೆ - ಭಾಗ್ಯಲಕ್ಷ್ಮಿ(ವೇಶ್ಯೆ-ಪತ್ನಿ, ನಿರ್ಭಾಗ್ಯಜನ್ಮ), ಗುಲಾಬಿ - ಇಂದುಮತಿ (ವೇಶ್ಯೆ-ಪತ್ನಿ, ಜಾರುವ ದಾರಿಯಲ್ಲಿ), ಮಾಲತಿ-ಶರದಿನಿ (ವೇಶ್ಯೆ– ಪತ್ನಿ, ಕನ್ಯಾಬಲಿ), ಮಂಜುಳ-ವೆಂಕಮ್ಮ (ವೇಶ್ಯೆ-ಪತ್ನಿ, ಮೈಮನಗಳ ಸುಳಿಯಲ್ಲಿ), ಸರಸೋತಿ - ಪಾರೋತಿ (ನಾದಿನಿ-ಅತ್ತಿಗೆ, ಮರಳಿಮಣ್ಣಿಗೆ), ಮೂಕಾಂಬು - ಪಾರೋತಿ(ಓರಗೆಯವರು - ಅಳಿದ ಮೇಲೆ), ಲಕ್ಷ್ಮಮ್ಮ-ರುಕ್ಮಣಿ (ಅತ್ತೆ-ಸೊಸೆ, ಮುಗಿದ ಯುದ್ಧ), ಮೂಕಜ್ಜಿ- ತಿಮ್ಮಜ್ಜಿ (ಬಾಲ್ಯಗೆಳತಿಯರು, ಮೂಕಜ್ಜಿಯ ಕನಸುಗಳು).

ಎರಡನೇಯದಾಗಿ ದಾಂಪತ್ಯಬದುಕನ್ನು ಇಲ್ಲಿ ಶೋಷಣಾನೆಲೆಯಾಗಿ ಗುರುತಿಸಲಾಗಿದೆ. ದಾಂಪತ್ಯವನ್ನು ಅದರ ಸಾಮಾಜಿಕತೆಯ ಕಾರಣವಾಗಿ ಕಾರಂತರು ಆಯ್ಕೆ ಮಾಡಿರುವುದು ಸ್ಪಷ್ಟವಾಗಿದೆ.

ವಿವಾಹ ಹೆಣ್ಣಿನ ಬದುಕಿನ ಸ್ವರೂಪವನ್ನು ನಿರ್ಧರಿಸುವ ನಿರ್ಣಾಯಕ ಘಟ್ಟವಾಗುವುದರೊಂದಿಗೆ ಅವಳ ನಿರ್ವಚನದಲ್ಲಿ ಪಾತ್ರವಹಿಸುವ ಒಂದು ವ್ಯವಸ್ಥೆಯೂ ಆಗಿದೆ. ಪುರುಷ ಸಂಬಂಧದ ಮೂಲಕ ನಿರ್ವಚಿಸಿಕೊಳ್ಳಬೇಕಾದ ಅವಶ್ಯಕತೆ ಹೆಣ್ಣಿಗೆ ಪ್ರಾಪ್ತವಾಗುವುದು ವಿವಾಹದ ಮೂಲಕ. ವಿವಾಹ ಸಂಸ್ಥೆಯ ನಿರೀಕ್ಷೆಗಳು ಮತ್ತು ಗಂಡಿನ ದೌರ್ಜನ್ಯದ ನಡವಳಿಕೆಗಳು (ಸಾರ್ವತ್ರಿಕವಾಗಬೇಕಾಗಿಲ್ಲ) ಹೆಣ್ಣಿನ ಅಧೀನ ಸ್ಥಿತಿಗೆ ಕಾರಣವಾಗುತ್ತವೆ. ಹೆಣ್ಣಿನಲ್ಲಿ

ಮೂಡುವ ಎಚ್ಚರದ ಧ್ವನಿ ಈ ಶೋಷಣಾನೆಲೆಗಳನ್ನು ಭೇದಿಸುವುದಕ್ಕೆ ಶಕ್ಯವಾಗುತ್ತದೆ, ಎಂಬ ಅರಿವಿನಿಂದ ಬೇರೆ ಬೇರೆ ರೀತಿಯ ಪ್ರತಿರೋಧಗಳನ್ನು ಇಲ್ಲಿ ಕಾಣಿಸಲಾಗಿದೆ. ಅಧೀನ ಸ್ಥಿತಿಯ ಅರಿವಿನಿಂದ ಈ ವಿವಾಹ ಸಂಸ್ಥೆಯನ್ನು ಪ್ರಶ್ನಿಸುವ ಉಲ್ಲಂಘಿಸುವ ವಿವಿಧ ಸ್ತ್ರೀ ಚಿತ್ರಣ ಈ ಕಾದಂಬರಿಗಳಲ್ಲಿ ಇದೆ.

ವಿವಾಹ ಜೀವನದ ಒಳಗೆ ಮತ್ತು ಹೊರಗೆ ಲೈಂಗಿನ ಸ್ವಾತಂತ್ರ್ಯವನ್ನು ಪಡೆದ ಹೆಂಗಸರಿರುವಂತೆ, ವಿವಾಹೇತರ ಸಂಬಂಧಗಳಿಗೆ ಸಮ್ಮತಿಸುವ, ಅದನ್ನು ಬಹಿರಂಗವಾಗಿ ಸ್ವೀಕರಿಸುವ, ಆ ಮೂಲಕ ಸಂತಾನದ ನಿರೀಕ್ಷೆಯಲ್ಲಿರುವ ಹೆಂಗಸರು ತಮ್ಮ ನಿರ್ಭೀಡತೆಯಿಂದ, ಧೈರ್ಯದಿಂದ ಪಾರಂಪರಿಕ ಕಲ್ಪನೆಯ ಸತೀಧರ್ಮವನ್ನು ನಿರಾಕರಿಸುತ್ತವೆ. ಇಲ್ಲಿ ದೊರಕಿಸಲಾದ ಸ್ವತಂತ್ರ ಬದುಕಿನ ಆಯ್ಕೆ ಸ್ವಂತ ಬಯಕೆಯ ಕಾರಣವಾಗಿರುವಂತೇ, ಗಂಡನ ವಿರುದ್ಧ, ವ್ಯವಸ್ಥೆ ವಿರುದ್ಧ ಸೂಚಿತವಾದ ಪ್ರತಿರೋಧದ ಬಂಡಾಯವೂ ಆಗಿದೆ.

ಸಾಮಾಜಿಕ ನೆಲೆಯಲ್ಲಿ, ಸಾಂಸ್ಕೃತಿಕ ಪರಿಸರದ ಚೌಕಟ್ಟನ್ನು ಭೇದಿಸಿ ಬದುಕುವ ಅಥವಾ ಆ ರೀತಿಯ ಅವಕಾಶಗಳತ್ತ ಕೈಚಾಚುವ ಬಂಡಾಯ ಪ್ರವೃತ್ತಿ ಇಲ್ಲಿ ಹೆಣ್ಣಿನ ವೈಯಕ್ತಿಕ ಸ್ವಾತಂತ್ರ್ಯರೂಪದಲ್ಲಿ ಬಂದಿದೆ. ವ್ಯಕ್ತಿತ್ವವಿಕಾಸಕ್ಕೆ, ಬದುಕಿನ ಪರಿಪೂರ್ಣತೆಗೆ, ಸ್ತ್ರೀ-ಪುರುಷ ಸಂಬಂಧದಲ್ಲಿ ಮೈಮನಗಳ ಸಾಮರಸ್ಯವನ್ನು ಆರ್ಥಿಕ ಮತ್ತು ಸಾಮಾಜಿಕ ಕಾರಣಗಳನ್ನು ಹೊರತುಪಡಿಸಿ ಲೇಖಕರು ನಿರ್ವಹಿಸುತ್ತಾರೆ. ಈ ನಿರ್ವಚನದಲ್ಲಿ ಸ್ತ್ರೀ-ಪುರುಷರಿಬ್ಬರಿಗೂ ಸಮಾನಾವಕಾಶ ಕಲ್ಪಿಸುತ್ತಾರೆ. 'ಮೈಮನಗಳ ಸುಳಿಯಲ್ಲಿ' ಮತ್ತು 'ಸಮೀಕ್ಷೆ'ಯ ಭಿಕ್ಷುಕ ದಂಪತಿಗಳಾದ ಪಮ್ಮ-ದುಗ್ಗಿ, ಸೂರ-ಕಾಳಿ - ಈ ಜೋಡಿಯ ಆದರ್ಶ ದಾಂಪತ್ಯ ಚಿತ್ರಣದಿಂದ ಹೊರಡುವ ಧ್ವನಿ ಈ ಭಾವದ ವ್ಯಕ್ತರೂಪವೇ ಆಗಿದೆ. 'ಮೈಮನಗಳ ಸುಳಿಯಲ್ಲಿ'ನ ಮಂಜುಳೆಯ ಜೀವಂತ ವೃತ್ತಾಂತ ಕೂಡಾ ಇದೇ ದಿಕ್ಕಿನಲ್ಲಿ ನಡೆದ ಪ್ರಯತ್ನವೆಂದು ಗುರುತಿಸುವುದು ಸಾಧ್ಯವಿದೆ.

ದಾಂಪತ್ಯದೊಳಗೆ ವೈಯಕ್ತಿಕ ಸ್ವಾತಂತ್ರ್ಯಕ್ಕೆ, ಇತರ ಅಂಶಗಳಿಗೆ ಅವಕಾಶವಿಲ್ಲದ ಪ್ರಸಂಗಗಳಲ್ಲಿ ವಿವಾಹದಿಂದ ಹೊರಗೆ ಇರುವ ಸಾಧ್ಯತೆಗಳನ್ನು ಹೊಸ ದಾಂಪತ್ಯದ ಆಯ್ಕೆಯಲ್ಲಿ, ಭಿನ್ನ ಸಂಗಾತಿಯ ಆಯ್ಕೆಯಲ್ಲಿ ಸಾಧಿಸಿದವರು ಈ ಕೆಳಗಿನವರು: ಕುಸುಮ (ಹೆತ್ತಳಾತಾಯಿ), ಶೇವಂತಿ (ಒಡಹುಟ್ಟಿದವರು), ಸುಬ್ಬಿ-(ಮುಗಿದಯುದ್ಧ), ಸತ್ಯಭಾಮೆ - (ನಂಬಿದವರ ನಾಕನರಕ), ಸರಸ್ವತಿ - (ಧರ್ಮರಾಯನ ಸಂಸಾರ,) ಕೆಂಪಿ, ಗಿಡ್ಡಿ, ಲಕ್ಕಿ- (ಕುಡಿಯರ ಕೂಸು), ನಾಗಿ-(ಮೂಕಜ್ಜಿಯ ಕನಸುಗಳು), ಕಾಂತಿಬೆನ್ -(ಒಂಟಿದನಿ) ಮತ್ತು ಸುನಾಲಿನಿ-(ಸರಸಮ್ಮನ ಸಮಾಧಿ). ಪ್ರತಿಭಟನೆ ಬಹಿರಂಗವಾಗಿ ವ್ಯಕ್ತಪಡಲಾಗದ ಸ್ಥಿತಿಯಲ್ಲಿ ಬದುಕಿನೊಡನೆ ಮಾಡಿಕೊಳ್ಳುವ ಹೊಂದಾಣಿಕೆಯಲ್ಲಿಯೂ ತೃಪ್ತಿದೊರೆಯದಾಗ, ಬಿಡುಗಡೆ ಅವಕಾಶವನ್ನು ಸಾವಿನಲ್ಲಿ, ಮಾನಸಿಕ ಅಸ್ವಸ್ಥತೆಯಲ್ಲಿ ಕಂಡುಕೊಳ್ಳಬೇಕಾಗುತ್ತದೆ. ವಾಗ್ದೇವಿ, ಮಹಾಲಕ್ಷ್ಮಿಯರ ದೈವ ಅವಾಹನೆ ಅಥವಾ ಮಾನಸಿಕ ಅಸ್ವಸ್ಥತೆ, ಶಾಲಿನಿಯ ಆತ್ಮಹತ್ಯೆ, ಪ್ರತಿಭಟನೆ, ನಿಷ್ಫಲವಾಗುವುದನ್ನು, ಮತ್ತು ಬಿಡುಗಡೆಯ ಆಶಯವನ್ನು ಹೊಂದಿರುವುದಾಗಿ ತಿಳಿಯಬಹುದು.

ವಿವಾಹ ಸಂಸ್ಥೆಯ ಒಳಗೇ ಇದ್ದು ಸಾಧಿಸುವುದಾಗಲೀ, ಅದನ್ನು ಮೀರಿ ಬದುಕುವುದಾಗಲೀ, ಬಿಡುಗಡೆಯ ಆಶಯವಿರುವ ವೈಯಕ್ತಿಕ ಸ್ವಾತಂತ್ರ್ಯದ ನೆಲೆಯಿಂದ ಪರಿಗಣಿತವಾಗುವುದರಿಂದ ವಿಮೋಚಿತ ಸ್ತ್ರೀ-ಪರಿಕಲ್ಪನೆ ಇಲ್ಲಿ ಮೂಡಿದೆ.

ಸಾಂಸ್ಕೃತಿಕ ಪರಿಸರವನ್ನು ಮೀರಿ ತಮ್ಮ ಅನನ್ಯತೆಯನ್ನು ಗುರುತಿಸುವ ಸ್ತ್ರೀಯರ ಬಂಡಾಯ ಇಲ್ಲಿ ಇತ್ಯಾತ್ಮಕ ಧೋರಣೆಯಲ್ಲಿರುವುದರಿಂದ ಸ್ತ್ರೀಯನ್ನು ಅವಳಿರುವಂತೇ ಗುರುತಿಸಲಾಗಿದೆ. ಮಾನವೀಯ ನೆಲೆಯೊಳಗೆ ಹೆಣ್ಣನ್ನು ಗುರುತಿಸಲಾಗಿರುವುದು ಸರಿಯಾಗಿದೆ.

ವ್ಯಕ್ತಿತ್ವ ಪರಿಪೂರ್ಣತೆಯನ್ನು ಬದುಕಿನ ವಿಧಾನದಿಂದ ಪಡೆದ ಕೆಲವು ಸ್ತ್ರೀಯರೆಂದರೆ-ಶಂಕರಿ-ಬೆಟ್ಟದಜೀವ, ರುಕ್ಮಾಯಿ-ಸನ್ಯಾಸಿಯ ಬದುಕು, ಭಾಗೀರಥಿ-ಕರುಳಿನಕರೆ, ಗುಲಾಬಿ-ಜಾರುವ ದಾರಿಯಲ್ಲಿ ಮತ್ತು ವಾಸಂತಿ-ಒಡಹುಟ್ಟಿದವರು.

### ಪ್ರಾತಿನಿಧಿಕ ಕಾದಂಬರಿಗಳಲ್ಲಿ ಸ್ತ್ರೀಪಾತ್ರ ಚಿತ್ರಣ

ಮೂಲ ಉದ್ದೇಶವೊಂದನ್ನು ನಿಭಾಯಿಸುವ ಆಶಯದಲ್ಲಿ ವ್ಯಕ್ತವಾಗುವ ಸ್ತ್ರೀಪಾತ್ರಚಿತ್ರಣಗಳು ಮತ್ತು ಸ್ತ್ರೀಕೇಂದ್ರಿತ ವಸ್ತುವುನ್ನುಳ್ಳ ಕಾದಂಬರಿಯಲ್ಲಿ ವ್ಯಕ್ತವಾಗುವ ಸ್ತ್ರೀ ಪಾತ್ರ ಚಿತ್ರಣದಲ್ಲಿ ವ್ಯತ್ಯಾಸ ಕಾಣಲಾಗದಿದ್ದರೂ, ಸ್ತ್ರೀ ಪಾತ್ರಕೇಂದ್ರಿತ ಕೃತಿ ಹೆಣ್ಣಿನ ಸ್ವರೂಪವನ್ನು ಉಳಿದವುಗಳಿಗಿಂತ ಹೆಚ್ಚಿನ ವಿವರಗಳ ಮೂಲಕ ವ್ಯಕ್ತಪಡಿಸುವ ಕಾರಣ ಇಲ್ಲಿ ನಾಲ್ಕು ಪ್ರಾತಿನಿಧಿಕವಾಗಿ ಆಯ್ಕೆಗೊಂಡ ಕಾದಂಬರಿಗಳಲ್ಲಿ ಸ್ತ್ರೀಸ್ವರೂಪವನ್ನು ಪ್ರತ್ಯೇಕವಾಗಿ ವಿವೇಚಿಸಿಕೊಳ್ಳಲಾಗಿದೆ. ಕಾದಂಬರಿಗಳು: ಸರಸಮ್ಮನ ಸಮಾಧಿ, ಮೂಕಜ್ಜಿ ಕನಸುಗಳು, ಮೈಮನಗಳ ಸುಳಿಯಲ್ಲಿ ಮತ್ತು ಅಳಿದಮೇಲೆ.

### ‘ಸರಸಮ್ಮನ ಸಮಾಧಿ’ಯಲ್ಲಿ ಸ್ತ್ರೀ

ಸರಸಮ್ಮನ ಸಮಾಧಿಯನ್ನು ಸಾಂಕೇತಿಕವಾಗಿ ಬಳಸಿಕೊಳ್ಳುವ ಕಾದಂಬರಿ ಹೆಣ್ಣನ್ನು ಭೂತ ಮತ್ತು ವರ್ತಮಾನದಲ್ಲಿ ವಿವರಿಸುತ್ತದೆ. ‘ಮಹಾಸತಿಯ ಸಮಾಧಿ, ಸಮಾಧಿಯ ಐತಿಹ್ಯ, ಮತ್ತು ಐತಿಹ್ಯನಂಬಿಕೆಯ ರೂಪದಲ್ಲಿ ಆಚರಣೆಯಾಗಿರುವುದು’ - ಈ ಪ್ರತಿಮೆಯ ಮೂಲಕ ಸಾಂಸ್ಕೃತಿಕ ಮತ್ತು ಸಾಮಾಜಿಕ ವ್ಯಕ್ತಿತ್ವವಾಗುವ ಸತೀಕಲ್ಪನೆಯನ್ನು ವಾಸ್ತವಿಕನೆಲೆಯ ವರ್ತಮಾನದಲ್ಲಿಟ್ಟು ಕಾದಂಬರಿ ಸ್ತ್ರೀಯನ್ನು ವ್ಯಾಖ್ಯಾನಿಸಿದೆ.

ಕಾದಂಬರಿಯ ಕೇಂದ್ರಪಾತ್ರ ಸರಸ್ವತಿ ಭೂತಕಾಲಕ್ಕೆ ಸೇರಿದವಳು. ಮಹಾಸತಿ ಪ್ರಕರಣದಿಂದ ಅವಳು ಸತೀತ್ವದ ಉಜ್ವಲ ಸಂಕೇತವಾಗಿ ಜನರ ನಂಬಿಕೆಯಲ್ಲಿ ಉಳಿದಿದ್ದಾಳೆ. ಜನರ ಕಲ್ಪನೆಯಲ್ಲಿ ಅವಳದು ಆದರ್ಶದ ಬದುಕು. ಸರಸ್ವತಿ ಸೀತೆಯ ಅವತಾರವೆಂದೇ ಮೂಡಂಬೈಲಿನವರು ತಿಳಿದಿದ್ದಾರೆ. ‘ಸೀತಮ್ಮನವರೇ ರಾಮಚಂದ್ರನನ್ನು ತಿರುಗಿ ಪಡೆಯಲಿಕ್ಕೆ ಮೂಡಂಬೈಲಿನಲ್ಲಿ ಜನ್ಮವೆತ್ತಿದಳಂತೆ. ಆ ಊರಿನ ನೀಲಾಚಲಯ್ಯನನ್ನು ಮದುವೆಯಾದಳಂತೆ. ಮದುವೆಯಾದಂದಿನಿಂದ ಒಂದೇ ಒಂದು ದಿನ ಪತಿಯ ಸೇವೆಯನ್ನು ತಪ್ಪಿಸಿದವಳಲ್ಲ.[೧]’’ (ಸರಸಮ್ಮನ ಸಮಾಧಿ: ೬ : ೧೯೯೭). ಆತ್ಮಸಮರ್ಪಣೆಯಿಂದ ಸಾಮಾನ್ಯನೆಲೆಯಲ್ಲಿ ಬದುಕಿದ್ದ ಸರಸ್ವತಿ ಪುರಾಣಕಲ್ಪನೆಯಲ್ಲಿರುವ ಸೀತೆಯೊಡನೆ ಸಮೀಕರಿಸುವ ಪ್ರಕ್ರಿಯೆಯಿಂದ ಅಲೌಕಿಕ ವ್ಯಕ್ತಿತ್ವವನ್ನು ಪಡೆಯುತ್ತಾಳೆ. ಅವಳು ಸತ್ತ ಜಾಗದಲ್ಲಿ ಸಮಾಧಿ ರೂಪದಲ್ಲಿರುವ ಗುಡಿ ನಿರ್ಮಾಣಗೊಂಡು ಊರಿನ ಜನರ ದಾಂಪತ್ಯ ಸಮಸ್ಯೆ ಪರಿಹಾರಾರ್ಥವಾಗಿ ಆಚರಣೆಯೊಂದನ್ನು ಚಲಾವಣೆಗೆ ತಂದಿದೆ. ಸರಸಮ್ಮನ ಆತ್ಮಸಮರ್ಪಣೆಯ ಹಿಂದಿರುವ ವಾಸ್ತವಿಕ ಸತ್ಯವನ್ನು

ರಾತ್ರಿಸಂಚಾರದಲ್ಲಿ ಕಾಣಿಸಿಕೊಳ್ಳುವ ಬೆಳ್ಳಕ್ಕ ಅನಾವರಣಗೊಳಿಸುವದರ ಮೂಲಕ, ಸರಸಮ್ಮನ ಮಹಾಸತಿ ಪ್ರಕರಣ, ಅವಳ ಸಮಾಧಿಯ ಆಚರಣೆಗಳೂ ಇಲ್ಲಿ ವಿಡಂಬನೆಗೆ ಒಳಗಾಗುತ್ತವೆ. ಬೆಳ್ಳಕ್ಕ ಚಂದ್ರಯ್ಯನಲ್ಲಿ ಗಂಡನ ಚಿತೆಯಲ್ಲಿ ಸುಟ್ಟುಕೊಂಡ ಸರಸಮ್ಮ ತಾನೇ ಎಂದು ಪ್ರಕಟಿಸಿದ್ದಾಳೆ. 'ನನ್ನ ಪತಿ ನನ್ನನ್ನು ಈ ಅವಸ್ಥೆಗೆ ಇಳಿಸಿದವನು, ನಾನು ಬೇಡವೆಂದರೂ ರೋಧಿಸಿದರೂ ಅವನ ರೋಗಿಷ್ಠ ಶರೀರದೊಡನೆ ನನ್ನನ್ನು ಸುಟ್ಟರು. ನನ್ನನ್ನು ಸುಟ್ಟು ಮಹಾಸತಿಯನ್ನಾಗಿ ಮಾಡಿದರು.' (ಅದೇಪುಟ :೧೧೦).

ಈ ರೀತಿ ಭೂತ ಮತ್ತು ವರ್ತಮಾನ ಎರಡರ ಮೂಲಕವೂ ಜನರ ಮುಂದೆ ಕಾಣಿಸಿಕೊಳ್ಳುವ ಸರಸಮ್ಮನ ವ್ಯಕ್ತಿತ್ವವನ್ನು ವಾಸ್ತವಿಕತೆ, ಕಲ್ಪನೆ ಮತ್ತು ಭ್ರಮೆಯ ಸ್ಥಿತಿಯಲ್ಲಿ ವಿವರಿಸುವುದರ ಮೂಲಕ ವೈವಾಹಿಕ ಚೌಕಟ್ಟಿನಲ್ಲಿರುವ 'ಸತೀ' ಪರಿಕಲ್ಪನೆಯನ್ನು ಕಾದಂಬರಿ ವಿವರಿಸುತ್ತದೆ ಎಂದು ತಿಳಿಯಬಹುದಾಗಿದೆ.

ಪುರಾಣಕಲ್ಪನೆಯಲ್ಲಿರುವಂತೆ ಹೆಣ್ಣನ್ನು ಸಾಂಸ್ಕೃತಿಕ ವ್ಯಕ್ತಿತ್ವವಾಗಿ ವೈಭವೀಕರಿಸುವುದಾಗಲೀ ವಾಸ್ತವಿಕನೆಲೆಯಲ್ಲಿ ಸಾಮಾಜಿಕ ವ್ಯಕ್ತಿತ್ವವಾಗಿ ರೂಢಿ, ಸಂಪ್ರದಾಯಗಳ ಹೆಸರಿನಲ್ಲಿ ನಿಯಂತ್ರಣಕ್ಕೆ ಒಳಪಡಿಸುವುದಾಗಲಿ ಪ್ರತಿಯೊಂದೂ ಅವಳ ವೈಯಕ್ತಿಕತೆ, ಅನನ್ಯತೆಗೆ ಉಂಟು ಮಾಡುವ ದಕ್ಕೆ ಎಂದೇ ಸೂಚಿತವಾಗಿರುವುದು ಗೋಚರವಾಗಿದೆ.

ಭೂತದಲ್ಲಿ ಸತೀತ್ವದ ಅಮರತ್ವದ ಸಂಕೇತವಾಗಿರುವ ಸರಸಮ್ಮ ವರ್ತಮಾನದಲ್ಲಿ ಸಂಪೂರ್ಣವಾಗಿ ಭಿನ್ನರೂಪವನ್ನು ಪಡೆದವಳಾಗಿರುತ್ತಾಳೆ. ಭೂತ ಮತ್ತು ವರ್ತಮಾನ, ಕಲ್ಪನೆ ಮತ್ತು ವಾಸ್ತಾವಿಕತೆಯ ನಡುವಿರುವ ಅಂತರ ಹೆಣ್ಣಿನ ನಿರ್ವಚನದಲ್ಲಿ ಮುಖ್ಯಭೂಮಿಕೆಯನ್ನು ಇಲ್ಲಿ ನಿರ್ವಹಿಸಿದೆ. ಸಾಮಾಜಿಕ ಪ್ರವೃತ್ತಿಗಳು ಕಲ್ಪನೆಯನ್ನು ಆಧರಿಸಿದ ಆದರ್ಶ ಚಿತ್ರವನ್ನು ವಾಸ್ತವಿಕನೆಲೆಯಲ್ಲಿ ಆರೋಪಿಸುವ ಪ್ರಕ್ರಿಯೆಯಲ್ಲಿ ನಿಯಂತ್ರಣವು ಹೆಣ್ಣಿನ ಮನಸ್ಸಿನ ಭಾವನೆ, ಯೋಚನಾ ಕ್ರಮ ಮತ್ತು ಬದುಕಿನ ವಿಧಾನವನ್ನು ಸತೀತ್ವದ ಕಲ್ಪನೆಯೊಳಗೆ ನಿರ್ಬಂಧಿಸುವ ಕ್ರಮವನ್ನು ಸರಸಮ್ಮನ ಸಮಾಧಿ ಆಚರಣೆ ನಡೆಸುತ್ತದೆ. ಹೆಣ್ಣಿನ ಸ್ವರೂಪ ನಿರ್ಧಾರದಲ್ಲಿ ಸತಿಪದ್ಧತಿಯಂತಹ ಆಚರಣೆಗಳು ಬೆಂಬಲ ಸೂಚಿಸುತ್ತವೆ. ಕಾದಂಬರಿಯಲ್ಲಿ ಬರುವ ಅವ್ಯಕ್ತರೂಪದ ಲೈಂಗಿಕ ಮನೋಧರ್ಮದ ಸಂಕೇತವಾಗಿರುವ ಬೆಳ್ಳಕ್ಕನ ಪ್ರೇತ ಸಂಚಾರ, ಅವಳ ಅತೃಪ್ತತೆ ಮತ್ತು ಅವಳ ಪ್ರೇಮ ನಿವೇದನೆಗಳ ಮೂಲಕ ಕಾದಂಬರಿ ಸತಿ ಆಚರಣೆಯನ್ನು ವಿಡಂಬನೆಗೆ ಗುರಿಪಡಿಸುವುದರ ಮೂಲಕ ಸಾಂಕೇತಿಕ ವ್ಯಕ್ತಿತ್ವ ಸತೀಕಲ್ಪನೆಯನ್ನು ಸಂಪೂರ್ಣವಾಗಿ ನಿರಾಕರಿಸುತ್ತದೆ; ಮತ್ತು ಹೆಣ್ಣನ್ನು ಅವಳಿರುವ ವಾಸ್ತವಿಕನೆಲೆಯಲ್ಲಿಯೇ ಅರ್ಥಮಾಡಲು, ವಿವರಿಸಲು ಅವಕಾಶ ನೀಡುತ್ತದೆ. ವಾಸ್ತಾವಿಕ ನೆಲೆಯಲ್ಲಿ ಮೂಡಂಬೈಲಿನ ಪರಿಸರದಲ್ಲಿ ಬದುಕುವ ಇತರ ಸ್ತ್ರೀಯರ ಮೂಲಕ ಹೆಣ್ಣಿನ ಸ್ವರೂಪ ಚಿತ್ರಣವನ್ನು ನೀಡಲಾಗಿದೆ.

ಧಾರ್ಮಿಕ ಮನೋಭಾವ ಮತ್ತು ವೈಜ್ಞಾನಿಕ ತಿಳುವಳಿಕೆಯಿಂದ ಬದುಕಿನ ವಿಶ್ಲೇಷಣೆಯಲ್ಲಿ ತೊಡಗಿಕೊಳ್ಳುವ ಚಂದ್ರಯ್ಯನ ದರ್ಶನದಲ್ಲಿ ಸರಸಮ್ಮ/ಬೆಳ್ಳಕ್ಕನ ರೀತಿಯಲ್ಲಿಯೇ ಭಾಗೀರಥಿ, ಸುನಾಲಿನಿ, ಬೆಳ್ಳಮ್ಮ, ನಾಗವೇಣಿ, ವಿಶಾಲಾಕ್ಷಿ ಮೊದಲಾದವರ ಬದುಕು ಅನಾವರಣಗೊಳ್ಳುವ ರೀತಿಯಲ್ಲಿ ವರ್ತಮಾನದ ಸ್ತ್ರೀ ಸ್ವರೂಪವನ್ನು ಪ್ರಕಟಿಸಿದ ವಿಧಾನವಿದೆ. ಊರಿನಲ್ಲಿ, ಜನರ ಮನಸ್ಸಿನಲ್ಲಿ ದಂತಕತೆಯಾಗಿ, ಆದರ್ಶವ್ಯಕ್ತಿ ಎನಿಸಿದ ಸರಸಮ್ಮನದು ವಾಸ್ತವಿಕವಾಗಿ ದುಃಖದ ಬದುಕಾಗಿತ್ತು. ಸಾಮರಸ್ಯವಿಲ್ಲದ ದಾಂಪತ್ಯವನ್ನು ಅನುಭವಿಸುವುದು ಅವಳಿಗೆ ಅನಿವಾರ್ಯವಾಗಿತ್ತು.

'ನನ್ನ ಪತಿಗೆ ನಾನು ಬೇಡವಾಗಿದ್ದೆ ನನಗೆ ಬೇಕಾದವನೊಬ್ಬನಿದ್ದ. ಅವನೊಂದಿಗಿರಲು ಶಾಸ್ತ್ರ, ಸಮಾಜಗಳೆರಡೂ ಅಡ್ಡವಾದವು. ಉಪಾಯಗಾಣದೆ ಶಾಸ್ತ್ರ ಹಿಂಬಾಲಿಸಿಯೇ ನಾನೀ ಅವಸ್ಥೆಗೆ ಬಂದೆ.'[೬] (ಅದೇ ಪುಟ:೧೦೮). ಸರಸಮ್ಮನ ವೈಯುಕ್ತಿಕ ಭಾವನೆಗಳಿಗೆ ದಾಂಪತ್ಯ ಚೌಕಟ್ಟಿನಲ್ಲಿ ಅವಕಾಶ ಇರಲಿಲ್ಲ. ಶಾಸ್ತ್ರ ಮತ್ತು ಸಮಾಜ ಎರಡೂ ಅವಳ ಬದುಕು ಮತ್ತು ಸಾವನ್ನು ನಿರ್ಧರಿಸುವುದರ ಮೂಲಕ ಅವಳ ವ್ಯಕ್ತಿತ್ವ ಆದರ್ಶನೆಲೆಯಲ್ಲಿ ರೂಪಗೊಳ್ಳಲು ಪೂರಕವೆನಿಸಿದವು. ಅವಳ ಬದುಕು ಮತ್ತು ಸಾವು ಎರಡೂ ಮಾದರಿಯಾಗೆ ಉಳಿಯುವಂತೆ ಅವಳ ಸಮಾಧಿ, ಮತ್ತು ಆಚರಣೆಗಳು ನೆಲೆನಿಂತಿವೆ. ಆದರೆ ಬೆಳ್ಳಕ್ಕ ಪ್ರಕಟಿಸುವ ಸರಸಮ್ಮನ ಚಿತ್ರದಲ್ಲಿರುವ ವಾಸ್ತವಿಕ ಅಂಶಗಳು ಮೂಲಕಲ್ಪನೆಗೆ ಧಕ್ಕೆಯನ್ನು ಉಂಟುಮಾಡುತ್ತವೆ. ಮತ್ತು ಹೆಣ್ಣನ್ನು ಸತೀತ್ವ ಕಲ್ಪನೆಗಿಂತ ಭಿನ್ನ ರೂಪದಲ್ಲಿ ಕಾಣುವ ಅವಶ್ಯಕತೆಯನ್ನು ಪ್ರಸ್ತುತಪಡಿಸುತ್ತದೆ. ದಾಂಪತ್ಯದಲ್ಲಿ ಅಸುಖಿಗಳಾಗಿರುವ ಬೇರೆ ಹೆಂಗಸರ ಜೀವನದ ವಿವರಗಳು ಕೂಡ ಸರಸಮ್ಮನ ದುರಂತವನ್ನೇ ಮರುಕಳಿಸುವ ಸೂಚನೆಗಳಾಗಿವೆ. ಮಾಚಿ, ಸೀತಕ್ಕ, ಜಾನಕಮ್ಮನವರು ಸಂಪ್ರದಾಯದ ವಿರುದ್ಧ ಧ್ವನಿ ಎತ್ತಲಾಗದ ಅಸಹಾಯಕರು. ಸಮಾಧಿಗೆ ಹರಕೆ ಸಲ್ಲಿಸುವುದರಿಂದ ವೈಯಕ್ತಿಕ ನೋವು ಮತ್ತು ಕಷ್ಟಗಳು ಪರಿಹಾರವಾಗುತ್ತವೆ ಎಂಬ ನಂಬಿಕೆ ಅವರದು. ಸಮಸ್ಯೆಗೆ ಕಾರಣರಾದವರನ್ನು ವಿರೋಧಿಸಲಾಗದ ನೆಲೆಯಲ್ಲಿ ಅಲೌಕಿಕ ಶಕ್ತಿಗೆ ಅವರು ಶರಣಾಗುತ್ತಾರೆ. ತಮ್ಮ ನಂಬಿಕೆ ಫಲಿಸುತ್ತವೆ ಎನ್ನುವ ಭ್ರಮೆಯಲ್ಲಿ ಬದುಕಿನೊಡನೆ ಹೊಂದಾಣಿಕೆ ಮಾಡಿಕೊಳ್ಳುತ್ತಾರೆ. ಹೊಂದಾಣಿಕೆಗೆ ಹೊರತಾಗಿರುವ ಇತರ ಯಾವುದೇ ಸಾಧ್ಯತೆಗಳು ಲಭ್ಯವಿರದ ಸ್ಥಿತಿಯಲ್ಲಿ, ತಾವಿರುವ ಸ್ಥಿತಿಯಲ್ಲಿಯೇ ತೃಪ್ತರಾಗಬೇಕಾಗುತ್ತದೆ. ತಾವು ಬದುಕುವ ಸಾಂಸ್ಕೃತಿಕ ಪರಿಸರದ ಮೂಲಕವೇ ತಮ್ಮನ್ನು ಗುರುತಿಸಿಕೊಳ್ಳುವ ಸ್ವರೂಪ ಈ ಹೆಂಗಸರದು.

ಇದೇ ಸಾಮಾಜಿಕ ವ್ಯವಸ್ಥೆಯವರಾದರೂ ಭಿನ್ನ ರೀತಿಯ ಆಲೋಚನೆಗಳನ್ನು, ಭಾವನೆಗಳನ್ನು ವ್ಯಕ್ತಪಡಿಸಬಲ್ಲ ಸುನಾಲಿನಿ, ಭಾಗೀರಥಿಯರಿಗೆ ಪ್ರತ್ಯೇಕ ರೀತಿಯ ವ್ಯಕ್ತಿತ್ವ ಸ್ವರೂಪವಿದೆ. ಇವರ ಹೋಲಿಕೆಯಲ್ಲಿರುವ ಇತರರೇವರೆ ಗುಲಾಬಿ ಮತ್ತು ಬೆಳ್ಳಕ್ಕ. ಈ ಹೆಣ್ಣುಗಳು ತಾವು ಬದುಕುವ ಸಾಂಸ್ಕೃತಿಕ ಪರಿಸರದಿಂದ ಭಿನ್ನ ರೀತಿಯಲ್ಲಿ ಗುರುತಿಸಿಕೊಳ್ಳಲು ಬಯಕೆ ಉಳ್ಳವರಾಗಿದ್ದಾರೆ. ತಮ್ಮ ಮನಸ್ಸಿನ ಭಾವಗಳನ್ನು ವ್ಯಕ್ತಪಡಿಸವಲ್ಲಿ, ತಮ್ಮ ಮೇಲೆ ಅಧಿಕಾರ ಚಲಾಯಿಸುವ ವ್ಯವಸ್ಥೆಯನ್ನು ಪ್ರಶ್ನಿಸುವ ಅಧಿಕಾರವನ್ನು ಇವರು ಪಡೆದದರಾಗಿದ್ದಾರೆ. ಭೌತಿಕ ಶರೀರದವಳಾಗಿದ್ದಾಗ ಭಾವನೆಗಳಿಗೆ ಅವಕಾಶ ಪಡೆಯದೆ ಹೋದ ಸರಸಮ್ಮ, ಬೆಳ್ಳಕ್ಕನ ಪ್ರೇತ ಶರೀರಿಯಾಗಿ ಅವನ್ನು ಸಾಧಿಸಿಕೊಳ್ಳುವ ವಿಧಾನದಲ್ಲಿಯೇ ಭಾಗೀರಥಿ ಸುನಾಲಿನಿಯರು ಮಾನಸಿಕ ಸಿದ್ಧತೆ ಮೂಲಕ ಬಹಿರಂಗ ಪಡಿಸುವ ಪ್ರತಿಭಟನೆಯಿಂದ ವೈಯಕ್ತಿಕ ಸ್ವಾತಂತ್ರ್ಯವನ್ನು ಪಡೆಯುವುದು ಸಾಧ್ಯವಾಗುತ್ತದೆ.

ಸಾಂಪ್ರದಾಯಕ ರೂಪದಲ್ಲಿ ತಮ್ಮನ್ನು ಗುರುತಿಸಿಕೊಳ್ಳುವುದಾಗಲೀ, ನೀತಿಸಂಹಿತೆಯ ಪಾವಿತ್ರ್ಯದ ಕಲ್ಪನೆಯಲ್ಲಿ ಪತ್ನಿತ್ವವನ್ನು ಮೆರೆಸುವುದನ್ನು ಒಪ್ಪದಿರುವುದು ಮತ್ತು ವ್ಯಕ್ತಿಗತನೆಲೆಯಲ್ಲಿ ತಮ್ಮನ್ನು ಗುರುತಿಸಬೇಕೆನ್ನುವ ವಾದ ಹೂಡುವುದರಲ್ಲಿ ಆತ್ಮಗೌರವವಷ್ಟೇ ಕೇಂದ್ರಭಾವವಾಗಿ ಇದೆ.

ಮಾಚಿ, ಅವಳ ಮಗಳು ಸೀತಕ್ಕ, ಜಾನಕಮ್ಮ ಅವರ ಮಗಳು ನಾಗವೇಣಿ ಮುಗ್ಧ ಸ್ವಭಾವದವರು. ತಮ್ಮ ಮೇಲೆ ನಡೆಯುತ್ತಿರುವ ಅನ್ಯಾಯದ ವಿರುದ್ಧ ಧ್ವನಿ ಎತ್ತಲಾಗದ ಅಮಾಯಕರು. ಆದುದರಿಂದ ಸರಸಮ್ಮನಲ್ಲಿ ಹರಕೆ ಹೇಳಿಕೊಳ್ಳುವುದು, ಫಲ ಸಿಕ್ಕಿತೆಂದು ನಂಬಿಕೊಳ್ಳುವುದು ಅವರಿಗೆ ಸಾಧ್ಯವಾಗುತ್ತದೆ. ಸಂಪ್ರದಾಯದಲ್ಲಿ

ಇಡುವ ನಂಬಿಕೆ ಅವರ ನೋವಿಗೆ, ದುಃಖಕ್ಕೆ ಪರಿಹಾರವಾಗುತ್ತದೆ. ಆದರೆ ಸುನಾಲಿನಿ, ಭಾಗೀರಥಿಯರು ಈ ಹೆಂಗಸರಂತಲ್ಲ. ವಿದ್ಯೆ ಮತ್ತು ತಿಳುವಳಿಕೆಯಿಂದ ಜ್ಞಾನ ಉಳ್ಳವರಾಗಿ, ಗಂಡನ ಮನೆಯಲ್ಲಿ ತಮ್ಮ ಸ್ಥಾನಮಾನದ ಅರಿವು ಮೂಡುತ್ತಲೇ, ಅವರು ಹೊರನಡೆಯುತ್ತಾರೆ. ಉಣ್ಣಲಿಕ್ಕೆ ಉಡಲಿಕ್ಕೆ ನೀಡಿ, ತನ್ನನ್ನು ಪಶುವಿನಂತೆ ಬದುಕುವಂತೆ ಒತ್ತಾಯಿಸುವ, ತನ್ನ ವಿದ್ಯೆಗೆ ಮನ್ನಣೆ ಕೊಡದೆ, ಕಾನೂನಿನ ನೆರವಿನಿಂದ ಪತ್ನಿ ಸ್ಥಾನದಲ್ಲಿದ್ದವಳ ಮೇಲೆ ಲೈಂಗಿತ ಅಧಿಕಾರ ಸ್ಥಾಪಿಸಬಲ್ಲೆ ಎನ್ನುವ ಗಂಡನಿಂದ ಸುನಾಲಿನಿಯ ಅಭಿಮಾನಕ್ಕೆ ಅವಮಾನವಾಗಿದೆ. ಗಂಡನಿಂದ, ಅತ್ತೆಯಿಂದ ಬೈಗುಳನ್ನು ಪಡೆಯುತ್ತ ಬದುಕಬೇಕಾದರೆ ತಾನು, ತನ್ನ ಮನುಷ್ಯತ್ವ ತನ್ನ ಆತ್ಮಾಭಿಮಾನ ಎಲ್ಲವನ್ನು ಬಿಟ್ಟು ಬದುಕಬೇಕು; ಆದರೆ ಆ ರೀತಿ ಬದುಕುವುದೆಂದರೆ ಪಶುಸಮಾನವೆಂಬ ಭಾವನೆ ಹೊಂದಿ ಸುನಾಲಿನಿ ವೈವಾಹಿಕ ಬಂಧನವನ್ನು, ತಾನಿರುವ ಪರಿಸರವನ್ನು ತ್ಯಜಿಸಿ ಹೊರಬರುತ್ತಾಳೆ. ಹೆಂಗಸರೆಂದರೆ ಕಾಲಿನಕೆರಕ್ಕೆ ಸಮಾನವೆನ್ನುವ ವೆಂಕಟರಮಣಯ್ಯನಂತಹ ಮಾವನಿರುವ ಗಂಡನ ಮನೆಯಲ್ಲಿ ಅಭಿಮಾನಶೂನ್ಯಳಾಗಿ ಬದುಕುವುದು ಅಸಹ್ಯವೆನಿಸಿ ಭಾಗೀರಥಿ ತಂದೆ ಮನೆಗೆ ಮರಳುತ್ತಾಳೆ. ಚಂದ್ರಯ್ಯನ ಭೇಟಿಯಿಂದ ಇಬ್ಬರೂ ತಮ್ಮ ಭವಿಷ್ಯ ಬದುಕಿನ ಪರ್ಯಾಯ ಸಾಧ್ಯತೆಗಳ ದಿಕ್ಕಿನಲ್ಲಿ ಯೋಚಿಸುತ್ತಾರೆ. ಪತ್ನೀ ಸ್ಥಾನದಲ್ಲಿರುವ ಜಾನಕಿ, ಸೀತೆ, ಭಾಗೀರಥಿ, ಸುನಾಲಿನಿ, ನಾಗವೇಣಿಯರಿಗೆ ವೈವಾಹಿಕ ಬದುಕು ಬಂಧನದ ಸ್ವರೂಪವಾಗಿ ಕಂಡಿದೆ. ಮನದ ಭಾವನೆಗಳಿಗೆ ಅವಕಾಶ ನೀಡದಿರುವ, ಮೈಮನಗಳ ಮೇಲೆ ಅಧಿಕಾರ ಸ್ಥಾಪಿಸುವ, ನಿಯಂತ್ರಿಸುವ ವ್ಯವಸ್ಥೆಯೊಂದು ದಾಂಪತ್ಯ ಜಿವನದಲ್ಲಿ ಇದೆ ಎಂಬ ಅರಿವು ಇವರಿಗೆ ಉಂಟಾಗಿದೆ. ಅಣ್ಣಪ್ಪಕಾಮ್ತಿ (ಗಂಡ), ವೆಂಕಟರಮಣಯ್ಯ (ಮಾವ), ರಾಜೀವಿ (ಅತ್ತೆ), ತಿಮ್ಮಪ್ಪಯ್ಯ (ತಂದೆ) - ಮೊದಲಾದವರ ರೂಪದಲ್ಲಿರುವ ವ್ಯವಸ್ಥೆ ವಿರುದ್ಧ ಇಲ್ಲಿ ಕೆಲವರಾದರೂ ದ್ವನಿ ಎನ್ನುತ್ತಾರೆ. ನೀಲಾಚಲಯ್ಯನ ಸಾಂಗತ್ಯವನ್ನೊಲ್ಲದ ಬೆಳ್ಳಕ್ಕಮ್ಮನ ಸಂಚಾರದ ಹುಡುಕಾಟದಲ್ಲಿರುವ ಸಾಂಕೇತಿಕತೆ, ಇತರ ಹೆಂಗಸರಲ್ಲಿ ಮಾಡಿರುವ ಎಚ್ಚರವನ್ನು ಅಭಿವ್ಯಕ್ತಿಸುತ್ತದೆ. ಈ ಹೆಂಗಸರಿಗೆ ಬದುಕಿನಿಂದ ಹೆಚ್ಚಿನ ನಿರೀಕ್ಷೆಗಳಿವೆ. ಹೆಣ್ಣನ್ನು ಭೋಗವಸ್ತುವೆಂದಾಗಲೇ, ಕಾಲಿನ ಕೆರವೆಂದು ನಿಕೃಷ್ಟವಾಗಿ ಕಾಣವುದಾಗಲಿ, ಆರ್ಥಿಕ ವ್ಯವಹಾರದಲ್ಲಿ ಅಜ್ಞರೆಂಬ ಭಾವನೆ ತೋರುವುದಾಗಲೀ - ಇವರು ವಿರೋಧಿಸುತ್ತಾರೆ. ಮನಸ್ಸಿಗೆ ಒಪ್ಪದ ವಿಚಾರಗಳಿರುವ ಈ ವ್ಯವಸ್ಥೆಯನ್ನು ತಿರಸ್ಕರಿಸುವ ಧೈರ್ಯ ಸುನಾಲಿನಿ, ಭಾಗೀರಥಿಯವರಿಗೆ ಇದೆ. ಕೊನೆಗೆ ಬೆಳ್ಳಕ್ಕ ಕೂಡಾ ಈ ವ್ಯವಸ್ಥೆಯನ್ನು ತಿರಸ್ಕರಿಸಿ ದೂರನಿಲ್ಲುತ್ತಾಳೆ. ಚಂದ್ರಯ್ಯನಲ್ಲಿ ತಾನು ಸರಸಮ್ಮನ ಗುಡಿಗೆ, ತನ್ನ ಗಂಡ ನೀಲಾಚಲಯ್ಯ ಮಲಗಿದ ತಾಣಕ್ಕೆ ಬರಲು ಒಲ್ಲದೆ, ಮತ್ತೆ ಬಂಧನಕ್ಕೆ, ನಿಯಂತ್ರಣಕ್ಕೆ ಒಳಗಾಗುವ ಭೀತಿ ವ್ಯಕ್ತಪಡಿಸುತ್ತಾಳೆ. ವ್ಯವಸ್ಥೆಯನ್ನು ನಿರಾಕರಿಸುವ ಈ ಹೆಂಗಸರ ಮನಸ್ಸಿನ ಭೀತಿಯನ್ನು, ಹೃದಯದ ತಳಮಳವನ್ನು, ಅನುತಾಪ, ಪ್ರತಿಭಟನೆಗಳನ್ನು ಸಂಪ್ರದಾಯಕ್ಕಿಂತಲೂ ಹೆಚ್ಚಾಗಿ ವೈಜ್ಞಾನಿಕ ತಿಳುವಳಿಕೆಯಿಂದ ಪ್ರೇರಿತವಾದ ಮನಸ್ಸಷ್ಟೇ ಅರ್ಥ ಮಾಡಲು, ಪರಿಹಾರ ಸೂಚಿಸಲು ಸಮರ್ಥವಾಗುತ್ತದೆ.

ನೀಲಾಚಲಯ್ಯನಿಂದ ಹಿರಣಯ್ಯನವರೆಗಿನ ಎಲ್ಲಾ ಗಂಡಸರು, ತಮ್ಮ ಬಾಳಸಂಗಾತಿಯರಾದ ಹೆಂಗಸರನ್ನು ಮನುಷ್ಯನೆಲೆಯಲ್ಲಿ ಕಂಡು, ಅರ್ಥಮಾಡಿಕೊಳ್ಳಲು ಅಸಮರ್ಥರಾದವರು. ಆದರೆ ಚಂದ್ರಯ್ಯ ಮಾತ್ರ ಈ ಹೆಣ್ಣುಗಳ ದುರಂತ ಬಾಳುವೆಯನ್ನು ಕಣ್ಣಾರೆ ಕಂಡು, ಕೇಳಿ ತಿಳಿದವನಾಗಿ ಅರ್ಥಮಾಡಿಕೊಳ್ಳುವ ಹಂತದಲ್ಲಿರುವುದರಿಂದ ಚಂದ್ರಯ್ಯನಲ್ಲಿ ಸಾಂಗತ್ಯ ನಿವೇದನೆ ಮಾಡಿಕೊಳ್ಳುವುದು ಈ ಹೆಂಗಸರಿಗೆ ಸ್ವೀಕೃತವೆನಿಸುತ್ತದೆ.

ಕಾದಂಬರಿ ಪುರುಷ ಪಾತ್ರಗಳನ್ನು ಸಾಮಾಜಿಕ ಪ್ರವೃತ್ತಿಗಳ ಸಂಕೇತವಾಗಿ, ಚಂದ್ರಯ್ಯನೊಬ್ಬನನ್ನು ಮೂಢನಂಬಿಕೆಯನ್ನು ಭೇದಿಸುವ ವೈಜ್ಞಾನಿಕ ತಿಳುವಳಿಕೆಯ ಸಂಕೇತವಾಗಿ, ಮತ್ತು ಬೆಳ್ಳಕ್ಕನನ್ನು ಅವಾಸ್ತವಿಕನೆಲೆಯ ಪ್ರೇತಶರೀರಿಯಾಗಿ ಲೈಂಗಿಕ ಮನೋಧರ್ಮದ ಸಂಕೇತವಾಗಿ ಬಳಸಿಕೊಂಡ ಕಾರಣ, ಈ ಸಂಕೇತಗಳ ಮೂಲಕ ಪ್ರತೀತವಾಗುವ ಸ್ತ್ರೀ ನಿರ್ವಚನಕ್ಕೆ ಅವಕಾಶ ಕಲ್ಪಿಸಿ ಕೊಟ್ಟಿದೆ.

## 'ಅಳಿದ ಮೇಲೆ' ಕಾದಂಬರಿಯಲ್ಲಿ ಸ್ತ್ರೀ

ಯಶವಂತರಾಯನೆಂಬ ವ್ಯಕ್ತಿಯ ಜೀವನ ವೃತ್ತಾಂತವಿರುವ ಅಳಿದಮೇಲೆ ಕಾದಂಬರಿಯಲ್ಲಿ ಆತನ ಬದುಕಿನಲ್ಲಿ ಬೇರೆ ಬೇರೆ ಸಂಬಂಧಗಳ ರೂಪದಲ್ಲಿ ಕಾಣಿಸಿಕೊಳ್ಳುವ ಸ್ತ್ರೀ ಪಾತ್ರಗಳ ಚಿತ್ರಣ ಇದೆ. ಕಾದಂಬರಿ ಕೇಂದ್ರವಾಗಿರುವ ಯಶವಂತರಾಯರದು ಆದರ್ಶ ಪಾತ್ರ. ಮಾನವತಾವಾದಿಯಾದ ಈ ವ್ಯಕ್ತಿ ಸಮಾಜದ ಋಣ ತೀರಿಸುವ ರೀತಿಯಲ್ಲಿ ಬದುಕಿದರೆ ಮಾತ್ರ ಜನ್ಮಸಾರ್ಥಕವೆಂಬ ಭಾವನೆ ಇದ್ದವರು. ಈ ಆದರ್ಶ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಬೇರೆ ಬೇರೆ ಹೆಣ್ಣುಗಳು ಬೇರೆ ಬೇರೆ ರೀತಿಯ ಪಾತ್ರವನ್ನು ನಿರ್ವಹಿಸುತ್ತವೆ.

ಪುರುಷನೊಬ್ಬನ ವ್ಯಕ್ತಿತ್ವ ಸ್ವರೂಪ ನಿರ್ಧಾರದಲ್ಲಿ ಆತನ ಹುಟ್ಟುಸ್ವಭಾವ, ಆದರ್ಶಗಳು, ದೌರ್ಬಲ್ಯಗಳು ಕಾರಣವಾಗುವ ರೀತಿಯಲ್ಲಿಯೇ, ಅವನ ಬದುಕನ್ನು ನಿರ್ಧರಿಸುವಲ್ಲಿ ಸಾಮಾಜಿಕ ಸಂಬಂಧಗಳು, ರಕ್ತಸಂಬಂಧಗಳು, ಸ್ನೇಹ ಸಂಬಂಧಗಳು ಕಾರಣವಾಗುತ್ತವೆ ಎಂಬುದನ್ನು ಕಾದಂಬರಿ ನಿಲುವು ಸ್ಪಷ್ಟಪಡಿಸುತ್ತದೆ. ಯಶವಂತರಾಯರ ಬದುಕಿನಲ್ಲಿ ಕಾಣಿಸಿಕೊಳ್ಳುವ ಬಹುತೇಕ ಸಂಬಂಧಗಳನ್ನು ಇಲ್ಲಿ ಸ್ತ್ರೀಯರೇ ಸಂಕೇತಿಸುವುದು ಗಮನಿಸಬಹುದಾದ ಅಂಶವಾಗಿದೆ. ಮನುಷ್ಯ ಸಂಬಂಧಗಳ ವೈವಿಧ್ಯತೆಯನ್ನು ಪ್ರತಿನಿಧಿಸುವಂತಿರುವ ಈ ಸ್ತ್ರೀಯರು, ಯಶವಂತರಾಯರ ಬದುಕಿನ ಸೋಲುಗೆಲವುಗಳಿಗೆ, ಸುಖದುಃಖಗಳಿಗೆ ಕಾರಣವಾಗುವ ರೀತಿಯನ್ನು ಕಾದಂಬರಿ ವಿವರಿಸುತ್ತದೆ. ಬಹುಮಟ್ಟಿಗೆ ಸಾಮಾಜಿಕ ಸಂಬಂಧಗಳಾಗಿ ಕೊನೆಗೊಳ್ಳುವ ಸ್ತ್ರೀ-ಪುರುಷ ಸಂಬಂಧಗಳಲ್ಲಿ, ಸ್ತ್ರೀಯನ್ನು ಪುರುಷ ದೃಷ್ಟಿಕೋನದಿಂದ ವಿವರಿಸಿಕೊಳ್ಳಲಾಗಿದೆ. ಸಾಮಾಜಿಕ ವ್ಯಕ್ತಿತ್ವವಾಗಿ ಕಾಣಿಸಿಕೊಳ್ಳುವ ಈ ಸ್ತ್ರೀಯರ ಗುಣಶೀಲ, ವರ್ತನೆ ಮತ್ತು ಸ್ವಭಾವವನ್ನು ಪುರುಷಧಾರಿತ ನಿಲುವಿನಿಂದ ಗ್ರಹಿಸಿಕೊಳ್ಳಲಾಗಿದೆ.

ಕಥಾನಿರೂಪಕ ಕಟ್ಟಿಕೊಡುವ ಯಶವಂತರಾಯರ ಜೀವನ ಚರಿತ್ರೆಯಲ್ಲಿ ನಿರೂಪಕ ಮತ್ತು ಕತಾನಾಯಕ ತಮ್ಮ ವೈಯಕ್ತಿಕ ನಿಲುವಿನ ಪ್ರೇರಿತ ಭಾವದಿಂದ ಸ್ತ್ರೀ ಸ್ವಭಾವವನ್ನು ವಿವೇಚಿಸಿ ನಿರ್ಧರಿಸಿದ ಕಾರಣವಾಗಿ ಸ್ತ್ರೀನಿರ್ವಚನವೇನಿದ್ದರೂ ಒಮ್ಮುಖ ಅಭಿಪ್ರಾಯವಾಗಿ ಇಲ್ಲಿ ಪ್ರಕಟವಾಗಿದೆ.

**ಕಾದಂಬರಿಯಲ್ಲಿರುವ ಮುಖ್ಯ ಸ್ತ್ರೀ ಪಾತ್ರಗಳು:**

ಪಾರೋತಿ, ಮುಕಾಂಬು, ಕಮಲೆ, ಸರಸಿ, ಜಲಜಾಕ್ಷಿ, ಇಂದುಮತಿ ಮತ್ತು ಮೇರಿ. ಪುರುಷನೊಬ್ಬನ ಬದುಕಿನಲ್ಲಿ ಪ್ರಧಾನ ಭೂಮಿಕೆಯಲ್ಲಿ ಕಾಣಿಸಿಕೊಳ್ಳುವ ತಾಯಿ, ಅಕ್ಕ, ಹೆಂಡತಿ, ಮಗಳು, ಸ್ನೇಹಿತೆ ಮತ್ತು ವೇಶ್ಯೆ ಸಂಬಂಧದಲ್ಲಿ ಈ ಸ್ತ್ರೀ ಪಾತ್ರಗಳು ರೂಪುಗೊಂಡಿವೆ. ಪಾರೋತಿ, ಯಶವಂತರಾಯರ ಜೀವನದಲ್ಲಿ (ತಾಯಿಸ್ಥಾನದಲ್ಲಿ) ಪೋಷಕಸ್ಥಾನದಲ್ಲಿರುವಾಕೆ. ಯಶವಂತರಾಯರು, ಪಾರೋತಿಯನ್ನು ಅತ್ಯಂತ ಗೌರವಭಾವದಲ್ಲಿ ಕಾಣುತ್ತಾರೆ. ಪಾರೋತಿಯ ಋಣಸಂದಾಯದಲ್ಲಿ ಅವರು ವಹಿಸುವ ಕಾಳಜಿ, ಅವರ ಆದೇಶಾನು–ವರ್ತಿಯಾಗಿ ನಿರೂಪಕ

ಪಾರೋತಿಯ ಸಲುವಾಗಿ ನಿಭಾಯಿಸುವ ಕರ್ತವ್ಯಗಳ ಹೊಣೆಗಾರಿಕೆ ಈ ಮಾತನ್ನು ಹೆಚ್ಚು ಸ್ಪಷ್ಟಪಡಿಸುತ್ತವೆ. ಪಾರೋತಿ ರಕ್ತಸಂಬಂಧಿಯಲ್ಲ. ಆದರೆ ಮಗುವಾಗಿದ್ದಂದಿನಿಂದ ಯಶವಂತರಾಯರ ಪೋಷಣೆಭಾರವನ್ನು ನಿಭಾಯಿಸಿದಾಕೆ. ಹೆತ್ತಮಗುವಿನಷ್ಟೇ ಪ್ರೀತಿಯಿಂದ ಸಲಹಿದವಳು. "ಹಡೆದು ಗೊತ್ತಿಲ್ಲದ ಹೆಣ್ಣಾದರೂ, ಹಡೆಯುವುದಕ್ಕಾಗಿ ಹುಟ್ಟಿದ ಹೆಣ್ಣು. ತನ್ನ ಕೂಸಿಲ್ಲದಾಗ ತಮ್ಮ ಬಳಗದ ಇನ್ನೊಂದು ಕೂಸನ್ನು (ಯಶವಂತರಾಯನ್ನು) ತನ್ನದೇ ಎಂಬ ಮೋಹದಿಂದ ತಾನೇ ಸಾಕಿ ಬೆಳೆಯಿಸುವಷ್ಟು ಮಮತೆ ಇದ್ದವಳು; ಅನುಕಂಪ - ಇದ್ದವಳು" (ಅಳಿದಮೇಲೆ: ೮೪:೧೮೯೩). ಯಶವಂತರಾಯರನ್ನು ಪಾರೋತಿಯೊಡನೆ ಸಲಹಿಸಿದ ಮತ್ತೊಬ್ಬ ವ್ಯಕ್ತಿ ಮುಕಾಂಬು, ಅವರ ಅಕ್ಕ.

ಪಾರೋತಿ, ಮುಕಾಂಬು ಬಾಲವಿಧವೆಯರು; ಸ್ವಂತ ಮಕ್ಕಳ ಸುಖದಿಂದ ವಂಚಿತೆಯಾದವರು. ತಾಯಿಯನ್ನು ಕಳೆದುಕೊಂಡ, ಬಂಧುವರ್ಗ ದೂರವಾಗಿದ್ದ ಸ್ಥಿತಿಯಲ್ಲಿ ಮಗುವಿನ ಸಲುವಾಗಿ ಕದ್ದುಮುಚ್ಚಿ ಹಾಲು ತಂದು ಕೊಟ್ಟು ಸಲಹಿದ, ತನ್ನ ಸ್ವಂತ ಸುಖ, ನೆಮ್ಮದಿಗಳನ್ನು ಲಕ್ಷಿಸದೆ ಮಗುವಿನ ಕರ್ತವ್ಯದಲ್ಲಿ ನಿರತೆಯರಾದ ಈ ಹೆಂಗಸರದು ಮಾತೃಸ್ವರೂಪ ವ್ಯಕ್ತಿತ್ವ; ತ್ಯಾಗಮಯ ಬದುಕು.

ಯಶವಂತರಾಯರು ತಮ್ಮ ಬದುಕಿನ ಕೊನೆದಿನಗಳಲ್ಲಿ ಪಾರೋತಿಯ ಉಪಕಾರವನ್ನು ಕೃತಜ್ಞತೆಯಿಂದ ನೆನೆಯವುದು, ಅವಳ ಋಣಸಂದಾಯದಲ್ಲಿ (ಉತ್ಸುಕನಾಗಿರುವುದು) ಆಸಕ್ತಿ ವಹಿಸುವುದು ಇವುಗಳೆಲ್ಲ ತಾಯ್ತನಕ್ಕೆ ಸಲ್ಲುವ ಗೌರವ, ಆದರದ ಭಾವನೆಗಳೇ ಆಗಿವೆ.

ಕಮಲೆ, ಸರಸಿ ಮತ್ತು ಮೇರಿಯರ ಪ್ರೇಮ ಸಂಬಂಧಗಳಲ್ಲಿ ಯಶವಂತರಾಯರು ಹಣದ ಕೊರತೆ ಇಲ್ಲದೆ ಹೋದರೂ, ಆತ್ಮಿಯತೆಯ ಕೊರತೆಯನ್ನು ನೀಗಲು, ಒಂಟಿತನವನ್ನು ನೀಗಲು ಪ್ರಯತ್ನಿಸಿದ್ದಾರೆ. ಆದರೆ ಈ ದಿಕ್ಕಿನಲ್ಲಿ ತಮ್ಮ ಪ್ರಯತ್ನ ಸಫಲವಾಗದಿರುವುದಕ್ಕೆ ತಾವು ಪ್ರೇಮಿಸಿದವರ ಸ್ವಾರ್ಥ ಸ್ವಭಾವವೇ ಕಾರಣವೆಂಬ ಭಾವನೆ ಅವರದು. ದಾಂಪತ್ಯ ಸಂಬಂಧದಲ್ಲಿ ಗಂಡ ಹೆಂಡತಿ ಮೈತ್ರಿಯನ್ನು ಮಾಮರ - ಮಲ್ಲಿಗೆ ಉಪಮೆಯೊಂದಿಗೆ ವಿವರಿಸುವ ಅವರಿಗೆ ತನ್ನ ಮತ್ತು ಕಮಲೆಯ ಸಂಬಂಧದಲ್ಲಿ ಈ ಮೈತ್ರಿ ಕಾಣಿಸಿಕೊಳ್ಳದಿರಲು, ಕಮಲೆಯ ಹಣದ ಮೋಹ, ಸ್ವಾರ್ಥ ಸ್ವಭಾವ ಮತ್ತು ದುರಭಿಮಾನ ಕಾರಣವೆನಿಸಿದೆ. ಕಮಲೆ, ಯಶವಂತರಾಯರ ಪತ್ನಿಯಾಗಿರುವಂತೆ, ಅವರ ಮಕ್ಕಳ ತಾಯಿಯೂ ಆಗಿರುವಾಕೆ. ಅವಳಲ್ಲಿರುವ ವ್ಯಾವಾಹರಿಕತೆ ಮತ್ತು ಅಧಿಕಾರೀ ಮನೋಭಾವ ಮಕ್ಕಳ ಭವಿಷ್ಯದ ಬದುಕಿನಲ್ಲಿ ಸ್ಥಿರತೆ ಕಾಣವಂತಾಗಲು ಮಹತ್ವದ ಮಾತ್ರವಹಿಸಿದೆ ಎಂಬ ವಿವರಣೆಗಳು ಕಾದಂಬರಿಯಲ್ಲಿಯೇ ಇದೆ. ಕಮಲೆ ಗಂಡನಿಂದ ದೂರಸರಿದು ದಾಂಪತ್ಯ ಬಿರುಕು ಉಂಟಾಗಲು ಸರಸಿಯ ಪ್ರವೇಶವೇ ಕಾರಣವಾಗಿದೆ. ವೈಶ್ಯಾಕುಲದವಳಾದ ಸರಸಿಯಲ್ಲೂ ಯಶವಂತರಾಯರು ನೆಮ್ಮದಿ ಹುಡುಕುವ ಪ್ರಯತ್ನ ಮಾಡಿದ್ದಾರೆ. ವೈಶ್ಯೆಯಾದರೂ ಸರಸಿಯದು ಗರತಿಯ ರೀತಿಯ ಬದುಕು. ಅವಳಲ್ಲಿ ಹಣದ ಮೋಹವಾಗಲೀ, ಸ್ವಾರ್ಥವಾಗಲಿ ಇಲ್ಲ. ಸರಸಿಯಾಗಲೀ, ಅವಳ ಮಗಳು ಇಂದುಮತಿಯಾಗಲೀ ಯಾವುದೇ ವಿಧಾನದಲ್ಲಿ ಅನ್ಯಾಯಕ್ಕೆ ತೊಡಗಿಕೊಳ್ಳದೆ, ಯಶವಂತರಾಯರನ್ನು ಗೌರವಾಭಿಮಾನಗಳ ಮೂಲಕ ನೋಡಿಕೊಂಡವರು. ಮೇರಿಯ ಹಣದ ಲಾಲಸೆ, ಕನಿಕರರಹಿತ ಸ್ವಭಾವದಿಂದ ಅವಳನ್ನು ಬದನಿಕೆಗೆ ಯಶವಂತರಾಯರು ಹೋಲಿಸುತ್ತಾರೆ. ಮೇರಿ ತನ್ನನ್ನು ಶೋಷಣೆಗೆ ಗುರಿಪಡಿಸುವ ವ್ಯಕ್ತಿ ಎನ್ನುವುದನ್ನು ಅವರು 'ಹಸು ಮತ್ತು ಕಾಡುಮೈನಾ'ದ ಉಪಮೆ ಮೂಲಕ ವಿವರಿಸುತ್ತಾರೆ. ಕಾಮನೆಯ ಗುಣಶೀಲಗಳೇ ಪ್ರಧಾನವಾಗಿರುವ ಅವಳ ಸ್ವಭಾವದಿಂದ ತಾನು ಅನ್ಯಾಯಕ್ಕೆ ಒಳಗಾಗುತ್ತೇನೆ ಎಂಬ ಭಾವ ಅವರನ್ನು ಸತತವಾಗಿ ಕಾಡುತ್ತದೆ. ತನ್ನಾಶ್ರಯದಲ್ಲಿರಬೇಕಾದ ಈ ಸ್ತ್ರೀಯರಲ್ಲಿ

ಯಶವಂತರಾಯರು ತ್ಯಾಗ ಮತ್ತು ಸ್ವಾರ್ಥರಹಿತ ಸ್ವಭಾವವರ್ತನೆಗಳನ್ನು ನಿರೀಕ್ಷಿಸುತ್ತಾರೆ. ಅವರ ನಿರೀಕ್ಷೆ ವಿಫಲವಾದಾಗ, ಈ ಸ್ತ್ರೀಯರು ತನ್ನ ಮುಗ್ಧಸ್ವಭಾವವನ್ನು ಸ್ವಾರ್ಥದ ಉದ್ದೇಶಕ್ಕಾಗಿ ಬಳಸಿಕೊಂಡರೆಂಬ ಕೀಳರಿಮೆಗೆ ಗುರಿಯಾಗುತ್ತಾರೆ. ಯಶವಂತರಾಯರಿಗೆ ತಮ್ಮ ದೌರ್ಬಲ್ಯದ ಅರಿವಿದ್ದೂ ಕೂಡಾ ಅವರು ಹೆಣ್ಣನ್ನು ಅರ್ಥಮಾಡಿಕೊಳ್ಳಲು ಸೋಲುತ್ತಾರೆ. ತನ್ನನ್ನು ಆಶ್ರಯದಾತರೂಪದಲ್ಲಿ (ಉದಾ: ಮರದ ಉಪಮೆಯೊಂದಿಗೆ) ಕಾಣವ ಅವರ ದೃಷ್ಟಿಕೋನದಲ್ಲಿ, ಅವಲಂಬನಾ ಸ್ವಭಾವದ ನಿರೀಕ್ಷೆಯನ್ನು ಅವರು ಬೇರೆಯವರಲ್ಲಿ, ಮುಖ್ಯವಾಗಿ ಸ್ತ್ರೀಯರಲ್ಲಿ ಕಾಣವುದರಿಂದ, ಸ್ವತಃ ಮರುಕಕ್ಕೆ ಪಾತ್ರರಾಗುತ್ತಾರೆ. ಕಮಲೆ, ಸರಸಿ ಮತ್ತು ಮೇರಿಯರು ಬದುಕನ್ನು ಸ್ವತಂತ್ರವಾಗಿ ನಡೆಸುವ ಧೈರ್ಯ ಉಳ್ಳವರು. ಆದುದರಿಂದ ಯಶವಂರಾಯರ ಪಲಾಯನವಾಗಲಿ, ಅವರ ಆರೋಪಗಳಾಗಲಿ ಈ ಹೆಂಗಸರನ್ನು ಕಾಡುವ ಸಂದರ್ಭಗಳು ಕಡಿಮೆ. ಯಶವಂತರಾಯರು ನೋಡುವ/ನೋಡಿದ ದೃಷ್ಟಿಕೋನದಿಂದ ಭಿನ್ನವಾಗಿ ನೋಡಿದಾಗ ಈ ಎಲ್ಲಾ ಹೆಣ್ಣುಗಳಲ್ಲಿರುವ ವೈಯಕ್ತಿಕ ಸ್ವಾತಂತ್ರ್ಯದ ಬಯಕೆ ಮತ್ತು ತಮ್ಮ ಪಾಡಿಗೆ, ತಮಗೆ ಹಿತವಾಗಿ ಕಂಡ ರೀತಿಯಲ್ಲಿ ಬದುಕುವ ಧೈರ್ಯ ಮತ್ತು ಛಲ ಎರಡೂ ಸ್ಪಷ್ಟವಾಗಿ ಗೋಚರವಾಗುತ್ತದೆ. ಪುರುಷ ಸಂಬಂಧದಲ್ಲಿ ನೋಡಿದಾಗ ಇವರಲ್ಲಿ ಕಾಣಿಸುವ ಸ್ವಾರ್ಥ, ವಂಚನೆ ಮತ್ತು ಇತರ ಅನಪೇಕ್ಷ ಭಾವಗಳು, ಸ್ವತಂತ್ರ ವ್ಯಕ್ತಿತ್ವ ಕಲ್ಪನೆಯಲ್ಲಿ ನೋಡಿದಾಗ ಕಾಣಿಸದೆ ಹೋಗುತ್ತವೆ. ಈ ನೆಲೆಯಲ್ಲಿ ವಯಸ್ಸಾದ ಪಾರೋತಿ ಕೂಡಾ ತನ್ನ ಇಳಿವಯಸ್ಸಿನಲ್ಲಿಯೂ ಸ್ವತಂತ್ರವಾಗಿ ಬದುಕುವ ಹಂಬಲ/ಇಚ್ಛೆಯನ್ನು ವ್ಯಕ್ತಪಡಿಸಿದವಳು. ಯಶವಂತರಾಯರು ಕಳುಹಿಸುತ್ತಿದ್ದ ಧನಸಹಾಯ ನಡುವೆಯೇ ಬಹುಭಾಗ ಸೋರಿ ಹೋಗಿ, ಅಲ್ಪಹಣವಷ್ಟೇ ಕೈ ಸೇರುವಂತಾದರೂ, ಅವಳೆಂದೂ ಅದರ ಅಗತ್ಯವನ್ನು ಕಾಣಿಸಿದವಳಲ್ಲ. ದುಡಿದು ತಿನ್ನುವ, ಒಂಟಿಯಾಗಿ ಬದುಕನ್ನು ಎದುರಿಸುವ ಈ ಎಲ್ಲಾ ಸ್ತ್ರೀಯರು ಆತ್ಮಗೌರವವನ್ನು ಉಳಿಸಿಕೊಂಡವರು. ಸರಸಿ, ಕಮಲೆಯರ ಸ್ವಭಾವವನ್ನು ಪುರುಷ ಪಾತ್ರಗಳ ಮೂಲಕ ಅನಾವರಣಗೊಳಿಸಿರುವುದು ಮತ್ತು ಅವರ ಸೂಕ್ಷ್ಮಭಾವನೆಗಳಿಗೆ ಕತೆಯಲ್ಲಿ ಅವಕಾಶವಿಲ್ಲದೆ ಹೋಗಿರುವುದು, ಈ ಸ್ತ್ರೀಯರ ನಿರ್ವಚನವನ್ನು ಭಾಗಶಃ ತಿಳಿಯುವ ಅವಕಾಶವನ್ನು ಕಲ್ಪಿಸಲಾಗಿದೆ ಎಂದು ತಿಳಿಯಬಹುದಾಗಿದೆ.

**'ಮೈಮನಗಳ ಸುಳಿಯಲ್ಲಿ' ಕಾದಂಬರಿಯಲ್ಲಿ ಸ್ತ್ರೀ :-** ವೇಶ್ಯೆ ಬದುಕಿನ ಸಾಮಾಜಿಕ ಆಯಾಮಗಳನ್ನು ತಿಳಿಸುವ ಉದ್ದೇಶದ 'ಮೈಮನಗಳ ಸುಳಿಯಲ್ಲಿ' ಕಾದಂಬರಿಯ ಸ್ತ್ರೀಪಾತ್ರಗಳು ಲೈಂಗಿಕ ಜೀವನದ ಬೇರೆ ಬೇರೆ ಮುಖಗಳನ್ನು ಪ್ರತಿನಿಧಿಸುತ್ತವೆ. ಕಾದಂಬರಿಯ ನಾಲ್ಕು ತಲೆಮಾರುಗಳಿಗೆ ಸೇರುವ ಭವಾನಿ, ಮಂಜುಳೆ, ಶಾರಿ ಮತ್ತು ಚಂದ್ರಿಯರು, ಈ ಮುಖಗಳ ಪ್ರತಿನಿಧಿಗಳಾಗಿ ಕಾಣಿಸಿಕೊಳ್ಳುತ್ತಾರೆ. ಸಾಮಾಜಿಕ ಪದ್ಧತಿಯೊಂದಲ್ಲಿರುವ ಜೀವನ ವಿಧಾನದಲ್ಲಿ 'ವೇಶ್ಯೆ' ಎಂದು ಕರೆಯಿಸಿಕೊಳ್ಳುವ ಹೆಣ್ಣಿನ ಬದುಕು ಇದೆ. ವೇಶ್ಯೆಯನ್ನು ಸಾಮಾಜಿಕ ನೆಲೆಯಿಂದ ನಿರ್ವಚಿಸಿಕೊಳ್ಳಬಹುದೇ ಹೊರತು, ವೈಯಕ್ತಿಕ ನೆಲೆಯಿಂದ ಅಲ್ಲ. ವೇಶ್ಯೆಯ ನಿರ್ವಚನದಲ್ಲಿ ಅವಳು ಬದುಕುವ ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಸರ, ಅಲ್ಲಿಯ ನಿಯಮಗಳು ಮತ್ತು ಸಾಮಾಜಿಕ ಸಂಬಂಧಗಳು ಮುಖ್ಯ ಪಾತ್ರವನ್ನು ನಿರ್ವಹಿಸುತ್ತದೆ. ಆದರೆ ವೇಶ್ಯೆ ವ್ಯಕ್ತಿರೂಪದಲ್ಲಿ ಹೆಣ್ಣು. ವೇಶ್ಯೆಯಾಗಿರುವ ಹೆಣ್ಣನ್ನು ಸಾಮಾಜಿಕ ನೆಲೆ ಹಾಗೂ ವ್ಯಕ್ತಿಗತನೆಲೆ ಎರಡರ ಮೂಲಕ ವಿವರಿಸುವ ಪ್ರಯತ್ನವನ್ನು ಕಾರಂತರು ನಡೆಸಿರುವುದು ಇಲ್ಲಿ ಸ್ಪಷ್ಟವಾಗಿದೆ. ವೈಶ್ಯಾವೃತ್ತಿಗೆ ಕಾರಣವಾಗುವ ಅನಿವಾರ್ಯತೆಯನ್ನು ವಿವರಿಸುತ್ತ ಕಾರಂತರು ಹೇಳುತ್ತಾರೆ:

'ಅವರದ್ದು ತೆರೆದ ಜೀವನ; ಬಹಿರಂಗ ಜೀವನ. ಅಂಥ ಬದುಕಿನಲ್ಲಿ ಸುಪ್ತ ಆಸೆಗಳು ಬಯಕೆ ಬಿನ್ನಾಣಗಳು, ವಿರಕ್ತಿ, ಅನುರಕ್ತಿಗಳು ಇದ್ದಿರ ಬಹುದಾದರೂ, ಅದನ್ನು ತಿಳಿದವರೆಷ್ಟು ಮಂದಿ? ತಿಳಿಯ ಬಲ್ಲವರೆಷ್ಟು ಮಂದಿ?' (ಮೈಮನಗಳ ಸುಳಿಯಲ್ಲಿ:೧೮:೧೯೯೨). ವೇಶ್ಯೆಯ ಅಂತರಂಗ ಭಾವನೆಗಳಿಗೂ ಅವಕಾಶ ನೀಡುವಂತೆ ಇಲ್ಲಿ ಕಥಾನಾಯಕಿ ಮಂಜುಳೆಯ ಪಾತ್ರ ಚಿತ್ರಣವಿದೆ. ಮಂಜುಳೆಯ ಪಾತ್ರಚಿತ್ರಣದಲ್ಲಿ ಅವಳ ಭಾವನೆಗಳಿಗೆ, ಯೋಚನಾ ಕ್ರಮಗಳಿಗೆ, ಗ್ರಹಿಕೆಗಳಿಗೆ, ವೈಯಕ್ತಿಕ ಸಾಧನೆಗಳಿಗೆ ಮತ್ತು ಸಮಾಜಕ್ಕೆ, ಅದರ ರೀತಿ ನೀತಿಗೆ ಅವಳು ಪ್ರತಿಕ್ರಿಯೆ ನೀಡಿದ ವಿಧಾನಗಳಿಗೆ ಪ್ರಾಮುಖ್ಯತೆ ನೀಡಿದ ಕಾರಣವಾಗಿ, ಮಂಜುಳೆ ತಾನು ಬದುಕುವ ಪರಿಸರ ಮತ್ತು ವೈಯಕ್ತಿಕ ವಿವರಗಳ ಮೂಲಕ, ಸ್ವನಿರ್ವಚನ ಮಾಡಿಕೊಳ್ಳುವ ಅವಕಾಶವನ್ನು ಪಡೆದಿದ್ದಾಳೆ. ವೇಶ್ಯೆ ಸ್ತ್ರೀ ನಿರ್ವಚನದಲ್ಲಿ ತನ್ನ ವೃತ್ತಿ ಮತ್ತು ವ್ಯಕ್ತಿಗತ ನೆಲೆ ಎರಡರಲ್ಲಿಯೂ ಇಲ್ಲಿ ಪಾಲುಗೊಂಡಿದ್ದಾಳೆ.

ವೇಶ್ಯೆಯನ್ನು ನಿರ್ವಚಿಸಿರುವುದು ಪರಂಪರೆ. ಪ್ರಾಚಿನ ಕಾಲದಿಂದ ಸಾಮಾಜಿಕ ಪದ್ಧತಿಯ ರೂಪದಲ್ಲಿ ಸಂಪ್ರದಾಯವನ್ನು ತನ್ನಲ್ಲಿ ಅಂತರ್ಗತಗೊಳಿಸಿರುವ ವೇಶ್ಯೆ ಪದ್ಧತಿಯಲ್ಲಿ ಬದುಕುವ ರೀತಿ ಪೂರ್ವ ನಿರ್ಧಾರಿತವಾಗಿರುತ್ತದೆ. ಸಾಮಾಜಿಕ ಸಮಸ್ಯೆಯ ರೂಪದಲ್ಲಿ ಆಧುನಿಕ ಕಾಲ ಈ ಪದ್ಧತಿಯನ್ನು ಪರಿಗಣಿಸುವವರೆಗೆ ಈ ವೃತ್ತಿಗೆ ಸ್ವೀಕೃತಿ, ಅನುಮೋದನೆ ಮತ್ತು ಬೆಂಬಲಗಳು ಸಲ್ಲುತ್ತಿದ್ದವು. ಕಾದಂಬರಿ ಕಥಾನಕ ಶತಮಾನಗಳಷ್ಟು ಹಿಂದಿನ ಕಾಲವನ್ನು ವಿವರಿಸುವುದರಿಂದ, 'ಇಂದು ಮಂಜುಳೆ ಕುರಿತು ಅನೇಕ ಸ್ಥಳಪುರಾಣಗಳೋ, ದಂತ ಕತೆಗಳೋ ಹುಟ್ಟಿಕೊಂಡಿವೆ. ಈ ಶತಮಾನದ ಮೊದಲ ದಶಕದೊಳಗಾಗಿ ಆಕೆ ತೀರಿಕೊಂಡಳು'[1] (ಅದೇ, ಪುಟ: ೧೧-೧೨), ಎನ್ನುವುದರ ಮೂಲಕ ಮಂಜುಳೆ ಅನುಸರಿಸಿದ ಕುಲವೃತ್ತಿಗೆ ಇಲ್ಲಿ ಸ್ವೀಕೃತಿ ನೀಡಲಾಗಿದೆ. ಮಂಜುಳೆಯಾಗಲಿ, ಶಾರಿಯಾಗಲಿ, ತಮ್ಮ ವೃತ್ತಿ ಕುರಿತು ಕೀಳರಿಮೆಗೆ ಅವಕಾಶವನ್ನು ನೀಡುವ ಪ್ರಸಂಗವೂ ಒದಗಲಿಲ್ಲ: 'ಮನೆತನದ ಕುಲದ ಕಸುಬಿಗೆ ಅಸಹ್ಯಪಡಬೇಕಾದ ಒಂದು ಗಳಿಗೆಯೂ ಅವಳ ಜೀವನದಲ್ಲಿ ಬಂದಿರಲಿಲ್ಲ. ಅವಳು ನೆಲೆಸಿದ ಪೇಟೆ, ಸುತ್ತಣ ಊರುಕೇರಿಗಳು ಪರಂಪರೆಯಿಂದ ಆ ವೃತ್ತಿ ಹಳಿಸಿದ್ದಲ್ಲ - ಎಂದು ನಡೆದುಬಂದವು'[2] (ಅದೇ ಪುಟ: ೨೨) ಕಾದಂಬರಿ ಈ ವಿವರಗಳಿಂದ ವೇಶ್ಯೆ ಮತ್ತು ವೇಶ್ಯಾವೃತ್ತಿಯನ್ನು, ಅದರ ಅಸ್ತಿತ್ವವನ್ನು ಒಪ್ಪಿಕೊಳ್ಳುವ ವೇದಿಕೆಯನ್ನು ನಿರ್ಮಿಸಿದೆ. ವೇಶ್ಯಾ [illegible] ವೃತ್ತಿಧರ್ಮವು ಮುಖ್ಯವಾಗಿ ಆರ್ಥಿಕ ಸ್ವರೂಪವನ್ನು ಪಡೆದಿರುತ್ತದೆ. ವಿವಾಹ ಸಂಸ್ಥೆಯ ಅನುಪಸ್ಥಿತಿಯಲ್ಲಿ ನೆಲೆತಪ್ಪಿದ ಬದುಕಾಗಬಾರದೆಂಬ ಹಿನ್ನೆಲೆಯಲ್ಲಿ ಆರ್ಥಿಕ ವಿಚಾರಗಳು ಪ್ರಾಮುಖ್ಯತೆಯನ್ನು ಪಡೆಯುತ್ತವೆ. ಈ ಆರ್ಥಿಕ ವಿಚಾರಗಳು ಬೇರೊಂದು ರೀತಿಯಲ್ಲಿ ಪರಾಶ್ರಯವನ್ನು ಪ್ರೋತ್ಸಾಹಿಸುತ್ತವೆ. ವೇಶ್ಯಾ ಜೀವನದಲ್ಲಿರುವ ಲೈಂಗಿಕ ಬದುಕಿನ ಆಯ್ಕೆ ಸ್ವಾತಂತ್ರ್ಯಗಳು ಆರ್ಥಿಕ ಕಾರಣಗಳ ಮೂಲಕ ಸೀಮಿತತೆಯನ್ನು ಬದುಕಿಗೆ ಕಲ್ಪಿಸಿಕೊಡುತ್ತವೆ. ವೇಶ್ಯೆಯಾಗಿರುವ ಹೆಣ್ಣಿನ ಸ್ವಾತಂತ್ರ್ಯದ ಮಿತಿಯನ್ನು ಆರ್ಥಿಕ ಕಾರಣಗಳು ನಿರ್ಧರಿಸುವುದನ್ನು ಕಾದಂಬರಿ ಭವಾನಿ ಬದುಕಿದ ರೀತಿಯ ಮೂಲಕ ವಿವರಿಸುತ್ತದೆ. ಭವಾನಿ ತನ್ನ ಏಕವ್ಯಕ್ತಿ ನಿಷ್ಠೆಯ ಮೂಲಕ ಗರತಿತನದಿಂದ ಮೆರೆದವಳು. ಆದರೆ ಭವಾನಿ ತನ್ನ ಅನುಭವದ ಮೂಲಕ ಆರ್ಥಿಕ ಸುಭದ್ರತೆಯ ಕಾರಣವಾಗಿಯೇ ಈ ರೀತಿ ಏಕವ್ಯಕ್ತಿನಿಷ್ಠೆ ತೋರಿ ತನ್ನ ಬದುಕಿಗೆ ಚೌಕಟ್ಟನ್ನು ನಿರ್ಮಿಸಿಕೊಂಡ ವಿಚಾರ ಅವಳ ಮಗಳಾದ ಮಂಜುಳೆಗೆ ತಿಳಿದಿದೆ. ಸಂಗೀತ, ನೃತ್ಯದ ಪರಿಣಿತಿ, ರಸಿಕ ವೃಂದದ ಮೆಚ್ಚುಗೆ, ಎಲ್ಲವೂ ಇದ್ದರೂ ಭವಾನಿ, ತನ್ನ ಬದುಕು ಆಶ್ರಯದಾತನಿಗಾಗಿ ಎನ್ನುವ ಸಮರ್ಪಣಾ ಭಾವದಿಂದಿದ್ದ ಕಾರಣ ಅವಳ ಸ್ವಂತ ಬಯಕೆ, ಭಾವನೆಗಳಿಗೆ ಅಲ್ಲಿ ಅವಕಾಶವಿಲ್ಲ. ಗರತಿಯಂತೆ ಬಾಳಬೇಕಾದ ಅನಿವಾರ್ಯತೆ ಇಲ್ಲದಿದ್ದರೂ. ಭವಾನಿ

ತನ್ನ ವ್ಯಾವಹಾರಿಕ ಬುದ್ಧಿಯಿಂದಲೇ ಈ ರೀತಿ ಬದುಕನ್ನು ಆಯ್ಕೆ ಮಾಡಿಕೊಂಡಿದ್ದಳು. ಮತ್ತು ಈ ರೀತಿಯ ಬದುಕಿನಲ್ಲಿ ಮನಸ್ಸಿನ ಭಾವನೆಗಳಿಗೆ ಅವಕಾಶವಿಲ್ಲ ಎಂಬ ದೃಢನಂಬಿಕೆ ಅವಳಲ್ಲಿತ್ತು 'ನಾವಿರುವುದು ಮೈಮಾರಿ ಕೊಳ್ಳುವುದಕ್ಕೇ ಹೊರತು ಮನಸ್ಸನ್ನಲ್ಲ.'[೮].(ಅದೇ ಪುಟ: ೭೦) ಎನ್ನುವ ಭವಾನಿ ಕುಲವೃತ್ತಿಗನುಗುಣ ವಾಗಿಯೇ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಂಡವಳಾಗಿದ್ದಾಳೆ. ಭವಾನಿಯ ವ್ಯಕ್ತಿತ್ವ ವಿಕಾಸಕ್ಕೆ ಪೋಷಕನಲ್ಲಿ ಮತ್ತು ವೃತ್ತಿಯಲ್ಲಿ ಅವಳಿಟ್ಟ ನಿಷ್ಠೆ ಮತ್ತು ಈ ನಿಷ್ಠೆಗೆ ಅನುಗುಣವಾದ ರೀತಿಯಲ್ಲಿ ತನ್ನ ವ್ಯಕ್ತಿತ್ವಕ್ಕೆ ಚೌಕಟ್ಟನ್ನು ನಿರ್ಮಿಸಿರುವುದು ಕಾರಣವಾಗುತ್ತದೆ.

ಮಂಜುಳೆಯ ವ್ಯಕ್ತಿತ್ವಕ್ಕೆ ಬೇರೆ ಬೇರೆ ಆಯಾಮಗಳಿವೆ. ಸಾಮಾಜಿಕವಾಗಿ ಅವಳೊಬ್ಬ ಗಣಿಕಾ ಸ್ತ್ರೀ. ಆದುದರಿಂದ ಅವಳ ಜೀವನಕ್ರಮವನ್ನು ವ್ಯವಸ್ಥೆಯೇ ರೂಪಿಸಿದೆ. ತಾನು ಹುಟ್ಟಿಬೆಳೆದ ಪರಸರ, ತನ್ನ ತಾಯಿ ಬದುಕಿದ ರೀತಿ, ಅವಳ ಉಪದೇಶದ ಮಾತುಗಳು ಇವುಗಳ ಮೂಲಕ ತಾನಿರುವ ಸ್ಥಿತಿಯ ಅರಿವು ಮಂಜುಳೆಗೆ ಬಾಲ್ಯದಿಂದಲೂ ಇತ್ತು. ತನ್ನ ತಂದೆ ಎಂಬ ವ್ಯಕ್ತಿ ಪಾಳನಾಗಿ ಕರೆಯಿಸಿಕೊಳ್ಳುವುದು, ತನ್ನಮ್ಮನ ಸಂಗೀತ, ನೃತ್ಯಸೇವೆಗಳು, ನೆರೆಯ ಅಡಿಗಳ ಸಂಸಾರದಿಂದ ಭಿನ್ನರೀತಿಯಲ್ಲಿರುವ ತಮ್ಮ ಬದುಕು, ತಾವಿರುವ ಕುಲವೃತ್ತಿಯಲ್ಲಿ ಮನಸ್ಸಿನ ಭಾವನೆಗಳಿಗೆ ಅವಕಾಶ ನೀಡಲಾಗದು ಎನ್ನುವ ತಾಯಿಮಾತು, ತಾಯಿ ವಿವರಿಸಿದ ಗರತಿಲಕ್ಷಣ, ಗರತಿ ವೇಶ್ಯೆ ನಡುವಣ ವ್ಯತ್ಯಾಸಗಳು, ಇವುಗಳೆಲ್ಲ ತನ್ನ ಜೀವನವನ್ನು, ತಾನು ಬದುಕುವ ಸಾಮಾಜಿಕ, ಸಾಂಸ್ಕೃತಿಕ ಪರಿಸರವನ್ನು ಅರಿಯುವ ಪ್ರಾಥಮಿಕ ಪಾಠಗಳಾಗಿವೆ ಅವಳಿಗೆ. ಮಂಜುಳೆ ತಾನು ಬದುಕುವ ಪರಿಸರವನ್ನು ಸ್ವೀಕರಿಸಿಯೇ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುತ್ತಾಳೆ. ಆದುದರಿಂದ ಪರ್ಯಾಯ ಸಾಧ್ಯತೆಗಳತ್ತ ಮುಖಮಾಡಿಕೊಳ್ಳದೆ. ಇರುವ ಅವಕಾಶಗಳನ್ನೇ ಬಳಸಿಕೊಳ್ಳುವುದರ ಮೂಲಕ ಮಂಜುಳೆ ತನ್ನ ಸಾಧನೆಯನ್ನು ದಾಖಲಿಸುವುದು ಅವಳಲ್ಲಿರುವ ಅಂತಃ ಸತ್ವವನ್ನು ತೋರಿಸುತ್ತದೆ. ಈ ಅಂತಃ ಸತ್ವವನ್ನು ಪಡೆಯಲು ಅವಳು ತನ್ನ ಸ್ವಂತಿಕೆಯನ್ನು ಪಡೆಯಲು, ನಡೆಸುವ ಪ್ರಯತ್ನಗಳು ಮುಖ್ಯವೆನಿಸುತ್ತವೆ. ತಂದೆ, ತಾಯಿ ಸತ್ತ ಬಳಿಕ, ಬಂಧು ಜನರ ಸಹಾಯ ಪಡೆಯದೆ, ಮಂಜುಳೆ ಸ್ವಪ್ರಯತ್ನದ ಮೂಲಕ ತನ್ನ ಬದುಕನ್ನು ರೂಪಿಸಿಕೊಳ್ಳುವ ನಿರ್ಧಾರ ಕೈಗೊಳ್ಳುತ್ತಾಳೆ. ಈ ನಿರ್ಧಾರದಲ್ಲಿ ಯಾವುದೇ ರೀತಿಯ ಹೊಂದಾಣಿಕೆ ಅಥವಾ ರಾಜಿಮಾಡಿಕೊಳ್ಳದೆ, ತನ್ನ ಧ್ಯೇಯ ಮತ್ತು ಆದರ್ಶಗಳನ್ನು ಬದುಕಿನಲ್ಲಿ ಅಳವಡಿಸಿಕೊಳ್ಳವುದು ಅವಳಿಗೆ ಸಾಧ್ಯವಾಗುತ್ತದೆ.

ಮಂಜುಳೆ ವಾರಾಂಗನೆಯರ ಕುಲದವಳು. ವಂಶಪಾರಂಪರಿಕವಾಗಿ ಬಂದ ಕುಲವೃತ್ತಿ ಅನುಸರಿಸಬೇಕಾದುದು ಅವಳ ಧರ್ಮ. ಅವಳು ಬದುಕುವ ಪರಿಸರದಲ್ಲಿ ವೇಶ್ಯೆಯಾಗುವುದನ್ನು ಬಿಟ್ಟರೆ, ಅವಳ ಮುಂದೆ ಬೇರೆ ಆಯ್ಕೆ ಇರಲಿಲ್ಲ. ಪಾಳನ ಮಗಳ ಮದುವೆ ಸಂದರ್ಭದಲ್ಲಿ ತಾಯಿಯೊಡನೆ ನೃತ್ಯದಲ್ಲಿ ಅವಳು ಪಾಲುಗೊಳ್ಳಬೇಕಾದ ಪ್ರಸಂಗ ಇದೇ ವಿಚಾರವನ್ನು ಸೂಚಿಸುತ್ತದೆ. ಪಾಳನ ಮಗಳಾಗಿಯೂ, ಭವಾನಿಯಲ್ಲಿ ಹುಟ್ಟಿದುದರಿಂದ, ಮದುವೆ ಅವಳಿಗೆ ಸಮ್ಮತವಿಲ್ಲ. ಆದರೆ ತನ್ನ ಪರಿಸರದ ಮೂಲಕವೇ ಪಡೆದ ವಿದ್ಯೆ ಬುದ್ಧಿಗಳ ಸಹಾಯದಿಂದ ಸನ್ನಡತೆಯನ್ನು, ಸ್ನೇಹಭಾವವನ್ನು, ಸಂಸ್ಕಾರವನ್ನು ಪಡೆಯುವುದಕ್ಕೆ ಅವಳಿಗೆ ಅಡ್ಡಿ ಇರಲಿಲ್ಲ. ತಾಯಿಯ ಸನ್ನಡತೆ, ತನ್ನ ಕಲಿಕೆಯ ಹಂಬಲ, ಐಗಳ ಮನೆ ಅಕ್ಷರಾಭ್ಯಾಸ, ಆಡಿಗಳ ಮನೆ ಕಾವ್ಯವಾಚನ, ರಾಧಾಕೃಷ್ಣಬುವಾರಂತಹ ತಂದೆ ಸಮಾನ ವ್ಯಕ್ತಿಯ ಮೂಲಕ ಪಡೆದ ಸಂಗೀತ ಪಾಠಗಳು ಇವುಗಳನ್ನೆಲ್ಲ ತನ್ನಲ್ಲಿ ಅಂತರ್ಗತಗೊಳಿಸಿದ ಕಾರಣ

ಮಂಜುಳೆ ತನ್ನ ನಡತೆ ಮತ್ತು ಸ್ವಭಾವದಲ್ಲಿ ಸುಸಂಸ್ಕೃತಳೆನಿಸಿಕೊಳ್ಳುವುದು ಸಾಧ್ಯವಾಗುತ್ತದೆ. ಸಂಗೀತ ಕಲೆಯನ್ನು ಭಕ್ತಿಸಾಧನೆಯಾಗಿ, ಜೀವನವನ್ನು ಅರ್ಥಮಾಡಿಕೊಳ್ಳುವ ಕಲೆಯಾಗಿ ಮಾತ್ರ ಕಂಡು, ಮನರಂಜನಾ ಅಂಶಗಳನ್ನು ದೂರವಿಟ್ಟ ಕಾರಣ ಕಲಾವಂತೆಯಾದ ಮಂಜುಳ ಕಲಾವಿದೆಯಾಗಿಯೂ ಮೆಚ್ಚುಗೆ ಪಡೆಯುತ್ತಾಳೆ. ಸಂಗೀತವನ್ನು ದೈವಭಕ್ತಿಯಾಗಿ ಪರಿವರ್ತಿಸಿ ಹಬ್ಬದ ಆಚರಣೆಗಳಿಂದ ಜನರನ್ನು ಸೆಳೆದ ಕಾರಣವಾಗಿ ಅವಳಿಗೆ ಗೌರವದ ಸ್ಥಾನಗಳು ಲಭಿಸಿದವು. ಮಂಜುಳೆ ವೃತ್ತಿಧರ್ಮವನ್ನು ಎಂದೂ ಮರೆಯಲಿಲ್ಲ, ವೃತ್ತಿಯನ್ನು ತನ್ನ ವ್ಯಕ್ತಿತ್ವದ ಒಂದು ಅಂಗವಾಗಿಯೇ ಅವಳು ಪರಿಗಣಿಸಿದ ಕಾರಣ ಆರ್ಥಿಕ ವಿಚಾರಗಳು ಪ್ರಾಮುಖ್ಯತೆ ಪಡೆಯದೆ ಹಿಂದೆ ಉಳಿಯಬೇಕಾಯತು. ವೃತ್ತಿ ಗೌರವವನ್ನು ಕಾಪಾಡಿಕೊಳ್ಳುವ ಎಚ್ಚರಿಕೆ ಅವಳಲ್ಲಿ ಸದಾ ಇದ್ದ ಕಾರಣ, ಹೊಟ್ಟೆಪಾಡಿಗಷ್ಟೇ ಕುಲವೃತ್ತಿಯನ್ನು ಅವಲಂಬಿಸುವುದು/ಆಶ್ರಯಿಸುವುದು ಕಳಪೆ ಎಂಬ ಭಾವ ಅವಳದ್ದಾಗಿತ್ತು. ಆಮಿಷಗಳು ಅವಳನ್ನೆಂದೂ ಕಾಡಲಿಲ್ಲ. ಸಂಪತ್ತಿಗೆ, ಆಭರಣ ಮೋಹಕ್ಕೆ ತನ್ನನ್ನು ಮಾರಿಕೊಳ್ಳುವುದು ಅಪಮಾನಕರವೆಂಬ ಆತ್ಮಾಭಿಮಾನವನ್ನು ಅವಳು ಮುರಗೊಡು ರಂಗಪ್ಪನು ನೀಡಿದ ಉಂಗುರವನ್ನು ಹಿಂತಿರುಗಿಸಿದ ಪ್ರಸಂಗದಲ್ಲಿ ಪ್ರಕಟಿಸಿದ್ದಾಳೆ.

ಸ್ವಭಾವ ಹೊಂದಿಕೆಯಾಗದ ಸ್ಥಿತಿಯಲ್ಲಿ ಸಂಬಂಧವನ್ನು ಸ್ವೀಕರಿಸುವುದು ಅವಳಿಗೆಂದೂ ಸಾಧ್ಯವಾಗುತ್ತಿರಲಿಲ್ಲ. ಪೈ, ವೆಂಕಟೂ ಮೊದಲಾದವರ ವಿಚಾರದಲ್ಲಿ ಅವಳು ಅನುಭವಿಸಿದ ಮಾನಸಿಕ ತಳಮಳಗಳು ಇದೇ ಹಿನ್ನೆಲೆಯವು. ರಾಜಿ ಮಾಡಿಕೊಳ್ಳದೆ, ಹೊಂದಾಣಿಕೆಗೆ ಅವಕಾಶ ನೀಡದ ಅವಳ ಮನಸ್ಥಿತಿ ಆತ್ಮಗೌರವವನ್ನು ಕಾಪಾಡಿಕೊಳ್ಳುವ ರೀತಿಯದಾಗಿದೆ. ವೈಯಕ್ತಿಕ ಸ್ವಾತಂತ್ರ್ಯದಲ್ಲಿ ಅವಳಿಗೆ ಹೆಚ್ಚಿನ ಆಸಕ್ತಿ, ಸಮ್ಮತಿ ಇತ್ತು. ಸ್ತ್ರೀ ಪುರುಷ ಸಂಬಂಧಗಳಲ್ಲಿ ಹೆಣ್ಣಿನ ಸ್ಥಾನಮಾನಗಳು, ಆಕೆ ಪತ್ನಿಯಾಗಿರಲಿ, ವೇಶ್ಯೆಯಾಗಿರಲಿ, ಯಾವಾಗಲೂ ಅಸ್ಥಿರವಾದುದು ಎನ್ನುವುದನ್ನು ಅವಳು ತನ್ನ ಅನುಭವ ಮತ್ತು ತನ್ನ ಸುತ್ತ ಬದುಕುತ್ತಿರುವವರು ಬದುಕಿನ ವೀಕ್ಷಣೆ ಮೂಲಕ ತಿಳಿದುಕೊಂಡಿದ್ದಳು.

ತನ್ನ ತಾಯಿ ಭವಾನಿ ಗರತಿತನದಲ್ಲಿ ಎಲ್ಲವನ್ನು ಕಳೆದುಕೊಂಡ ಸ್ಥಿತಿಗೆ ಮುಟ್ಟಿರುವುದು, ಕಾವೇರಮ್ಮನಲ್ಲಿ ಅಡಿಗಳು ಕಾಣುವ ಅಸಡ್ಡೆ, ಹೆರುವ ಯಂತ್ರಗಳಾಗಿ, ಬಾಡಿಗೆ ಎತ್ತುಗಳಾಗಿ ಬದುಕಿನಲ್ಲಿ ಎಲ್ಲಾ ಸಂವೇದನೆಗಳನ್ನು ಕಳೆದುಕೊಂಡು ಬದುಕುವ ಪತ್ನಿಯರು, ಸಂಪ್ರದಾಯ ಮತ್ತು ಸಂಪ್ರದಾಯಕ್ಕೆ ಹೊರತಾದ ಜೀವನ ಎರಡು ರೀತಿಯಲ್ಲಿಯೂ ಇರುವ ಕೊರತೆಗಳು ಅವಳನ್ನು ಸತತವಾಗಿ ಕಾಡಿವೆ. ಮುಕ್ತ ಬದುಕಿನ ಕಲ್ಪನೆಯಲ್ಲಿ ಹೆಣ್ಣಿಗೆ ಸುಖವಿದೆ, ನೆಮ್ಮದಿ ಇದೆ ಎನ್ನುವುದನ್ನು ಅವಳ ಮನವರಿಕೆ ಮಾಡಿದ್ದಾಳೆ. ಯಾವುದೇ ರೀತಿಯ ಸಾಮಾಜಿಕ ಪದ್ಧತಿಗಳು ಹೆಣ್ಣನ್ನು ಅವಳಿರುವ ಸ್ಥಿತಿಯಲ್ಲಿಯೇ ಸ್ವೀಕರಿಸಲು ಪೂರಕವಾಗಿ ನಿಲ್ಲಲಾರವು ಎನ್ನುವುದನ್ನು ಮಂಜುಳೆ ತನ್ನ ಅನುಭವದ ಮೂಲಕ ವಿವರಿಸುತ್ತಾಳೆ. ಪಮ್ಮ - ದುಗ್ಗಿಯರ ನಿರಪೇಕ್ಷಭಾವದ ಸಂಬಂಧದಲ್ಲಿ ಅವಳು ತನ್ನ ವಿವೇಚನೆಯನ್ನು ಇದೇ ವಿಧಾನದ ಮೂಲಕ ಕಂಡುಕೊಂಡಿದ್ದಾಳೆ. ಪರಿಪೂರ್ಣ ಬದುಕಿನ ಅರ್ಥವೆನ್ನುವುದು ಪಮ್ಮ ದುಗ್ಗಿಯರ ಸಂಬಂಧದಲ್ಲಿ ಇರುವ ಅನ್ಯೋನ್ಯತೆ, ಪರಸ್ಪರ ಅವಲಂಬನೆ, ಸ್ವೀಕೃತಿ, ಪ್ರೀತಿ ವಿಶ್ವಾಸಗಳು ಮತ್ತು ಒಬ್ಬರನ್ನೊಬ್ಬರು ಅಗಲದಂತೆ ಬದುಕುವ ಹಂಬಲವಿರುವ ಸ್ತ್ರೀ - ಪುರುಷ ಸಂಬಂಧದಲ್ಲಿ ಇದೆ ಎಂಬ ದರ್ಶನವನ್ನು ಮಂಜುಳೆ ಇಲ್ಲಿ ಕಾಣುತ್ತಾಳೆ. ಪುರುಷ ಲೋಕದಲ್ಲಿ ಬದುಕಬೇಕಾದ ಮಂಜುಳೆ, ಪುರುಷ ಸಂಬಂಧಗಳ ಮೂಲಕವೇ

ಹೆಣ್ಣನ್ನು ಕಾಣುವ ಪ್ರಯತ್ನ ನಡೆಸಿದ್ದಾಳೆ. ಪತ್ನಿ, ವೇಶ್ಯಾ, ಸ್ನೇಹ-ಸಂಬಂಧಗಳ ಮೂಲಕವೇ ಅವಳು ಹೆಣ್ಣನ್ನು ಅರ್ಥ ಮಾಡಲು ಪ್ರಯತ್ನಿಸುತ್ತ, ಸಾಮಾಜಿಕ ಸ್ಥಾನಮಾನ, ಅಂತಸ್ತು, ಜಾತಿ, ಕುಲ - ಈ ಯಾವ ಅಂಶವೂ ಹೆಣ್ಣಿನ ಅನನ್ಯತೆಗೆ ಪುರುಷ ಸಂಬಂಧದಲ್ಲಿ ಕಾರಣವಾಗದೇ ಸಮಾನತಾಭಾವವನ್ನಷ್ಟೇ ಮುಖ್ಯ ಎಂದು ಪರಿಗಣನೆ ತಂದುಕೊಳ್ಳುತ್ತಾಳೆ. ಆದುದರಿಂದ ಮಂಜುಳೆಯ ಗ್ರಹಿಕೆಯ ಸ್ತ್ರೀ ವ್ಯಕ್ತಿತ್ವಕ್ಕಿಂತಲೂ ಹೆಚ್ಚಿನ ಆಯಾಮಗಳನ್ನು ಸ್ವತಃ ಮಂಜುಳೆಯ ವ್ಯಕ್ತಿತ್ವದಲ್ಲಿಯೇ ಕಾದಂಬರಿಕಾರ ಗುರುತಿಸುವುದಕ್ಕೆ ಅವಳ ಬದುಕಿನಲ್ಲಿ ಅವಕಾಶ ಪಡೆದ ಬಾಹ್ಯಪ್ರೇರಣೆಗಳಿಗಿಂತಲೂ ಹೆಚ್ಚಾಗಿ ಆಂತರಿಕ ಅಂಶಗಳೇ ಕಾರಣವೆಂದು ಗುರುತಿಸುವುದು ಸಾಧ್ಯವಿದೆ. ಮಂಜುಳೆ ತನ್ನ ಅಂತಃ ಸತ್ವವನ್ನು ಕಾಣಿಸಲು ಬೇಕಾದ ಪರಿಸರವನ್ನು ಕೈಯಾರೆ ನಿರ್ಮಿಸಿರುವುದು, ಮತ್ತು ಈ ಪರಿಸರದಲ್ಲಿ ಬದುಕುವ ವಿಧಾನವನ್ನು ಸ್ವಂತಿಕೆಯಿಂದ ರೂಪಿಸಿರುವುದು ಅವಳ ಅನನ್ಯತೆಗೆ ಕಾರಣಗಳಾಗಿವೆ. ಅನ್ಯಾಯಗಳಿಗೆ, ಶೋಷಣೆಗೆ ತಮ್ಮನ್ನು ಒಡ್ಡಿಕೊಳ್ಳುತ್ತ ಸದಾ ನೇಪಥ್ಯದಲ್ಲಿ ಬಾಳುವ ಪತ್ನಿಯರಾಗಲೀ. ಮೈ ಮತ್ತು ಮನಸ್ಸನ್ನು ಪ್ರತ್ಯೇಕವಾಗಿಸಿ ವೃತ್ತಿವಿವೇಕ ಕಳೆದುಕೊಂಡ ಭವಾನಿ, ಶಾರಿಯರಾಗಲೀ ತಮ್ಮ ವೈಯಕ್ತಿಕತೆಗೆ ಅವಕಾಶವನ್ನು ನೀಡಿದವರೇ ಅಲ್ಲ. ಪರಂಪರೆಯ ನಿರ್ವಚನವನ್ನು ಮನಸ್ಸಾ ಒಪ್ಪಿದ ವ್ಯಕ್ತಿತ್ವ ಇವರದು. ಮಂಜುಳೆ ಮಾತ್ರ ತನ್ನ ವೃತ್ತಿ ಮತ್ತು ವೈಯಕ್ತಿಕ ಬದುಕು ಎರಡೂ ಕಲ್ಪಿಸಿದ ಅವಕಾಶಗಳನ್ನು ಬಳಸಿಕೊಂಡು ಸ್ವ-ನಿರ್ವಚನಕ್ಕೆ ಅವಕಾಶ ನೀಡಿದ್ದಾಳೆ.

**'ಮೂಕಜ್ಜಿಯ ಕನಸುಗಳು'ವಿನಲ್ಲಿ ಸ್ತ್ರೀ:**

ಮೂಕಜ್ಜಿಯ ಕನಸುಗಳು ಕಾದಂಬರಿಯ ಮುಖ್ಯ ಸ್ತ್ರೀಪಾತ್ರ ಮೂಕಜ್ಜಿಯೇ ಆಗಿದ್ದಾಳೆ. ಕಾದಂಬರಿಯಲ್ಲಿ ಮೂಕಜ್ಜಿಯ ವ್ಯಕ್ತಿತ್ವಕ್ಕೆ ಎರಡು ಮುಖಗಳಿವೆ. ಮೊದಲನೆಯ ಮುಖದಲ್ಲಿ ಮೂಕಜ್ಜಿ ಎಲ್ಲಾ ಹೆಂಗಸರಂತೆ ಸಂಸಾರದ ಮಧ್ಯೆ ಇದ್ದು ಸುಖದುಃಖ, ಸಾವು-ನೋವುಗಳನ್ನು ಅನುಭವಿಸುವ ಒಬ್ಬ ಸಾಮಾನ್ಯ ಹೆಂಗಸು. ಎರಡನೆಯ ಮುಖದಲ್ಲಿ ಮೂಕಜ್ಜಿ ಅವಾಸ್ತವಿಕನೆಲೆಯ ದಾರ್ಶನಿಕಳಾಗಿ, ಅಂತರ್‌ದೃಷ್ಟಿಯನ್ನು ಹೊಂದಿರುವ ಅಸಾಮಾನ್ಯ ವ್ಯಕ್ತಿಯಾಗಿದ್ದಾಳೆ. ಈ ಎರಡೂ ಮುಖಗಳು ಅವಳ ಬದುಕಿನ ಎರಡು ಪ್ರತ್ಯೇಕ ಅವಸ್ಥೆಗಳ ಮೂಲಕ ವ್ಯಕ್ತವಾಗಿವೆ.

ಮೂಕಜ್ಜಿ, ಮೂಕಾಂಬಿಕೆಯಾಗಿದ್ದಾಗ ಅವಳಿಗೆ ಹತ್ತರ ಹರೆಯದಲ್ಲಿ ವಿವಾಹವಾಗಿ, ಕೆಲವೇ ತಿಂಗಳ ಅಂತರದಲ್ಲಿ ವೈಧವ್ಯವೂ ಪ್ರಾಪ್ತಿಯಾಯಿತು. ನಂತರ ಹುಟ್ಟಿದ ಮನೆಯನ್ನು ತನ್ನ ಸ್ಥಿರನೆಲೆಯಾಗಿ ಕಾಣಬೇಕಾದ ಅವಳು ಆ ಪರಿಸರವನ್ನು ಯಾವ ಕಾರಣಕ್ಕೂ ಬಿಡದವಳಂತೆ, ಹೊಂದಿಕೊಂಡಳು. ತನ್ನ ಮನೆ, ತನ್ನ ಸಂಸಾರ, ತನ್ನ ಮಕ್ಕಳೆಂಬ ಹಂಬಲವನ್ನು ಅವಳು ಮನೆಯಲ್ಲಿದ್ದ ಅಣ್ಣತಮ್ಮಂದಿರ ಸಂಸಾರದೊಡನೆ ಹಂಚಿಕೊಂಡಳು. ಯಾರನ್ನು, ಯಾವುದಕ್ಕೂ ಕಾಡದೆ, ಬೇಡದೆ, ತನ್ನ ಪಾಡಿಗೆ ಯಾರಿಗೂ ತೊಂದರೆಯಾಗದ ರೀತಿಯಲ್ಲಿ ಬದುಕಿದಳು. ತನ್ನ ಮನಸ್ಸಿನ ಭಾವನೆಗಳನ್ನು ಮಾತಿನ ಮೂಲಕ, ಆಚರಣೆ ಮೂಲಕ ಅವಳು ವ್ಯಕ್ತ ಪಡಿಸಿದಾಗ ತಂದೆಯಿಂದ ಅಣ್ಣನಿಂದ ವಿರೋಧವನ್ನು, ಅಡ್ಡಿಯನ್ನು ಎದುರಿಸಬೇಕಾಗಿ ಬಂದುದರಿಂದ, ಅವಳು ತನ್ನ ಮಾತನ್ನು ಮರೆತು ಮೂಕಿಯಾದಳು. ಮೂಕಾಂಬಿಕೆ ಮೂಕಿಯಾಗಿ ಪರಿವರ್ತನೆ ಹೊಂದಲು ಅವಳ ಬದುಕಿನ ರೀತಿಯನ್ನು ನಿರ್ಧರಿಸಿದ

ಐಧಿ, ಅವಳ ಹೆತ್ತವರು ಎಲ್ಲರೂ ಕಾರಣರಾದರು. ಹೀಗೆ ಮೂಕಾಂಬಿಕೆಯ ವ್ಯಕ್ತಿತ್ವ ಸಮಾಜದ ನಿರೀಕ್ಷೆಯಲ್ಲಿರುವ ಭಾವನನ್ನು ಅಂತರ್ಗತಗೊಳಿಸಿಕೊಂಡು ಸೇವೆ, ಪ್ರೀತಿ, ನಿಸ್ವಾರ್ಥ ಮಂತಾದ ಮೌಲ್ಯಗಳ ಪ್ರತಿನಿಧಿಕರಣದಲ್ಲಿ ರೂಪುಗೊಂಡಿತು. ತಂದೆ, ತಾಯಿಯನ್ನು ಕಳೆದುಕೊಂಡ ಬಳಿಕ ಮರೆಯಾಗಿದ್ದ ಮೂಕಾಂಬಿಕೆಯ ವ್ಯಕ್ತಿತ್ವವು ಹಂಗು ಕಳೆದ ರೀತಿಯಲ್ಲಿ ತನ್ನಲ್ಲಿನ ಭಾವನೆಗಳನ್ನು ಪ್ರಕಟಿಸುವ ಅವಕಾಶವನ್ನು ತನ್ನದಾಗಿಸಿತು. ಈ ರೀತಿಯಾಗಿ -

ಬದುಕಿನ ಎರಡನೇ ಅವಸ್ಥೆಯಲ್ಲಿ ಕಾರಂತರು ಮೂಕಾಂಬಿಕೆಯನ್ನು ಅತೀಂದ್ರಿಯ ಶಕ್ತಿಯನ್ನುಳ್ಳ ಅವಾಸ್ತವಿಕನೆಲೆಯ ವ್ಯಕ್ತಿತ್ವದ ಮೂಕಜ್ಜಿಯನ್ನಾಗಿ ಪರಿವರ್ತಿಸಿದ್ದಾರೆ. ಈ ಅವಾಸ್ತವಿಕನೆಲೆಯ ವ್ಯಕ್ತಿತ್ವಕ್ಕೆ ಅಂತರ್ ದೃಷ್ಟಿ ಇದ್ದು, ಈ ಅಂತರ್ ದೃಷ್ಟಿ ಭೂತ, ವರ್ತಮಾನ ಮತ್ತು ಭವಿಷ್ಯವನ್ನು ಕಾಣಬಲ್ಲ ಇಂದ್ರಿಯಾತೀತ ಸಂವೇದನೆಯನ್ನು ಪಡೆದಿದೆ. ನಿರ್ದಿಷ್ಟ ಉದ್ದೇಶವೊಂದರ ಹಿನ್ನೆಲೆಯಲ್ಲಿ ಕಾದಂಬರಿ ಇಲ್ಲಿ ಹೆಣ್ಣನ್ನು ಸಾಂಕೇತಿಕತೆಯಲ್ಲಿ ಬಳಸಿಕೊಳ್ಳುತ್ತದೆ. ಈ ಸಾಂಕೇತಿಕ ವ್ಯಕ್ತಿತ್ವದ ಹಿನ್ನೆಲೆಯಲ್ಲಿ ಪರಾಧೀನಳಾಗಿ, ಅಸಹಾಯಕತೆಯಿಂದ, ಸಾಂಸ್ಕೃತಿಕ ಮತ್ತು ಸಮಾಜಿಕ ಕಾರಣಗಳಿಗಾಗಿ ತನ್ನ ದೀರ್ಘಾವಧಿಯ ಬದುಕನ್ನು ಸ್ವಂತಸುಖದ ಕಲ್ಪನೆಯಿಂದ ವಂಚಿತಳಾದ ಒಬ್ಬ ಹೆಣ್ಣಿನ ವ್ಯಕ್ತಿತ್ವವೂ ಇರುವುದವನ್ನು ಗಮನಿಸುವುದು ಮುಖ್ಯ.

ಮೂಕಜ್ಜಿಯ ಪಾತ್ರಕಲ್ಪನೆಯಲ್ಲಿ ಸಾಂಕೇತಿಕತೆ ಇರುವುದು ಸ್ಪಷ್ಟವಾಗಿದೆ. 'ಮೂಕಜ್ಜಿಯ ಪಾತ್ರನಿರ್ಮಾಣದಲ್ಲಿ ಕಾರಂತರು ವಾಸ್ತವಿಕತೆಯೊಡನೆ ಸಾಂಕೇತಿಕತೆಯನ್ನು ಉಪಯೋಗಿಸಿಕೊಂಡಿದ್ದಾರೆಂಬುದು ಸುಸ್ಪಷ್ಟವಾಗಿದೆ... ಮೂಕಜ್ಜಿಯ ಪಾತ್ರ ಅದೆಂತಿದ್ದರೂ ಸಾಂಕೇತಿಕವಾಗಿದೆ.'[೯] (ಕುರ್ತಕೋಟಿ: ೧೯೮೨:೬೯). ಸ್ವತಃ ಕಾದಂಬರಿಕಾರ ಮೂಕಜ್ಜಿ ಕಾದಂಬರಿಯ ನಾಯಕಿಪಾತ್ರ ಅಲ್ಲವೆಂದು ತಿಳಿಸುವಲ್ಲಿ ಮತ್ತು ಅವಳ ಇಂದ್ರಿಯಾತೀತ ಶಕ್ತಿಯ ಕಾರಣವಾಗಿ ಅವಳಂತಹ ವ್ಯಕ್ತಿ ಬದುಕಿರುವ ಸಂಭಾವ್ಯತೆಯ ಕುರಿತು ಅನುಮಾನವಿರುವುದಾದರೆ ಅವಳನ್ನು ಸಾಂಕೇತಿಕವಾಗಿಯೇ ನೋಡಬಹುದೆನ್ನುತ್ತಾರೆ: "ಸಾಂಪ್ರದಾಯಿಕತೆಯಿಂದ ಹೆರೆಗಟ್ಟಿದ ಮನಸ್ಸುಗಳನ್ನು ತುಸುತುಸುವಾಗಿ ಕಾಯಿಸಿ ಕರಗಿಸುವ ಕೆಲಸ ಅವಳದ್ದು. ನಮ್ಮ ಸಂಸ್ಕೃತಿಯ ನಂಬಿಕೆಗಳ ಕುರಿತಾದ ಸಂಶಯ ಪಿಶಾಚಿ 'ವೇ ಅವಳೆಂದು ತಿಳಿದರಾಯಿತು[೧೦]". (ಕಾರಂತ:೧೯೬೮: iii- iv). ಮೂಕಜ್ಜಿ ತನ್ನ ಅಂತರ್ ದೃಷ್ಟಿಯಲ್ಲಿ ಕಾಣುವ ಕನಸುಗಳ ಮತ್ತು ಈ ಕನಸುಗಳು ವಿಶ್ಲೇಷಣೆಯಲ್ಲಿ ತೊಡಗಿಕೊಳ್ಳುವ ಸುಬ್ರಾಯನ ಇತಿಹಾಸ ಪ್ರಜ್ಞೆಯಲ್ಲಿ ಕಾರಂತರು ಸೃಷ್ಟಿಸಮಸ್ಯೆಯ ಮಂಥನದ ಉದ್ದೇಶವನ್ನು ಹೊಂದಿರುವುದು ಸ್ಪಷ್ಟವಾಗಿದೆ. ಮೂಕಜ್ಜಿಯ ಸಾಂಕೇತಿಕ ವ್ಯಕ್ತಿತ್ವದ ಮುಖ್ಯ ಲಕ್ಷಣಗಳೆಂದರೆ - ಕನಸುಗಳ ಮೂಲಕ ಅವಳು ವಿವರಿಸುವ ಮಾನವನ ಸಾಂಸ್ಕೃತಿಕ ಬದುಕಿನ ಇತಿಹಾಸದ ಕುರಿತಾದ ಸ್ಪಷ್ಟ ಚಿಂತನೆ, ಸ್ತ್ರೀ ಪುರುಷ ಸಂಬಂಧದಲ್ಲಿ ತೋರುವ ಸ್ತ್ರೀ ಪರ ಕಾಳಜಿಗಳು, ನಂಬಿಕೆಗಳನ್ನು ಪ್ರಶ್ನಿಸುತ್ತಲ್ರೆ ಸಾಂಪ್ರದಾಯಿಕ ದೃಷ್ಟಿಕೊನದ ಮೂಲಕವೇ ಸಾಂಸ್ಕೃತಿಕ ಪರಿಸರದ ಸ್ವೀಕೃತಿ ಭಾವ. ಸ್ವತಃ ಮೂಕಜ್ಜಿಯಲ್ಲಿ ದೈವತ್ವವನ್ನು ಆರೋಪಿಸುವ ಅವಕಾಶವನ್ನು ಅವಳ ವರ್ತನಾ ವಿಶೇಷಗಳು ಪ್ರಕಟಿಸುತ್ತವೆ. ಮೂಕಜ್ಜಿಯ ಮೂಲಸ್ವಭಾವದ ಅನನ್ಯತೆಯನ್ನು ಕಾಣಲು ಅವಳ ಸಾಂಕೇತಿಕತೆಯನ್ನು ವಿಶ್ಲೇಷಣೆಗೆ ಗುರಿಪಡಿಸಬೇಕಾದುದು ಅಗತ್ಯವಾಗಿದೆ.

ಮೂಕಜ್ಜಿಯ ಸ್ವಗತಗಳು ಅವಳ ಕನಸುಗಳಿಂದ ಪ್ರೇರಿತವಾಗಿರುವುದರಿಂದ, ಅವಳ ಈ ವರ್ತನೆ. ಅವಳು ಬದುಕುವ ಸಾಮಾಜಿಕ ಪರಿಸರದಲ್ಲಿ 'ಮರುಳುತನ'ದ ರೂಪದಲ್ಲಿ ತಿರಸ್ಕೃತವಾಗಿದೆ. ಅವಳ ಮೊಮ್ಮಗನಾದ

ಸುಬ್ರಾಯನೊಬ್ಬನನ್ನು ಬಿಟ್ಟರೆ ಅವಳ ಅಸಾಮಾನ್ಯತೆ ಇಲ್ಲಿ ಯಾರಿಂದಲೂ ಸ್ವೀಕೃತವಾಗುವುದಿಲ್ಲ. ಸ್ವತಃ ಅವಳಿರುವ ಮನೆಯವರೇ ಆದ ಸುಬ್ರಾಯನ ಹೆಂಡತಿ, ತಮ್ಮನಿಗೆ ಅದರಲ್ಲಿ ನಂಬಿಕೆ, ವಿಶ್ವಾಸಗಳು ಇಲ್ಲ. ಸಂಪ್ರದಾಯ, ನಂಬಿಕೆಗಳಲ್ಲಿ ಬದುಕುವ, ವಿಶ್ವಾಸವಿಡುವ ಜನರಿಗೆ ಮೂಕಜ್ಜಿ ಕಾಣಿಸುವ ದರ್ಶನದಲ್ಲಿ ಆಸಕ್ತಿ ಹುಟ್ಟುವುದಿಲ್ಲವಾದುದರಿಂದ ಅವಳ ವಿಚಾರಗಳು ಪ್ರತ್ಯೇಕವಾಗಿ ನಿಲ್ಲುತ್ತವೆ. ಮೂಕಜ್ಜಿಗೆ ಈ ಪ್ರತ್ಯೇಕತೆಯಿಂದ ಬಿಡಿಸಲು ಸಾಧ್ಯವಾಗುವುದು ಮಾನವೀಯ ಅಂಶಗಳನ್ನು ಅವಳು ಪ್ರಕಟಿಸಿದ ನಂತರವೇ. ತಿಪ್ಪಜ್ಜಿ ಸಾವಿನಲ್ಲಿ ಅವಳು ಸಂತೈಸಿದ ವಿಧಾನ, ನಾಗಿಯ ಬದುಕು ಸುಗುಮವಾಗುವುದರಲ್ಲಿ ಅವಳು ನಡೆಸಿದ ಪ್ರಯತ್ನಗಳು, ಸೀತೆಯನ್ನು ಮನೆಯಲ್ಲಿ ಅಧಿಕಾರ ಸ್ಥಾನದಲ್ಲಿ ಒಪ್ಪುವ ರೀತಿಗಳಲ್ಲಿ ಅವಳು ಮಾನವೀಯತೆ ತೋರಿದ್ದಾಳೆ. ಈ ಮಾನವೀಯತೆ ಸಾರ್ವಕಾಲಿಕ ಸ್ವೀಕೃತಭಾವವಾಗುವುದರಿಂದ ಮೂಕಜ್ಜಿಯನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಾಗುತ್ತದೆ. ಮೂಕಜ್ಜಿ ಕಾಣುವ ಕನಸಗಳು ಸಾಂಕೇತಿಕವಾಗಿ ಸಾಂಸ್ಕೃತಿಕ ಪರಿಸರದ ಇತಿಹಾಸವನ್ನು ಅನಾವರಣಗೊಳಿಸುತ್ತದೆ. ಈ ಇತಿಹಾಸದ ಅನ್ವೇಷಣೆಯು ಮನುಷ್ಯನಲ್ಲಿರುವ ಕುತೂಹಲದ ಕಾರಣವಾಗಿಯೇ ಮೂಡಿಬರುವ ರೀತಿಯದು. ಮನುಷ್ಯ ತನ್ನ ಇತಿಹಾಸ ಪ್ರಜ್ಞೆಯಲ್ಲಿ ತನ್ನನ್ನು ಗುರುತಿಸುವ ವಿಧಾನವನ್ನು ಈ ಪ್ರವೃತ್ತಿ ತಿಳಿಸುತ್ತದೆ. ಮೂಕಜ್ಜಿಯ ಪಾತ್ರ ಸಾಂಕೇತಿಕತೆಯಲ್ಲಿ ಈ ಅಂಶವನ್ನು ಕೂಡ ಗಮನಿಸಲಾಗಿದೆ. 'ಮೂಕಜ್ಜಿ ಮನುಷ್ಯನ ಅನ್ವೇಷಿಕ ಪ್ರವೃತ್ತಿಯ ಮೂರ್ತರೂಪವಾಗಿದ್ದಾಳೆ.[೧೧]" (ನಾರಾಯಣ ಕೆ.ವಿ. ೧೯೭೭:೭). ಮನುಷ್ಯನ ಈ ಅನ್ವೇಷಣೆಯ ಕಾರಣವಾಗಿ ಇಂದಿನ ಬದುಕನ್ನು ಅರ್ಥಮಾಡಿಕೊಳ್ಳಲು ಅವಕಾಶ ಬರುವುದು ಸಮರ್ಥನೀಯ. "ಪ್ರಾಚ್ಯ ಜಗತ್ತಿನಲ್ಲಿ, ಸಂಸ್ಕೃತಿಯ ಕುರುಹುಗಳಲ್ಲಿ ಇಡುವ ಆಸಕ್ತಿಯು ಕೇವಲ ಕುತೂಹಲವಾಗಿ, ಇಂದಿನ ಬದುಕಿನ ಪರಿಯನ್ನು ವಿವರಿಸಲು ಸಮರ್ಥವಾಗಬಲ್ಲುದೆಂದು ತೋರಿಸುವ ಈ ಮೂಕಜ್ಜಿಯ ಪಾತ್ರ ಕಲ್ಪನೆ ಮಹತ್ವವಾದುದು[೨]. (ಅದೇ ಪುಟ:೮). ಕಾರಂತರು ಈ ಪಾತ್ರ ಕಲ್ಪನೆಯ ಮೂಲಕ ಸಾಂಸ್ಕೃತಿಯ ಕುರುಹುಗಳಾದ ದೈವತ್ವದ ಅಸ್ತಿತ್ವ, ಮತ್ತು ದೈವತ್ವ ಮೂಲವಾಗಿ ಹುಟ್ಟಿಕೊಂಡು ಧಾರ್ಮಿಕ ಪರಿಕಲ್ಪನೆಗಳು, ಜಾತಿಪದ್ಧತಿ, ನಂಬಿಕೆ, ಆಚರಣೆಗಳು ಇವುಗಳೊಂದಿಗೆ ಮನುಷ್ಯನ ಜೀವನ ವಿಧಾನದಲ್ಲಿ ಉಂಟಾದ ಬದಲಾವಣೆಗಳಾಗಿ ಸಂಘಜೀವನ, ಕುಟುಂಬ ವ್ಯವಸ್ಥೆಯ ಉಗಮ, ವಿಕಾಸ, ಸ್ತ್ರೀ ಪುರುಷ ಸಂಬಂಧಗಳು ಇವುಗಳನ್ನೆಲ್ಲ, ಈ ಪಾತ್ರ ಕಾಣುವ ಕನಸುಗಳ ಮೂಲಕ ಇತಿಹಾಸದ ಕಲ್ಪನೆಯನ್ನು ಕಟ್ಟುವ ಕೆಲಸ ಮಾಡುತ್ತಾರೆ. ಈ ಎಲ್ಲಾ ವಿವರಗಳನ್ನು ಅನುಷಂಗಿಕ ರೂಪದಲ್ಲಿಯೂ ಸೃಷ್ಟಿ ಸಮಸ್ಯೆಯನ್ನು ಕೇಂದ್ರಸ್ಥಾನದಲ್ಲಿಯೂ ಕಾದಂಬರಿ ಪರಿಗಣಿಸುವುದರಿಂದ ಮತ್ತು ಮೂಕಜ್ಜಿಯೆಂಬ ಸ್ತ್ರೀ ಪಾತ್ರವನ್ನು ಅವರು ಇಲ್ಲಿ ಸಾಂಕೇತಿಕ ವ್ಯಕ್ತಿತ್ವದ ರೂಪದಲ್ಲಿ ಉಪಯೋಗಿಸಿಕೊಂಡಿರುವುದರಿಂದ ಸ್ತ್ರೀ ಸ್ಥಾನಮಾನವನ್ನು ಸಾಂಸ್ಕೃತಿಕ ಪರಿಸರದಲ್ಲಿ ಗಮನಿಸಿಬೇಕಾದುದು ಅವಶ್ಯವಾಗುತ್ತದೆ. ಹೆಣ್ಣಿನ ಸಹಜ ವ್ಯಕ್ತಿತ್ವ ಅಥವಾ ವಾಸ್ತವಿಕನೆಲೆಯ ಸ್ತ್ರೀ ವ್ಯಕ್ತಿತ್ವ ಮತ್ತು ಸಾಂಕೇತಿಕ ವ್ಯಕ್ತಿತ್ವ ಅಥವಾ ಪುರಾಣಕಲ್ಪನೆಯಲ್ಲಿರುವ ಸ್ತ್ರೀ ವ್ಯಕ್ತಿತ್ವ ಇವೆರಡನ್ನು ಇಲ್ಲಿ ಮೂಕಜ್ಜಿ ಮತ್ತು ಅವಳ ಕನಸುಗಳ ಮೂಲಕ ವಿಶ್ಲೇಷಿಸುವುದು ಸಾಧ್ಯವಿದೆ. ಪುರಾಣ ಕಲ್ಪನೆಯಲ್ಲಿರುವ ಸ್ತ್ರೀ ವ್ಯಕ್ತಿತ್ವವು ಇಲ್ಲಿ ಮಾತೃದೇವತೆ ಅಥವಾ 'ದೇವಿ' ಸ್ವರೂಪದಲ್ಲಿದೆ. ಮೂಕಜ್ಜಿಯ ಕನಸುಗಳಲ್ಲಿ ಹಂತಹಂತವಾಗಿ ಕಾಣಿಸಿಕೊಳ್ಳುವ ಆದಿಮ ಸಂಸ್ಕೃತಿಯ ಮೂಲ ಮಾತೃಕಲ್ಪನೆಯು ಕಾಲಾನುಕ್ರಮದಲ್ಲಿ ಹೊಂದಿರಬಹುದಾದ ಪರಿವರ್ತನೆಯನ್ನು ಗುರುತಿಸಿಕೊಳ್ಳುವ ಪ್ರಕ್ರಿಯೆ ಮುಂದುವರಿದಂತೆಲ್ಲ, ಸಾಮಾನ್ಯ ನೆಲೆಯಲ್ಲಿದ್ದ ಮೂಕಜ್ಜಿಯ ವ್ಯಕ್ತಿತ್ವವೂ ಈ ಮಾತೃದೇವತಾ ಕಲ್ಪನೆಯಲ್ಲಿ ಅವಿನಾಭಾವವನ್ನು ಹೊಂದಿ ಹಂತ

ಹಂತವಾಗಿ ದೈವತ್ವವನ್ನು ಆರೋಪಿಸಿಕೊಳ್ಳುವುದು ಗಮನಾರ್ಹವೆನಿಸುತ್ತದೆ. ಸೃಷ್ಟಿಕಾರ್ಯದಲ್ಲಿ ಮಾತ್ರ ಕಲ್ಪನೆಗಿರುವ ಸ್ಥಾನಮಾನಗಳನ್ನು ಮೂಕಜ್ಜಿ ಸ್ವತಃ ಪಡೆಯುವುದ ಮೂಲಕ ಅವಳ ಪಾತ್ರವು ಉನ್ನತೀಕರಣಕ್ಕೆ ಒಳಗಾಗಿ, ಹೆಣ್ಣಿನ ಮಾತೃತ್ವದ ಮೂಲ ಸ್ವರೂಪಕ್ಕೆ ಆದ್ಯತೆ ಸಿಗುವುದರತ್ತ ಗುರಿ ಮಾಡಿಕೊಂಡಿರುವುದು ಸ್ಪಷ್ಟವಾಗಿದೆ.

ಉನ್ನತೀಕರಣ ಪ್ರಕ್ರಿಯೆಗೆ ಒಳಗಾಗಿರುವ ಮೂಕಜ್ಜಿಯಲ್ಲಿ ಅತೀಂದ್ರಿಯತೆಯನ್ನು ಒಪ್ಪಿಕೊಳ್ಳಲು ಅವಳನ್ನು ಸಂಭಾವ್ಯತೆಗೆ ಹೊರತಾಗಿರುವ ಪಾತ್ರಕಲ್ಪನೆಯ ಮೂಲಕ ಅವಳು, ತನ್ನ ಬದುಕಿನಲ್ಲಿ ಕೆಲವು ಸಂದರ್ಭಗಳಲ್ಲಿ, ಉದಾ: ಕೋಟಾಳಮ್ಮನ ಗುಡಿಯಲ್ಲಿ ನರ್ತಿಸಿದ ರೀತಿ, ತೋರಿದ ವರ್ತನಾ ವಿಶೇಷಗಳಿಂದ ಅವಕಾಶವನ್ನು ದೊರಕಿಸಲಾಗಿದೆ. ಗ್ರಾಮ ದೇವತೆಯಾದ ಮೂಕಾಂಬಿಕೆಯನ್ನು ತನ್ನೊಡನೆ ಹೋಲಿಸುವುದು, ನಾಗಿ, ಸುಬ್ರಾಯ, ಸೀತೆಗೆ ಅವಳು ದೇವರ ರೂಪದಲ್ಲಿ ಕಾಣಿಸಿಕೊಳ್ಳುವುದು ಇದೆ ಹಿನ್ನೆಲೆಯ ಅಂಶಗಳಾಗಿವೆ. ಮೂಕಜ್ಜಿಯಲ್ಲಿ ದೈವತ್ವದ ಅರೋಪ, ಅದರಲ್ಲಿಯೂ ಮಾತೃದೇವತಾ ಆರೋಪ ಉದ್ದೇಶಪೂರ್ವಕವಾಗಿ ನಡೆದಿರುವುದು ಸ್ಪಷ್ಟವಾಗಿದೆ. 'ಮೂಕಜ್ಜಿಯನ್ನು ಒಂದು ಸಂಭಾವ್ಯ ಮಾನವೀಯ ಪ್ರತಿಮೆಯೆಂದು ಸ್ವೀಕರಿಸುವುದು ಸುಲಭವಲ್ಲ. ಅವಳಿಗೆ ಹೆಸರು ಕೊಟ್ಟ ಮೂಕಾಂಬಿಕೆಯಂತೆ ಅಥವಾ ಪ್ರಥಮ ದರ್ಶನದಲ್ಲಿಯೇ ಅವಳನ್ನಾವರಿಸಿಕೊಂಡ ಹಿಂಡುಗಾನ ಕೋಟಾಲಮ್ಮನಂತೆ ಅವಳೂ ಒಂದು ಆದಿಮ ಮಾತೃಶಕ್ತಿಯ ಅವತಾರವೇ. ಈ ಆದಿಮತ್ವವೇ ಮುಂಬರುವ ಘಟನೆಗಳನ್ನು ಕಾಣಬಲ್ಲ ತನ್ನ ಸಂಪರ್ಕದಲ್ಲಿ ಬಂದ ಜನರ ಮನಸ್ಸುಗಳನ್ನು ಓದುಬಲ್ಲ ಶಕ್ತಿಯನ್ನು ಮೂಕಜ್ಜಿ ಹೊಂದಿರುವುದು ಇದೆ ಕಾರಣ[೧೩]'. (ಆಮೂರ: ೧೬೯).

ಈ ದೈವತ್ವದ ಆರೋಪದಿಂದ ಹೊರತು ಪಡಿಸಿದರೆ ಮೂಕಜ್ಜಿ ಸಾಮಾನ್ಯ ಜೀವನದಲ್ಲಿ ಮಾತೃತ್ವದ ಸುಖದಿಂದ ವಂಚಿತವಾದವಳು. ತಾನು ಬದುಕುವ ಪರಿಸರದಲ್ಲಿ ಬಾಲವಿಧವೆಯಾಗಿ, ಅಮಂಗಲೆಯಾಗಿದ್ದ ಅವಳಿಗೆ ಬೇರೆಯವರ ಮಕ್ಕಳನ್ನು ತನ್ನ ಮಕ್ಕಳಂತೆ ಕಾಣಬಹುದಾದ ಸಾಧ್ಯತೆಗಳು ಮಾತ್ರ ಇದ್ದವು. ಮೂಕಾಂಬಿಕೆ ದೇವಿಯನ್ನು ತನ್ನಂತೆ ಕಾಣುವ ಮೂಕಜ್ಜಿ, ಇನ್ನೊಬ್ಬ ವ್ಯಕ್ತಿಗೆ ಒಳಿತನ್ನು ಹಾರೈಸುವುದನ್ನು ಬಿಟ್ಟರೆ, ಬೇರೆ ಎನನ್ನೂ ನೀಡಲಾಗದ ಸ್ಥಿತಿಯನ್ನು ವಿವರಿಸಿದ್ದಾಳೆ. ಸ್ವಂತ ಸುಖದಿಂದ ವಂಚಿತಳಾದ ಮೂಕಜ್ಜಿಯನ್ನು ಮನೋವೈಜ್ಞಾನಿಕ ನೆಲೆಯಿಂದಲೂ ಅರ್ಥಮಾಡಿಕೊಳ್ಳುವುದು ಆವಶ್ಯಕವಾಗುತ್ತದೆ. ಮೂಕಜ್ಜಿಯ ಕನಸುಗಳು, ವರ್ತನೆಗಳು ಸಾಂಕೇತಿಕವಾಗಿರುವುದಕ್ಕಿಂತ ವಾಸ್ತುವಿಕನೆಲೆಯಲ್ಲಿ. ಅರ್ಥಪಡೆದುಕೊಳ್ಳಬೇಕಾದುದು ಮುಖ್ಯವಾಗಿದೆ. ಆದುದರಿಂದಲೇ ಮನೊವೈಜ್ಞಾನಿಕವಾಗಿಯೂ ಅವಳ ವರ್ತನೆಯನ್ನು ತಿಳಿಸುವ ಈ ಕೆಳಗಿನ ವಿವರಗಳನ್ನು ಗಮನಿಸುವುದು ಅವಶ್ಯಕವಾಗುತ್ತದೆ: "ಬಾಲವಿಧವೆಯಾದ ಮೂಕಜ್ಜಿಯಲ್ಲಿ ವ್ಯಕ್ತಿತ್ವ ವಿಕಾಸದ ಮನೋಲೈಂಗಿಕ ಬೆಳವಣಿಗೆಯ ಮೂರು ಹಂತಗಳು ಕ್ರಮವಾಗಿ ವಿಕಾಸಗೊಳ್ಳದೆ ಅದು ಅತೃಪ್ತಿಕರವೂ, ಅಪರಿಪೂರ್ಣವಾಯಿತು. ಮಾನವನ ಮೂಲಭೂತ ಪ್ರೇರಣೆಗಳಾದ ಲೈಂಗಿಕತೆ ಮತ್ತು ಮಾತೃತ್ವದ ಪ್ರೇರಣೆಗಳು, ಬಾಲ್ಯದಲ್ಲೇ ವಿಧವೆಯಾಗಿ ಭಾರತೀಯ ಪರಸರದಲ್ಲಿ ಪರಂಪರೆಯಲ್ಲಿ ಬದುಕಬೇಕಾದ ಮೂಕಜ್ಜಿಗೆ ಪರಿಸರ ಮತ್ತು ಸಾಂಸ್ಕೃತಿಕ ಒತ್ತಡಗಳಿಂದ ತೃಪ್ತಿಗೊಳ್ಳಲು ಸಾಧ್ಯವಾಗದೆ ಅವು ಅವಳಲ್ಲಿ ಅತೃಪ್ತ ಆಕಾಂಕ್ಷೆಗಳಾಗಿಯೇ ಉಳಿದು ಸುಪ್ತಚೇತನದಲ್ಲಿ ತಮ್ಮ ಆಸ್ತಿತ್ವವನ್ನು ಸ್ಥಾಪಿಸಿಕೊಳ್ಳುತ್ತವೆ. ಇದರ ಕೃತಿಪೂರಣೆಗಾಗಿ ಅವಳು ಅನೇಕ ಮನೊತಂತ್ರಗಳ ಮರೆಹೊಗುವುದನ್ನು ಕಾಣಬಹುದು. ಇದನ್ನು ಕಾದಂಬರಿಯಲ್ಲಿ ವ್ಯಕ್ತವಾಗುವ ಮೂಕಜ್ಜಿಯ ವರ್ತನೆಗಳು ತಿಳಿಸುತ್ತವೆ[೧೪]'. (ಪರಿಮಳಾ:೧೯೭೨: ೮). ಹೀಗೆ---

ವೈಜ್ಞಾನಿಕವಾಗಿ ಮೂಕಜ್ಜಿಯ ವರ್ತನೆಗಳು ಸಮರ್ಥನೆಗಳನ್ನು ಪಡೆದುಕೊಳ್ಳುವುದರ ಮೂಲಕ ಅವಳ ಅತೀಂದ್ರಿಯ ಶಕ್ತಿಯೂ ಸಂಭಾವ್ಯತೆಗೆ ಒಳಗಾಗುತ್ತದೆ. ಅತೀಂದ್ರಿಯ ಶಕ್ತಿಯನ್ನು ಸಾಮಾನ್ಯ ಇಂದ್ರಿಯಗಳಿಂದ, ಸಾಮಾನ್ಯ ವ್ಯಕ್ತಿಗಳು, ಸಾಮಾನ್ಯ ಸ್ಥಿತಿಯಲ್ಲಿ ಹೊಂದಲಾಗದ ಸಂವೇದನೆಯಾಗಿ ವಿವರಿಸಲಾಗಿದೆಯಾದರೂ ಮೂಕಜ್ಜಿ ಬದುಕಿದ್ದ ಪರಿಸರ ಅವಳಿಗೆ ಈ ಸಂವೇದನೆ ಉಂಟಾಗುವ ವಾತಾವರಣವನ್ನು ಕಲ್ಪಿಸಿಕೊಟ್ಟಿದೆ ಎನ್ನಬಹುದು.

'ಮೂಕಜ್ಜಿಗೆ ವ್ಯಾವಹಾರಿಕ ಜಗತ್ತಿನೊಂದಿಗೆ ತಪ್ಪಿದ ಸಂಪರ್ಕರಾಹಿತ್ಯ - ತನ್ಮೂಲಕ ಪ್ರಾಪ್ತವಾದ ಏಕಾಂತತೆಯಿಂದ ಸುಪ್ತಮನಸ್ಸಿನ ಕಾರ್ಯ ಚಟುವಟಿಕೆ ಹೆಚ್ಚಾಗಿ ವಸ್ತುಗಳಾಚೆಯ ಸಂಗತಿಗಳು ಗೋಚರಿಸುವ ಒಂದು ಸಂವೇದನಾ ಸಾಮರ್ಥ್ಯ ಉಂಟಾಗುತ್ತದೆ'(ಅದೇ ಪುಟ: ೧೧). ಮೂಕಜ್ಜಿಯ ಅಸ್ತಿತ್ವದ ಸಂಭಾವ್ಯತೆಯನ್ನು ವಿಜ್ಞಾನದ ದೃಷ್ಟಿಕೊನದ ಮೂಲಕ ಒಪ್ಪಿಕೊಂಡ ಬಳಿಕ ಅವಳ ಪಾತ್ರನಿರ್ದೇಶನವು ಕಾದಂಬರಿಯಲ್ಲಿ ಪಡೆದ ಅವಕಾಶವನ್ನು ತಿಳಿಯವುದು ಮುಖ್ಯವಾಗುತ್ತದೆ.

ಮೂಕಜ್ಜಿ ತನ್ನದಲ್ಲದ ತಪ್ಪಿಗೆ ಹೊಣೆಗಾರಳಾಗಿ ಜೀವನವಿಡೀ ನೊಂದು ಬದುಕಿದವಳು. ಹೆತ್ತತಂದೆ, ತಾಯಿ, ಬಂಧುಗಳು, ಊರಿನವರು - ಹೀಗೆ ಇಡೀ ವ್ಯವಸ್ಥೆ ಅವಳಮೇಲೆ ನಿಯಂತ್ರಣ ಹೇರಿ ದಿಗ್ಬಂಧನದಲ್ಲಿ ಇರಿಸಿದೆ. ಮೂಕಜ್ಜಿಯ ಭಾವನೆಗಳಿಗೆ, ತನ್ನಿಷ್ಟದಂತೆ ನಡೆಯುವ ರೀತಿಗೆ ಅವಕಾಶ ನೀಡಿದ ರೀತಿಯಲ್ಲಿ ಅವಳ ಮೇಲೆ ನಿಯಂತ್ರಣವನ್ನು ಹೇರಲಾಗಿದೆ. ಈ ಕಾರಣದಿಂದ ಮೂಕಜ್ಜಿ ವ್ಯಕ್ತಿತ್ವ ವಿಕಾಸವಾಗದಿದ್ದರೂ, ಅವಳಲ್ಲಿ ತ್ಯಾಗ, ಸೇವೆ, ಅನುಕಂಪ ಮೊದಲಾದ ಮೌಲ್ಯಗಳನ್ನು ಗುರುತಿಸಿಕೊಂಡು ಅವಳಿಗೆ ಒಂದು ಗೌರವದ ಸ್ಥಾನವನ್ನು ಕಲ್ಪಿಸಿಕೊಡಲಾಗಿದೆ. ದೀರ್ಘಾವಧಿಯ ಬದುಕು ಮತ್ತು ಅವಳು ವ್ಯಕ್ತಿಗತವಾಗಿ ಪ್ರಕಟಿಸಿರುವ ಸ್ಥಾಯಿಭಾವದ ಕಾರಣವಾಗಿ ಸುತ್ತಲಿದ್ದವರಿಗೆ ಅವಳು ಆದರ್ಶದ ಮಾದರಿಯಾಗಿ ಕಾಣಿಸಿಕೊಂಡಿದ್ದಾಳೆ. ಈ ಆದರ್ಶದ ವರ್ತುಲದಲ್ಲಿ ಬದುಕಬೇಕಾದ ಸೀತೆ, ನಾಗಿಯರು ಈ ಪರಂಪರೆಯನ್ನು ಮುಂದುವರಿಸುವ ಹೊಣೆಗಾರಿಕೆಯುಳ್ಳವರಾಗಿದ್ದಾರೆ. ಸಂಪ್ರದಾಯ ಮತ್ತು ಸಾಂಸ್ಕೃತಿಕ ಪರಸರವನ್ನು ಮೀರುವ ಜಗನ್ನಾಥ, ಅನಂತರಾಮ, ರಾಮದಾಸನಂತ ವರನ್ನು ತಿರಸ್ಕರಿಸುವ ಮೂಕಜ್ಜಿಯ ಆದರ್ಶದಲ್ಲಿ ದೌರ್ಬಲ್ಯಗಳಿಗೆ ಅವಕಾಶವಿಲ್ಲ. ಆಧುನಿಕತೆಗಿಂತಲೂ ಹೆಚ್ಚಾಗಿ ಸಂಪ್ರದಾಯದ ಮೂಲ ಸ್ವರೂಪವನ್ನು ನಂಬಿಕೆಗಳ ಆಧಾರವಿಲ್ಲದೆ ಸ್ವೀಕರಿಸುವ ಭಾವದ ಮೂಕಜ್ಜಿ ವ್ಯಕ್ತಿತ್ವವನ್ನು ಸಾಂಪ್ರದಾಯಕ ಸ್ತ್ರೀಮಾದರಿಗಿಂತ ಹೊರತಾಗಿ ಕಾಣವುದು ಕಷ್ಟಸಾಧ್ಯ.

**ಅಡಿಟಿಪ್ಪಣಿಗಳು :**

೧. ಕಾರಂತ, ಶಿವರಾಮ (೧೯೩೭), **ಸರಸಮ್ಮನ ಸಮಾಧಿ**, ಎಸ್.ಬಿ.ಎಸ್. ಪಬ್ಲಿಶರ್ಸ್, ಬೆಂಗಳೂರು ೧೯೯೭. ಪುಟ:೬.

೨. ಅದೇ, ಪುಟ: ೧೧೦.

೩. ಅದೇ. ಪುಟ:೧೦೮.

೪. ಕಾರಂತ, ಶಿವರಾಮ (೧೯೬೦), **ಅಳಿದಮೇಲೆ**, ಎಸ್.ಬಿ.ಎಸ್. ಪಬ್ಲಿಶರ್ಸ್ , ಬೆಂಗಳೂರು. ೧೯೯೩. ಪುಟ: ೮೪.

೫. ಕಾರಂತ, ಶಿವರಾಮ (೧೯೭೦), **ಮೈಮನಗಳ ಸುಳಿಯಲ್ಲಿ**, ಎಸ್.ಬಿ.ಎಸ್. ಪಬ್ಲಿಶರ್ಸ್ , ಬೆಂಗಳೂರು, ೧೯೯೨, ಪುಟ: ೧೮.

೬. ಅದೇ, ಪುಟ: ೧೧ - ೧೨.

೭. ಅದೇ, ಪುಟ: ೩೩.

೮. ಅದೇ, ಪುಟ ೮.

೯. ಕುರ್ತಕೋಟಿ, ಕೀರ್ತಿನಾಥ, **‘ಕಾರಂತರ ಕಾದಂಬರಿಗಳಲ್ಲಿ ಸಂವೇದನೆಯ ಬೆಳವಣಿಗೆ’**. ವಿಮರ್ಶೆಯ ವಿನಯ: ಕಾದಂಬರಿ, ಮನೋಹರ ಗ್ರಂಥಮಾಲೆ, ಧಾರವಾಡ, ೧೯೮೨. ಪುಟ: ೬೯.

೧೦. ಕಾರಂತ, ಶಿವರಾಮ, ‘ಮನ್ನುಡಿ: **ಮೂಕಜ್ಜಿಯ ಕನಸುಗಳು**’, ಹರ್ಷ ಪ್ರಕಟಣಾಲಯ, ಪುತ್ತೂರು, ೧೯೬೮, ಪುಟ: ii-iv.

೧೧. ನಾರಾಯಣ ಕೆ.ವಿ. **ಸಾಧನೆ** - ಸಂಪುಟ ೭, ಸಂಚಿಕೆ ೧೯೭೮, ಪುಟ ೭.

೧೨. ಅದೇ ಪುಟ ೮

೧೩. ಅಮೂರ, ಜಿ.ಎಸ್. **‘ಕಾರಂತರ ಕಾದಂಬರಿಗಳಲ್ಲಿ ಬದುಕುವ ಬಗೆಗಳ ಅನ್ವೇಷಣೆ’** ಕನ್ನಡ ಕಥನ ಸಾಹಿತ್ಯ: ಕಾದಂಬರಿ, ಶ್ರೀಹರಿ ಪ್ರಕಾಶನ, ಧಾರವಾಡ, ೧೯೯೪ ಪುಟ:೧೬೯.

೧೪. ಪರಿಮಳ, **‘ಮೂಕಜ್ಜಿಯ ಕನಸುಗಳು - ಒಂದು ಮನೋವೈಜ್ಞಾನಿಕ ವಿಶ್ಲೇಷಣೆ’** ಕಾದಂಬರಿ ಕಣ್ಣಲ್ಲಿ ಕಾರಂತರು, ಪ್ರತಿಭಾ ಯುವವೇದಿಕೆ, ಬೆಂಗಳೂರು ೧೯೯೨. ಪುಟ: ೮.

೧೫. ಅದೇ ಪುಟ: ೧೧.

## ಅಧ್ಯಾಯ ೮

# ಭೈರಪ್ಪನವರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು

ಭೈರಪ್ಪನವರ ಕಾದಂಬರಿಗಳ ಕೇಂದ್ರ ಪ್ರಜ್ಞೆ ವೈಚಾರಿಕತೆ. ವೈಚಾರಿಕತೆಯನ್ನು ಅನುಸರಿಸಿಕೊಂಡು ವಸ್ತು, ಕಥಾ ಸಂವಿಧಾನ, ಪಾತ್ರಚಿತ್ರಣ ಮತ್ತು ಇತರ ವಿವರಗಳು ಕಾಣಿಸಿಕೊಳ್ಳುತ್ತವೆ. ಧರ್ಮ ಮತ್ತು ಸಂಸ್ಕೃತಿಯ ನೆಲೆಗಟ್ಟಿನ ಮೇಲೆ ಕಟ್ಟಲಾದ ವೈಚಾರಿಕತೆಯನ್ನು ಭೈರಪ್ಪನವರ ಬಹುಪಾಲು ಕಾದಂಬರಿಗಳು ಪ್ರತಿಪಾದಿಸುತ್ತವೆ. ಈ ಕಾದಂಬರಿಗಳನ್ನು ಅವು ಪ್ರತಿಪಾದಿಸುವ ಧರ್ಮಸಂಬಂಧಿ ವಿಚಾರಗಳಿಂದ ಹೊರತು ಪಡಿಸಿ ನೋಡುವುದು ಸಾಧ್ಯವಾಗುವುದಿಲ್ಲ. ಧರ್ಮ ಎನ್ನುವುದು ಈ ಕಾದಂಬರಿಗಳ ಆಶಯದ ಬಹುಮುಖ್ಯ ಭಾಗವಾಗಿಯೇ ಗೋಚರಿಸಿದೆ.

ಭೈರಪ್ಪನವರ ಕಾದಂಬರಿಯ ವೈಚಾರಿಕತೆ ಮುಖ್ಯವಾಗಿ ಯುಗಪರಿವರ್ತನೆ ಕಾಲದ ಆಧುನಿಕತೆ ಮತ್ತು ಪ್ರಾಚೀನ ಮೌಲ್ಯಸಂಪ್ರದಾಯಗಳ ನಡುವಿನ ಸಂಘರ್ಷ ಅಥವಾ ಮುಖಾಮುಖಿಯನ್ನು ಒಳಗೊಂಡಿದೆ. 'ವಂಶವೃಕ್ಷ'ದಿಂದ ಇತ್ತೀಚಿಗಿನ 'ತಂತು'ವಿನವರೆಗೆ, ಈ ಕಾದಂಬರಿಗಳು ಸಂಘರ್ಷ ಸ್ವರೂಪವನ್ನು ವಿವರಿಸುವ ಪ್ರಧಾನ ಕಾಳಜಿಯನ್ನು ಅಭಿವ್ಯಕ್ತ ಪಡಿಸಿವೆ. ಈ ಸಂಘರ್ಷದ ಪರಿಣಾಮವಾಗಿ ಸಾಂಸ್ಕೃತಿಕ, ಧಾರ್ಮಿಕ ಮತ್ತು ಸಾಮಾಜಿಕ ರಂಗಗಳಲ್ಲಿ ಉಂಟಾಗಿರುವ ಬದಲಾವಣೆಗಳನ್ನು ದಾಖಲಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಸಂಘರ್ಷಕಾಲದ ಬದಲಾವಣೆಗಳನ್ನು ಎದುರಿಸಬೇಕಾದ ಜನಸಮೂಹ, ಅವರ ವೈಯಕ್ತಿಕ, ಮತ್ತು (ಹಾಗೂ) ಸಾಮಾಜಿಕ ಜೀವನದಲ್ಲಿ ಉಂಟಾಗುವ ಪರಿವರ್ತನೆಗಳು, ಆಂತರಿಕ ತುಮುಲಗಳು, ಸೋಲುಗೆಲವುಗಳು ಇವುಗಳನ್ನು ಲೇಖಕ ತನ್ನ ದೃಷ್ಟಿಕೋನದ ಮೂಲಕ ಪರಿಶೋಧನೆಗೆ ಒಳಪಡಿಸಿದ್ದಾರೆ. ಮತ್ತು ಅವರ ಒಲವು ಸಂಪ್ರದಾಯನಿಷ್ಠತೆಯ ಕಡೆಗೆ ಹೆಚ್ಚು ಪರವಾಗಿ ನಿಂತಿದೆ.

ಯಾವುದೇ ರೀತಿಯ, ಯಾವುದೇ ಕಾಲದಲ್ಲಿ ನಡೆಯುವ ಪರಿವರ್ತನೆಗಳು, ಉಂಟಾಗುವ ಬದಲಾವಣೆಗಳು ಅವು ಸಾಂಸ್ಕೃತಿಕ ವಿಚಾರಗಳನ್ನು ಒಳಗೊಂಡಿರುವ ಪಕ್ಷದಲ್ಲಿ ಅದರ ಪರಿಣಾಮವನ್ನು ನೇರವಾಗಿ ಎದುರಿಸಬೇಕಾದವರು ಆ ಪರಿಸರದಲ್ಲಿ ಬದುಕುವ ಸ್ತ್ರೀಯರು. ಸ್ತ್ರೀಸಮೂಹದ ಮೇಲೆ ಉಂಟಾಗುವ ಈ ಪರಿಣಾಮವನ್ನು ಭೈರಪ್ಪನವರೂ ಗುರುತಿಸುತ್ತಾರೆ.

ಇಲ್ಲಿ ಮೌಲ್ಯಪ್ರತಿಪಾದನೆಗೆ ಬೆಂಬಲ ಸೂಚಿಸುವವರು ಹೆಂಗಸರೇ; ಅದೇ ರೀತಿ ಆಧುನಿಕತೆಯನ್ನು ಮೈಗೂಡಿಸಿಕೊಳ್ಳಲು ಮುಂದುವರಿಯುವವರೂ ಹೆಂಗಸರೇ. ಈ ಹಿನ್ನೆಲೆಯಲ್ಲಿ ಭೈರಪ್ಪನವರ ಕಾದಂಬರಿಗಳ ಸ್ತ್ರೀ ಪಾತ್ರಚಿತ್ರಣವನ್ನು ಗಮನಿಸುವುದು ಅಗತ್ಯ.

## ಪಾತ್ರಚಿತ್ರಣ

ಭೈರಪ್ಪ ವಿವರಿಸುತ್ತಿರುವ ಸಾಂಸ್ಕೃತಿಕ ಪರಿಸರದಲ್ಲಿ ಹೆಣ್ಣಿಗೆ ವಿಶಿಷ್ಟ ಸ್ಥಾನವಿದೆ. ವಂಶಾಭಿವೃದ್ಧಿ, ಗೃಹಸ್ಥಧರ್ಮ, ಕುಲಧರ್ಮ ಮತ್ತು ಸಂಸ್ಕೃತಿ ವಕ್ತಾರತೆಯಲ್ಲಿ ಹೆಣ್ಣಿಗೆ ಮಹತ್ವದ ಸ್ಥಾನವಿದೆ. ಈ ಸ್ಥಾನಕ್ಕನುಗುಣವಾಗಿ ಅವಳ ಸ್ವಭಾವ, ನಡೆ, ನುಡಿ, ಅಥವಾ ಅವಳ ಇಡೀ ವ್ಯಕ್ತಿತ್ವ ಸ್ವರೂಪವನ್ನು ನಿರ್ಧರಿಸಿಕೊಳ್ಳಲಾಗಿದೆ. ಈ ನಿರ್ಧಾರಿತ ವ್ಯಕ್ತಿತ್ವದಲ್ಲಿ ಯಾವುದೇ ರೀತಿಯ ಬಾಹ್ಯವಾಗಲೀ, ಆಂತರಿಕವಾಗಿ ಬದಲಾವಣೆಗಳನ್ನು ಆಪೇಕ್ಷಿಸುವ ಕಾರಣಗಳನ್ನು ಇಲ್ಲಿ ಬಲವಾಗಿ ವಿರೋಧಿಸಲಾಗಿದೆ. ಈ ವಿರೋಧದ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಹೆಣ್ಣಿನ ಸೋಲುಗೆಲವುಗಳನ್ನು, ದುಃಖ, ಸಂಕಟಗಳನ್ನು, ದುರಂತವನ್ನು ತಿಳಿಯುವುದು ಆವಶ್ಯಕವಾಗಿದೆ.

ಭೈರಪ್ಪನವರ ಕಾದಂಬರಿಗಳಲ್ಲಿ ಪುರುಷಪಾತ್ರಗಳು ಪ್ರಧಾನವಾಗಿದೆ. ಕಥಾ ನಾಯಕಿಯರು ಎನ್ನಬಹುದಾದ ಸ್ತ್ರೀಪಾತ್ರಗಳಿಗೂ ಸಮಾನಾಂತರ ಅವಕಾಶವನ್ನು ಇಲ್ಲಿ ನೀಡಲಾಗಿದೆ. ಕಾದಂಬರಿ ಉದ್ದೇಶಕ್ಕೆ ಹೊಂದಿಕೊಂಡು ದುರಂತವೆನಿಸಬಹುದಾದ ಈ ಸ್ತ್ರೀ ಪಾತ್ರಗಳು ತೋರುವ ಅಂತಃಸತ್ಯ, ಧೈರ್ಯ, ದೃಡತೆ ಮತ್ತು ನಿಷ್ಠೆಗಳು ಮಾತ್ರ ಉಲ್ಲೇಖಾರ್ಹವಾಗಿದೆ.

‘ದಾಟು’ ವಿನ ಸತ್ಯಾಭಾಮೆ, ‘ಗೃಹಭಂಗ’ದ ನಂಜಮ್ಮ, ‘ಗೃಹಣ’ದ ಸರೋಜಾ, ‘ಅಂಚು’ ವಿನ ಅಮೃತ,‘ತಂತು’ ವಿನ ಕಾಂತಿ, ಮತ್ತು ‘ವಂಶವೃಕ್ಷ’ದ ‘ಕಾತ್ಯಾಯನಿ’ ಇಲ್ಲಿ ನಾಯಕಿ ಪಾತ್ರದಲ್ಲಿರುವವರು.

ಭಾಗೀರಥಮ್ಮ, ಕಲ್ಲಮ್ಮ, ಅಚ್ಚಮ್ಮ, ನಂಜಮ್ಮ, ವೆಂಕಮ್ಮ, ರಂಗಮ್ಮ, ತಾಯವ್ವ, ಮೊದಲಾದವರು ಹಿರಿಯ, ತಾಯಿ ಸ್ಥಾನದಲ್ಲಿರುವವರು.ಲಿಲ್ಲಿ, ಹಿಲ್ಡಾ, ನಾಗಲಕ್ಷ್ಮಿ, ಲಲಿತಮ್ಮ, ಸುನಂದಾ, ಸುಧಾಬಾಯಿ, ವಸು, ರಾಚಮ್ಮ, ಲಲಿತ, ವೈದೇಹಿ, ರಂಗಲಕ್ಷ್ಮಿ ಮೊದಲಾದವರು ಪತ್ನಿ ಸ್ಥಾನದಲ್ಲಿರುವವರು. ಭೈರಪ್ಪನವರ ಕಾದಂಬರಿಗಳಲ್ಲಿ ಹೆಣ್ಣಿನ ಬಾಲ್ಯದ ವಿವರಗಳು ಹೆಚ್ಚಾಗಿ ಕಾಣಿಸಿಕೊಳ್ಳುವುದಿಲ್ಲ. ಇಲ್ಲಿರುವ ಸ್ತ್ರೀಪಾತ್ರಗಳಲ್ಲಿ ಮನೆಯ ಹಿರಿಯ ಹೆಂಗಸರನ್ನು ಬಿಟ್ಟರೆ, ಉಳಿದ ಸ್ತ್ರೀಪಾತ್ರಗಳೆಂದರೆ - ವಿವಾಹಯೋಗ್ಯ ವಯಸ್ಸಿನ ಯುವತಿಯರು. ‘ದೂರಸರಿದರು’, ಕಾದಂಬರಿಯಲ್ಲಿ ಪದವಿ, ಸ್ನಾತಕೋತ್ತರ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿನಿಯರಿದ್ದಾರೆ.

ವಿನತೆ, ಉಮೆ, ರಮೆ, ವಿಜಯ, ಜಗದಾಂಬಾ ಈ ಕಾದಂಬರಿಯಲ್ಲಿರುವ ಯುವತಿಯರು. ಉನ್ನತ ವ್ಯಾಸಂಗ ಮಾಡಿರುವ, ಶಿಕ್ಷಣ, ಉದ್ಯೋಗದ ಅವಕಾಶವನ್ನು ಪಡೆದಿರುವ, ವಿಚಾರವಾದಿ ಯುವತಿಯವರು ಇಲ್ಲಿ ಕಾಣಿಸಿಕೊಳ್ಳುತ್ತಾರೆ. ಡಾ|| ಸರೋಜಾ, ಡಾ|| ಅಮೃತ, ಸತ್ಯಭಾಮೆ, ಉಮೆ, ಕಾಂತಿ, ಕಾತ್ಯಾಯನಿ, ಸಾವಿತ್ರಿ, ರಂಗಲಕ್ಷ್ಮಿ, ಶೈಲಜಾ,ಲಲಿತ ಮೊದಲಾದವರು ವಿದ್ಯಾವಂತೆಯರು. ಉದ್ಯೋಗವನ್ನು ಪಡೆದವರು.

ತಮ್ಮ ಸ್ವಂತ ಪರಿಶ್ರಮ ಮತ್ತು ಸ್ವಸಾಮರ್ಥ್ಯದಿಂದ ಬದುಕಿನ ಕಷ್ಟಪರಂಪರೆಗಳನ್ನು ಎದುರಿಸಿ ಬದುಕನ್ನು ಸಹ್ಯಗೊಳಿಸುವ ನಿರಂತರ ಪ್ರಯತ್ನದಲ್ಲಿರುವವರಲ್ಲಿ ಜೀವನ ಪ್ರೀತಿ ಪ್ರಧಾನವಾಗಿದೆ. ನಂಜಮ್ಮ, ಸುನಂದ, ಭವಾನಿ ಮೊದಲಾದವರು ವಿಧಿ, ಕರ್ಮವೆಂಬುದರಲ್ಲಿ ನಂಬಿಕೆ ಇಡದೆ, ಸ್ವಂತ ಪ್ರಯತ್ನದಲ್ಲಿ ವಿಶ್ವಾಸವನ್ನು ಇಟ್ಟುಕೊಂಡವರು.

ಭಿನ್ನ ಸಂಸ್ಕೃತಿಯಲ್ಲಿ ಹುಟ್ಟಿ, ಬೆಳೆದು, ಆಚರಣೆ, ಸಂಪ್ರದಾಯಗಳಿಂದ ತೀರಾ ಬೇರೆ ರೀತಿಯ ನಡಾವಳಿಗಳನ್ನು ಅನುಸರಿಸಿಕೊಂಡು ಬಂದವರಾಗಿ, ಈ ಮಣ್ಣಿನ ಗಂಡಂದಿರನ್ನು ವರಿಸಿ, ಈ ಸಂಸ್ಕೃತಿಯ ಸಂಪ್ರದಾಯ, ನಡೆ, ನುಡಿಗಳಿಗೆ ಹೊಂದಿಕೊಳ್ಳಲು ಪ್ರಯತ್ನಿಸುತ್ತ ನಾನಾವಿಧದ ಪ್ರತಿರೋಧಗಳನ್ನು ಎದುರಿಸುತ್ತ ಕೊನೆಗೆ ಹಲವು ಕಾರಣಗಳಿಂದಾಗಿ ಈ ಪರಿಸರದಿಂದ ದೂರವಾಗುವ ನಿರ್ಧಾರ ತೆಗೆದುಕೊಳ್ಳಬೇಕಾದ ವಿದೇಶೀ ಸ್ತ್ರೀಯರು ಇಬ್ಬರಿದ್ದಾರೆ.

'ತಬ್ಬಲಿಯು ನೀನಾದೆ ಮಗನೆ' ಯ ಕಾಳಿಂಗನ ಪತ್ನಿ ಹಿಲ್ಡಾ ಮತ್ತು 'ವಂಶವೃಕ್ಷ' ಕಾದಂಬರಿಯ ಸದಾಶಿವರಾಯರ ದ್ವಿತೀಯ ಪತ್ನಿ; ಕರುಣಾರತ್ನೆ'. ಸ್ವಧರ್ಮ ಬೇರೆಯಾದರೂ ಕೂಡ ತಾನು ಪ್ರೀತಿಸಿದವನಿಗಾಗಿ ಅದನ್ನು ತ್ಯಜಿಸಿ, ತನ್ನ ರೂಢಿಗತ ವಿಚಾರಗಳನ್ನು ಬದಲಾಯಿಸಿಕೊಂಡು ಮತಾಂತರಕ್ಕೆ ಹೊಂದಿಕೊಂಡವಳು ಲಿಲ್ಲಿ. 'ಧರ್ಮಶ್ರಿ'ಯ ಸತ್ಯನಾರಾಯಣನ ಕ್ರಿಶ್ಚಿಯನ್ ಪತ್ನಿ. ಲಿಲ್ಲಿಯನ್ನು ಸ್ವೀಕರಿಸಿದ ಸಾಂಸ್ಕೃತಿಕ ಪರಿಸರ ಹಿಲ್ಡಾ, ರತ್ನೆಯರಿಗೆ ಹೆಚ್ಚಿನ ಅವಕಾಶವನ್ನು ನೀಡಿಲ್ಲ.

ತಾವು ನಂಬಿ ಬಂದ ಧರ್ಮವಾಗಲಿ, ಆದರ್ಶವಾಗಲಿ, ಇವುಗಳನ್ನು ಕೊನೆಯವರೆಗೆ ಬಿಟ್ಟುಕೊಡದೆ, ಶ್ರದ್ಧೆನಿಷ್ಠೆಯಿಂದ ಪಾಲಿಸಿಕೊಂಡು ಬರುವ ಪುರುಷ ಪಾತ್ರಗಳಿರುವಂತೆ ಅವರಿಗೆ ಬೆಂಬಲವಾಗಿ ನಿಂತು, ಅಷ್ಟೇ ಶ್ರದ್ಧೆಯಿಂದ ನಡೆದುಕೊಳ್ಳುವ ಹಿರಿಯ ಹೆಂಗಸರೂ ಇಲ್ಲಿ ಕಾಣಿಸಿಕೊಳ್ಳುತ್ತಾರೆ. ಈ ಹೆಂಗಸರನ್ನು ಯಾವುದೇ ರೀತಿ ಗೊಂದಲವಾಗಲಿ, ದ್ವಂದ್ವವಾಗಲಿ ಕಾಡುವುದಿಲ್ಲ. ತರ್ಕದ ವಿಚಾರಗಳನ್ನು ಮನಸ್ಸಿಗೆ ತಂದುಕೊಳ್ಳದೆ, ಭಾವುಕತೆಗಿಂತಲೂ ಅನುಭವದ ಮೂಲಕ ಮಾನಸಿಕ ದೃಢತೆಯನ್ನು ತಂದುಕೊಂಡ ಸ್ತ್ರೀಯರು ಇವರು. ಒಟ್ಟು ವ್ಯವಸ್ಥೆಯ ಪರವಾಗಿ ಈ ವ್ಯಕ್ತಿತ್ವ ನಿಂತುಕೊಳ್ಳುವದರಿಂದ ಯಾವುದೇ ಪರಿಸ್ಥಿತಿಯಲ್ಲಿ ವಿಚಲಿತಗೊಳ್ಳದೆ ಉಳಿಯುವುದು ಈ ಹೆಂಗಸರಿಗೆ ಸಾಧ್ಯವಾಗುತ್ತದೆ. 'ವಂಶವೃಕ್ಷ'ದ ಭಾಗೀರಥಮ್ಮ, ಲಕ್ಷ್ಮಿ, 'ಗೃಹಣ'ದ ಅಚ್ಚಮ್ಮ, ಲಲಿತ, 'ನಾಯಿನೆರಳು' ವಿನ ನಂಜಮ್ಮ ವೆಂಕಮ್ಮ, 'ತಬ್ಬಲಿಯು' ನೀನಾದೆ ಮಗನೆಯ ಮೂಗಿ ತಾಯಮ್ಮ, ಮೊದಲಾದವರು.

ಶ್ರೀನಿವಾಸ ಶ್ರೋತ್ರಿಯವರ ಧರ್ಮನಿಷ್ಟ ಉಪದೇಶದ ಮಾತುಗಳು, ಅವರು ನೀಡುವ ಪರಿಹಾರಗಳಲ್ಲಿ ಅವರ ಪತ್ನಿ ಭಾಗೀರಥಮ್ಮ ಮತ್ತು ಮನೆಯವಳೇ ಆಗಿಹೋದ ಲಕ್ಷ್ಮಿಯರಿಗೆ ಅತೀವ ನಂಬಿಕೆ, ಶ್ರದ್ಧೆಗಳು. ಶ್ರೋತ್ರಿಯವರ ವಿಚಾರ ಆಧಾರಿತವಾಗಿ ತಮ್ಮ ಚಿಂತನೆಗಳನ್ನು ಮನಸ್ಸಿನ ತರ್ಕಗಳನ್ನು ಬೆಳಸಿಕೊಂಡ ಈ ಸ್ತ್ರೀಯರು ತಮ್ಮ ದೃಢತೆ ಮತ್ತು ಮಾನಸಿಕ ಸ್ವಾಸ್ಥದ ಮೂಲಕ ನೆಮ್ಮದಿಯಾಗಿ ಬದುಕುತ್ತಾರೆ.

ನಂಜಮ್ಮನಿಗೆ ಸತ್ತುಹೋದ ಮಗ ವಿಶ್ವೇಶ್ವರನೇ ಈಗ ಕ್ಷೇತ್ರಪಾಲನಾಗಿ ಬಂದನೆಂದರೆ ಯಾವ ಅಪನಂಬಿಕೆಗಳೂ ಕಾಡುವುದಿಲ್ಲ. ಪುನರ್ಜನ್ಮದ ಕಲ್ಪನೆಯನ್ನು ಮೂಡಿಸುವ ಸಾಂಸ್ಕೃತಿಕ ಪರಿಸರದಲ್ಲಿ ಹುಟ್ಟಿಬೆಳೆದ ಅವಳಿಗೆ ತಾನು ಬೆಳೆಸಿಕೊಂಡ ಶ್ರದ್ಧೆ ಮೂಲಕವೇ ಅಪರಿಚಿತನಲ್ಲಿ ಮಗನನ್ನು ಕಾಣುವುದು ಸಾಧ್ಯವಾಗುತ್ತದೆ. ಆದುದರಿಂದ ಕ್ಷೇತ್ರಪಾಲನಿಗೆ ಜೈಲುಶಿಕ್ಷೆಯಾಗಿ, ಎರಡನೇ ಸಲ 'ಮಗ'ನ ಕಲ್ಪನೆಯಿಂದ ದೂರವಾಗಿ ಬದುಕುವ ಪ್ರಸಂಗ ಬಂದಾಗ ನಂಜಮ್ಮ ಸಹಿಸಲಾರದೆ ಸತ್ತು ಹೊಗುತ್ತಾಳೆ. ಕ್ಷೇತ್ರಪಾಲವನ್ನು 'ಗಂಡನಾಗಿ' ಸ್ವಿಕರಿಸಬೇಕಾದ ವೆಂಕಮ್ಮನು ಅದೇ

ಪರಿಸರದಲ್ಲಿ ಹುಟ್ಟಿ, ಬೆಳೆದವಳು. ತನ್ನ ಮಗನ ವಯಸ್ಸಿನವನಾಗಿರಬಹುದಾದ ಕ್ಷೇತ್ರಪಾಲನನ್ನು ಗಂಡನೆಂದು ತಿಳಿದುಕೊಂಡೇ ಅವನ ಸೇವೆ ಮಾಡುತ್ತಾಳೆ. ತನ್ನ ತಾಯಿ ಮೇಲೆ ವಂಚನೆ ನಡೆಯುತ್ತದೆ ಎಂಬ ಭಾವನೆಯಿಂದ ಅಚ್ಯುತ ವ್ಯಾಜ್ಯಹೂಡಿ ಕ್ಷೇತ್ರಪಾಲನಿಗೆ ಶಿಕ್ಷೆಯಾಗುವಂತೆ ನೋಡಿಕೊಂಡರೆ, ವೆಂಕಮ್ಮ ಆ ಪರಿಸರವನ್ನು ತನ್ನ ಮಗನನ್ನು ತೊರೆದು ದೂರ ಹೋಗುತ್ತಾಳೆ. ತಾನು ಅನುಭವಿಸುತ್ತಿರುವ ಕಷ್ಟ, ಸಂಕಟಗಳಿಗೆ ಕಾರಣವೇನಿರಬಹುದೆಂಬ ಕೂತುಹಲದಿಂದ ಎರಡನೇ ಬಾರಿ ತನ್ನ ಬಳಿ ಬಂದ ಕ್ಷೇತ್ರಪಾಲನಲ್ಲಿ ವಿಚಾರಿಸಿದಾಗ ----

"ತಪ್ಪನ್ನು ನಾವೇ ಮಾಡಬೇಕಾಗಿಲ್ಲ. ನಮಗೆ ಸಂಬಂಧಿಸಿದ ಇನ್ನೊಬ್ಬರ ತಪ್ಪಿನ ಪರಿಣಾಮ ನಮ್ಮ ಮೇಲೂ ಆಗುತ್ತದೆ. ಅಲ್ಲದೆ ಯಾವ ಯಾವ ಜನ್ಮದಲ್ಲಿ ನಾವು ಏನು ಮಾಡಿರುತ್ತೇವೆಯೋ ಯಾರಿಗೆ ಗೊತ್ತು? ಎಲ್ಲ ಕಷ್ಟಗಳು ಪಾಪದ ಫಲವಾಗಿಯೇ ಬರೋದಿಲ್ಲ"' (ನಾಯಿನೆರಳು:೨೦೪'೧೯೮೭) - ಈ ಉತ್ತರದಿಂದಲೇ ವೆಂಕಮ್ಮ ತೃಪ್ತಳಾಗಬೇಕಾಗುತ್ತದೆ. ನಂಜಮ್ಮನೂ (ಗೃಹಭಂಗ) ತನ್ನ ಬದುಕಿನ ಕಷ್ಟಪರಂಪರೆಗೆ ಕಾರಣವೇನಿರಬಹುದೆಂದು ಮಾದೇವಯ್ಯನವರಲ್ಲಿ ಕೇಳುತ್ತಾಳೆ. ಕರ್ಮಸಿದ್ಧಾಂತಗಳಲ್ಲಿ ಅಚಲವಾದ ನಂಬಿಕೆಯನ್ನು ಇಡುವ ಮೂಲಕ ಈ ಹೆಂಗಸರು ತಮ್ಮ ದುಃಖಕ್ಕೆ ಪರಿಹಾರವನ್ನು ಗುರುತಿಸಿಕೊಂಡು ಬದುಕನ್ನು ಸಹ್ಯಗೊಳಿಸುತ್ತಾರೆ. ಆದುದರಿಂದ ದ್ವಂದ್ವ ಇವರನ್ನು ಕಾಡುವುದು ಕಡಿಮೆ.

ತಮ್ಮ ಮಗ ಉಚ್ಚ ಜಾತಿಯ ಹೆಣ್ಣನ್ನು ವರಿಸಿದರೆ ತನ್ನ ಮನೆತನಕ್ಕೆ ಶಾಪ ತಟ್ಟುತ್ತದೆ ಎನ್ನುವ ಭಾವನೆ ವ್ಯಕ್ತಪಡಿಸುವ ರಂಗಮ್ಮ ಸ್ವತಃ ಸತ್ಯಭಾಮೆ ಶ್ರೀನಿವಾಸರ ಮದುವೆಗೆ ಆತಂಕವೊಡ್ಡುತ್ತಾಳೆ. ಸಂಪ್ರದಾಯ, ಮನೆತನ, ದೇವರು ಮೊದಲಾದುವುಗಳಲ್ಲಿ, ನಂಬಿಕೆ ವಿಶ್ವಾಸವಿರಿಸಿಕೊಂಡಿರುವ ರಂಗಮ್ಮನಿಗೆ ಸತ್ಯಭಾಮೆ ಸೊಸೆಯಾಗಿ ಮನೆಯೊಳಗೆ ಕಾಲಿಟ್ಟರೆ, ಅವಳ ಕೈಯಲ್ಲಿ, ತಾನು ಕೆಲಸ ಮಾಡಿಸಿದರೆ ಶಾಪ ತಟ್ಟುತ್ತದೆ ಎಂಬ ಆತಂಕವಿರುತ್ತದೆ. ಅದೇ ರೀತಿ ವೈಜ್ಞಾನಿಕ ತಿಳುವಳಿಕೆ ಇದ್ದರೂ ಸಂಪ್ರದಾಯಸ್ಥನನ್ನು ವಿವಾಹವಾಗಿ, ತಾನಿರುವ ಪರಿಸ್ಥಿತಿಯಲ್ಲಿಯ ಧಾರ್ಮಿಕ ವಾತಾವರಣದಲ್ಲಿ ತನ್ನ ಸ್ವಭಾವವನ್ನು ಬದಲಾಯಿಸಿಕೊಂಡ ಲಲಿತಮ್ಮ ಅವೈಜ್ಞಾನಿಕವಾಗಿ ಯೊಚಿಸುತ್ತಾಳೆ. ಡಾ|| ಸರೋಜಾ ಮತ್ತು ಸ್ವಾಮಿಯ ವಿವಾಹದಿಂದ ದುಷ್ಪರಿಣಾಮವುಂಟಾಗುವುದೆಂಬ ಆತಂಕದಲ್ಲಿ ಸರೋಜಾಳನ್ನು ನಿಂದನೆ, ತಿರಸ್ಕಾರ ಮುಂತಾದ ಭಾವನೆಗಳಿಂದ ಹಳಿಯುತ್ತಾಳೆ. "...ಸ್ವಾಮಿಗಳು ಸಂನ್ಯಾಸಿ ಗೃಹಸ್ಥರಾಗಭೌದೆ? ಅಂಥೊರ ಮನಸ್ಸಿನಲ್ಲಿ ಹುಟ್ಟೋದು ಮೋಹ. ಆ ಮೋಹ ಹುಟ್ಟುಕ್ಕೆ ಕಾರಣಳಾಗಿ, ಅವಕಾಶ ಕೊಟ್ಟು ಇನ್ನು ಹಟಮಾಡ್ತಿದಾಳಲ್ಲ. ಅವಳಿಗೆ ಎಂಥಾ ನರಕ ಸಿಕ್ಕಬೇಕು'!" (ಗೃಹಣ:೮೧-೮೨:೧೯೮೭)

ಸನ್ಯಾಸಿಯ ನೈತಿಕ ಅದಃಪತನಕ್ಕೆ ಕಾರಣವಾಗುವ ಹೆಣ್ಣೆಂದು ಸರೋಜಾಳನ್ನು ಜರಿಯುವುದರಲ್ಲಿ ಶಾಸ್ತ್ರೀ, ಗೌಡರ ಜತೆ ಲಲಿತಮ್ಮ, ಅಚ್ಚಮ್ಮರೂ ಸಹಕರಿಸುತ್ತಾರೆ. ಗೋರಕ್ಷಣೆಯ ಸಾಂಸ್ಕೃತಿಕ ವಿಚಾರಗಳನ್ನು ರಕ್ತಗತ ಮಾಡಿಕೊಂಡಿರುವ ತಾಯಮ್ಮ ಪುಣ್ಯಕೋಟಿ ತಳಿಗಳನ್ನು ರಕ್ಷಿಸುವಲ್ಲಿ ತನ್ನನ್ನು ಹೆತ್ತಮಗ ಕಾಳಿಂಗನಿಂದ ಪ್ರತ್ಯೇಕಿಸುವ ಭಾವದಲ್ಲಿ ಸ್ವಲ್ಪವೂ ವಿಚಲಿತಳಾಗುವುದಿಲ್ಲ. ತಾಯಮ್ಮನಿಗೆ ಮಗನಿಗಿಂತಲೂ, ಮಗನ ವಿಚಾರಗಳಿಗಿಂತಲೂ, ತಾನು ನಂಬಿಬಂದ ಆಚಾರ ವಿಚಾರಗಳೇ ಬದುಕಿನಲ್ಲಿ ಮುಖ್ಯವಾಗುತ್ತವೆ. ಕುಲಧರ್ಮ ಅನುಸರಣೆಯ ವಿಚಾರಗಳಿಂದ ತಾಯಿ ಮತ್ತು ಹೆಂಡತಿ ಸ್ಥಾನಗಳಿಗೆ ಭೈರಪ್ಪನವರು ಮಹತ್ವದ ಸ್ಥಾನವನ್ನು ನೀಡುತ್ತಾರೆ. ತಾಯ್ತನವನ್ನು ಇಲ್ಲಿ ಅಪೂರ್ವಭಾವವಾಗಿ ಕಾಣಲಾಗಿದೆ. "ತಾಯಿಯಾಗುವ ಅದಮ್ಯ ಬಯಕೆ

ಪ್ರತಿಯೊಬ್ಬ ಸ್ತ್ರೀಯ ಮೂಲ ಪ್ರವೃತ್ತಿ‘’’. (ವಂಶವೃಕ್ಷ:೩೩೪:೧೯೮೮)ಯೆನ್ನುವ ಕೇಂದ್ರಪ್ರಜ್ಞೆಯಲ್ಲಿ ಮಾತೃತ್ವದ ಕಲ್ಪನೆಯನ್ನು ಬೆಳೆಸಲಾಗಿದೆ. ಸ್ತ್ರೀಯ ಈ ಮೂಲಪ್ರವೃತ್ತಿಯನ್ನು ಸಹಜ ಕ್ರಿಯೆಗಿಂತಲೂ, ಬಾಹ್ಯಕಾರಣಗಳ ಮೂಲಕ ನಿಯಂತ್ರಣಕ್ಕೆ ಒಳಪಡಿಸುವುದು, ಆ ಮೂಲಕ ಹೆಣ್ಣಿನ ಮೂಲ ಪ್ರಕೃತಿಗೂ ಸಮಾಜದ ಕಟ್ಟಳೆಗಳಿಗೂ ವಿರೋಧವನ್ನು ಕಲ್ಪಿಸಿ, ವೈಚಾರಿಕತೆಯನ್ನು ಬೆಳೆಸುವುದು ಈ ಕಾದಂಬರಿಗಳ ಕ್ರಿಯೆಯ ಒಂದು ಭಾಗವಾಗಿ ಬಂದಿದೆ.

ಫಲವಂತಿಕೆಯನ್ನು ಅಪೂರ್ಣವಾಗಿಸುವುದು, ಸಂತತಿಯಿಂದ ನಿರಾಕರಣೆಯನ್ನು ಪಡೆಯುವುದು ಸಂಪ್ರದಾಯನಿಷ್ಠತೆಯಿಂದ ದೂರವಾದವರಿಗೆ ಶಿಕ್ಷೆಯೆನ್ನುವಂತೆ ಇಲ್ಲಿ ಕಾಣಿಸಲಾಗಿದೆ. ‘ನಷ್ಟವಾದ’ ಗೃಹಕ್ಕೆ ಮತ್ತೆ ಹಿಂತಿರುಗುವುದು ಉಚಿತವಲ್ಲ’ ವೆನ್ನುವ ಮಾತಿಗೆ ವಿರೋಧವಾಗಿ ನಡೆದ ಕಾತ್ಯಾಯಿನಿಗೆ ಮರುವಿವಾಹದಿಂದ ಮಕ್ಕಳಾಗುವುದಿಲ್ಲ. ಮೂರು ಗರ್ಭಪಾತಗಳಿಂದ ಮಾನಸಿಕವಾಗಿ, ದೈಹಿಕವಾಗಿ ನೋವನ್ನು ಅನುಭವಿಸಿದ ಕಾತ್ಯಾಯಿನಿ ತನ್ನ ಪಾಪಪ್ರಜ್ಞೆಯಿಂದಲೇ ಜೀವ ಕಳೆಯುತ್ತಾಳೆ.

ಲಲಿತಾಳ ಮದುವೆಯೂ ಊರಿನವರ ವಿರೋಧವನ್ನು ಎದುರಿಸುತ್ತ ನಡೆದಿರುವಂಥದು. ಹಿಮಗಿರಿ ಕಾಲೇಜಿನ ಪ್ರಿನ್ಸಿಪಾಲರು, ಸ್ವಾಮಿಗಳಿಗೆ ಹೋಲಿಸಬಹುವಾದ ಧರ್ಮಬಲವಿರುವ ವ್ಯಕ್ತಿ. ಅವರು ಸಹೋದ್ಯೋಗಿ ಲಲಿತಾಳಲ್ಲಿ ಆಕರ್ಷಕರಾಗಿ, ಪರಸ್ಪರರು ಮದುವೆಯಾಗುವ ನಿರ್ಣಯ ತೆಗೆದುಕೊಂಡಾಗ ಸಮಿತಿಯವರು, ಊರಿನವರು ಆಘಾತಕ್ಕೆ ಒಳಗಾದವರಂತೆ ವರ್ತಿಸುತ್ತಾರೆ. “ಲಲಿತಮ್ಮನನ್ನು ಕಾಲೇಜಿನಿಂದ,ಈ ಊರಿನಿಂದ, ಈ ಸುತ್ತಿನಿಂದ, ಓಡಿಸಿಬಿಡಬೇಕೆಂಬ ತನಕ ಮಾತೂ ಆಯಿತು. ಈ ಬ್ರಹ್ಮಚಾರಿಯನ್ನು ಅದಃಪತನಗೊಳಿಸಿದ ಹೆಂಗಸೆಂದು ಊರಿವರೆಲ್ಲ ಅವಳನ್ನು ಶಪಿಸಿದರು‘”. (ಗ್ರಹಣ:೮:೧೯೮೭) ಲಲಿತಮ್ಮ ಮದುವೆ ನಂತರ ಊರಿನವರಿಗೆ ಹೆದರಿ ತಮ್ಮ ನೌಕರಿಯನ್ನೇ ತ್ಯಜಿಸುತ್ತಾರೆ. ಅವರಿಗೆ ನಂತರವೂ ಮಕ್ಕಳಾಗದಿರುವುದನ್ನು ಕಂಡು ಊರಿನವರು ಮಾಡುತ್ತಿದ್ದ ಟೀಕೆಗಳು ಲಲಿತಮ್ಮನ ಕಿವಿಗೆ ಬೀಳುತ್ತಿದ್ದವು.“ಧರ್ಮಬಿಟ್ಟ ಹೆಂಗಸಿನ ಮೋಹಕ್ಕೆ ಮರುಳಾಗಿ ಮದುವೆಯಾದರೆ ಮಕ್ಕಳಾಗುತ್ತೆಯೇ‘?” (ಅದೇ, ಪುಟ:೯)

ಸಂನ್ಯಾಸ ಜೀವನದಲ್ಲಿರುವವರು ಮದುವೆಯಾಗುವುದೆಂದರೆ ಧರ್ಮಕ್ಕೆ ವಿರುದ್ಧವೆಂಬ ಭಾವನೆ ಹಿಮಗಿರಿಯಲ್ಲಿರುವ ಎಲ್ಲರಲ್ಲಿಯೂ ಮನೆ ಮಾಡಿತ್ತು. ಈ ಭಾವನೆಯ ಸತ್ಯಾಸತ್ಯತೆಯ ಪ್ರಮಾಣವೆನ್ನವಂತೆ ಲಲಿತಮ್ಮ ಗರ್ಭಿಣಿಯಾಗಿ ಒಂಭತ್ತು ತಿಂಗಳೂ ಆರೈಕೆ ಪಡೆಯುತ್ತಾರೆ. ಆದರೆ ‘ಹುಸಿಗರ್ಭ’ದ ಕಾರಣದಿಂದ ಲಲಿತಮ್ಮನ ದೈಹಿಕ, ಮಾನಸಿಕ ಶ್ರಮಗಳು ವ್ಯರ್ಥವಾಗಿ ಹೋಗುತ್ತವೆ.

ತಂದೆಯ ಮರುಜನ್ಮವನ್ನು ಒಪ್ಪದೇ, ಆತನ ವಿರುದ್ಧ ವ್ಯಾಜ್ಯಹೋಡಿದ ಅಚ್ಚುತನಿಗೆ ಸಂತಾನವಾಗುವುದಿಲ್ಲ. ಅವನ ಹೆಂಡತಿ ಕಾವೇರಿ ಊರಿನವರಿಂದ ವಿಧವಿಧವಾದ ಟೀಕೆಗಳನ್ನು ಕೇಳಬೇಕಾಗುತ್ತದೆ. ತಾನೂ, ಹೆಂಡತಿಯೂ ಆರೋಗ್ಯವಂತರಾಗಿರುವಾಗ ಮಕ್ಕಳಾಗದಿರುವುದಕ್ಕೆ ನಾನು ಮಾಡಿದ ಕರ್ಮ ಕಾರಣವೇ ಎಂದು ಅಚ್ಯುತ್ ಯೋಚಿಸುತ್ತಿದ್ದರೆ, ಅವನ ಹೆಂಡತಿ ಕಾವೇರಿಗೆ ತನ್ನ ಅತ್ತೆಮಾವಂದಿರ ಶಾಪವೇ ಕಾರಣವೆಂಬ ಭಾವನೆ ಇದೆ. ಗ್ರಾಮದೇವತೆಯಲ್ಲಿ ಕೆಂಡ ಸೇವೆ ನಡೆಸಿದರೂ. ದೇವಿ ಅವಾಹನೆಯಲ್ಲಿ ‘ಮಕ್ಕಳಾಗುವುದಿಲ್ಲ’ ಎಂಬ ಮಾತನ್ನು ಕಾವೇರಿ ಕೇಳಿಸಿಕೊಂಡು ನಿರಾಶಳಾಗಬೇಕಾಗುತ್ತದೆ.

ಆಧುನಿಕ ತಂತ್ರಜ್ಞಾನದ ನೆರವಿನಿಂದ ಕೃತಕ ಗರ್ಭಧಾರಣೆ ಮೊದಲಾದ ವೈಜ್ಞಾನಿಕ ಪ್ರಯೋಗಗಳಲ್ಲಿ ತೊಡಗಿಸಿಕೊಂಡ ವ್ಯಕ್ತಿಯ ಹೆಂಡತಿಯಾಗಿ ಸುಧಾಬಾಯಿಯ ಮಾತೃತ್ವದ ಹಂಬಲಿಕೆ ಕೊನೆಯವರೆಗೆ ಈಡೇರುವುದಿಲ್ಲ. ಪ್ರಕೃತಿ ವಿರುದ್ಧ ನಡೆದವರೆಲ್ಲರ ಮೇಲೂ ಪ್ರಕೃತಿ ಸಾಧಿಸಿದ ಸೇಡಿನ ಭಾವವೆನ್ನುವಂತೆ ಫಲವಂತಿಕೆಯಂತಹ ಸಹಜಕ್ರಿಯೆಯನ್ನು ಇಲ್ಲಿ ಿ ಯಂತ್ರಣಕ್ಕೆ ಒಳಪಡಿಸಲಾಗಿದೆ.

ತಾಯ್ತನದ ಬಯಕೆಯನ್ನು ಪ್ರಕಟಿಸಿದರೂ ಕರುಣಾರತ್ನೆಗೆ ಸದಾಶಿವರಾಯರಿಂದ ಅದಕ್ಕೆ ಒಪ್ಪಿಗೆ ದೊರೆಯುವುದಿಲ್ಲ. ಬೌದ್ಧಿಕ ಸಾಂಗತ್ಯವನ್ನಷ್ಟೇ ಅವಳು ಪಡೆದು ತೃಪ್ತಳಾಗಬೇಕಾಗುತ್ತದೆ. ಹೆತ್ತ ಮಗು ವಂಶಕ್ಕೆ ಸೇರಿದುದು ಎಂಬ ಕಾರಣಕ್ಕಾಗಿ ಕಾತ್ಯಾಯಿನಿ ತನ್ನ ಮಗುವನ್ನು ತ್ಯಾಗಮಾಡಬೇಕಾಯಿತಲ್ಲದೆ, ತನ್ನ ಕೃತ್ಯಕ್ಕಾಗಿ ಮಗನಿಂದಲೂ ತಿರಸ್ಕೃತಳಾಗಬೇಕಾಗುತ್ತದೆ. ಗಂಡು ಮಕ್ಕಳನ್ನು ಅಪಾರವಾದ ಪ್ರೀತಿ ವಾತ್ಸಲ್ಯ ಮತ್ತು ಕಾಳಜಿಪೂರ್ವಕವಾಗಿ ನೋಡಿಕೊಳ್ಳುವ ವಾತ್ಸಲ್ಯಮಯಿ ತಾಯಂದಿರಿಗೆ ಇಲ್ಲಿ ಮನ್ನಣೆ ಇದೆ. ಅಪೂರ್ವ ಸಹನೆ, ಮತ್ತು ತಾಳ್ಮೆಯಿಂದ ಇವರು ವರ್ತಿಸುತ್ತಾರೆ. ತನ್ನ ಮಕ್ಕಳಿಗಾಗಿ ಹಗಲು ಇರುಳೂ ದುಡಿದು ಅವರ ಏಳಿಗೆಯನ್ನು ಕಾತುರತೆಯಿಂದ ನಿರೀಕ್ಷಿಸುತ್ತಿದ್ದ ನಂಜಮ್ಮ (ಗೃಹಭಂಗ), ಕಲ್ಲಮ್ಮ ಡಾ|| ಶಿವಪ್ಪನ ತಾಯಿ: (ಮತದಾನ), ಸಚ್ಚಿದಾನಂದನ ತಾಯಿ, ವಿಶ್ವೇಶ್ವರನ ತಾಯಿ ನಂಜಮ್ಮ, ಮೊದಲಾದವರು ಹೆತ್ತಮಕ್ಕಳಿಗಾಗಿಯೇ ಜೀವನವನ್ನು ಮುಡಿಪಾಗಿಟ್ಟುಕೊಂಡವರು. ಅಮೃತ ಕೊನೆಯವರೆಗೆ ತನ್ನ ಮಕ್ಕಳನ್ನು ಕಳೆದುಕೊಳ್ಳುವ ಭೀತಿಯಲ್ಲಿ ನೋವನ್ನು ಅನುಭವಿಸುತ್ತಿರುತ್ತಾಳೆ. ಪುಣ್ಯಕೋಟಿಯನ್ನು ಕೊಂದು ತಿಂದ ಪಾಪಕ್ಕೆ ಹಿಲ್ಡಾಳಿಗೆ ತನ್ನ ಹೆತ್ತಮಗುವಿಗೆ ಹಾಲನ್ನು ಕುಡಿಸಲಾಗದ ಅಸಹಾಯಕತೆ ಉಂಟಾಗುತ್ತದೆ. ಗೋವನ್ನು ಮಾತೆಯ ರೂಪದಲ್ಲಿ ಪೂಜಿಸುವ ಸಂಸ್ಕೃತಿಯಲ್ಲಿ ಹಿಲ್ಡಾಳ ಕೃತ್ಯ ಅಕ್ಷಮ್ಯವಾಗಿ ಅವಳಿಗೆ ಶಾಪದ ರೂಪದಲ್ಲಿ ಕಾಡಿ ಶಿಕ್ಷೆವಿಧಿಸುತ್ತದೆ.

ಪತ್ನಿ ಸ್ಥಾನಕ್ಕೆ ನಿರ್ದಿಷ್ಟ ವಿಚಾರಗಳ ಚೌಕಟ್ಟಿನೊಳಗೆ ಮಹತ್ವವನ್ನು ನೀಡಲಾಗಿದೆ. ಜಾತಿ, ಧರ್ಮ, ಸಂಸ್ಕೃತಿ ಕುರಿತಾದ ಸಮಸ್ಯೆಗಳು ವೈಯಕ್ತಿಕ ಸ್ತ್ರೀ-ಪುರುಷ ಸಂಬಂಧಗಳನ್ನು ತೀವ್ರವಾಗಿ ಕಾಡುವುದನ್ನು ಈ ಕಾದಂಬರಿಗಳಲ್ಲಿ ಗುರುತಿಸಬಹುದಾದ ಒಂದು ಅಂಶವಾಗಿದೆ. ವಿವಾಹವನ್ನು ಧಾರ್ಮಿಕ ಸಾಂಸ್ಕೃತಿಕ ಘಟಕದ ರೂಪದಲ್ಲಿ ಕಾಣಲಾಗಿದೆ. ಆದುದರಿಂದ ವಿವಾಹಯೋಗ್ಯ ಜೋಡಿಗಳಲ್ಲಿ ಸಾಂಸ್ಕೃತಿಕ ಮತ್ತು ಧಾರ್ಮಿಕ ವಿಚಾರಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ಸಂಸ್ಕೃತಿ ನಿರ್ದೇಶನದ ವಿರುದ್ಧವಾಗಿ ನಡೆದ ವಿವಾಹಗಳು ಇಲ್ಲಿ ಅಸಫಲವಾಗಿವೆ. ಅಥವಾ ಊರ್ಜಿತವಾಗಿಲ್ಲ.

ರಾಜಾರಾಯ - ಕಾತ್ಯಾಯಿನಿ, ಸ್ವಾಮಿಜಿ, ಡಾ|| ಸರೋಜಾ ಮತ್ತು ಪ್ರಿನ್ಸಿಪಾಲರು - ಲಲಿತಮ್ಮ ಈ ವಿವಾಹಗಳು ಪ್ರಾರಂಭದಲ್ಲಿಯೇ ವಿವಾದಾಸ್ಪದವಾಗಿರುವುದು ಇದೇ ಕಾರಣಗಳಿಂದ. ವಿಧವೆಯ ಪುನಃರ್ವಿವಾಹಕ್ಕೆ ಶಾಸ್ತ್ರಾಧಾರವಿಲ್ಲವೆಂಬ ಕಾರಣವನ್ನು ನೀಡಿ ಕಾತ್ಯಾಯಿನಿಯಲ್ಲಿ ಪಾಪಪ್ರಜ್ಞೆಗಳಿಗೂ, ಅವಳ ಮರು ವಿವಾಹದಿಂದ ಸುಖವನ್ನು ಪಡೆಯಲಾಗದಂತೆ ಚಿತ್ರಿಸಲಾಗಿದೆ. ಸರೋಜಾ ಲಲಿತಮ್ಮನವರು ಸಾಮೂಹಿಕ ಪ್ರತಿರೋಧವನ್ನು ಊರಿನ ಜನರಿಂದ ಎದುರಿಸಬೇಕಾದುದು ಸಂನ್ಯಾಸ ಧರ್ಮವನ್ನು ಅನುಸರಿಸುತ್ತಿದ್ದವರನ್ನು ಲೌಕಿಕಕ್ಕೆ ತಂದರೆಂಬ ಆಪಾದನೆಯ ಕಾರಣವಾಗಿ. ಗಂಡಸರ ನಿಷ್ಠೆ ಆದರ್ಶಗಳನ್ನು ಬಲಿ ತೆಗೆದುಕೊಂಡರೆಂಬ ಆಪಾದನೆಗೆ ಈ ಹೆಣ್ಣುಗಳು ಬಲಿಯಾಗಬೇಕಾಯಿತು.

ದಾಂಪತ್ಯಜೀವನದಲ್ಲಿ ಬೌದ್ಧಿಕ ಸಾಹಚರ್ಯ ಗಂಡು ಹೆಣ್ಣಿನ ನಡುವಿರಬೇಕೇ ಅಥವಾ ಪ್ರೀತಿಯಿರಬೇಕೇ ಎಂದು ವಿಸ್ತಾರವಾಗಿ ಚರ್ಚಿಸಿದ ಕಾದಂಬರಿ 'ದೂರಸರಿದರು'. ಆದರೆ ಈ ಎರಡು ವಾದಗಳನ್ನು ಭೈರಪ್ಪನವರ ಇತರ ಯಾವ ಕಾದಂಬರಿಗಳೂ ಅಳವಡಿಸಿಕೊಂಡಿಲ್ಲ. ಸ್ತ್ರೀಪುರುಷ ಸಂಬಂಧಗಳಲ್ಲಿ ತಲೆದೋರುವ ಸೋಲು ಈ ಎರಡು ವಾದಗಳಿಂದ ಹೊರತಾಗಿರುವ ಕಾರಣದಿಂದ ಉಂಟಾಗಿರುವಂಥದ್ದು.

ಸತ್ಯಭಾಮೆ- ಶ್ರೀನಿವಾಸರ ಪ್ರೇಮ ವಿವಾಹದಲ್ಲಿ ಪರ್ಯವಸಾನವಾಗದಿರುವಿಕೆಗೆ ಜಾತಿ ಸಮಸ್ಯೆ ಮುಖ್ಯ ಕಾರಣವಾಗಿದೆ. ಜಾತಿ ಸಮಸ್ಯೆಯನ್ನು ಮೀರಿದ ಮಾನವೀಯತೆಯನ್ನು ಮೆರೆಯುವ ಸತ್ಯಾಳಿಗೆ ಈ ಮದುವೆ ಅನುಲೋಮವಾಗಿರುವ ಕಾರಣವಾಗಿಯೆ ಸಾಧ್ಯವಾಗುವುದಿಲ್ಲ, ಎಂದು ತಿಳಿಯುವುದಕ್ಕೆ ಅವಕಾಶವಿದೆ. ಶ್ರೀನಿವಾಸನ ಮನೆಯವರ ಪ್ರತಿಕ್ರಿಯೆ ಮೂಲಕ ಈ ಅಂಶವನ್ನು ದೃಢಪಡಿಸಿಕೊಳ್ಳಬಹುದಾಗಿದೆ. ಧರ್ಮ ಸಮ್ಮತವಾಗಿರದ ಕಾರಣ ಸತ್ಯಳ ವಿವಾಹ ಪ್ರಸ್ತಾಪ ಊರ್ಜಿತವಾಗುವುದಿಲ್ಲ.

ಸರೋಜಾ ತನ್ನ ದೃಢತೆಯನ್ನು ಪ್ರದರ್ಶಿಸುತ್ತಾ "ಜನರಿಗೆ ಧರ್ಮಸಂಕಟವನ್ನು ಸೃಷ್ಟಿಸಿ ಒಡ್ಡುವುದೇ ಯಾವ ಕಾಲಕ್ಕೂ ನಿಮ್ಮ ಕಸುಬು. ಆದರೆ ನೀವು ಹೇಳುವ ಧರ್ಮವನ್ನು ಒಪ್ಪದ್ದಿದ್ದವರಿಗೆ ಅದರ ಸಂಕಟ ತಗುಲಲ್ಲ" (ಗೃಹಣ:೧೯೮೭:೮೬) ಎನ್ನುತ್ತಾ ಎದುರು ವಾದಿಸಿದರೂ, ದಯೆಗಿಂತ ಬೇರೆ ಧರ್ಮವಿಲ್ಲವೆಂದು ಹೇಳುವ ಸರೋಜಾ ಮಾತಿನಲ್ಲಿಯೆ ಅವಳನ್ನು ಕಟ್ಟಿಬೀಳಿಸಲಾಗುತ್ತದೆ. ಮಹಾದಾನಿ ಅಪ್ಪೇಗೌಡರನ್ನು ಅವಳ ವಶಕ್ಕೆ ತಂದು ಒಪ್ಪಿಸಿ, ತನ್ನ ಮದುವೆ, ನಿಷೇಕವನ್ನು ಅವಳು ಸಾರ್ವಜನಿಕವಾಗಿ ಒಪ್ಪದಿರುವಂತೆ ಅವಳಿಗೆ 'ಮಂಕು' ಕವಿಯುತ್ತದೆ.

ಸರೋಜಾ ಸಾವು ಬದುಕಿನ ನಿರ್ಣಯಗಳಲ್ಲಿ ವೈಯಕ್ತಿಕ ಬದುಕನ್ನು ಆ ಹೊತ್ತಿನ ಮಟ್ಟಿಗಾದರೂ ಮರೆಯುವ ಧರ್ಮಸಂಕಟದಲ್ಲಿ ಸಿಲುಕುತ್ತಾಳೆ. ಇದೇ ರೀತಿಯಲ್ಲಿ ಆಧುನಿಕ ವಿಚಾರಗಳಿಗೆ ಒಲಿದ ಸ್ತ್ರೀಯರನ್ನು ಇಲ್ಲಿ ತಾಯ್ತನ, ವಿವಾಹ ಮೊದಲಾದ ಕ್ರಿಯೆಗಳ ಮೂಲಕ ಧರ್ಮ ಜಿಜ್ಞಾಸೆಯ ಇಕ್ಕಟಿನಲ್ಲಿ ಸಿಲುಕಿಸಲಾಗಿದೆ. ಮತ್ತು ಈ ಸ್ತ್ರೀಯರು ನಿಧಾನವಾಗಿ ತಮ್ಮ ಮೂಲ ಸ್ವಭಾವನ್ನು ಮರೆತು ಧರ್ಮ ಸಂಪ್ರದಾಯಗಳ ಪರವಾಗಿ ನಿಲ್ಲುವಂತೆ ನೋಡಿಕೊಳ್ಳುವುದು ಈ ಕಾದಂಬರಿಗಳಲ್ಲಿ ಸತತವಾಗಿ ನಡೆದಿದೆ.

ವಿಜ್ಞಾನದ ಸ್ನಾತಕೊತ್ತರ ಪದವಿಯನ್ನು ಪಡೆದು, ಅಧ್ಯಾಪಿಕೆಯಾಗಿದ್ದ ಲಲಿತಮ್ಮ ಅವೈಜ್ಞಾನಿಕವಾಗಿ ಯೋಚಿಸುತ್ತಾಳೆ. ಅಚ್ಚಮ್ಮ ಶಾಸ್ತ್ರೀ ಮತ್ತು ತನ್ನ ಗಂಡನ ಪ್ರಭಾವದಲ್ಲಿ ಲಲಿತಮ್ಮನ ವ್ಯಕ್ತಿತ್ವವೇ ಬದಲಾಗುತ್ತವೆ. ಕಾತ್ಯಾಯಿನಿ ಬಂಡುಗಾರ್ತಿಯಾಗಿ ಸಂಪ್ರದಾಯಸ್ಥ ಮನೆತನವನ್ನು ತೊರೆದು, ವಿದೇಶದಲ್ಲಿ ವ್ಯಾಸಂಗಮಾಡಿದ ರಾಜನ ಸಹವಾಸದಲ್ಲಿ ಆತನ ಆಧುನಿಕ ವಿಚಾರಗಳಿಂದ ಪ್ರಭಾವಿತಳಾಗಿ, ಉನ್ನತ ವ್ಯಾಸಂಗ, ಉದ್ಯೋಗ ಇವೆಲ್ಲವನ್ನು ಪಡೆದರೂ, ತನ್ನ ಬದುಕಿನ ಕೊನೆಭಾಗದಲ್ಲಿ ಧರ್ಮಜಿಜ್ಞಾಸೆಯಲ್ಲಿ ಸತತವಾಗಿ ತೊಡಗಿಕೊಂಡಿರುತ್ತಾಳೆ. ಅಲ್ಪಾವಧಿಯದಾದರೂ ತನ್ನ ಮೊದಲನೆ ಗಂಡನ ಮನೆಯ ಪ್ರಭಾವಲಯದಿಂದ ಹೊರಗೆ ಬರುವುದು ಅವಳಿಗೆ ಸಾಧ್ಯವಾಗುವುದಿಲ್ಲ. ನಾಗಲಕ್ಷ್ಮಿಯ ಸಹವಾಸದಲ್ಲಿ ಅವಳೊಡನೆಯ ಮಾತುಕತೆಗಳಿಂದ, ಅವಳ ರೀತಿಯಲ್ಲಿಯೇ ಯೋಚಿಸುತ್ತಿರುತ್ತಾಳೆ. ನಾಗಲಕ್ಷ್ಮಿ ಕೇಶಮುಂಡನ ಅವಳಿಗೆ ಸಮ್ಮತವಾಗುವುದು ಈ ಹಿನ್ನೆಲೆಯಿಂದಲೇ.

ಭಿನ್ನ ಸಂಸ್ಕೃತಿಯವಳಾದರೂ ರತ್ನೆ ಸದಾಶಿವರಾಯರನ್ನು ಪತ್ನಿರೂಪದಲ್ಲಿರುವಾಗ ಅತ್ಯಂತ ಪೂಜ್ಯ ಭಾವನೆಯಿಂದ

ಕಾಣುವವಳು. ಅವರ ಕಾಲಿಗೆರಗುವುದು, ಆರ್ಶೀವಾದ ನಿರೀಕ್ಷಿಸುವುದು ಮೊದಲಾದ ಅವಳ ಪ್ರಕೃತಿಗೆ ಒಗ್ಗದ ವಿಚಾರಗಳನ್ನು ಅಳವಡಿಸಿಕೊಂಡು ಒಂದು ರೀತಿಯ ಸಮರ್ಪಣಾಭಾವದಿಂದ ಇರುತ್ತಾಳೆ. ಸರೋಜಾ, ವಿನತೆಯರು ವಿವಾಹಪೂರ್ವದಲ್ಲಿಯೇ ತಮ್ಮ ಪತ್ನೀ ಪಾತ್ರವನ್ನು ಚಾಚೂ ತಪ್ಪದೆ ಅನುಸರಿಸುತ್ತಾರೆ. ಸರೋಜಾ ಭಾಸ್ಕರಮೂರ್ತಿಗೆ, ವಿನತೆ ಸಚ್ಚಿದಾನಂದನಿಗೆ ಅಡಿಗೆ ಮಾಡಿ ಬಡಿಸುವುದು, ಗಂಡನು ಉಂಡ ಎಂಜಲು ತಟ್ಟೆಯಲ್ಲಿ ಉಣ್ಣುವುದು, ಹತ್ತಿರ ಕುಳಿತು ಗಾಳಿಬೀಸುವುದು ಮೊದಲಾದುವುಗಳನ್ನು ಉದ್ದೇಶಪೂರ್ವಕವಾಗಿಯೇ ದಾಂಪತ್ಯ ಜೀವನದ ಅಣಕುವಾಡಿ ತೋರಿಸುತ್ತಾರೆ. ತಾವಿರುವ ಪರಿಸ್ಥಿತಿಯಲ್ಲಿ ಮುಂದುವರಿಯುವುದಕ್ಕೆ ಸಾಕಷ್ಟು ಬೆಂಬಲ ಮತ್ತು ಮನೋಸ್ಥಿತಿ ಇಲ್ಲದ ಕಾರಣ ಸತ್ಯಭಾಮೆ, ವಿನತೆ ಅವಿವಾಹಿತರಾಗಿಯೇ ಉಳಿಯಬೇಕಾಗುತ್ತದೆ.

ಉಮೆ, ವಿಚಾರದಲ್ಲಿ ತನ್ನಿಂದ ಭಿನ್ನದಾರಿಯಲ್ಲಿ ನಡೆದಳೆಂಬ ಒಂದೇ ಕಾರಣದಿಂದ ವಸಂತ ಅವಳನ್ನು ವರಿಸುವ ವಿಷಯದಲ್ಲಿ ಹಿಂಜರಿದ ಕಾರಣ, ಉಮೆಯೂ ಅವಿವಾಹಿತಳಾಗಿಯೇ ಉಳಿಯುತ್ತಾಳೆ. ವಿನತೆ ತನ್ನಮನೋದೌರ್ಬಲ್ಯದ ಕಾರಣವಾಗಿ ನಡುವಲ್ಲೇ ಪ್ರಾಣ ನೀಗಿದರೆ ಸತ್ಯಾ, ಉಮೆಯರು ತಮ್ಮ ಉಳಿದ ಜೀವನವನ್ನು ಸಾರ್ವಜನಿಕ ಸೇವೆಯಲ್ಲಿ ಕಳೆಯುತ್ತಾರೆ. ವಿವಾಹವಿಲ್ಲದೆ ಅವರು ಒಂಟಿಯಾಗಿಯೇ ಉಳಿಯುತ್ತಾರೆ.

ಸತ್ಯಭಾಮೆಯ ಮದುವೆಗೆ ಜಾತಿ ಅಡ್ಡ ಬಂದರೆ, ಉಮೆಯ ಮದುವೆಗೆ ಅವಳ ವೈಚಾರಿಕತೆ ಅಡ್ಡಬರುತ್ತದೆ. ಜಾತಿ, ವೈಚಾರಿಕತೆಯ ಅಡ್ಡಗೋಡೆ ಇಲ್ಲದಿದ್ದರೆ ಅವರ ವಿವಾಹಕ್ಕೆ ಸಮ್ಮತಿ ದೊರೆಯುತ್ತಿತ್ತು. ಈ ರೀತಿ ದಾಂಪತ್ಯ ಜೀವನಕ್ಕೆ ಧಾರ್ಮಿಕ, ಸಾಂಸ್ಕೃತಿಕ ಕಾರಣಗಳೊಡನೆ, ಬೌಧಿಕತೆಯನ್ನು ಇಲ್ಲಿ ಸೇರಿಸಲಾಗಿದೆ. ಈ ಮೂರೂ ಅಂಶವನ್ನು ಮೀರಿದವರಿಗೆ ಮಾತ್ರ ವಿವಾಹದ ಅರ್ಹತೆಯನ್ನು ಕಲ್ಪಿಸಿಕೊಡುವುದು ಉಚಿತವೆಂದು ಇಲ್ಲಿ ಪರಿಗಣಿಸಲಾಗಿದೆ. ಈ ಅರ್ಹತೆಯನ್ನು ಪಡೆಯಬೇಕಾದವರು ಹೆಂಗಸರು ಮಾತ್ರ. ವಸಂತ ತನ್ನ ಮದುವೆ ಉಮೆಯೊಡನೆ ಯಾಕೆ ಸಾಧ್ಯವಿಲ್ಲವೆನ್ನುವುದನ್ನು ವಿವರಿಸುವ ಈ ಕೆಳಗಿನ ಮಾತುಗಳ ಮೂಲಕ ಈ ಅಂಶವನ್ನು ಮತ್ತಷ್ಟು ಸ್ಪಷ್ಟಪಡಿಸಬಹುದು.

"ಪತ್ನಿಯರ ಬೌಧಿಕ ಸಾಹಚರ್ಯದಿಂದ ಪತಿಯ ಬೌಧಿಕ ಸಾಧನೆಗೆ ಸಹಾಯವಾಗುತ್ತೆ ಅಂತ ನಾನು ತಿಳಿದಿದ್ದೆ. ಅದು ಸುಳ್ಳು. ಹೆಂಡತಿ ಹೆಚ್ಚೆಂದರೆ ಉತ್ತಮ ಕರಣಿಕಳಾಗಬಲ್ಲಳು. ಅದಕ್ಕಿಂತ ಹೆಚ್ಚಾದರೆ ಆತಂಕವೇ ಹೆಚ್ಚು. ಬೌಧಿಕ ಜೀವನದ ಸ್ವರೂಪವೇ ಹಾಗಿದೆ. ಬೌಧಿಕ ಸಾಧನೆಯು ಸ್ವತಃ ವ್ಯಕ್ತಿಗತವಾಗಿ ಮಾಡುವ ಜೀವನವೇ ವಿನಾ ಅದಕ್ಕು ದಾಂಪತ್ಯಕ್ಕು ಸಂಬಂಧವಿಲ್ಲ[೬]" (ದೂರಸರಿದರು:೧೯೭೨:೨೦೮)

ಉಮೆ ತನ್ನ ವೈಚಾರಿಕತೆಯನ್ನು ವಸಂತನಿಗಿಂತ ಬೇರೆ ರೀತಿಯಲ್ಲಿ ಭಿನ್ನವಾಗಿ ಬೆಳಸಿದ ಕಾರಣವಾಗಿಯೇ ಮದುವೆ ಮುರಿದು ಬೀಳುತ್ತದೆ. ಸ್ವತಃ ವಿಚಾರವಾದಿಯಾದ ವಸಂತನ ಕಲ್ಪನೆಯಲ್ಲಿ ಮದುವೆಯಲ್ಲಿ ಸರ್ವಾಧಿಕಾರ ಮತ್ತು ಸಮರ್ಪಣಾ ಭಾವನೆಗೆ ಮಾತ್ರ ಅವಕಾಶವಿದೆ.

ಸ್ತ್ರೀ ಮತ್ತು ಪುರುಷರನ್ನು ಮನುಷ್ಯ ಜಾತಿಯ ಎರಡು ಘಟಕವಾದ ನೈಸರ್ಗಿಕ ರೂಪದಲ್ಲಿ ಕಾಣುವುದರೊಂದಿಗೆ, ಭೈರಪ್ಪನವರ ದೃಷ್ಟಿಕೋನದಲ್ಲಿ ಸ್ತ್ರೀ ಪುರುಷರ ನಡುವಿನ ವ್ಯತ್ಯಾಸಗಳಿಗೆ ಇನ್ನು ಹಲವಾರು ಕಾರಣಗಳಿವೆ. ಈ

ಕಾರಣಗಳ ಮೂಲಕ ಲೇಖಕರು ಸ್ತ್ರೀ ಪುರುಷ ನಡುವಿನ ಅಸಮಾನತಾ ಕಲ್ಪನೆಯನ್ನು ಬೆಳಸುವ ಕಾರ್ಯದಲ್ಲಿಯೂ ಸಹಕರಿಸುತ್ತಾರೆ ಎಂದೂ ಹೇಳಬಹುದಾಗಿದೆ. ಕಾದಂಬರಿಯಲ್ಲಿ ವ್ಯಕ್ತವಾಗಿರುವ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಮಾತ್ರ ಲೇಖಕರ ದೃಷ್ಟಿಕೋನವನ್ನು ಇಲ್ಲಿ ವಿವೇಚಿಸಲಾಗಿದೆ. ಕತೆಯಲ್ಲಿ ಸ್ತ್ರೀ ಪಾತ್ರಚಿತ್ರಣ ಯಾವ ರೀತಿಯಲ್ಲಿರಬೇಕು ಎನ್ನುವ ಮಾತು ಅವರ ದೂರಸರಿದರು ಕಾದಂಬರಿಯಲ್ಲಿ ನಡೆಯುವ ಒಂದು ಸನ್ನಿವೇಶದಲ್ಲಿ ಬರುತ್ತದೆ.

ವಿನತೆ ಸಚ್ಚಿದಾನಂದನ ಬರಹವನ್ನು ವಿಮರ್ಶಿಸುವಾಗ ಈ ಕೆಳಗಿನ ಮಾತು ಹೇಳುತ್ತಾಳೆ: "ಆಧುನಿಕ ಸ್ತ್ರೀಯನ್ನು ಚಿತ್ರಿಸುವಾಗ ನೀವು ಅವಳಲ್ಲಿ ವಿಚಾರ ತುಂಬುತ್ತೀರಿ. ಆ ವಿಚಾರಗಳು ವಾದದ, ತರ್ಕದ, ದೃಷ್ಟಿಯಿಂದ ಎಲ್ಲರೂ ಒಪ್ಪಬೇಕಾದುದೇ. ಆದರೆ ಅದನ್ನು ಸ್ತ್ರೀ ಪಾತ್ರದಲ್ಲಿ ತುಂಬುವುದು ಕೃತಕವೆನಿಸುತ್ತೆ. ಆಧುನಿಕ ವಿದ್ಯಾಭ್ಯಾಸ ಎಷ್ಟೇ ಪ್ರಭಾವ ಬೀರಿದರೂ ಸ್ತ್ರೀಗೆ ತನ್ನದೇ ಆದ ತರ್ಕಸರಣಿ, ಆಲೋಚನಾಲಹರಿ ಇದೆ. ನೀವು ಅವುಗಳನ್ನು ಗುರುತಿಸದೆ, ಗಂಡಸರ ತರ್ಕ, ನೀತಿಗಳನ್ನು ಅವಳಿಗೆ ಕೊಟ್ಟಿದೀರಿ. ಇದರಿಂದ ಪಾತ್ರವು ತನ್ನ ಸಹಜತೆಯನ್ನು ಕಳೆದುಕೊಳ್ಳುತ್ತದೆ. ಎಷ್ಟೇ ವಿದ್ಯಾವತಿಯಾಗಲಿ-ಸ್ತ್ರೀಯರು ಅತ್ಯಂತ ಮುಂದುವರಿದ ದೇಶವೆಂದು ಹೇಳಿಸಿಕೊಳ್ಳುವ ಅಮೇರಿಕ ಮತ್ತು ರಷ್ಯದ ಹೆಂಗಸಾಗಲಿ, ಹೆಂಗಸು ಹೆಂಗಸೇ ಅವಳನ್ನು ಹಾಗೆಯೇ ನೋಡಬೇಕು".(ದೂರಸರಿದರು: ೨೨: ೧೯೯೧)

ಹೆಂಗಸು ಹೇಗೆ ಇರುತ್ತಾಳೆ ಮತ್ತು ಅವಳನ್ನು ಹೇಗೆ ಕಾಣಬೇಕು ಎನ್ನುವುದನ್ನು ಕಾದಂಬರಿಯ ಸ್ತ್ರೀ ಪಾತ್ರದ ಮೂಲಕವೆ ಇಲ್ಲಿ ಅಭಿವ್ಯಕ್ತಿಸಲಾಗಿದೆ.

ಈ ಧೋರಣೆ, ಸ್ವತಃ ಲೇಖಕನದೂ ಆಗಿದೆಯೆನ್ನುವುದನ್ನು ಅವರು ಸೃಷ್ಟಿಸಿರುವ ಸ್ತ್ರೀ ಪಾತ್ರಗಳ ಮೂಲಕವೇ ತಿಳಿದುಕೊಳ್ಳಬಹುದಾಗಿದೆ. ತರ್ಕ, ವಿಚಾರಗಳನ್ನು ಪುರುಷರಲ್ಲಿಯೂ, ಭಾವುಕತೆ, ಸಂಗೋಪನಾಶೀಲತೆ ಮತ್ತು ಸಾಂಸ್ಕೃತಿಕ ವಕ್ತಾರತೆಯನ್ನು ಸ್ತ್ರೀ ಪಾತ್ರಗಳಲ್ಲಿಯೂ ಅವರು ಸ್ಪಷ್ಟವಾಗಿ ಆರೋಪಿಸಿದ್ದಾರೆ. ಈ ಎರಡು ಆರೋಪಿತ ಗುಣಗಳನ್ನು ಎರಡೂ ಲಿಂಗಜಾತಿಯಲ್ಲಿ ಸಹಜಗುಣಗಳಾಗಿ ಕಾಣಲು ಪ್ರಯತ್ನಿಸಿರುವುದು ಭೈರಪ್ಪನವರ ದೃಷ್ಟಿಕೋನವನ್ನು ಸೂಚಿಸುತ್ತದೆ.

ಈ ರೀತಿ ಹೆಣ್ಣಿನ ಅಧೀನತೆಯನ್ನು ಬಾಹ್ಯಕಾರಣಗಳಿಗಿಂತಲೂ ಹೆಚ್ಚಾಗಿ ಆಂತರಿಕವಾಗಿರುವ ಅಂಶಗಳ ಮೂಲಕವೇ ಭೈರಪ್ಪ ನಿರೂಪಿಸುತ್ತಾರೆ. ಭೈರಪ್ಪನವರು ನಿರೂಪಿಸುವ ಈ ವಿಚಾರವನ್ನು ಸ್ಪಷ್ಟ ಪಡಿಸಲು ಅವರ ನಾಲ್ಕು ಕಾದಂಬರಿಗಳ ಮುಖ್ಯ ಪಾತ್ರಗಳನ್ನು ಇಲ್ಲಿ ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಪಾತ್ರಗಳೆಂದರೆ. 'ಗೃಹಭಂಗ'ದ ನಂಜಮ್ಮ, 'ವಂಶವೃಕ್ಷ'ದ ಕಾತ್ಯಾಯಿನಿ, 'ಅಂಚು'ವಿನ ಅಮೃತಾ ಮತ್ತು 'ತಂತು'ವಿನ ಕಾಂತಿ.

**ಪ್ರಾತಿನಿಧಿಕ ಕಾದಂಬರಿಗಳಲ್ಲಿ ಸ್ತ್ರೀಪಾತ್ರ ಚಿತ್ರಣ**

**'ವಂಶವೃಕ್ಷ'ದಲ್ಲಿ ಸ್ತ್ರೀ**

ವಂಶಪ್ರಜ್ಞೆಯನ್ನು ಕೇಂದ್ರವಾಗಿಟ್ಟುಕೊಂಡಿರುವ ವಂಶವೃಕ್ಷ ಕಾದಂಬರಿ ವಿವಾಹ ಮತ್ತು ಸಂತಾನಾಭಿವೃದ್ಧಿ

ಕಾರ್ಯಗಳಲ್ಲಿ ಸ್ತ್ರೀ ಪುರುಷರ ಪಾತ್ರವನ್ನು ಚರ್ಚಿಸುತ್ತದೆ. ವೈವಾಹಿಕ ಸಂಬಂಧದಲ್ಲಿ ಸ್ತ್ರೀ ಪುರುಷರ ಪಾತ್ರವನ್ನು ಇಲ್ಲಿ ನಿರ್ಧರಿಸುವುದು, ಧರ್ಮ; ಸನಾತನ ಧರ್ಮ. ಈ ಧರ್ಮವನ್ನು ತಿಳಿದು ಬದುಕುವವರಿಗೆ ಸಮಸ್ಯೆ ಇಲ್ಲ. ಧರ್ಮವನ್ನು ತಿಳಿದೂ, ವಿರೋಧಿಸಿ ನಡೆದವರಿಗೆ ಸುಖಪ್ರಾಪ್ತಿ ಇಲ್ಲ. ಈ ವಿಚಾರವನ್ನು ವಿವರವಾಗಿ ಚರ್ಚಿಸುವುದೇ ಈ ಕಾದಂಬರಿಯ ಉದ್ದೇಶ.

ಮನುಷ್ಯ ಜೀವನದಲ್ಲಿ ಧರ್ಮ ಬಾಹ್ಯಪ್ರೇರಣೆಯಾಗಿ ಕಾರ್ಯವೆಸಗುತ್ತದೆ. ಈ ಪ್ರೇರಣೆಯನ್ನು ಮೀರಿ ಕಾರ್ಯಮಾಡುವ ಅಂಶವೊಂದು ಮನುಷ್ಯನಲ್ಲಿ ಇದೆ. ಅದು ಆತನ ಮೂಲ ಪ್ರವೃತ್ತಿ. ಈ ಮೂಲ ಪ್ರವೃತ್ತಿಯನ್ನು ಬಾಹ್ಯಪ್ರೇರಣೆ ಮೂಲಕ ಬಂಧಿಸುವುದು. ಅಥವಾ ಅದಕ್ಕೆ ನಿರ್ಬಂಧವನ್ನು ಸೂಚಿಸುವುದು ಉಚಿತವೇ ಎನ್ನುವ ಪ್ರಶ್ನೆಯನ್ನು ಕಾದಂಬರಿಯ ಬಹು ಮುಖ್ಯ ಪಾತ್ರವಾದ ಕಾತ್ಯಾಯಿನಿ ಮೂಲಕ ಮುಂದಿಡಲಾಗಿದೆ. ಕಾದಂಬರಿಯಲ್ಲಿ ಸನಾತನ ಧರ್ಮವನ್ನು ಶ್ರೀವಿವಾಸ ಶ್ರೋತ್ರಿಯವರು ಪ್ರತಿನಿಧಿಸಿದರೆ, ಈ ಧರ್ಮವನ್ನು ಪ್ರಶ್ನಿಸುವ ಆಧುನಿಕತೆಯನ್ನು ಕಾತ್ಯಾಯಿನಿ ಪ್ರತಿನಿಧಿಸುತ್ತಾಳೆ. ಭೈರಪ್ಪನವರ ಇತರ ಕಾದಂಬರಿಗಳಲ್ಲಿ ಇರುವಂತೆ ಇಲ್ಲಿ ಆದರ್ಶವನ್ನು ಪುರುಷ ಪಾತ್ರಗಳಲ್ಲಿಯೂ. ವಾಸ್ತವಿಕತೆಯನ್ನು ಹೆಣ್ಣಿನ ಪಾತ್ರಗಳಲ್ಲಿಯೂ ಕಂಡರಿಸಲಾಗಿದೆ.

ಯಾವುದೇ ಧಾರ್ಮಿಕ ವಿಚಾರಗಳ ಕಟ್ಟುಪಾಡುಗಳಿಗೆ ತನ್ನನ್ನು ಸಿಕ್ಕಿಸಿಕೊಳ್ಳದೆ ಕಾತ್ಯಾಯಿನಿ ಯಾವುದು ತನಗೆ ಸರಿಯೆಂದು ಕಂಡಿತೋ ಆ ಮಾರ್ಗದಲ್ಲಿ ನಡೆಯುವ ಮೂಲಕ ವಾಸ್ತವ ಪ್ರಜ್ಞೆಯನ್ನು ಉಳಿಸಿಕೊಳ್ಳುತ್ತಾಳೆ.

ಪಾರಂಪರಿಕ ಮಾದರಿಯೊಳಗೆ ಇಲ್ಲಿವರೆಗೆ ನಿರ್ವಚನಗೊಳ್ಳುತ್ತಿರುವ ಸ್ತ್ರೀಗೆ ಭಿನ್ನ ಸ್ವರೂಪದಲ್ಲಿ ಕಾತ್ಯಾಯಿನಿ ಪಾತ್ರವನ್ನು ನಾವಿಲ್ಲಿ ನೋಡಬಹುದು. ಇಡೀ ಕಾದಂಬರಿಯಲ್ಲಿ ಕಾತ್ಯಾಯಿನಿ ಕೊನೆ ಮೊದಲಿಲ್ಲದ ಮಾನಸಿಕ ತುಮುಲಗಳಲ್ಲಿ ಕಾಲಕಳೆಯುತ್ತಾಳೆ.

ಧರ್ಮ, ಸಂಸ್ಕೃತಿ ಮೊದಲಾದ ಪೂರ್ವ ನಿರ್ದೇಶನಗಳಿಂದ ಕಳಚಿಕೊಳ್ಳುವ ಹಾದಿಯಲ್ಲಿ ಕಾತ್ಯಾಯಿನಿಯ ತೊಳಲಾಟಗಳನ್ನು ಮಾನಸಿಕ ಸಿದ್ಧತೆಯಾಗಿ ಪರಿಗಣಿಸಬಹುದಾಗಿದೆ. ಕಾತ್ಯಾಯಿನಿ ಬದುಕುವ ಪರಿಸರ ಇನ್ನೂ ಸಂಪ್ರದಾಯ, ಆಚರಣೆಗಳನ್ನು ಉಳಿಸಿಕೊಂಡಿರುವ ಪರಿಸರ. ಈ ಪರಿಸರದಲ್ಲಿ ಪಾರಂಪರಿಕ ಮೌಲ್ಯಗಳನ್ನು ಸ್ತ್ರೀ ಪುರುಷರೆಲ್ಲರೂ ಒಪ್ಪಿಕೊಂಡಿದ್ದಾರೆ. ಮತ್ತು ಈ ಮೌಲ್ಯಗಳಿಗಾಗಿಯೇ ಬದುಕುತ್ತಾರೆ. ಈ ರೀತಿ ಬದುಕುವವರೆಗೆ ದ್ವಂದ್ವಗಳು ಉಂಟಾಗುವ ಸಂಭವ ಕಡಿಮೆ. ನಂಬಿಕೆಯೇ ಅವರನ್ನು ಸದಾ ರಕ್ಷಿಸಿಕೊಂಡಿರುತ್ತದೆ. ಕಾತ್ಯಾಯಿನಿ ಈ ನಂಬಿಕೆಯನ್ನು ಕಳಚಿಕೊಂಡು ಹೊಸ ಮೌಲ್ಯ ಸ್ಥಾಪನೆಗೆ ಮನಸ್ಸು ಮಾಡಿದ ವ್ಯಕ್ತಿ. ಆದುದರಿಂದ ಅವಳಿಗೆ ದ್ವಂದ್ವ ಸಹಜವಾಗಿದೆ. ಕಾತ್ಯಾಯಿನಿ ಬದುಕಿನ ದುರಂತವೇನಿದ್ದರೂ ಅದು ಅವಳ ಬದುಕು ಹಿಡಿದ ದಾರಿಯೆನ್ನಬಹುದು. ಆದರೆ ಎಲ್ಲರಂತಾಗದೆ ತನ್ನ ಮನಸ್ಸು ನುಡಿದಂತೆ ನಡೆದುಕೊಂಡ ರೀತಿಯೇ ಕಾತ್ಯಾಯಿನಿಯ ಸಾಧನೆಯಾಗಿದೆ. ಕಾತ್ಯಾಯಿನಿಯದು ಬಂಡಾಯ ಧೋರಣೆಯಲ್ಲ. ಬಂಡಾಯವಾಗಿದ್ದರೆ ದ್ವಂದ್ವ ಅವಳನ್ನು ಕಾಡುತ್ತಿರಲಿಲ್ಲ. ಕಾತ್ಯಾಯಿನಿ ವಿವಾಹ ಚೌಕಟ್ಟಿನೊಳಗಿರುವ ಬಂಧನದ ಸ್ಥಿತಿಯಿಂದ ಹೊರಗೆ ಹೆಜ್ಜೆ ಇಡುವುದರ ಮೂಲಕ ಪರಂಪರೆಯಿಂದ ಕಳಚಿಕೊಳ್ಳುತ್ತಾಳೆ. ಮುಕ್ತಸ್ಥಿತಿಯ ಕಡೆಗೆ. ಆದರೆ ಅವಳ ಆಯ್ಕೆ ವಿವಾಹವಾಗುವುದರ ಮೂಲಕ, ಮತ್ತು ಈ ವೈವಾಹಿಕ ಜೀವನ ಅವಳಿಂದ ಕೆಲವು ನಿರೀಕ್ಷೆಗಳನ್ನು ಇಟ್ಟುಕೊಳ್ಳುವುದರ ಮೂಲಕ ಮತ್ತೆ

ನಿರ್ಬಂಧಗಳನ್ನು ಅವಳು ಪಡೆಯುವಂತಾಗುತ್ತದೆ. ಈ ಕಾರಣದಿಂದ ಹುಟ್ಟಿಕೊಂಡ ಸಂತಾನದ ಅಪೇಕ್ಷೆ ಅವಳ ಮೂಲಕ ತನ್ನ ಕಾರ್ಯವನ್ನು ಸಾಧಿಸಿಕೊಳ್ಳುತ್ತದೆ.

ಕಾತ್ಯಾಯಿನಿ ಬದುಕಿನಲ್ಲಿ ಮುಖ್ಯವಾಗಿ ಎರಡೂ ಘಟ್ಟಗಳಿವೆ. ಎರಡು ಘಟ್ಟಗಳು ಅವಳ ವಿವಾಹೋತ್ತರ ಬದುಕಿನಲ್ಲಿ ನಡೆಯುವ ಘಟನೆಗಳನ್ನು, ಮನುಷ್ಯ ಸಂಬಂಧಗಳನ್ನು ಮತ್ತು ಇವುಗಳಿಗೆ ಕಾತ್ಯಾಯಿನಿ ತನ್ನದೇ ರೀತಿಯ ಪ್ರತಿಕ್ರಿಯೆಯನ್ನು ತೋರಿಸುವ ವಿವರಗಳನ್ನು ಒಳಗೊಂಡಿವೆ. ಮೊದಲ ಘಟ್ಟದಲ್ಲಿ ಕಾತ್ಯಾಯಿನಿ ನಂಜುಂಡಶಾಸ್ತ್ರೀಯ ಪತ್ನಿ.

ಕಾತ್ಯಾಯಿನಿ ಸಂಪ್ರದಾಯಸ್ಥ ಕುಟುಂಬದಲ್ಲಿ ಹುಟ್ಟಿ ಬೆಳೆದವಳು. ಆಚಾರ, ಆಚರಣೆ, ಸಂಪ್ರದಾಯಗಳು ಅವಳಿಗೆ ಹೊಸ ವಿಚಾರಗಳಲ್ಲ. ಅವಳ ವಿವಾಹ ಸಂಪ್ರದಾಯನಿಷ್ಠ, ಧರ್ಮನಿಷ್ಠ, ಶ್ರೋತ್ರಿಮನೆತನದ ನಂಜುಂಡ ಶ್ರೋತ್ರಿಯೊಡನೆ ನಡೆಯುತ್ತದೆ. ಕಾತ್ಯಾಯಿನಿ ಬದುಕು ಎರಡು ವರ್ಷಗಳ ಕಾಲ ಸುಖವಾಗಿಯೇ ಕಳೆಯುತ್ತದೆ. ಗಂಡನ ಪ್ರೇಮ, ಹಿರಿಯರಾದ ಅತ್ತೆ ಮಾವಂದಿರ ಪ್ರೀತಿ ವಿಶ್ವಾಸಗಳಿಂದ ಅವಳು ಸುಖಿಯಾಗಿರುತ್ತಾಳೆ.

'....ತಾನು ಮೆಚ್ಚಿದ ಮತ್ತು ತನ್ನನ್ನು ಆಳವಾಗಿ ಪ್ರೀತಿಸುತ್ತಿದ್ದ ಗಂಡ, ಚಿನ್ನದಂತಹ ಅತ್ತೆ ಮಾವಂದಿರು, ಇಡೀ ಮನೆಯನ್ನು ಬೆಳದಿಂಗಳಿನಂತೆ ನಗಿಸುವ ಮಗು - ಯಾವ ಹೆಂಗುಸಾದರೂ ಸಂತೃಪ್ತಿಯಿಂದ ಇರಬೇಕಾದ ಸಂಸಾರ....[೧೦]' (ವಂಶವೃಕ್ಷ ೧೧:೧೯೮೮) ಕಾತ್ಯಾಯಿನಿ ಗಂಡ ನಂಜುಂಡ ಕಪಿಲೆಯಲ್ಲಿ ಕಾಲುಜಾರಿ ಜೀವಕಳೆಯುವುದರೊಂದಿಗೆ ಅವಳ ಈ ಸುಖಮಯ ಸಂಸಾರದ ಚಿತ್ರ ಮಸುಕಾಗುತ್ತದೆ. ಇಪ್ಪತ್ತರ ಹರೆಯುದಲ್ಲಿ ಕಾತ್ಯಾಯಿನಿ ವಿಧವೆಯಾಗುತ್ತಾಳೆ.

ಸಂಪ್ರದಾಯದಂತೆ ಅವಳು ಮಡಿಯಾಗಬೇಕು. ಮಡಿಯಾದರೇ ಅವಳಿಂದ ಮನೆಕೆಲಸ, ದೇವರ ಕೆಲಸ ಸಾಧ್ಯವಾಗುತ್ತದೆ. ಮನಸ್ಸಿಗೆ ದುಃಖವಿದ್ದರೆ ಅವಳು ಭಗವದ್ಗಿತೆ,ಪುರಾಣ ವಾಚನ ಮಾಡಬೇಕು. ಕಾತ್ಯಾಯಿನಿಗೆ ಈ ಆಚಾರಗಳಲ್ಲಿ ನಂಬಿಕೆಯೂ ಇಲ್ಲ. ಆಸಕ್ತಿಯೂ ಹುಟ್ಟುವುದಿಲ್ಲ. ಕಾತ್ಯಾಯಿಗೆ ಸಂಪ್ರದಾಯಕವಾಗಿ ವಿಧವೆ ಬದುಕನ್ನು ಸ್ವೀಕರಿಸುವುದು ಸಾಧ್ಯವಾಗುವುದಿಲ್ಲ. ಒಂದು ರೀತಿಯಲ್ಲಿ ಅವಳ ಮನಸ್ಥಿತಿಯನ್ನು ಅರ್ಥಮಾಡಿಕೊಂಡ ಅವಳ ಅತ್ತೆ, ಮಾವನವರೂ ಅವಳಿಗೆ ಒತ್ತಾಯದಿಂದ ಯಾವುದನ್ನು ಹೇರಲಾರರು.

ಶ್ರೀನಿವಾಸ ಶ್ರೋತ್ರಿ, ಅವಳ ಮಾವನವರಿಗೆ ವ್ಯಕ್ತಿ ಸ್ವಾತಂತ್ರ್ಯದಲ್ಲಿ ಗೌರವವಿರುವುದರಿಂದ ಕಾತ್ಯಾಯಿನಿ ವಿಧವೆಯಾದರೂ, ಅವಳಿಗೆ ವೈಧವ್ಯದ ಕಠೋರತೆಯ ಅನುಭವವಾಗುವುದಿಲ್ಲ. ಗಂಡ ಅರ್ಧಕ್ಕೆ ನಿಲ್ಲಿಸಿದ ಶಿಕ್ಷಣವನ್ನು ಮುಂದುವರಿಸುವೆನೆಂದಾಗಲೂ ಅಂತ ಕಠಿಣ ಪರಿಸ್ಥಿತಿ ಅವಳಿಗೆ ಎದುರಾಗುವುದೇ ಇಲ್ಲ.

ಈ ರೀತಿ ಅತ್ತೆ ಮಾವನವರ ಸಹಕಾರವಿರುವುದರಿಂದಲೇ ಕಾತ್ಯಾಯಿನಿ ಓದು ಮುಂದುವರಿಸುವಂತಾಗುತ್ತದೆ. ಓದಿನ ಮೂಲಕ ಕಾತ್ಯಾಯಿನಿ ಮನಸ್ಸು ಬೇರೆ ಬೇರೆ ಆಲೋಚನೆಗಳತ್ತ ಹರಿಯುವುದೂ ಸಾಧ್ಯವಾಗುತ್ತದೆ. ಮನೆಯ ನಾಲ್ಕು ಗೋಡೆಗಳಿಗೆ ಸೀಮಿತವಾಗಿರುವ ಬದುಕಿನಿಂದ ಬಿಡಿಸಿಕೊಂಡು ಹೊರಜಗತ್ತಿಗೆ ಕಾಲಿಟ್ಟು ನಡೆಯುವ ಅವಕಾಶ ದೊರೆತ ಕಾರಣವಾಗಿಯೇ ಕಾತ್ಯಾಯಿನಿ ಬದುಕಿನಲ್ಲಿ ಹೊಸ ಸಾಧ್ಯತೆಗಳು ಕಾಣಿಸಿಕೊಳ್ಳುತ್ತವೆ. ತನ್ನ ಸುತ್ತಲಿನ

ಪ್ರಕೃತಿಯ ನೂತನತೆಯೂ ಕಾತ್ಯಾಯಿನಿಯಲ್ಲಿ ಭರವಸೆಯೊಂದನ್ನು ಮೂಡಿಸುತ್ತದೆ. ತನ್ನ ಬದುಕನ್ನು ಮತ್ತು ಪ್ರಕೃತಿಯನ್ನು ತುಲನೆ ಮಾಡುತ್ತ ಅವಳು ದುಃಖ ಪಡುತ್ತಿರುವಾಗಲೂ, ಅವಳಿಗೆ ಪ್ರಕೃತಿ ಧರ್ಮದ ಮರ್ಮದ ಮೂಲಕ ತಾನೂ ಪ್ರಕೃತಿಯಂತೆ ಚೇತರಿಕೆ ಪಡಬಹುದಾದ ಸಾಧ್ಯತೆಗಳತ್ತ ಮನಸ್ಸು ಹರಿಯುತ್ತದೆ.

ನಂಜುಂಡ ಶ್ರೋತ್ರಿಯ ಪತ್ನಿಯಾಗಿ ಕಳೆದ ದಿನಗಳು, ಅತ ಸತ್ತ ಬಳಿಕ ಕಳೆದ ಬರಡು ಜೀವನದ ದಿನಗಳು ಈ ಹಂತದವರೆಗೆ ಕಾತ್ಯಾಯಿನಿ ಅಸಹಾಯಕ ಹೆಣ್ಣಾಗಿ ಪರಾಧೀನಳಾಗಿ ಯೋಚಿಸುತ್ತಾಳೆ. ಈ ಘಟ್ಟದಲ್ಲಿ ಅವಳ ಕರ್ತವ್ಯವೇನಿದ್ದರೂ ಶ್ರೋತ್ರಿ ವಂಶಸ್ಥಳಾಗಿ ಆ ಮನೆತನಕ್ಕೆ ತಕ್ಕ ರೀತಿಯಲ್ಲಿ ಬದುಕುವುದು.

ಕಾತ್ಯಾಯಿನಿ ತನ್ನ ಬದುಕಿಗಿಂತಲೂ ಸುತ್ತಲಿನ ಪ್ರಪಂಚದತ್ತ ಗಮನವನ್ನು ಹೆಚ್ಚು ಹೆಚ್ಚು ಹರಿಯತೊಡಗಿಸಿದಂತೆಲ್ಲ ಅವಳಿಗೆ ಬಿಡುಗಡೆಯ ದಾರಿ ಸ್ಪಷ್ಟವಾಗುತ್ತ ಹೋಗುತ್ತದೆ. ಸದಾಶಿವರಾಯರ ಮನೆಯವರ ಪರಿಚಯ ಅಲ್ಲಿಯ ಆತ್ಮೀಯ ವಾತಾವರಣ, ವಿದೇಶದಲ್ಲಿ ವ್ಯಾಸಂಗ ಮಾಡಿ ಬಂದ ರಾಜಾರಾಯರ ಪರಿಚಯ ಸ್ನೇಹ, ಪ್ರಕೃತಿತತ್ವವನ್ನು ಆಧರಿಸಿದ ನಾಟಕದಲ್ಲಿ ಅಭಿನಯಿಸಿದುದು ಇವೆಲ್ಲ ಅವಳ ಜೀವನದಲ್ಲಿ ಎರಡನೇ ಘಟ್ಟದ ಪ್ರಾರಂಭವೆನ್ನಬಹುದು. ಕಾತ್ಯಾಯಿನಿಯಲ್ಲಿ ಹುದುಗಿದ್ದ ಪ್ರತಿಭೆ ಅದಕ್ಕೆ ಹೊರಬರಲು ಅವಕಾಶ ನೀಡಿದ ನಾಟಕದ ಅಭಿನಯ ಅವಳಲ್ಲಿ ಆತ್ಮವಿಶ್ವಾಸವನ್ನು ಮೂಡಿಸಲು ಸಹಕಾರಿಯಾಗುತ್ತದೆ. ಈ ಆತ್ಮವಿಶ್ವಾಸದ ಮೂಲಕವೇ ಅವಳ ಮರುವಿವಾಹದ ನಿರ್ಧಾರಕ್ಕೆ ಬೆಂಬಲ ದೊರೆಯುತ್ತದೆ. ಕಾತ್ಯಾಯಿನಿಯ ಮರುವಿವಾಹಕ್ಕೆ ಎದುರಾದ ಪ್ರತಿಭಟನೆ ಮುಖ್ಯವಾಗಿ ಕುಲಧರ್ಮ ಮತ್ತು ವಂಶಪ್ರಜ್ಞೆಯ ಹಿನ್ನೆಲೆಯಿಂದ ಬಂದವುಗಳಾಗಿವೆ.

ಓರ್ವ ವ್ಯಕ್ತಿಯ ಪತ್ನಿಯಾಗಿ ಬದುಕಿದವಳಿಗೆ ಮತ್ತೆ ಅದೇ ಸ್ಥಾನ ಪಡೆಯುವ ಅವಕಾಶವಿರುವುದಿಲ್ಲ ಎಂದು ಧರ್ಮದ ಹಿನ್ನೆಲೆಯಲ್ಲಿ ಶ್ರೋತ್ರಿಯವರು ಅಸಮ್ಮತಿ ಸುಚಿಸುತ್ತಾರೆ. ವಿವಾಹವನ್ನು ಗೃಹಸ್ಥ ಕರ್ಮಗಳ ನಿರ್ವಹಣೆಗೆ ಮತ್ತು ವಂಶೊದ್ಧಾರಕ್ಕೆ ಮಾತ್ರ ಎಂಬ ಶ್ರೋತ್ರಿಯವರ ನಿಲುವಿನಲ್ಲಿ ".. ವಂಶೋತ್ಪತ್ತಿಗಾಗಿ ಗೃಹಸ್ಥ ಜೀವನ ವಂಶ ಬೆಳೆದ ಮೇಲೆ ಅಕಸ್ಮಾತ್ ಗೃಹವು ನಷ್ಟವಾದರೆ ಪುನಃ ಅದಕ್ಕೆ ತಿರುಗಿ ಹೋಗುವುದು ಧರ್ಮವಲ್ಲ''" (ವಂಶವೃಕ್ಷ : ೧೮೪:೧೯೮೮).

ಇಲ್ಲಿ ಗಮನಿಸಬಹುದಾದ ಅಂಶವೆಂದರೆ ಶ್ರೋತ್ರಿಯವರು ಈ ಮಾತನ್ನು ಕಾತ್ಯಾಯಿನಿಯನ್ನು ಉದ್ದೇಶಿಸಿದಂತೆ ಹೇಳಿದರೂ. ಅದನ್ನು ಸ್ತ್ರೀ ಪುರುಷಂಬ್ಬರಿಗೂ ಅನ್ವಯಿಸಿದಂತೆ ಹೇಳಿದ್ದಾರೆ. ಮತ್ತು ಕಾದಂಬರಿ ಶ್ರೋತ್ರಿ ಬದುಕಿನಲ್ಲಿ ಸ್ವತಃ ಎದುರಿಸಿದ ಇಕ್ಕಟ್ಟಿನ ಪರಿಸ್ಥಿತಿಯನ್ನು ವಿವರಿಸಿದೆ.ತಮ್ಮ ಇಪ್ಪತ್ತೈದನೇ ವಯಸ್ಸಿನಿಂದಲೇ ದಾಂಪತ್ಯ ಸುಖದಿಂದ ವಂಚಿತರಾದ ಶ್ರೋತ್ರಿಯರು ಎರಡನೇ ವಿವಾಹವನ್ನು ನಿರಾಕರಿಸಿದ ವ್ಯಕ್ತಿ. ಶ್ರೋತ್ರಿರವರಿಗೆ ದಾಂಪತ್ಯ ಸುಖವಿಲ್ಲದಿದ್ದರೂ ಪತ್ನಿ ಬದುಕಿರುವುದರಿಂದ ಮರುವಿವಾಹ ಅಧರ್ಮವೆನಿಸಿದೆ. ಕಾತ್ಯಾಯಿನಿ ಗಂಡ ಬದುಕಿಲ್ಲ. ಅತ್ತೆ, ಮಾವಂದಿರ ವಿರೋಧವನ್ನು ಎದುರಿಸಿಯೇ ಕಾತ್ಯಾಯಿನಿ ಮರುವಿವಾಹವಾಗುತ್ತಾಳೆ.

ಶಿಕ್ಷಣ, ಉದ್ಯೋಗ ಮತ್ತು ವಿವಾಹ ಮೂಲಕ ಕಾತ್ಯಾಯಿನಿ ತನ್ನಲ್ಲಿದ್ದ ಅಸಹಾಯಕತೆಯನ್ನು ನೀಗುತ್ತಾಳೆ. ವಂಶಾಭಿವೃದ್ಧಿಗಾಗಿ ತಾನು ಮಗುವನ್ನು ಹಿಂದೆ ಬಿಟ್ಟು ಬರಬೇಕಾಗಿರುವುದು ಮತ್ತು ರಾಜನ ಪತ್ನಿಯಾಗಿ ಕೆಲವು ಕರ್ತವ್ಯಗಳನ್ನು ನಿಭಾಯಿಸಬೇಕಾಗಿರುವುದು ಕಾತ್ಯಾಯಿನಿಗೆ ಮನೋವ್ಯಥೆಯ ರೂಪದಲ್ಲಿ ಕಾಡುತ್ತದೆ.

ಹೆತ್ತ ಮಗುವಿನ ನಿರಾಕರಣೆ ಮತ್ತು ಮತ್ತೊಂದು ಮಗುವನ್ನು ಹೆರಲಾಗದ ಅಸಮರ್ಥತೆ ಕಾತ್ಯಾಯಿನಿಗೆ ಮನೊರೋಗವಾಗಿ ಕಾಡಿ ಅವಳ ಅಂತ್ಯಕ್ಕೆ ಕಾರಣವಾಗುತ್ತದೆ. ವಂಶವೃಕ್ಷ ಕಾದಂಬರಿಯಲ್ಲಿ ಬರುವ ಎಲ್ಲ ಸ್ತ್ರೀಪಾತ್ರಗಳು ಒಂದಲ್ಲ ಒಂದು ಕಾರಣದಿಂದ ದಾಂಪತ್ಯ ಜೀವನದಲ್ಲಿ ಅಸುಖಿಗಳು ಅಗಿದ್ದಾರೆ. ಕಾತ್ಯಾಯಿನಿ, ನಾಗಲಕ್ಷ್ಮಿ, ಭಾಗೀರತಮ್ಮ, ಲಕ್ಷ್ಮಿ ಮತ್ತು ಕರುಣಾರತ್ನೆ ಈ ಸ್ತ್ರೀಯರು.

ಸ್ತ್ರೀ ಪುರುಷ ವೈಯಕ್ತಿಕ ಸಂಬಂಧದಲ್ಲಿ ಧರ್ಮವನ್ನು ತರುವ ಭೈರಪ್ಪನವರ ಧೋರಣೆ ಕಾರಣದಿಂದ ಇಲ್ಲಿ ನೋವನ್ನು ಅನುಭವಿಸುವುದು ಈ ಸ್ತ್ರೀ ಪಾತ್ರಗಳಿಗೆ ಅನಿವಾರ್ಯವಾಗುತ್ತದೆ. ಕರ್ಮಸಿದ್ಧಾಂತಕ್ಕನುಗುಣವಾಗಿ ತಾವು ಅನುಭವಿಸುವ ಕಷ್ಟಗಳನ್ನು ವಿಧಿಯೆಂದೋ, ಕರ್ಮವೆಂದೋ, ಪಾಪದ ಫಲವೆಂದೋ ಅನುಭವಿಸಬೇಕಾಗಿದೆ. ಈ ಯಾವ ನಂಬಿಕೆಯನ್ನು ಇಟ್ಟುಕೊಳ್ಳದೆ ತನ್ನ ವೈಯಕ್ತಿಕ ಸುಖವನ್ನು ಅರಿಸಿಕೊಂಡು ಹೋದ ಕಾತ್ಯಾಯಿನಿಗೆ ಕೂಡ ವಾಸ್ತವಿಕತೆಗಿಂತ, ಭ್ರಮಾತ್ಮಕವಾದ ಈ ನಂಬಿಕೆಗಳು ಮನಸ್ಸಿಗೆ ಸಮಾಧಾನ ನೀಡುತ್ತವೆ ಎಂಬ ಭಾವ ಮೂಡುತ್ತವೆ. ಈ ಹಿನ್ನಲೆಯಿಂದಲೇ ಅವಳು ಯೋಚಿಸುತ್ತಿರುತ್ತಾಳೆ.

''ಸಾಯುವಾಗ ಅತ್ತೆಯ ಮತ್ತು ಈ ವಯಸ್ಸಿನಲ್ಲಿ ಮಾವನವರ ಸೇವೆಮಾಡಿ ಮಗನನ್ನು ಸಾಕಿ ಬೆಳೆಸಿದರೆ ತನ್ನ ಜೀವನದಲ್ಲಿ ದ್ವಂದ್ವಕ್ಕೆ ಎಡೆ ಇರುತ್ತಿರಲಿಲ್ಲ[೧೨]''(ಅದೇ ಪುಟ : ೩೫೯).

ನಾಗಲಕ್ಷ್ಮಿ ತನ್ನ ವೈಯಕ್ತಿಕ ನೋವನ್ನು ಮರೆಯಲು ರಾಮನಾಮವನ್ನು ಬರೆಯಲು ತೊಡಗುವುದು, ಗಂಡ ಸತ್ತಾಗ ಕೇಶಮುಂಡನಕ್ಕೆ ಮುಂದಾಗುವುದು ಎಲ್ಲದಕ್ಕೂ ಕಾತ್ಯಾಯಿನಿ ತನ್ನ ವಾಸ್ತವ ಪ್ರಜ್ಞೆಯಿಂದಲೇ ಸಮ್ಮತ ವ್ಯಕ್ತ ಪಡಿಸುತ್ತಾಳೆ. ನಾಗಲಕ್ಷ್ಮಿ ಮಡಿಯಾಗುವುದನ್ನು ತಡೆಯಲು ಮುಂದಾದ ರಾಜನನ್ನು ಅವಳು ಹಾಗೆ ಮಾಡದಂತೆ ಒಪ್ಪಿಸುತ್ತಾಳೆ.

''.. ಹೊಸ ಅವಸ್ಥೆಯನ್ನು ಸಂಕೇತಪೂರ್ಣವಾಗಿ ಸ್ವೀಕರಿಸಲು ಅವರು ಅಣಿಯಾಗಿದ್ದಾರೆ. ವಾಸ್ತವವಾದ ಅವಸ್ಥೆಯನ್ನು ನೀವೇನೂ ಇಲ್ಲಿವೆನಿ..ಸಲಾರಿರಿ. ಅದರ ಸಂಕೇತವನ್ನೇಕೆ ವಿರೋಧಿಸುತ್ತೀರಿ? ಈ ವಿಷಯದಲ್ಲಿ ಗಂಡಸಿನ ವಿಚಾರ, ತರ್ಕಗಳಿಗಿಂತ ಹೆಂಗಸಿನ ಅಂತಃ ಪ್ರೇರಣೆಯೇ ಹೆಚ್ಚು ವಿವೇಕವುಳ್ಳದ್ದು[೧೩]''(ಅದೇ ಪುಟ ೪೩೨-೪೩೩).

ಇಲ್ಲಿ ಬರುವ ಯಾವ ಸ್ತ್ರೀಯೂ ವ್ಯವಸ್ಥೆ ವಿರುದ್ಧ ನಿಲ್ಲತಕ್ಕ ವ್ಯಕ್ತಿತ್ವವನ್ನುಳ್ಳವರು ಅಲ್ಲ. ಕಾತ್ಯಾಯಿನಿಯಾಗಲೀ, ಕರುಣಾರತ್ನೆಯಾಗಲೀ ತಮ್ಮ ಮದುವೆಯಿಂದ ಕ್ರಾಂತಿ ಮಾಡಿದವರಲ್ಲ. ವೈಯಕ್ತಿಕ ಹೊಂದಾಣಿಕೆಯ ಕಾರಣವಾಗಿ ನಡೆದ ವಿವಾಹವಾಗಿರುವುದರಿಂದ ಈ ವೈವಾಹಿಕ ಚೌಕಟ್ಟಿನ ನಿರೀಕ್ಷೆಗಳು ಸೀಮಿತವಾಗಿದೆ. ಮರುವಿವಾಹದಿಂದ ಕಾತ್ಯಾಯಿನಿ ಸ್ಥಾನಮಾನಗಳಲ್ಲಿ ಯಾವ ಬದಲಾವಣೆಗಳು ಆಗಿಲ್ಲ. ಅವಳು ಹೆಂಡತಿ ಸ್ಥಾನದಲ್ಲಿಯೇ ಮುಂದುವರಿಯುವಳು. ನಂಜುಂಡ ಶ್ರೋತ್ರಿಯ ಮನೆಯಲ್ಲಿಯೇ ಉಳಿದರೆ ತನ್ನ ಮಗುವಾದರೂ ತನ್ನ ಪಾಲಿಗೆ ಉಳಿಯುತ್ತಿತ್ತು ಎಂದು ಸಕಾರಣವಾಗಿಯೇ ಅವಳು ಯೋಚಿಸುತ್ತಾಳೆ. ವಿದ್ಯೆ, ಬುದ್ಧಿ, ವಿಚಾರವಂತಿಕೆ, ವ್ಯಕ್ತಿನಿಷ್ಟ ಮೌಲ್ಯಗಳಿದ್ದರೂ ಕೂಡ ಕಾತ್ಯಾಯಿನಿ, ಕರುಣರತ್ನೆ ತಮ್ಮ ಬದುಕಿನ ಆಯ್ಕೆಯಿಂದ ಸೋತು ಹೋಗುತ್ತಾರೆ. ಬದುಕಿನ ಸಾಧನೆಯೇನಿದ್ದರೂ ಬದುಕಿನೊಡನೆ ಹೊಂದಾಣಿಕೆ ಮಾಡುವುದರ ಮೂಲಕವೇ ಅವರಿಗೆ ಲಭ್ಯವಾಗಿದೆ.

## 'ಗೃಹಭಂಗ'ದಲ್ಲಿ ಸ್ತ್ರೀ

'ಗೃಹಭಂಗ' ಕಾದಂಬರಿಯ ನಂಜಮ್ಮ ಆದರ್ಶ ಗೃಹಿಣಿಯ ಮಾದರಿಯ ಹೆಣ್ಣು. ಒಬ್ಬ ಉತ್ತಮ ಗೃಹಿಣಿಯಲ್ಲಿರಬೇಕಾದ ಎಲ್ಲ ಆದರ್ಶಗುಣಗಳೂ ನಂಜಮ್ಮನಲ್ಲಿವೆ. ಗರತಿತನ, ತಾಯ್ತನ, ಮನೆ ಮಂದಿಯ ಕಾಳಜಿ, ಬಂಧುಪಚಾರ, ಅವಿರತದುಡಿಮೆ. ಸಮರ್ಪಣಾಭಾವ ನಂಜಮ್ಮನಲ್ಲಿ ಇವೆ.

ನಂಜಮ್ಮ ಬದುಕುತ್ತಿರುವ ಪರಿಸರದಲ್ಲಿ ಅನೇಕ ವೈರುಧ್ಯಗಳಿವೆ. ಮೌಢ್ಯ, ದರಿದ್ರತನ, ವಂಚನೆ, ದ್ರೋಹ ಮೊದಲಾದ ಜೀವನ ವಿರೋಧಿ ಮೌಲ್ಯಗಳು ವಿಜೃಂಭಿಸುವ ಪರಿಸರದಲ್ಲಿ, ಅಲ್ಲಿಯೇ ಹುಟ್ಟಿಬೆಳೆದ ಯಾವ ವ್ಯಕ್ತಿಗೂ ಈ ಪರಿಸರದ ಪ್ರಭಾವದಿಂದ ತಪ್ಪಿಸಿ ಬದುಕುವುದು ಸಾಧ್ಯವಾಗಿಲ್ಲ. ಆದುದರಿಂದ ರಾಮಸಂದ್ರವೆಂಬ ಈ ಊರಿನಲ್ಲಿ ಎಲ್ಲರೂ ಮೂಢರೇ, ಎಲ್ಲರೂ ವಂಚಕರೇ, ಎಲ್ಲರೂ ದರಿದ್ರರೇ. ನಂಜಮ್ಮ ಹುಟ್ಟಿ ಬೆಳೆದ ತಾವರೆಕೆರೆಯೂ ಇದಕ್ಕಿಂತ ಹೆಚ್ಚು ಭಿನ್ನವಾಗಿಲ್ಲ. ರಾಮಸಂದ್ರದ ಜನರಷ್ಟು ಅಲ್ಲದಿದ್ದರೂ ಅವರ ಮೌಢ್ಯತೆಗೆ ಕೊರತೆ ಇಲ್ಲ. ಈ ವೈರುಧ್ಯಗಳ ನಡುವೆ ನಂಜಮ್ಮ ಒಬ್ಬಳೇ ಅಪವಾದವಾಗಿ ಕಾಣಿಸಿಕೊಳ್ಳುತ್ತಾಳೆ. ಗೃಹಿಣಿತನಕ್ಕೆ ಯಾವ ಬೆಲೆಯೂ ಇಲ್ಲದ ವಾತಾವರಣದಲ್ಲಿ ನಂಜಮ್ಮ ತನ್ನ ನೆಲೆಯನ್ನು ಕಾಣಲು ಪ್ರಯತ್ನ ನಡೆಸಿರುವುದೇ ಅವಳ ಜೀವನ ಸಾಧನೆಯಾಗಿದೆ.

ನಂಜಮ್ಮನ ಈ ಸಾಧನೆಯಲ್ಲಿ ಅವಳ ವ್ಯಕ್ತಿತ್ವ ವಿಕಸನವಿದೆ. ಬದುಕನ್ನು ಒಂದು ವ್ರತದಂತೆ ಕಂಡ ಅವಳ ವಿಚಾರಗಳಲ್ಲಿ ಮಾನವೀಯತೆಯ ಅಂಶಗಳು ಇರುವ ಕಾರಣ ನಂಜಮ್ಮ ಗೃಹಿಣಿತ್ವವನ್ನು ಮೀರಿ ಬೆಳೆಯುತ್ತಾಳೆ. ನಂಜಮ್ಮ ಎಲ್ಲಿಯೂ ಹೊಂದಾಣಿಕೆಗೆ ಅವಕಾಶ ನೀಡುವುದಿಲ್ಲ. ಬದುಕಲು ಅವಳು ನಡೆಸುವ ಸಂಘರ್ಷ ಅವಳ ವಿಮೋಚನೆಯ ಒಂದು ಭಾಗವಾಗಿಯೇ ಕಾಣಿಸಿಕೊಂಡಿದೆ. ನಂಜಮ್ಮ ತನ್ನ ಗೃಹಿಣಿತನದ ಮೂಲಕವೇ ಎಲ್ಲವನ್ನು ಸಾಧಿಸುತ್ತಾಳೆ. ತನ್ನ ಕರ್ತವ್ಯ ನಿರ್ವಹಣೆಯಲ್ಲಿಯೇ ಹೊಸ ಸಾಧ್ಯತೆಗಳನ್ನು ಪಡೆದುಕೊಳ್ಳುತ್ತಾಳೆ.

ಕಾದಂಬರಿಯಲ್ಲಿ ನಂಜಮ್ಮನ ಬಾಲ್ಯದ ವಿವರಗಳು ಇಲ್ಲ. ಆದರೆ ಅವಳ ವ್ಯಕ್ತಿತ್ವದಲ್ಲಿ ಅವಳ ತಂದೆ ಕಂಠಿಜೋಯಿಸರ ಪ್ರಭಾವವಿರುವುದನ್ನು ಗುರುತಿಸಲಾಗಿದೆ. ದಿಟ್ಟತನ, ಧೈರ್ಯ ಮತ್ತು ದುಡಿಯುವ ಬಲ ಇವುಗಳಿಂದ ನಂಜಮ್ಮ ತನ್ನ ತಂದೆಯನ್ನು ಹೋಲುತ್ತಾಳೆ. ನಂಜಮ್ಮನಿಗೆ ವಿವಾಹದಿಂದ ಅಪಾರವಾದ ನಷ್ಟವಾಗಿದೆ. ಅವಳು ಮದುವೆಯಾಗಿ ಬಂದ ಸಂಸಾರದ ಎಲ್ಲ ಸದಸ್ಯರು ಮೂರ್ಖರು ಸೌಹಾರ್ದಕ್ಕಿಂತಲೂ ಹೆಚ್ಚಾಗಿ ಬೈಗುಳ, ಕುತ್ಸಿತತನ, ನಿಂದನೆ ಇವುಗಳನ್ನಲ್ಲದೆ ದೈಹಿಕ ಹಿಂಸೆಯನ್ನೂ ಅವಳು ಅನುಭವಿಸಬೇಕಾಗುತ್ತದೆ. ಒಂದು ಹಂತದಲ್ಲಿ ಗಂಡ ಮತ್ತು ಅತ್ತೆ. ಮೈದುನರ ಮೂರ್ಖತನದಿಂದ ಮನೆ, ಆಸ್ತಿ, ಒಡವೆ ಎಲ್ಲವನ್ನು ಕಳೆದುಬಿಡುವಂತಾಗುತ್ತದೆ. ಈ ಹಂತದಲ್ಲಿ ನಂಜಮ್ಮನೂ ಬಸಿರು, ಬಾಣಂತನಗಳಿಂದ ದೈಹಿಕವಾಗಿಯೂ ಬಳಲಿಕೊಂಡು ಇರಬೇಕಾಗುತ್ತದೆ.

ಎಲ್ಲವನ್ನು ಕಳೆದುಕೊಂಡ ಅಸಹಾಯಕ ಪರಿಸ್ಥಿತಿಯಿಂದ ನಂಜಮ್ಮ ತನ್ನ ಪ್ರಯತ್ನದ ಮೂಲಕವೇ ಬದುಕಿಗೆ ಆವಶ್ಯಕವೆನಿಸಿದ ಎಲ್ಲವನ್ನು ಒಂದೊಂದಾಗಿ ಪಡೆಯುವಂತಾಗುತ್ತದೆ. ಇದು ಅವಳ ಬದುಕಿನ ಎರಡನೇ ಹಂತ.

ಮನುಷ್ಯನ ಇಚ್ಛಾ ಶಕ್ತಿ ಮತ್ತು ಪ್ರಯತ್ನಗಳ ಪ್ರತೀಕವಾಗಿ ನಂಜಮ್ಮ ಬೆಳೆಯುತ್ತಾಳೆ. ತನ್ನ ಸಾತ್ವಿಕತೆ, ಸಮಚಿತ್ತ

ಮತ್ತು ಭವಿಷ್ಯದ ಬದುಕಿನಲ್ಲಿದ್ದ ಭರವಸೆ ಮೂಲಕ ಈ ಸಾಧನೆ ಅವಳಿಗೆ ಲಭಿಸುತ್ತದೆ.

ತನ್ನ ಈ ಪ್ರಯತ್ನದಲ್ಲಿ ಸ್ವತಃ ಗಂಡನನ್ನು ಅವಲಂಬಿಸದೆ ಅವಳು ಕಾರ್ಯ ನಡೆಸುತ್ತಾಳೆ. ತನ್ನ ಕಾರ್ಯದಲ್ಲಿ ಮಾದೇವಯ್ಯ, ದ್ಯಾವರಸಯ್ಯ, ಗುಂಡೇಗೌಡ, ಶೇಕ್-ದಾರ, ವೆಂಕಟೇಶಯ್ಯ, ಮಾಸ್ತರ, ಮತ್ತು ತನ್ನ ತಂದೆ, ಅಣ್ಣ, ಮಕ್ಕಳ ಸಹಕಾರವನ್ನು ಪಡೆದರೂ ಅದು ಸಾಮೂಹಿಕ ಪ್ರಯತ್ನಕ್ಕಿಂತಲೂ ಹೆಚ್ಚಾಗಿ ಅವಳ ಕ್ರಿಯಾಶಕ್ತಿಯ ಫಲವೇ ಆಗಿದೆ. ಮನುಷ್ಯ ಮತ್ತು ಪ್ರಾಕೃತಿಕ ದುಷ್ಟಶಕ್ತಿಗಳ ವಿರುದ್ಧ ಹೋರಾಡುತ್ತಲೇ ಬದುಕಿನ ಇನ್ನೊಂದು ಮುಖದರ್ಶನ ಮಾಡಿ ತನ್ನ ಜೀವನವನ್ನು ಸಹ್ಯ ಮಾಡಿಕೊಳ್ಳುವುದು ಅವಳಿಗೆ ಸಾಧ್ಯವಾಗುತ್ತದೆ.

ನಂಜಮ್ಮ ಕ್ರಿಯಾಶಕ್ತಿಯ ಪ್ರತೀಕ. ತನ್ನ ಸ್ವಂತ ಬುದ್ಧಿ ಮತ್ತು ಪರಿಶ್ರಮಗಳಿಂದಲೇ ರಾಮಸಂದ್ರದ ಜೀವವಿರೋಧಿ ಪರಿಸ್ಥಿತಿಯಲ್ಲಿ ಅವಳು ಸಂಸಾರ ನಡೆಸುತ್ತಾಳೆ. ನಂಜಮ್ಮನಿಗೆ ತಾನು ಬದುಕುವ ಪರಿಸರ ಬಿಟ್ಟರೆ ಬೇರೆ ಕಡೆ ನೆಲೆ ಇಲ್ಲ. ಅತ್ತೆಮನೆ, ತೌರುಮನೆ ಆಸರೆ ಅವಳಿಗಿಲ್ಲ. ಮಗಳ ಮದುವೆ ಸಂದರ್ಭದಲ್ಲಿ ತಂದೆಯೊಡನೆ ನಿಷ್ಠುರವಾಗಿರುವುದರಿಂದ ಅವರ ಸಹಾಯವನ್ನು ಅಪೇಕ್ಷಿಸುವಂತಿಲ್ಲ. ಈ ರೀತಿ ತನ್ನ ಬದುಕಿಗೆ ತಾನೇ ಜವಾಬ್ದಾರಳಾಗಿ ನಂಜಮ್ಮ ಬದುಕನ್ನು ಎದುರಿಸುತ್ತಾಳೆ. ಹೆಂಗಸಾದವಳು ಲೆಕ್ಕಪತ್ರ ಬರೀಬೌದಾ? ಎಂದು ಕೇಳುವವರ ಮುಂದೆ ಶಾನುಭೋಗಿಕೆ ಲೆಕ್ಕ, ಎಲೆ ಹಚ್ಚುವುದು, ಗೆಡ್ಡೆ ಸಂಗ್ರಹಿಸುವುದು ಮೊದಲಾದುವುಗಳ ಮೂಲಕ ಆರ್ಥಿಕಮೂಲ, ಆಹಾರಮೂಲವನ್ನು ಹುಡುಕಿಕೊಂಡು ತಾನು ಬದುಕುವುದಲ್ಲದೆ, ತನ್ನವರನ್ನೂ ಬದುಕಿಸುತ್ತಾಳೆ. ಮಕ್ಕಳಿಗೆ ವಿದ್ಯೆ, ಸಂಸ್ಕೃತಿ, ಸನ್ನಡತೆ ಕಲಿಸಿದವಳು ಅವಳು.

ನಂಜಮ್ಮ ಬದುಕುತ್ತಿರುವುದು ತನ್ನ ಮನೆಯಲ್ಲಿ. ದುಡಿಯುತ್ತಿರುವುದು ತನ್ನದೇ ಅಂಗರೂಪದಲ್ಲಿರುವ ಮಕ್ಕಳಿಗಾಗಿ. ಆದುದರಿಂದಲೇ ಅವಳಿಗೆ ತಾನು ಸಂಗ್ರಹ ಮಾಡಿಟ್ಟ ಧಾನ್ಯ ಸಂಗ್ರಹಕ್ಕೆ ಗಂಗಮ್ಮ ಕೈಹಾಕಿದಾಗ ಪ್ರತಿಭಟಿಸುವಂತಾಗುತ್ತದೆ. ನಂಜಮ್ಮನ ಸ್ವತಂತ್ರ ವ್ಯಕ್ತಿತ್ವದಲ್ಲಿ ಮನುಷ್ಯ ಪಯತ್ನದ ಎಲ್ಲ ಸಾಧ್ಯತೆಗಳನ್ನು ಕಾಣಿಸಿಕೊಳ್ಳುವುದರ ಮೂಲಕ ಅವಳನ್ನು ಹೆಣ್ಣು ಎನ್ನವುದಕ್ಕಿಂತಲೂ ಮನುಷ್ಯಳೆಂದು ಸ್ವೀಕರಿಸಲಾಗಿರುವುದು ಹೆಚ್ಚು ಸಕಾರಣವಾಗಿದೆ.

ಹೆಂಗಸು ಲೆಕ್ಕಪತ್ರಗಳನ್ನು. ಪುಸ್ತಕಗಳನ್ನು ಮುಟ್ಟಲಾಗುವುದು ಎಂಬ ನಂಬಿಕೆ, ಸಾತುವಿಗೆ ಆಶ್ರಯ ನೀಡಿದಳೆಂದು ವ್ಯಕ್ತ ಪಡಸಲಾದ ಬಹಿಷ್ಕಾರದ ಬೆದರಿಕೆ - ಈ ಧಾರ್ಮಿಕ ನಂಬಿಕೆಗಳು ಯಾವುದೂ ಅವಳನ್ನು ವಿಚಲಿತಳನ್ನಾಗಿ ಮಾಡುವುದಿಲ್ಲ. ತನ್ನ ಮನಸ್ಸಿಗೆ ವಿರುದ್ಧವೆಂದು ಕಂಡ ಪ್ರಸಂಗಗಳಲ್ಲೆಲ್ಲ ನಂಜಮ್ಮ ಪ್ರತಿಭಟನೆ ತೋರಿಸಿದ್ದಾಳೆ, ಕೋಪಿಸಿಕೊಂಡಿದ್ದಾಳೆ. ಪ್ರತಿರೋಧವನ್ನು ತೋರಿಸುವುದರ ಮೂಲಕ ಸಹನಾಶೀಲೆಯೆಂದಾಗಲೇ, ತಾಳ್ಮೆಯ ಪ್ರತಿರೂಪವೆಂದಾಗಲೀ ಆರೋಪಕ್ಕೆ ಅವಕಾಶವಿಲ್ಲದಂತಾಗಿದೆ.

ನಂಜಮ್ಮನಲ್ಲಿರುವ ಮನುಷ್ಯ ಸಹಜ ಸ್ವಭಾವದ ಅರಳುವಿಕೆಗೆ ಕಾದಂಬರಿ ಸಾಕಷ್ಟು ಅವಕಾಶಗಳನ್ನು ನೀಡಿದೆ. ಎಡಬಿಡದೆ ಕಾಡುವ ಸಾವುನೋವುಗಳು, ದೈಹಿಕ ಬಳಲಿಕೆ - ಈ ಎಲ್ಲ ಪ್ರತಿರೋಧಗಳನ್ನು ಎದುರಿಸುತ್ತಲೇ ಮನೆಕಟ್ಟಿ ಮುಗಿಸಿದ ಅವಳ ಛಲ ಅವಳಲ್ಲಿರುವ ಕ್ರಿಯಾಶಕ್ತಿಗೆ ದ್ಯೋತಕವಾಗಿದೆ. ನಂಜಮ್ಮನ ಮುಂದೆ ಅದೇ ಊರಿನ ಬೇರೆ ಬೇರೆ ಸ್ತ್ರೀಯರಲ್ಲಿ ವಿರೋಧಾಬಾಸ ಎನ್ನಬಹುದಾದ ಗುಣಲಕ್ಷಣಗಳನ್ನು ಕಾಣಿಸಲಾಗಿದೆ.

ತಾವರೆಕೆರೆಯಿಂದ ಮದುವೆ ನಂತರ ರಾಮಸಂದ್ರದಲ್ಲಿ ಬದುಕು ನಡೆಸಿದ ನಂಜಮ್ಮನಿಗೆ ವ್ಯತಿರಿಕ್ತವಾಗಿ ಗಂಗಮ್ಮನ ಪಾತ್ರವಿದೆ. ರಾಮಸಂದ್ರದಲ್ಲಿ ಗಂಡ, ಮಕ್ಕಳೊಡನೆ ಸಂಸಾರ ಹೂಡಿ ಸ್ಥಿರವಾಗಿ ನಿಂತ ಗಂಗಮ್ಮ ಕಾಲಾನುಕ್ರಮದಲ್ಲಿ ಆ ಊರಿನ ಒಂದೊಂದೇ ಸಂಬಂಧಗಳನ್ನು ಕಳಚಿ ಕೊಳ್ಳುತ್ತ ಕೊನೆಗೆ ಊರ ಹೊರಗಿನ ಗುಡಿಯಲ್ಲಿ ತನ್ನ ವಾಸ್ತವವನ್ನು ಹೂಡಿ, ಉದರ ನಿರ್ವಹಣೆಗೆ ತನ್ನದಲ್ಲದ ಊರಿನಲ್ಲಿ ಭ್ರಮಣ ನಡೆಸುತ್ತಿರುತ್ತಾಳೆ. ಸ್ಥಿರ ಬದುಕಿನಲ್ಲಿ ನೆಲೆ ಕಾಣುವ ನಂಜಮ್ಮ ಮತ್ತು ತನ್ನದೆಲ್ಲವನ್ನು ಕಳೆದುಕೊಂಡು ಊರುಬಿಟ್ಟ ಗಂಗಮ್ಮ ಪರಸ್ಪರ ವಿರೋಧನೆಲೆಯಲ್ಲಿ ಕಾಣಿಸಿಕೊಳ್ಳುತ್ತಾರೆ.

ನಂಜಮ್ಮನಿದ್ದ ಪರಿಸ್ಥಿತಿಯಲ್ಲಿಯೇ ಬದುಕಿದ ಬೇರೆ ಸ್ತ್ರೀ ಪಾತ್ರಗಳು ಇಲ್ಲಿವೆ. ಈ ಸ್ತ್ರೀಯರ ಬದುಕು ಪಡೆದ ತಿರುವುಗಳು, ಅವರ ಪ್ರತಿಕ್ರಿಯೆ ಮತ್ತು ಅವರ ಪಾಲಿಗೆ ಬಂದ ಸೋಲಿನ ಮೂಲಕ ನಂಜಮ್ಮನ ಪಾತ್ರ ದೃಢತೆ ಮತ್ತಷ್ಟು ಸ್ಪಷ್ಟವಾಗುತ್ತದೆ. ಕಾದಂಬರಿಯಲ್ಲಿ ಕಾಣಿಸಿಕೊಳ್ಳುವ ಇತರ ಸ್ತ್ರೀ ಪಾತ್ರಗಳು : ಗಂಗಮ್ಮ, ಸಾತು, ಕಮಲ, ಅಕ್ಕಮ್ಮ, ಸರ್ವಕ್ಕ. ಗಂಗಮ್ಮ ನಂಜಮ್ಮನ ಅತ್ತೆ, ಗಂಗಮ್ಮನಿಗೆ ಮದುವೆಯಾದಾಗ ೧೩ ವರ್ಷ, ಎರಡು ಮಕ್ಕಳು ಹುಟ್ಟಿ ಅವಳು ವಿಧವೆಯಾದಾಗ ಅವಳಿಗೆ ೨೫ ವರ್ಷ.

ಗಂಗಮ್ಮನ ಸ್ವಭಾವದಲ್ಲಿ ದಾಷ್ಟ್ಯತೆ ಇದೆ. ವಿವೇಚನಾರಹಿತ ಸ್ವಭಾವ, ಕೆಟ್ಟ ಮಾತುಗಳು, ಮೂರ್ಖ ಮಕ್ಕಳು, ಇವುಗಳನ್ನು ಕಟ್ಟಿಕೊಂಡು ಗಂಗಮ್ಮ ಊರಿನವರ ಮೋಸಕ್ಕೆ ಅವಿರತವಾಗಿ ಬಲಿಯಾಗುವಳು. ಆದರೂ ಅವಳಿಗೆ ವಿವೇಕ ಹುಟ್ಟಿಕೊಳ್ಳುವುದೆ ಇಲ್ಲ. ತನ್ನ ಮಕ್ಕಳಿಂದಲೇ ಕೆಟ್ಟ ಕೆಲಸ ಮಾಡಿಸಲು ಅವಳು ಹಿಂಜರಿಯುವವಳಲ್ಲ. ನಂಜಮ್ಮನನ್ನು ಕಿರಿಮಗನಿಂದ ಹೊಡೆಯಿಸುವುದು, ಅವನಿಂದ ಕಟ್ಟಿದ ಮನೆಯನ್ನೇ ಬೀಳಿಸುವುದು ಮೊದಲಾದ ಕಾರ್ಯಗಳನ್ನು ನಡೆಸುತ್ತಾಳೆ.

ಗಂಗಮ್ಮನ ಪಾತ್ರದ ದುರಂತವೆಂದರೆ ಅವಳ ಮಕ್ಕಳು ಮತ್ತು ಅವಳ ಸ್ವಭಾವ. ಈ ಎರಡು ವಿಚಾರಗಳಿಗೆ ಬಿಡದೆ ಕೊನೆವರೆಗೆ ಅವಳು ಅಂಟಿಕೊಂಡ ಕಾರಣವಾಗಿಯೇ ಎಲ್ಲವನ್ನು ಕಳೆದುಕೊಂಡು ಭಿಕ್ಷೆ ಎತ್ತಿ ಬದುಕುವಂತಾಗುತ್ತದೆ.

ಇಲ್ಲಿ ಗಂಗಮ್ಮನನ್ನು ಶೋಷಿಸುವವರೆಲ್ಲರೂ ಅವಳು ಬಾಳಿ ಬದುಕಿದ ಊರಿನ ಮಂದಿಯೇ ಆಗಿರುತ್ತಾರೆ. ಶಿವಲಿಂಗೇಗೌಡ್ರ, ರೇವಣ್ಣಶೆಟ್ಟಿ, ಅಯ್ಯಶಾಸ್ತ್ರೀ, ಅಣ್ಣಾಜೋಯಿಸರು ಮೊದಲಾದ ಗಂಡಸರೆಲ್ಲರೂ, ಗಂಡ ಇಲ್ಲ, ಮಕ್ಕಳು ಸರಿಯಿಲ್ಲ ಎಂಬ ಕಾರಣದ ಮೂಲಕವೇ ಗಂಗಮ್ಮನನ್ನು ಸೂರೆ ಮಾಡುತ್ತಾರೆ.

ಗಂಗಮ್ಮ ಅಸಹಾಯಕತೆಯ ಪ್ರತೀಕವಾಗಿದ್ದಾಳೆ. ತಿರುಗಾಟದಲ್ಲಿ ಪರ್ಯವಸನಗೊಂಡ ಅವಳ ಬದುಕು ಅತಂತ್ರಸ್ಥಿತಿಯನ್ನು ಸೂಚಿಸುತ್ತದೆ. ಸಾತು ನಂಜಮ್ಮನ ಮೈದುನನ ಹೆಂಡತಿ. ಅವಳಿಗೆ ನಂಜಮ್ಮನಂತೆ ಹೋರಾಟ ನಡೆಸಿ ಬದುಕುವ ಛಲವಿಲ್ಲ. ಅವಳು ಗಂಡನನ್ನು ಬಿಟ್ಟು ತೌರುಮನೆ ಸೇರುತ್ತಾಳೆ. ಅಲ್ಲಿ ವಿಲಾಸದ ಜೀವನದ ಆಯ್ಕೆ ಮಾಡುತ್ತಾಳೆ. ಮೊದಲು ತಂದೆಯನ್ನು ನಂತರ ಇತರ ಪುರುಷರನ್ನು ಆಶ್ರಯಿಸುವ ಸಾತುವಿಗೆ ವೈಯಕ್ತಿಕ ಬದುಕಿನಲ್ಲಿ ಸುಖದ ಕಲ್ಪನೆ ಮಾತ್ರವಿದೆ.

ಕಮಲ ನಂಜಮ್ಮನ ಅತ್ತಿಗೆ. ಅವಳ ಗಂಡ ನೀತಿಕೆಟ್ಟವನಾದುದರಿಂದ ಅವಳು ತನ್ನ ಗಯ್ಯಾಳಿತನ ತೋರಿಸುತ್ತಾಳೆ. ತಾನು ಸುಖವಾಗಿರದೆ, ತನ್ನವರನನ್ನೂ ಸುಖವಾಗಿ ನೋಡಿಕೊಳ್ಳದೆ ಅಶಾಂತಿಯಲ್ಲಿ ಬದುಕನ್ನು ನಡೆಸುತ್ತಾಳೆ. ನಂಜಮ್ಮನನ್ನು ಬಿಟ್ಟರೆ ಸಾತು, ಕಮಲ ಗಂಗಮ್ಮನವರದು ದೌರ್ಬಲ್ಯದ ಪಾತ್ರಗಳು. ಈ ಸ್ತ್ರೀಯರ ಪ್ರತಿಭಟನೆ, ಪ್ರತಿರೋಧಗಳು ಅವರ ಬದುಕನ್ನು ಸಹ್ಯಗೊಡಿಸುವುದಿಲ್ಲ. ಅಸಮ ದಾಂಪತ್ಯವೇ ಇವರ ನೋವು, ದುಗುಡಗಳಿಗೆ ಮುಖ್ಯ ಕಾರಣವಾಗಿದೆ. ಅವರಲ್ಲಿರುವ ಗಯ್ಯಾಳಿತನ ಅಸಹಾಯಕತೆಯ ಹಿನ್ನಲೆಯಿಂದ ಕಾಣಿಸಿಕೊಂಡಿರುವುಂಥದು. ಗಂಡನ ಬುದ್ಧಿಯನ್ನು ಸರಿಪಡಿಸಲಾಗದೆ. ತಮ್ಮ ಬುದ್ಧಿಯನ್ನು ಸುಧಾರಿಸಿಕೊಳ್ಳದೆ ಪರಿಸ್ಥಿತಿಯ ಕೈಗೊಂಬೆಗಳಾಗಿರುವ ಪಾತ್ರಗಳು, ಇವು.

ಗಂಡಸರು ಕೆಟ್ಟಬುದ್ಧಿ, ಕೆಟ್ಟಚಾಳಿಗಳನ್ನು ತೋರಿಸಿದರೂ ಮಾನವೀಯತೆಯಿಂದ ನಡೆದುಕೊಂಡ ಹೆಂಗಸರೂ ಇಲ್ಲಿದ್ದಾರೆ. ಆದರೆ ಅವರ ಉತ್ತಮ ನಡವಳಿಕೆಗೆ ಮತ್ತಷ್ಟು ಕೆಟ್ಟರೀತಿಯಲ್ಲಿ ಅವರನ್ನು ಹಿಂಸಿಸಲಾಗುತ್ತದೆ.

ಗಂಡಂದಿರು ಅನ್ಯಾಯದಲ್ಲಿ ನಿರತರಾಗಿರುವಾಗ ಅವರನ್ನು ಬೆಂಬಲಿಸದೆ, ಸತ್ಯದ ಪರವಾಗಿ ನಿಲ್ಲುವ ಹೆಂಡಂದಿರು ಮಾನವೀಯತೆಯ ಪ್ರತೀಕರಾಗಿದ್ದಾರೆ. ಕಂಠೀಜೋಯಸರ ವಿಚಾರಣೆ ಸಮಯ ಶ್ಯಾಮಣ್ಣ ಜೋಯಸರ ವಿರುದ್ಧ, ಅವರ ಸುಳ್ಳಿನ ಕತೆಯನ್ನು ಕೋರ್ಟಿನಲ್ಲಿ ಬಯಲಿಗೆಳೆದ ಅವನ ಹೆಂಡತಿ, ಗಂಗಮ್ಮ ಕೂಳೆ ಕಬ್ಬಿನವಸೂಲಿಗೆ ಅನ್ಯಾಯವಾಗಿ ನಡೆದುಕೊಂಡ ರೇವಣ್ಣಶೆಟ್ಟಿಗೆ ಬುದ್ಧಿ ಹೇಳಿದ ಸರ್ವಕ್ಕ ಮೊದಲಾದವರು ಗಂಡಸಿನ ದುಡುಕು ಸ್ವಭಾವ, ಪಲಾಯನವಾದಿತ್ವಕ್ಕೆ ವಿರುಧವಾಗಿ ನ್ಯಾಯ, ನೀತಿ, ಅನುಕಂಪವನ್ನು ವ್ಯಕ್ತಪಡಿಸುವವರು.

ಗೃಹಭಂಗದಲ್ಲಿ ಕಾಣಿಸಿಕೊಳ್ಳುವ ಗಂಡಸರು ಅನ್ಯಾಯ, ವಂಚನೆ, ಶೋಷಣೆಗಳಲ್ಲಿ ಸದಾ ನಿರತರಾಗಿರುವವರು. ಜೀವ ವಿರೋಧ ಕೃತ್ಯಗಳಲ್ಲಿ ಸದಾ ಮಗ್ನರಾಗಿ ಸಮಾಜದ ಅಶಾಂತಿಗೆ ಕಾರಣರಾಗುವವರು. ನಂಜಮ್ಮನಿಗೆ ಸಹಕಾರ, ಸಹಾಯ ಮಾಡುವ ಗಂಡಸರೆಲ್ಲ ಊರಿನ ಹೊರಗಿನವರು. ಅವರು ರಾಮಸಂದ್ರಕ್ಕೆ ಸೇರಿದವರಲ್ಲ.

ಹೆಣ್ಣಿನ ಮೇಲೆ ನಡೆಯುವ ದಬ್ಬಾಳಿಕೆಯ ಪ್ರಕರಣಗಳಿಗೆ ಈ ಗಂಡಸರೇ ಕಾರಣರಾಗಿದ್ದಾರೆ. ಈ ದಬ್ಬಾಳಿಕೆ ಪ್ರಕರಣಗಳು ಈ ಕೆಳಗಿನಂತಿವೆ.

೧. ದೈಹಿಕ ಹಿಂಸೆ: ಹೊಡೆದು ಬಡಿದು ದೈಹಿಕವಾಗಿ ನೋವನ್ನುಂಟುಮಾಡುವುದು. ರಾಮಣ್ಣ ಶೆಟ್ಟಿ ತನ್ನ ಹೆಂಡತಿ ಸರ್ವಕ್ಕನಿಗೆ, ಶ್ಯಾಮಣ್ಣ ಜೋಯಿಸ ತನ್ನ ಹೆಂಡತಿಗೆ, ಕಲ್ಲೇಶ ಹೆಂಡತಿ ಕಮಲುವಿಗೆ ಮತ್ತು ಅಪ್ಪಣ್ಣಯ್ಯ ತನ್ನ ಅತ್ತಿಗೆ ನಂಜಮ್ಮನಿಗೆ ಹೊಡೆತ ನೀಡಿದ ಪ್ರಕರಣಗಳು.

೨. ಲೈಂಗಿಕ ಶೊಷಣೆ: ರೇವಣ್ಣಶೆಟ್ಟಿ ಪ್ರಾಯಕ್ಕೆ ಬಂದ ತನ್ನ ಮಗಳನ್ನು ಕಾಶಿಂಬಡ್ಡಿಗೆ ಒಪ್ಪಿಸಿದುದು. ಕಲ್ಲೇಶ ತನ್ನ ಹೆಂಡತಿ ಗೆಳತಿ ಪುಟ್ಟಗೌರಿ ಮೇಲೆ ನಡೆಸಿದ ಅತ್ಯಾಚಾರ.

೩. ಮೋಸ: ಅಸಹಾಯಕ ಸ್ಥಿತಿಯಲ್ಲಿರುವ ಹೆಂಗಸರ ಪರಿಸ್ಥಿತಿಯನ್ನು ದುರುಪಯೋಗಿಸುವ ಕೃತಿಗಳು. ಗಂಗಮ್ಮನ ಆಸ್ತಿ, ಶ್ಯಾನುಬೋಗಿಕೆಯನ್ನು ಲಪಟಾಯಸಿದ ಶಿವೇಗೌಡ, ಶಿವಲಿಂಗೆಗೌಡರ ಕೃತ್ಯ. ಸಂಪಾದನೆಯನ್ನು ಹೆಂಡತಿ ಮಕ್ಕಳಿಗೆ ನೀಡದೆ ತಾನೊಬ್ಬನೇ ತಿಂದು ತಿರುಗುವ ಚೆನ್ನಿಗರಾಯನ ನಡವಳಿಕೆ.

೪. ಅನ್ಯಾಯ: ಅಪ್ಪಣ್ಣಯ್ಯ ಸಣ್ಣಂದಿನಲ್ಲಿ ತಿಳಿಯದೆ ಮಾಡಿದ ಬೆಂಕಿ ಪ್ರಕರಣದಲ್ಲಿ ಊರಿನವರೆಲ್ಲ ಗಂಗಮ್ಮನಿಂದ ವಸೂಲಿ ಮಾಡಿದುದು. ಸಾತುವಿಗೆ ಆಶ್ರಯ ನೀಡದಳೆಂದು ನಂಜಮ್ಮನಿಗೆ ಊರಿನವರು ಹಾಕಿದ ಬಹಿಷ್ಕಾರ, ಮಗಳನ್ನು ಸಂಬಂಧಕ್ಕೆ ಕೊಡಲಿಲ್ಲವೆಂದು ಮಗಳ ಸಂಬಂಧವನ್ನು ಕಂ ಜೋಯಿಸ ಹರಿದುಕೊಂಡಿದ್ದು. ಗಂಡಸರು ತುಂಬಿದ ಶೋಷಕ ಸಮುದಾಯದಲ್ಲಿ ಅವರ ಬೆಂಬಲ ಮತ್ತು ಆಧಾರದಿಂದಲೇ ಬದುಕು ನಡೆಸಬೇಕಾದ ಅಸಹಾಯಕ ಸಮುದಾಯವಾಗಿ ಇಲ್ಲಿಯ ಸ್ತ್ರೀ ಸಮಾಜವಿದೆ.

## 'ಅಂಚು'ವಿನಲ್ಲಿ ಸ್ತ್ರೀ

'ಅಂಚು' ಕಾದಂಬರಿ ಯುವತಿಯೋರ್ವಳ ವೈಯಕ್ತಿಕ ಸಂಘರ್ಷವನ್ನು ನಿರೂಪಿಸುವ ಕಾದಂಬರಿ. 'ಅಮೃತ'ಳ ವಿಮೋಚನೆಯ ಹೋರಾಟವನ್ನು ಕಥಾನಕವಾಗಿ ಕಾದಂಬರಿ ವಿವರಿಸುತ್ತದೆ.

ತನ್ನ ಅಮಾಯಕತೆ ಮತ್ತು ಮುಗ್ಧತೆಯ ಕಾರಣವಾಗಿ, ಓದಿನಲ್ಲಿ ಅಸಾಧಾರಣ ಬುದ್ಧಿವಂತೆಯೆನಿಸಿದ ಅಮೃತಾ ವ್ಯವಹಾರದಲ್ಲಿ ಬಿಕ್ಕಟ್ಟಿನ ಪರಿಸ್ಥಿತಿಯನ್ನು ಎದುರಿಸಬೇಕಾಗುತ್ತದೆ. ಈ ಬಿಕ್ಕಟ್ಟು ಅವಳ ವೈಯಕ್ತಿಕ ಬದುಕನ್ನು, ಮುಖ್ಯವಾಗಿ ವೈವಾಹಿಕ ಬದುಕನ್ನು ನಾಶಮಾಡುತ್ತದೆ. ನಂತರ ಅವಳನ್ನು ಮಾನಸಿಕವಾಗಿಯೂ ಬಹುವಾಗಿ ಕುಗ್ಗಿಸಿ ಬಿಡುತ್ತದೆ. ತಾನಿರುವ ಸ್ಥಿತಿಯಲ್ಲಿ ಅನಪೇಕ್ಷಿತವಾಗಿ ನಡೆದ ಘಟನೆಗಳಿಂದ ಪಾಪಪ್ರಜ್ಞೆಯನ್ನು ಬೆಳೆಸಿಕೊಂಡ ಅಮೃತಾ ಸಾವಿನ ಅಂಚನ್ನು ಮುಟ್ಟುವ ಸ್ಥಿತಿ ತಲುಪುತ್ತಾಳೆ. ಅವಳ ವಿಮೋಚನೆಯ ಮೊದಲ ಹಂತದಲ್ಲಿ ಅವಳು ಬದುಕಿನ ಅರ್ಥವನ್ನು ಕಳೆದುಕೊಂಡು ಸಾವಿನೆಡೆಗೆ ಸೆಳೆಯಲ್ಪಡುತ್ತಾಳೆ. ಸಾವನ್ನು ಪಡೆಯಲಾಗದೆ, ನಿರ್ವಾತ ಸ್ಥಿತಿಯಲ್ಲಿರುವಾಗ ನಿಧಾನವಾಗಿ ತಾನು ಕಳೆದುಕೊಂಡ ಎಲ್ಲ ವಿಚಾರಗಳನ್ನು, ಸಂಬಂಧಗಳನ್ನು ಒಂದೊಂದಾಗಿ ಪಡೆದುಕೊಳ್ಳುವ ಪ್ರಯತ್ನದಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುವ ಮೂಲಕ ಹೊಸಬದುಕಿನ ಹಾದಿಯ ನಿರೀಕ್ಷೆಯಲ್ಲಿ ಬಂದು ನಿಲ್ಲುತ್ತಾಳೆ, ಇದು ಅವಳ ವಿಮೋಚನೆಯ ಎರಡನೆ ಹಂತ. ಈ ಎರಡು ಭಿನ್ನ ಮನಸ್ಥಿತಿಯಲ್ಲಿ ಅಮೃತಾ ತನ್ನನ್ನು ತಾನು ಗುರುತಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗಿಕೊಳ್ಳುತ್ತ, ತನ್ನ ವ್ಯಕ್ತಿತ್ವ ವಿಕಾಸವನ್ನು ಕಂಡುಕೊಳ್ಳುತ್ತಾಳೆ. ವ್ಯಕ್ತಿತ್ವ ವಿಕಾಸದಲ್ಲಿ ಬಾಹ್ಯ ಪ್ರೇರಣೆಗಳಿಗಿಂತ, ಅಧಿಕವಾಗಿ ಅವಳು ತನ್ನ ಸ್ವಪ್ರಯತ್ನದಿಂದ ತನ್ನತನದ ಅರಿವನ್ನು ಪಡೆದುಕೊಳ್ಳುವುದು ಇಲ್ಲಿ ಮಹತ್ವದೆನ್ನಿಸುತ್ತದೆ ಇದು ಅವಳ ವೈಯಕ್ತಿಕ ಗೆಲುವಿನ ದಾರಿಯಲ್ಲಿ ಮಹತ್ವದ ಹೆಜ್ಜೆಯೂ ಆಗಿದೆ. 'ವಂಶವೃಕ್ಷ' ಕಾದಂಬರಿಯ ಕಾತ್ಯಾಯಿನಿಯ ರೀತಿಯಲ್ಲಿಯೇ ಅಮೃತಾ ಕೂಡಾ ಪಾಪಪ್ರಜ್ಞೆಯಲ್ಲಿ ಸಿಕ್ಕಿಕೊಳ್ಳುವ ಪರಿಸ್ಥಿತಿ ಇಲ್ಲಿಯೂ ಇದೆಯಾದರೂ. ಅಮೃತ ಅದನ್ನು ಮೀರಿ ಬದುಕುವುದು, ಸಾವಿನಂಚಿಗೆ ತಲುಪಿ ಮತ್ತೆ ಜೀವನಾಭಿಮುಖಿಯಾಗಿ ಹೊರಡುವುದು, ಕಾದಂಬರಿಯ ಇತ್ಯಾತ್ಮಕ ಧೋರಣೆಯಾಗಿ ಮಹತ್ವದ್ದಾಗಿದೆ.

ಅಂಚು ಕಾದಂಬರಿ ಮನುಷ್ಯನ ಮೂಲ ಪ್ರವೃತ್ತಿಗಳಾದ ಸಾವು ಮತ್ತು ಕಾಮವನ್ನು ಅಮೃತಾ ಬದುಕಿನಲ್ಲಿ ತೋರಗೊಡುವುದರ ಮೂಲಕ ಸ್ತ್ರೀ ವ್ಯಕ್ತಿತ್ವವನ್ನು, ಅದರ ಮೂಲ ಸತ್ವದೊಂದಿಗೇ ಗುರುತಿಸುವ ಪ್ರಯತ್ನ ನಡೆಸಿದೆ ಎನ್ನಬಹುದು.

ಮೊದಲ ಹಂತದಲ್ಲಿ ಅಮೃತಾ ಮನಸ್ಥಿತಿ ಅವಳನ್ನು ನಿರ್ವಾತದಲ್ಲಿ ನಿಲ್ಲಿಸಿರುತ್ತದೆ. ಅವಳ ಕುಗ್ಗಿದ ಮನಃ

ಸ್ಥಿತಿಗೆ ಮುಖ್ಯಕಾರಣ ಆಪ್ತಜನರಿಂದ ನಡೆದ ವಂಚನೆ. ಚುರುಕು ಬುದ್ಧಿಯ ಅಮೃತ ಅಪಾರ ಸಂಪತ್ತಿನ ಉತ್ತರಾಧಿಕಾರಿ ಕೂಡ. ಎಸ್ಟೇಟಿನ ಆಸ್ತಿ ಅವಳ ತೌರುಕಡೆಯಿಂದ ಬಂದಿರುವ ಕಾರಣ, ಅಮೃತಾ ಆಸ್ತಿಯ ನಿಜವಾದ ವಾರಸುದಾರಳಾಗಿರುತ್ತಾಳೆ. ಆದರೆ ತಾಯಿ ಸತ್ತ ಸಂದರ್ಭದಲ್ಲಿ ಮನೆ ಮತ್ತು ವ್ಯವಹಾರವನ್ನು ನೋಡಿಕೊಳ್ಳಲು ಬಂದು ನೆಲೆಸಿದ ಚಿಕ್ಕಪ್ಪನ ಸಂಸಾರದಿಂದ ಅಮೃತಾಗೆ ಮೋಸವಾಗುತ್ತದೆ. ತಾಯಿಯನ್ನು ಕಳೆದುಕೊಂಡಿರುವ ಸ್ಥಿತಿಯಲ್ಲಿ, ತನ್ನ ಚಿಕ್ಕಮ್ಮನನ್ನು ಮಾತೃಭಾವವನ್ನು ಕಂಡು ಆದರವಿಟ್ಟುಕೊಂಡ ಅಮೃತಾಳನ್ನು ಮೋಸಮಾಡುವುದು ಅವಳ ಚಿಕ್ಕಮ್ಮನಿಗೆ ಸುಲಭವಾಗುತ್ತದೆ. ಮದುವೆಯಾಗಿ, ಎರಡು ಮಕ್ಕಳ ತಾಯಿಯಾಗುವ ತನಕ ಅಮೃತಾಗೆ ವಂಚನೆಯ ಸುಳಿವು ದೊರೆಯುವುದಿಲ್ಲ. ಗೆಳತಿ ಶ್ವೇತಾಳ ಮಾತಿನ ಮೂಲಕವೇ ನಿಜಸಂಗತಿ ತಿಳಿದಾಗ ಅಮೃತಾ ತೀರ ಬಿಕ್ಕಟ್ಟಿನಲ್ಲಿ ಸಿಕ್ಕಿಕೊಳ್ಳುತ್ತಾಳೆ. ಅಪಾರವಾದ ಸಂಪತ್ತನ್ನು ಕಳೆದುಕೊಂಡಿರುವುದು ಮಾತ್ರವಲ್ಲದೆ, ತನ್ನ ಮದುವೆ. ಮಕ್ಕಳು ಕೂಡಾ ನಯವಂಚನೆಯ ಫಲವೆಂಬ ಕಟುಸತ್ಯ ಅವಳನ್ನು ವಿಚಿತ್ರವಾದ ಮನಸ್ಥಿತಿಗೆ ತಳ್ಳುತ್ತದೆ. ಅಮೃತಾ ಮುಂದೆ ಉಳಿದಿರುವ ಆಯ್ಕೆ ಎರಡು. ಇರುವ ಸ್ಥಿತಿಯಲ್ಲಿಯೇ ಮುಂದುವರಿಯುವುದು ಅಥವಾ ತನ್ನ ಮೇಲೆ ಅಧಿಕಾರ ಬಲದಿಂದ ಕಾರ್ಯಸಾಧಿಸಿದ ವ್ಯವಸ್ಥೆಯರೂಪದಲ್ಲಿರುವ ಚಿಕ್ಕಪ್ಪನ ಸಂಸಾರವನ್ನು ಎದುರಿಸಿ ನಿಲ್ಲುವುದು. ಅಮೃತಾ ಎರಡನೇಯದನ್ನು ಆಯ್ದುಕೊಳ್ಳುತ್ತಾಳೆ. ಎರಡನೇಯದರ ಆಯ್ಕೆಯಲ್ಲಿ ಅವಳು ಗಂಡನನ್ನು ತ್ಯಜಿಸಿ ಒಂಟಿಯಾಗಿ ಬದುಕುವುದು ಅನಿವಾರ್ಯವಾಗುತ್ತದೆ.

ತನ್ನ ಓದು, ಅಭ್ಯಾಸಗಳಿಗೆ ಹೆಚ್ಚಿನ ಗಮನ ನೀಡಿದ ಅಮೃತಾಗೆ ವೈಯಕ್ತಿಕ ಬದುಕಿನಲ್ಲಿ ಹೆಚ್ಚಿನ ನಿರೀಕ್ಷೆ, ಅಪೇಕ್ಷೆಗಳಿಲ್ಲದಿರುವುದರಿಂದ ಅವಳು ವಿವಾಹ ಮತ್ತು ತಾಯ್ತನಗಳನ್ನು ಯಾವುದೇ ರೀತಿಯ ಭಾವನಾತ್ಮಕತೆಯಿಲ್ಲದೇ ಸ್ವೀಕರಿಸಿದ್ದಾಳೆ. ಆದರೆ ತನ್ನ ಮದುವೆ ವಿಚಾರದಲ್ಲಿ ನಡೆದ ಮೋಸದಲ್ಲಿ ಗಂಡನ ಪಾತ್ರ ಎಷ್ಟು ಇತ್ತು ಎನ್ನುವ ವಿಚಾರಕ್ಕಿಂತಲೂ ಗಂಡ ತನ್ನ 'ತಾಯ್ತನ'ದ ಸಹಜ ಸ್ವಭಾವವನ್ನು ದುರುಪಯೋಗಗೊಳಿಸಿದನೆಂಬ ಆರೋಪ ಅವಳಿಗೆ ಅವಮಾನಕಾರಿಯಾಗಿ ತೋರುತ್ತದೆ.

ಪತ್ನಿತ್ವ ಮತ್ತು ಮಾತೃತ್ವದ ಮೇಲೆ ಹಕ್ಕು ಚಲಯಿಸಿದ, ಮೂರನೇಯವರ ಮಾತಿಗೆ ಬೆಲೆನೀಡಿ ಅತಿಕ್ರಮಿಸಿದ ಕಾರಣವಾಗಿ ಗಂಡನನ್ನು ಮೊದಲು ಅವಳು ತಿರಸ್ಕರಿಸುತ್ತಾಳೆ. ಗಂಡನ ಕುರಿತು ಅಮೃತಾ ತೆಗೆದುಕೊಳ್ಳುವ ನಿರ್ಧಾರ ಅವಳ ವಿಮೋಚನಾ ಹೋರಾಟದ ಮೊದಲ ಸೂಚನೆಯಾಗಿ ಕಾಣಿಸಿಕೊಳ್ಳುತ್ತದೆ. ಮಕ್ಕಳನ್ನು ಕರೆದುಕೊಂಡು ಒಂಟಿಯಾಗಿ ಬದುಕುವ ಅಮೃತಾಗೆ ಆದಾಯವಿರುವ ವೃತ್ತಿ ಇದ್ದರೂ, ಸಾಲದ ಹೊರೆಯಿಂದ ಬಿಕ್ಕಟ್ಟಿನಲ್ಲಿ ಬದುಕುತ್ತಾಳೆ. ಒಂಟಿತನ ಅವಳನ್ನು ಕಾಡುತ್ತದೆ.

ತಾನು ಬಂಡಾಯ ತೋರಬೇಕು, ಅನ್ಯಾಯದ ವಿರುದ್ಧ ಹೋರಾಡಬೇಕು, ತನ್ನ ಬದುಕನ್ನು ಸರಿಪಡಿಸಬೇಕು, ತನ್ನ ಓದಿನ ಸದುಪಯೋಗ ಪಡೆಯಬೇಕು, ಎನ್ನುವ ಮನಸ್ಥಿತಿಯಿದ್ದರೂ ಅದನ್ನು ಕಾರ್ಯರೂಪದಲ್ಲಿ ವ್ಯಕ್ತ ಪಡಿಸಲಾಗದ ಅಸಹಾಯಕತೆ ಅವಳನ್ನು ನಿರಂತರವಾಗಿ ಕಾಡುತ್ತದೆ. ಜೀವನದಲ್ಲಿ ಅರ್ಥಕಳೆದುಕೊಂಡ ಮನಃ ಸ್ಥಿತಿಯಲ್ಲಿ ಅವಳಿಗೆ ವಾಸ್ತುಶಿಲ್ಪಿ ಸೋಮಶೇಖರನ ಪರಿಚಯ, ಸ್ನೇಹವಾಗುತ್ತದೆ. ಸೋಮಶೇಖರನ ಸ್ನೇಹ, ಪ್ರಣಯ ಸಂಬಂಧಗಳು ಅವಳನ್ನು ಮತ್ತಷ್ಟು ಕುಗ್ಗಿಸುತ್ತದೆ. ತಾನು ವಿವಾಹಿತೆಯಾಗಿ ಈ ರೀತಿ ನಡೆದುಕೊಳ್ಳುವುದು ಉಚಿತವಲ್ಲವೆಂಬ ಪಾಪ ಪ್ರಜ್ಞೆಯಲ್ಲಿ ಅವಳು ನಿಧಾನವಾಗಿ ಸಾವಿನ ಅಂಚನ್ನು ಮುಟ್ಟುತ್ತಾಳೆ. ಪುನರಾವರ್ತನೆಯಾಗುವ

ಆತ್ಮಹತ್ಯಾ ಪ್ರಯತ್ನಗಳಿಂದ ಕೊನೆಗೆ ಸಾವಿನಲ್ಲೇ ಅರ್ಥವನ್ನು ಕಳೆದುಕೊಂಡು ಅವಳು ಸಂಪೂರ್ಣವಾಗಿ ಸೋಲನ್ನು ಸ್ವೀಕರಿಸಿ ನಿಲ್ಲುತ್ತಾಳೆ. ಮೊದಲ ಹಂತದಲ್ಲಿ ಅವಳು ಅನ್ಯಾಯದ ಅರಿವು ಮತ್ತು ಈ ಅನ್ಯಾಯದ ವಿರುಧ ಹೋರಾಡಲಾಗದ ನಿಷ್ಫಲ ಮನಸ್ಥಿತಿಯಲ್ಲಿ ನಿಂತುಬಿಡುತ್ತಾಳೆ.

ಒಂದು ಘಟ್ಟದಲ್ಲಿ ಅವಳು ತನಗೆ ಆತ್ಮೀಯವಾಗಿ ಉಳಿದ ಸೋಮಶೇಖರನನ್ನೂ ತೊರೆದು ಒಂಟಿಯಾಗಿ ಉಳಿದುಬಿಡುತ್ತಾಳೆ. ತನ್ನನ್ನ ಬದುಕಿಸಲು ನಿರಂತರವಾಗಿ ಪ್ರಯತ್ನಿಸುವ, ತನ್ನ ಹೋರಾಟಕ್ಕೆ ಬೆಂಬಲವನ್ನು ಸೂಚಿಸಿರುವ ಮತ್ತು ತನ್ನನ್ನು ಅಪಾರವಾಗಿ ಪ್ರೀತಿಸುವ ಸೋಮಶೇಖರನಲ್ಲಿ ಅವಳಿಗೆ ಆತ್ಮೀಯತೆ, ಶರಣಾಗತಿ ಭಾವವಿದ್ದರೂ, ಅವಳಿರುವ ಮನಸ್ಥಿತಿಯಲ್ಲಿ ಈ ಸಂಬಂಧ ಪ್ರೀತಿ, ದ್ವೇಷದ ಸಂಬಂಧವಾಗಿಯೇ ಉಳಿಯುತ್ತದೆ.

ಹೀಗೆ ಎಲ್ಲವನ್ನು ಕಳೆದುಕೊಂಡು ಬದುಕು-ಸಾವುಗಳಲ್ಲಿ ಅರ್ಥಗಳೆದುಕೊಂಡ ಮನಸ್ಥಿತಿಯಲ್ಲಿ, ತನ್ನ ನೌಕರಿಯನ್ನು ಕೈಬಿಡಬೇಕಾದ ಪ್ರಸಂಗ ಒದಗಿ ಬರುತ್ತದೆ. ಈ ಹಂತದಲ್ಲಿ ಅಮೃತಾಗೆ ತನ್ನ ಹೋರಾಟದ ಹಾದಿ ಸ್ಪಷ್ಟವಾಗುತ್ತದೆ. ಕಾನೂನಿನ ನೆರವಿನಿಂದ ಅಮೃತಾ ತಾನು ಕಳೆದುಕೊಂಡ ಸಂಪತ್ತನ್ನೆಲ್ಲ ಮರಳಿ ಪಡೆಯುವಂತಾಗುತ್ತದೆ. ತನ್ನ ತಂದೆ-ಚಿಕ್ಕಮ್ಮನವರ ಅಕ್ರಮ ಸಂಬಂಧದ ತಿಳುವಳಿಕೆ ಅವಳಲ್ಲಿ ಮನೆ ಮಾಡಿದ ಪಾಪ ಪ್ರಜ್ಞೆಯಿಂದ ಬಿಡುಗಡೆ ನೀಡುತ್ತದೆ. ಅಮೃತಾಳ ಒಂಟಿತನಕ್ಕೆ, ನೋವು, ಒತ್ತಡಗಳಿಗೆ ಮುಖ್ಯಕಾರಣವಾಗಿರುವುದು ಅವಳು ಬದುಕುವ ಬಂಧನದ ಸ್ಥಿತಿ.

ಭಾವನಾತ್ಮಕವಾಗಿ ಅವಳು ತನ್ನ ಚಿಕ್ಕಮ್ಮನಲ್ಲಿ ಇರಿಸಿದ ಆತ್ಮೀಯ ಸಂಬಂಧ, ಮದುವೆ, ಮಕ್ಕಳನ್ನು ಯಥಾವತ್ತಾಗಿ ಸ್ವೀಕಾರ ಮಾಡಿರುವುದು, ನಂತರ ಗಂಡನಿಂದ ದೂರವಾದರೂ ಮಕ್ಕಳನ್ನು ಉಳಿಸಲು ನಡೆಸಬೇಕಾದ ಪ್ರಯತ್ನಗಳು ಸಮಾಜದಲ್ಲಿ ಕುಹಕಗಳನ್ನು ಕೇಳುತ್ತ ಬದುಕಬೇಕಾದ ಪರಸ್ಥಿತಿ, ಆರ್ಥಿಕ ಒಕ್ಕಟ್ಟಿನ ದಿನಗಳು, ತನ್ನ ಮತ್ತು ಸೋಮಶೇಖರನ ಸಂಬಂಧವನ್ನು ಸಾರ್ವಜನಿಕವಾಗಿ ಒಪ್ಪಿಕೊಳ್ಳಲಾಗದ ಮನಸ್ಥಿತಿ ಮತ್ತು ಕೀಳರಿಮೆ ಮತ್ತು ಅತ್ಮಾವಹೇಳನವನ್ನು ಬೆಳಸಿಕೊಂಡು ಜೀವ ಕಳೆಯಲು ನಡೆಸಿದ ಪ್ರಯತ್ನಗಳು.

ಅವಳನ್ನು ಬದುಕಿನತ್ತ ಮತ್ತೆ ಸೆಳೆದ ವಿಮೋಚನೆಯ ಅಂಶಗಳೆಂದರೆ - ಗಂಡನಿಂದ ಪಡೆದ ವಿಚ್ಛೇಧನೆ, ಶ್ವೇತಾ ಕುಟುಂಬದ ನೈತಿಕ ಬೆಂಬಲ, ವೃತ್ತಿ ಕಳೆದ ಕಾರಣದಿಂದ ವ್ಯವಹಾರಕ್ಕೆ ಸಿಕ್ಕಿದ ಏಕಾಗ್ರತೆ ಮತ್ತು ಬಿಡುವು, ಮಕ್ಕಳ ಸಹಕಾರ ಮತ್ತು ಸೋಮಶೇಖರನ ಸಲಹೆ, ಮಾರ್ಗದರ್ಶನಗಳು, ಕಾನೂನಿನ ಗೆಲವು, ಚಿಕ್ಕಮ್ಮನ ಸೋಲು ಮತ್ತು ಆರೋಪದಿಂದ ಉಂಟಾದ ನೈತಿಕ ಗೆಲವು ಮತ್ತು ಸೋಮಶೇಖರನ ಪ್ರೀತಿ, ಆಸರೆಯ ನಿರೀಕ್ಷೆಗಳು.

ತನ್ನ ಸುತ್ತ ತಾನೇ ನಿರ್ಮಿಸಿದ ಬಂಧನವನ್ನು ಕಳಚಿಕೊಂಡು ಆತ್ಮವಿಶ್ವಾಸವನ್ನು ಬೆಳೆಸಿಕೊಂಡ ಬಳಿಕ ಅಮೃತಾಗೆ ತನ್ನ ಹಾದಿ ಸ್ಪಷ್ಟವಾಗುತ್ತದೆ. ಒಂಟಿತನ, ಶೂನ್ಯಭಾವ ಮತ್ತು ಪಾಪಪ್ರಜ್ಞೆಯಿಂದ ಮುಕ್ತವಾದ ಸ್ಥಿತಿಯಲ್ಲಿ ಅಮೃತಾ ಹೊಸಬದುಕನ್ನು ಸ್ವೀಕರಿಸುವುದು ಸಾಧ್ಯವಾಗುತ್ತದೆ. ಅಮೃತಾಳನ್ನು ಬಿಟ್ಟರೆ ಕಾದಂಬರಿಯಲ್ಲಿ ಕಾಣಿಸಕೊಳ್ಳುವ ಇನ್ನೊಂದು ಮುಖ್ಯ ಪಾತ್ರ : ಅವಳ ಚಿಕ್ಕಮ್ಮ, ಜಯಲಕ್ಷ್ಮಿ.

ಜಯಲಕ್ಷ್ಮಿ, ಅಮೃತಾ ತಾಯಿ ಸತ್ತಬಳಿಕ ಎಸ್ಟೇಟಿನ ಮನೆಯಲ್ಲಿ ಬಂದು ನಿಂತು ಮನೆ, ವ್ಯವಹಾರ ಎಲ್ಲವನ್ನು

ನೋಡಿಕೊಂಡವಳು. ಅವಳು ಅಸಾಧಾರಣ ಬುದ್ಧಿವಂತೆ ಎನ್ನುವುದನ್ನು ಅಮೃತಾಳೆ ಒಪ್ಪಿಕೊಂಡಿದ್ದಾಳೆ. 'ಯಾವುದೇ ಸಂದರ್ಭದಲ್ಲಿ ಅವಳು ಎಂದೂ ಸರಿಯಿಲ್ಲದನ್ನು ಮಡೋದಿಲ್ಲ, ಯಾರು ಬೇಕಾದರೂ ನೋಡಲಿ, ಅವಳು ತಪ್ಪು ಮಾಡಿದ್ದಾಳೆ ಅಂತ ಬೆರಳು ಮಾಡಿ ತೋರಿಸುವುದು ಸಾಧ್ಯವಾಗದು' ಎಂದು ಅಮೃತಾ ನುಡಿಯುತ್ತಾಳೆ. ಮಕ್ಕಳ ಜವಾಬ್ದಾರಿ, ಅವರ ವಿಧ್ಯಾಭ್ಯಾಸ, ಎಸ್ಟೇಟಿನ ವ್ಯವಹಾರ, ಆಸ್ತಿ ಸಂಚಯನ, ಬ್ಯಾಂಕ್ ವ್ಯವಹಾರ ಎಲ್ಲವನ್ನು ಒಬ್ಬಳೇ ನಿಭಾಯಿಸುವ ಜಯಲಕ್ಷ್ಮಿ, ಅಮೃತಾಳ ಆಸ್ತಿಯಿಂದ ಬಂದ ವರಮಾನದಿಂದಲೇ ತನ್ನ ತಮ್ಮ ರಂಗನಾಥನನ್ನು ಓದಿಸಿರುವುದೇ ಅಲ್ಲದೆ, ಅವನೊಡನೆ ಅಮೃತಾ ಮದುವೆ ನಡೆಯುವಂತೆ ನೋಡಿಕೊಂಡ ಜಾಣೆ. ಜಯಲಕ್ಷ್ಮಿಯ ವ್ಯವಹಾರ ಕುಶಲತೆ ಸ್ವಾರ್ಥಬುದ್ಧಿಯ ಕಾರಣವಾಗಿ ಮೋಸದ ಕೃತ್ಯವಾಗಿ ಬೆಲೆ ಕಳೆದುಕೊಳ್ಳುತ್ತದೆ. ಆಸ್ತಿಯನ್ನು ಉಳಿಸುವ ಪ್ರಯತ್ನವನ್ನು ಅವಳು ಕೊನೆ ಹಂತದವರೆಗೆ ಕೈಬಿಡುವುದಿಲ್ಲ. ಆದರೆ ಮಕ್ಕಳ ಮುಂದೆ ಅವಳ ಅನೈತಿಕತೆಯ ಪ್ರಶ್ನೆ ಕಾಣಿಸಿಕೊಂಡಾಗ ಮಾತ್ರ ಅವಳ ಕ್ರಿಯಶೀಲತೆ ಕಳೆದು ಹೋಗುತ್ತದೆ. ಜಯಲಕ್ಷ್ಮಿಯದು ಸಭ್ಯತೆಯ ಸೋಗು ಹಾಕಿರುವ ದುಷ್ಟಪಾತ್ರ. ಒಂದು ಹಂತದವರೆಗೆ ಕಾದಂಬರಿಯ ಪುರುಷ ಪಾತ್ರಗಳೆಲ್ಲ ಜಯಲಕ್ಷ್ಮಿಗೆ ಪರವಾಗಿ ನಿಂತು, ಅಮೃತಾಳ ಒಂಟಿತನಕ್ಕೆ ಈ ಕಾರಣವಾಗಿಯೇ ನೆಲೆಯನ್ನು ಒದಗಿಸುತ್ತವೆ. ಅಮೃತಾಳ ತಂದೆ, ಚಿಕ್ಕಪ್ಪ, ಗಂಡ ಮಾತ್ರವಲ್ಲದೆ ಅವಳ ಹೆತ್ತ ಮಕ್ಕಳೂ ಚಿಕ್ಕಮ್ಮನ ಪರವಾಗಿಯೇ ನಿಲ್ಲುತ್ತವೆ. ಹೀಗೆ ಅಮೃತಾಳ ಶೋಷಣೆಯ ಮೂಲವಾಗಿರುವ ವ್ಯವಸ್ಥೆ ರೂಪದಲ್ಲಿ ಜಯಲಕ್ಷ್ಮಿ ನಿಲ್ಲುತ್ತಾಳೆ. ಜಯಲಕ್ಷ್ಮಿಯ ನೈತಿಕ ಅದಃಪತನ ಅಮೃತಾಳ ಗೆಲುವಿಗೆ ಹಾದಿಯನ್ನು ಸೂಚಿಸುತ್ತದೆ.

ಕಾದಂಬರಿಯಲ್ಲಿ ಬರುವ ಪುರುಷ ಪಾತ್ರಗಳು ಇಲ್ಲಿ ಮೃದು ಹೃದಯಿಗಳು. ಅಮೃತಾಳ ತಂದೆ, ಚಿಕ್ಕಪ್ಪ ಮತ್ತು ಸೋಮಶೇಖರ ಸ್ವಭಾವದಿಂದ ಒಳ್ಳೆಯವರು. ಅವರ ನೈತಿಕತೆಯ ಪ್ರಶ್ನೆಗೆ ಮಹತ್ವ ಇರುವುದಕ್ಕಿಂತ ಹೆಚ್ಚು ಪ್ರಮಾಣದಲ್ಲಿ ಅವರ ಸ್ವಭಾವದಲ್ಲಿನ ಮೃದುತ್ವ, ಪ್ರೀತಿ, ವಾತ್ಸಲ್ಯ ಮತ್ತು ಅನುಕಂಪಗಳಿಗೆ ಹೆಚ್ಚಿನ ಮನ್ನಣೆ ದೊರೆಯುತ್ತದೆ. ಅಮೃತಾಳಿಗಾಗಿ ತನ್ನದೆನ್ನುವ ಎಲ್ಲವನ್ನು ಕಳೆದುಕೊಂಡ ಸ್ಥಿತಿಯಲ್ಲಿರುವಾಗಲೂ ಸೋಮಶೇಖರ, ಅವಳಿಗೆ ನಿರಂತರವಾಗಿ ಬೆಂಬಲವನ್ನು, ಸಹಕಾರವನ್ನು ನೀಡಿ, ಅವಳನ್ನು ಜೀವನದ ಕಡೆ ತಿರುಗಿಸಲು ಮುಖ್ಯ ಕಾರಣವಾಗುತ್ತಾನೆ.

**'ತಂತು'ವಿನಲ್ಲಿ ಸ್ತ್ರೀ**

'ತಂತು' ಕಾದಂಬರಿಯಲ್ಲಿ ಅಜ್ಜಿ, ತಾಯಿ, ಪತ್ನಿ ಮತ್ತು ಸ್ನೇಹಿತೆಯಾಗಿರುವ ಸ್ತ್ರೀ ಪಾತ್ರ ಚಿತ್ರಣವಿದೆ. ಬದಲಾಗುತ್ತಿರುವ ಸಾಮಾಜಿಕ ಪರಿಸ್ಥಿತಿಯಲ್ಲಿ ಬದಲಾಗುತ್ತಿರುವ ಸ್ತ್ರೀ ಚಿತ್ರವನ್ನು ಈ ಪಾತ್ರ ಚಿತ್ರಣ ನೀಡುತ್ತದೆ. ಸ್ತ್ರೀ ಪಾತ್ರಗಳಲ್ಲಿ ಕೇಂದ್ರಸ್ಥಾನ ನಾಯಕಿ ಕಾಂತಿಗೆ ದೊರೆಯುತ್ತದೆ. ಕಾದಂಬರಿಯಲ್ಲಿ ಕಾಂತಿಯ ಜೀವನದ ಎರಡು ಪ್ರತ್ಯೇಕ ಘಟ್ಟಗಳ ಕಥಾನಕವಿದೆ. ಮೊದಲ ಘಟ್ಟದಲ್ಲಿ ರವೀಂದ್ರನ ಪತ್ನಿಯಾಗಿ ಬೆಂಗಳೂರಿನಲ್ಲಿ ಅವಳು ಕಳೆದ ದಿನಗಳ ವಿವರಣೆ ಇದೆ. ಎರಡನೇ ಘಟ್ಟದಲ್ಲಿ ತನ್ನ ಕೌಟುಂಬಿಕ ಪರಿಸರದಿಂದ ದೂರ ನಿಂತು, ಉದ್ದಿಮೆಯನ್ನು ಸ್ಥಾಪಿಸಿ ಸ್ವತಂತ್ರವಾಗಿ ದೆಹಲಿಯಲ್ಲಿ ಕಳೆದ ದಿನಗಳ ವಿವರಣೆ ಇದೆ. ವಿವಾಹೋತ್ತರ ಜೀವನದ ಎರಡು ಘಟ್ಟಗಳ ಬದುಕಿನಲ್ಲಿ ಕಾಂತಿ ವ್ಯಕ್ತಿತ್ವ ತನ್ನ ಅಧೀನಸ್ಥಿತಿಯನ್ನು ಕಳಚಿಕೊಂಡು ವಿಮೋಚಿತ ಸ್ಥಿತಿಗೆ ಮುಟ್ಟುವುದನ್ನು ಕಾದಂಬರಿ ವಿವರವಾಗಿ ತಿಳಿಸಿದೆ.

ಕಾಂತಿಯ ಗಂಡನಾಗಿರುವ ರವೀಂದ್ರನಿಗೆ ತನ್ನ ಬಾಲ್ಯ ಜೀವನದ ನೆನಪಿನಿಂದ ಸಂಪ್ರದಾಯ ಮತ್ತು ಪರಂಪರೆಯ ಕುರಿತು ಅಪಾರವಾದ ಮೆಚ್ಚುಗೆ ಮತ್ತು ಒಲವು ಇದೆ. ಅಧುನಿಕ ವಿಚಾರಗಳಿಂದ ತನ್ನ ನಡೆನುಡಿಯನ್ನು ರೂಢಿಸಿಕೊಂಡಿರುವ ಕಾಂತಿಯಲ್ಲಿ ಅವನು ತನ್ನಲ್ಲಿ ಆಳವಾಗಿ ಬೇರೂರಿದ ತನ್ನಜ್ಜಿಯ ಸಾಂಪ್ರದಾಯಕ ಮಾದರಿಯ ಸ್ತ್ರೀಯರನ್ನು ಕಾಣದೆ ಹಲವು ಸಂದರ್ಭದಲ್ಲಿ ತೊಳಲಾಟದಲ್ಲಿ ಸಿಕ್ಕಿಕೊಳ್ಳುತ್ತಾನೆ.

ರವೀಂದ್ರನ ಅಜ್ಜಿಯು ಇಲ್ಲಿ ಸಂಪ್ರದಾಯಸ್ಥ ಗೃಹಿಣಿಯನ್ನು ಪ್ರತಿನಿಧಿಸುವಾಕೆ, ರವೀಂದ್ರನಿಗೆ ತನ್ನ ಬಾಲ್ಯದ ನೆನಪಾದಾಗಲೆಲ್ಲ ಅಜ್ಜಿಯ ರೂಪವೇ ಕಣ್ಮುಂದೆ ಕಾಣಿಸಿಕೊಳ್ಳುತ್ತದೆ. ಅವರ ಭೌತಿಕ ವರ್ಣನೆ, ಸಾತ್ವಿಕ ವರ್ತನೆ, ಮೃದು ವಚನ - ಗೃಹಿಣಿಯಾದವಳು ಹೀಗಿರುವುದು ಚೆನ್ನ ಎಂಬ ಭಾವವನ್ನು ಪದೇ ಪದೇ ಅಭಿವ್ಯಕ್ತಿಸುತ್ತದೆ, ಕಾದಂಬರಿಯುದ್ದಕ್ಕೂ.

ರವೀಂದ್ರನಿಗೆ ಅಜ್ಜಿಮುಖದಲ್ಲಿ ದೈವಿಕತೆ ಕಾಣಿಸುತ್ತದೆ. ಹೆಣ್ಣಿನಲ್ಲಿ ಗೌರವ, ಪವಿತ್ರತೆಯನ್ನು ಗುರುತಿಸಲು ಅವಳ ಬಾಹ್ಯ ಅಲಂಕಾರಗಳೂ ಅಷ್ಟೇ ಮುಖ್ಯವಾಗಿ ಕಾಣುತ್ತದೆ ಅವನಿಗೆ. ದೇವಾಲಯದ ಸರಸ್ವತಿ ವಿಗ್ರಹಕ್ಕೂ ಅಜ್ಜಿಗೂ ಇರುವ ಸಾಮ್ಯತೆ.

''.. ಅವಳ ಮತ್ತು ಅ ವಿಗ್ರಹದ ಮುಖಗಳಲ್ಲಿ ತುಂಬ ಸಾಮ್ಯತೆ ಹೊಳೆಯುತ್ತದೆ. ಎರಡರಲ್ಲೂ ಒಂದೇ ತೆರನಾದ ಸೌಮ್ಯಭಾವ. ಬಯಕೆಯ ರಾಜಸ್ವವಿಲ್ಲದ ಸಂತೃಪ್ತ ಕಣ್ಣಾಗಳ ಸಾತ್ವಿಕ ಬೆಳಕು. ಅರಿಶಿನ, ಕುಂಕುಮ, ಕಿವಿಯ ಓಲೆ[೧೪]'' (ತಂತು:೩:೧೯೯೩) ಮಾತೆಯಂತೆ ಆರಾಧಿಸುವ ಗೋವಿನಲ್ಲಿಯೂ ಅದೇ ಹೋಲಿಕೆ.

''ಗೌರಿ ಹಬ್ಬದ ದಿನ ಅಜ್ಜಿ ಅರಿಶನದ ಒಡಲು, ಹಸಿರು ರೇಶ್ಮೆ ಸೀರೆಯುಟ್ಟು ಕೆನ್ನೆಗಲ್ಲಗಳಲ್ಲಿ ಎದ್ದುಕಾಣುವಷ್ಟು ಅರಿಶನ ತೊಡೆದು ಹಣೆಗೆ ಕುಂಕುಮ ಚಂದ್ರವಿಟ್ಟು ದೊಡ್ಡ ಓಲೆ, ಮೂಗುಬೊಟ್ಟು, ಕೊರಳಿಗೆ ಚಿನ್ನದ ಸರ ಅಡ್ಡಿಕೆ, ಹಬ್ಬ ಅಂತ ಸೀತಮ್ಮ (ಮನೆ ಹಸು)ನ ಕೆನ್ನೆಗೂ ಅರಿಶಿನ ತೊಡೆದು ಹಣೆಗೆ ಕುಂಕುಮ ಚಂದ್ರವಿಟ್ಟು ಕೊಂಬಿಗೆ ಅರಿಶಿನ ಬಳಿದು ಕೊರಳಿಗೆ ಶೇವಂತಿಗೆ ಹೂವಿನ ಹಾರ ಕಟ್ಟಿ ಅಜ್ಜಿ ಬೇರೆಯಲ್ಲ. ಸೀತಮ್ಮ ಬೇರೆಯಲ್ಲ.[೧೫]'' (ಅದೇ , ಪುಟ : ೧೮) ರವೀಂದ್ರನ ಮನಸ್ಸಿನಲ್ಲಿ ಪದೇ ಪದೇ ಗೋಚರಿಸುವ ಈ ಮುತ್ತೈದೆಯ ಆದರ್ಶರೂಪದ ಕಲ್ಪನೆಗೆ ಕಾದಂಬರಿ ಅತ್ಯಂತ ಹೆಚ್ಚಿನ ಗೌರವ ಸ್ಥಾನವನ್ನು ನೀಡಿದೆ. ಅಜ್ಜಿಯ ಆದರಾಭಿಮಾನಗಳು, ತ್ಯಾಗದ ಮನೋಭಾವ, ತಾಯ್ತನದ ಆರೈಕೆ ಇವುಗಳನ್ನೆಲ್ಲ ರವೀಂದ್ರ, ಅಣ್ಣಯ್ಯರು ಗೌರವದ ಭಾವನೆಯಿಂದ ನೆನಪಿಸಿಕೊಳ್ಳುತ್ತಾರೆ. ನಂತರದಲ್ಲಿ ಬರುವ ಸ್ತ್ರೀ ಪಾತ್ರಗಳಲೆಲ್ಲಾ ಯಾವುದೇ ಒಂದು ರೀತಿಯ ನ್ಯೂನತೆ, ದೌರ್ಬಲ್ಯ, ಅದಃಪತನಗಳನ್ನು ಕಾಣಲಾಗಿದೆ. ಆಧುನಿಕತೆಯಿಂದ ಪಡೆದ ಪ್ರೇರಣೆ ಮತ್ತು ಪರಸಂಸ್ಕೃತಿಯ ಅನುಕರಣಗಳು ಹೆಣ್ಣನ್ನು ಸತತವಾಗಿ ಕಾಡುವ ದೌರ್ಬಲ್ಯಗಳೆನ್ನುವ ರೀತಿಯಲ್ಲಿ ಉಳಿದ ಹೆಣ್ಣುಗಳ ಜೀವನ ವಿವರಗಳು ಕಾಣಿಸಕೊಳ್ಳುತ್ತವೆ. ಸ್ತ್ರೀ ವಿಮುಕ್ತಿ ಚಿಂತನೆಯ ಹಿನ್ನೆಲೆಯಲ್ಲಿ ಗಮನಿಸುವುದಾದರೆ ಈ ಪಾತ್ರಗಳು ವೈಯಕ್ತಿಕ ಸ್ವಾತಂತ್ರ್ಯಕ್ಕಾಗಿ ಸಾಂಪ್ರದಾಯಿಕ ಮಾದರಿಯಿಂದ ಕಳಚಿಕೊಳ್ಳುತ್ತಿರುವ ಯತ್ನದಲ್ಲಿರುವವು ಎನ್ನಬಹುದು. ಕಾಂತಿ, ಶೀತಲ್, ರಶ್ಮಿಸಿಂಗರ ಸ್ವತಂತ್ರ ಬದುಕು, ಒಂಟಿತನ , ಅವರ ವೈಯಕ್ತಿಕ ಸಾಧನೆಯ ತುಡಿತಗಳಾಗಿವೆ. ತಮ್ಮತನವನ್ನು ಅಭಿವ್ಯಕ್ತಿಸಲು, ಸ್ವತಂತ್ರವಾಗಿ ಆಲೋಚನೆ ಮಾಡಿ ಭವಿಷ್ಯವನ್ನು ರೂಪಿಸಿಕೊಳ್ಳಲು ಅವರಿಗೆ ಈ ಮಾರ್ಗ ಸಾಧುವೆನಿಸಿದೆ.

ಕಾದಂಬರಿಯಲ್ಲಿ ಬರುವ ಮೊದಲ ತಲೆಮಾರಿನ ಹೆಂಗಸರದು ಇಲ್ಲಿ ತಾಯಿಪಾತ್ರ. ಅಪಾರ ಸಹನೆ ತಾಳ್ಮೆ, ತ್ಯಾಗಗಳಿಂದ ಪ್ರೇರಣೆ, ಪಡೆದಿರುವ ಬದುಕು ಇವರದು. ತಾವು ಹೆತ್ತ ಮಕ್ಕಳಲ್ಲಿ ಅಭ್ಯುದಯವನ್ನು, ತಮ್ಮ ಬದುಕಿನ ಸಾರ್ಥಕತೆಯನ್ನು ಕಂಡುಕೊಳ್ಳುವ ಈ ಹೆಂಗಸರಲ್ಲಿ ವೈಯಕ್ತಿಕವೇನಿದ್ದರೂ ಇನ್ನೊಬ್ಬರಿಗಾಗಿ ಬದುಕುವುದು. ಅಣ್ಣಯ್ಯನ ತಾಯಿ, ಹೇಮಂತನ ತಾಯಿ, ಕಾಂತಿಯ ತಾಯಿ ಈ ಸಾಲಿನವರು.

ಅಣ್ಣಯ್ಯನ ತಾಯಿಗೆ ಗಂಡ, ಬಂಧುಗಳ ಬೆಂಬಲವಿಲ್ಲ. ಅಂಗೈಯಗಲ ಭೂಮಿ ಇದೆ. ಓದುತ್ತಿರುವ ಮಗನಿದ್ದಾನೆ. ಮಗ ಕಲಿತು ಮುಂದೆ ಬರಲಿ ಎಂದು ಆ ಹೆಣ್ಣುಮಗಳು ಹಗಲೂ ರಾತ್ರಿ ದುಡಿಯುತ್ತಾರೆ. ಮಗ ಕಾಲೇಜು ಹಂತ ತಲುಪಿದ ನಂತರ ಆ ತಾಯಿ ತನ್ನ ಬದುಕನ್ನು ಕೊನೆಗೊಳಿಸುತ್ತಾಳೆ. ತನ್ನ ದುಡಿಮೆ ಕಾರಣವಾಗಿಯೇ ಕ್ಷಯ ಬಂದು ತಾಯಿ ಸತ್ತ ಬಳಿಕ ಅಣ್ಣಯ್ಯನಿಗೆ ತನ್ನ ತಾಯಿಯ ತ್ಯಾಗ ತಿಳಿಯುತ್ತದೆ.

"... ಸರಿಯಾಗಿ ಹೊತ್ತಿಗೆ ತಿಂತಿರಲಿಲ್ಲ. ತಿನ್ನಾಕ ಇರಲಿಲ್ಲ. ಇದ್ದದ್ದೆಲ್ಲ ನಂಗೆ ಕಳುಸ್ತಿದ್ದಳು. ಕ್ಷಯ ಒಳಗೇ ಬಲಿತಿತ್ತು. ಮಗ ಓದಲಿ, ಓದಿ ದೊಡ್ಡೋನಾಗಲಿ ಅಂತ ಅವ್ವ ಅಶೆಪಟ್ಟು ಇಷ್ಟೆಲ್ಲ ಮಾಡಿದಳು. ಉಪವಾಸ ಮಾಡಿದಳು' (ಅದೇ:೮೪).

ಅಣ್ಣಯ್ಯನಂತೆ ಹೇಮಂತನ ಸಾಧನೆಗೂ ಒತ್ತಾಸೆ ನಿಂತವಳು ಅವನ ತಾಯಿ, ಸತ್ಯವತಿ, ಹೇಮಂತನ ತಂದೆಗೆ ಮಗನ ಸಂಗೀತ ಸಾಧನೆಯಲ್ಲಿ ಆಸಕ್ತಿ ಇರದಿದ್ದರೂ, ಸತ್ಯವತಿಗೆ ಮಾತ್ರ ಹೇಮಂತನಲ್ಲಿ ಅಪಾರವಾದ ವಿಶ್ವಾಸ, ಭರವಸೆ. ಮಗ ಹುದ್ದೆ ತೊರೆದು ಎಲ್ಲೆಲ್ಲೋ ಅಡ್ಡಾಡಿಕೊಂಡಿದ್ದಾನೆಂದು ತಿಳಿದು ಕಾಂತಿ ಬಳಿ ಅವನನ್ನು ಕರೆತರುವ ಕೆಲಸ ಹಚ್ಚಿದವಳು ಸತ್ಯವತಿಯೇ. ಈ ತಾಯಿಂದರ ಬದುಕಿನ ಭರವಸೆಯೆಲ್ಲ ಮಗಂದಿರ ಸಾಧನೆಯಲ್ಲಿಯೇ ಅಡಗಿದೆ. ಕಾಂತಿಯ ತಾಯಿ ರತ್ನಮ್ಮನೂ ಗಂಡ, ಮಕ್ಕಳೆಂದು ಮನೆಮಠ ನೆಚ್ಚಿಕೊಂಡು ಬದುಕಿದವರು. ಕಾಂತಿಯ ಆರ್ಥಿಕ ಸ್ಥಿತಿ ಚೆನ್ನಾಗಿಲ್ಲವೆಂದು ತಿಳಿದು, ಅವಳನ್ನು ಸರಿಯಾದ ಕಡೆ ವಿವಾಹಮಾಡಿ ತಾವು ಕೊಡಲಿಲ್ಲವೆಂದು ಕೊರಗು ಹಚ್ಚಿಕೊಂಡಿರುವ ರತ್ನಮ್ಮನಿಗೆ, ಮಗಳು ಗಂಡನಿಂದ ದೂರ ಬಾಳುವುದು ಸರಿಯೆಂದು ಕಾಣುವುದಿಲ್ಲ. ಹೆಂಗಸಾದವಳು ತಾನಾಗಿ ಒಲಿಸಿಕೊಂಡು ಗಂಡನ ಬಳಿ ಹೋಗಿ ಬಾಳುವೆ ಮಾಡಬೇಕಾದುದು ರೂಢಿ ಎಂದು ಅವಳು ಕಾಂತಿಗೆ ಉಪದೇಶಿಸುತ್ತಾಳೆ. ಜೀವನದಲ್ಲಿ ಯಾವ ಕೊರತೆಯೂ ಇಲ್ಲದಂತೆ ನೋಡಿಕೊಳ್ಳುವ ತಂದೆಯಿಂದ ತಾಯಿಗೆ, ತಾನು ಅನುಭವಿಸುವ ಕಷ್ಟದ ಅರಿವು ಮೂಡುವುದು ಸಾಧ್ಯವಿಲ್ಲವೆಂದು ಕಾಂತಿ ತನ್ನ ಮನಸ್ಸಿನ ಅಳಲನ್ನು ತಾಯಿ ಬಳಿ ಹೇಳುವುದನ್ನೇ ನಿಲ್ಲಿಸುತ್ತಾಳೆ. ತಾವಿರುವ ಪರಿಸ್ಥಿತಿಯಲ್ಲಿ ಹೊಂದಾಣಿಕೆ ಮಾಡಿ ಬದುಕುವ ಹೆಂಗಸರು ಈ ತಲೆಮಾರಿನವರು. ಈ ಹೊಂದಾಣಿಕೆಯಲ್ಲಿ ಕೊರತೆ, ಅತೃಪ್ತಿಕಾಣಿಸಿಕೊಳ್ಳತೊಡಗಿದಾಗ ಅಸಹನೆ, ಅತೃಪ್ತರಾಗಿ ತಾವಿರುವ ಸ್ಥಿತಿ ನೆಮ್ಮದಿಯನ್ನು ಕೊಡಲಾರದು ಎಂದು ಭಾವನೆಯನ್ನು ಬೆಳೆಸಿಕೊಂಡವರು ಎರಡನೇ ತಲೆಮಾರಿನ ಹೆಣ್ಣಗಳು. ಮುಖ್ಯವಾಗಿ ಪತ್ನೀ ಸ್ಥಾನದಲ್ಲಿ ಇರುವುವರಲ್ಲಿ ನಾನಾ ಕಾರಣವಾಗಿ ಈ ಅತೃಪ್ತಿಯನ್ನು ಕಾಣಿಸಿಲಾಗಿದೆ.

ತಾವು ಬದುಕುವ ಪರಿಸ್ಥಿತಿಯ ಅರಿವು ವೈಯಕ್ತಿಕ ಸ್ವಾತಂತ್ರ್ಯದ ಆಕಾಂಕ್ಷೆ ಮತ್ತು ಸ್ತ್ರೀ-ಪುರುಷ ಸಮಾನತಾ ಕಲ್ಪನೆಯ ವಿಚಾರಗಳಿಂದ ಪ್ರಭಾವಿತರಾಗಿರುವವರು ಇವರು. ಡಾ|| ಸಂತೋಷಿದೇವಿ, ಹೆಲೆನ್, ಶೀತಲ್ ಮತ್ತು

ಕಾಂತಿಯರ ಪಾತ್ರಚಿತ್ರಣದ ಮೂಲಕ ಎರಡನೇ ತಲೆಮಾರಿನ ಸ್ತ್ರೀ ಸಮುದಾಯದಲ್ಲಿ ಎಚ್ಚೆತ್ತ ಸ್ವಪ್ರಜ್ಞೆಯ ಅರಿವನ್ನು, ಅವರು ಎದುರಿಸುತ್ತಿರುವ ಸಾಮಾಜಿಕ ಮತ್ತು ವೈಯಕ್ತಿಕ ಸಮಸ್ಯೆಗಳ ಹಿನ್ನೆಲೆಯೊಂದಿಗೆ ಚಿತ್ರಿಸಲಾಗಿದೆ. ಕೈಹಿಡಿದ ಗಂಡನಿಂದ ತಮಗೆ ಅನ್ಯಾಯವಾಗಿದೆ ಎಂಬ ವಾಸ್ತವಿಕತೆಯಲ್ಲಿ, ತಾವು ದಾಂಪತ್ಯದ ಬಂಧನದಿಂದ ಬಿಡುಗಡೆಗೊಳ್ಳಬೇಕಾಗಿದೆ ಎಂಬ ತುಡಿತವೇ ಇಲ್ಲಿ ಪ್ರಧಾನವಾಗಿದೆ.

ಸಂತೋಷಿದೇವಿ ಉನ್ನತ ವ್ಯಾಸಂಗ ಮಾಡಿದವರು. ಕಾಲೇಜನಲ್ಲಿ ರೀಡರ್ ಹುದ್ದೆಯಲ್ಲಿರುವವರು. ಗಂಡನ ಆದರ್ಶಗಳು ಸ್ತ್ರೀ ವಿರುಧವೆಂಬ ಕಲ್ಪನೆಯಿಂದ ಅವರಲ್ಲಿ ಅಸಹನೆ ಮೂಡಿದೆ. ಹೆಲನ್ ಭಾರತಿಯ ಸಂಸ್ಕೃತಿಯನ್ನು ಮೆಚ್ಚಿ, ಭಾರತಿಯನೊಬ್ಬನನ್ನು ಕಟ್ಟಿಕೊಂಡ ವಿದೇಶಿ ಮಹಿಳೆ. ಆದರೆ ಅವಳಲ್ಲಿದ್ದ ಹಣವನ್ನು ದೋಚಿಕೊಂಡು ಮೋಸಮಾಡಿದ ಪ್ರೊಫೆಸರ್ ಹರಿಶಂಕರನ್ ನಯವಂಚನೆಯಿಂದ ಅವಳಿಗೆ ಗಂಡಸರ ಮೇಲೆ, ವಿಶ್ವಾಸವೇ ಹೊರಟುಹೋಗಿದೆ.

ಶೀತಲ್ ಸರಕಾರದಲ್ಲಿ ಒಳ್ಳೆಯ ಉದ್ಯೋಗ, ಕೈತುಂಬ ಸಂಪಾದನೆ ಮತ್ತು ವರ್ಚಸ್ಸನ್ನು ಉಳ್ಳವಳಾದರೂ ಅವಳ ವೈಯಕ್ತಿಕ ಬದುಕಿನಲ್ಲಿ ತೊಂದರೆಗಳಿವೆ. ವರದಕ್ಷಿಣೆಗಾಗಿ ಕಾಟ ಕೊಡುವ ಅತ್ತೆ ಮನೆಯವರು ಒತ್ತಾಸೆ ನೀಡುವ ಗಂಡ - ಇವುಗಳೆಲ್ಲ ತನ್ನ ಸುಖಕ್ಕೆ ನೆಮ್ಮದಿಗೆ ಹಾನಿಕಾರಕವೆಂಬ ಭಾವನೆ ಬಂದ ಕೂಡಲೇ ಶೀತಲ್ ವಿವಾಹ ಬಂಧನದಿಂದಲೇ ಹೊರ ನಡೆಯುತ್ತಾಳೆ. ಸ್ವಚ್ಛಂದ ಬದುಕು ಅವಳಿಗೆ ಹಿತಕಾರಿಯಾಗಿದೆ. ಮಹಿಳಾ ವಿಮೋಚನೆಯ ಸಾಹಿತ್ಯವನ್ನು ಅಭ್ಯಸಿಸಿರುವ ಶೀತಲ್‌ಗೆ ಹೆಣ್ಣಿನ ಸ್ಥಾನಮಾನಗಳ ಅರಿವು ಚೆನ್ನಾಗಿಯೇ ಇದೆ. ದಾಂಪತ್ಯದ ಬದುಕಿನಿಂದ ವೈಯಕ್ತಿಕ ಬಂಧನದ ಸ್ಥಿತಿಯಿಂದ ಬಿಡುಗಡೆಗೊಳ್ಳುವ ಮನಸ್ಥಿತಿಯನ್ನು ಈ ತಲೆಮಾರಿನವರಲ್ಲಿ ಪ್ರಧಾನವಾಗಿ ಕಾಣಿಸಲಾಗಿದೆ.

ಕಾಂತಿಯ ಮಗ ಅನೂಪನ ಗೆಳತಿಯರು ಕಾದಂಬರಿಯ ಮೂರನೇ ತಲೆಮಾರಿನವರನ್ನು ಪ್ರತಿನಿಧಿಸುತ್ತಾರೆ. ತಾಂತ್ರಿಕ ಶಿಕ್ಷಣ, ಹಣದ ಕೊರತೆ ಇಲ್ಲದ ಜೀವನ, ಹಾಸ್ಟೆಲ್ ವಾಸದಿಂದ ದೊರೆತಿರುವ ಮುಕ್ತವಾತಾವರಣ ಈ ಪೀಳಿಗೆಯವರು ಎಳೆಯಪ್ರಾಯದಲ್ಲಿ ಪಡೆದ ಅವಕಾಶಗಳು. ಸ್ತ್ರೀ ಪುರುಷ ಸಂಬಂಧಗಳು ಮದುವೆ, ದಾಂಪತ್ಯದ ಕುರಿತು ಈ ಪೀಳಿಗೆಯವರಲ್ಲಿ ಹೆಚ್ಚಿನ ಸ್ಪಷ್ಟತೆ ಇದೆ. ಅನಿತಾ, ರಶ್ಮಿಸಿಂಗ್ ಮೋದಲಾದವರು ಈ ತಲೆಮಾರಿನ ಹೆಣ್ಣುಗಳು. ಬಾವುಕರಾಗದೆ ಮನುಷ್ಯ ಸಂಬಂಧವನ್ನಾಗಲೀ, ಬದುಕಿನ ಗುರಿ ಮುಟ್ಟುವುದಾಗಲೇ ಇವರಿಗೆ ಸಾಧ್ಯವಾಗಿದೆ. ತಮ್ಮ ಬದುಕಿಗೆ ತಾವೆ ಹೊಣೆಗಾರರಾಗಿ ನಿಲ್ಲುತ್ತಾರೆ ಇವರು.

ರಶ್ಮಿಸಿಂಗ್ ಕ್ಲಬ್ ನರ್ತಕಿಯಾಗ ಬಯಸುವುದು, ನಂತರ ಮಾಡೆಲಿಂಗ್‌ದತ್ತ ಆಕರ್ಷಕಳಾಗಿ ವಿದೇಶವನ್ನು ತಲುಪಿ, ಅಲ್ಲೆ ನೆಲೆಸಿ ವಿವಾಹವಾಗಿ ಅದು ನಡೆಯದಾಗ, ವಿಚ್ಛೇದನವನ್ನು ಪಡೆದು, ಕೊನೆಗೆ ತನ್ನ ಪೂರ್ವಜೀವನದ ಗೆಳೆಯ ಅನೂಪನನ್ನೆ ಮದುವೆಯಾಗುವ ಹಂತವನ್ನು ಮುಟ್ಟುತ್ತಾಳೆ. ತನ್ನ ಜೀವನದಲ್ಲಿ ನಡೆಯುವ ಎಲ್ಲ ಘಟನೆಗಳನ್ನು ಅವಳು ವ್ಯಾವಹಾರಿಕವಾಗಿಯೇ ಕಾಣುವ ಮನಸ್ಥಿತಿ ಬೆಳಸಿಕೊಂಡಿರುತ್ತಾಳೆ.

ಅನಿತಾ ತನ್ನ ವೈಯಕ್ತಿಕ ಬದುಕಿನ ಕುರಿತು ನಿಶ್ಚಿತ ವಿಚಾರಗಳನ್ನು ಬೆಳೆಸಿಕೊಂಡಿದ್ದಾಳೆ. ಯಾವುದೇ ಹಂತದಲ್ಲಿ ಈ ಹುಡುಗಿಯರು ಅಧೀನರಾಗಿಯೋ ಪರವಾಲಂಬಿತ ಸ್ಥಿತಿಯವರಾಗಿಯೇ ದುರ್ಬಲರಾಗಿಯೋ ಕಾಣಿಸಿಕೊಳ್ಳುವುದಿಲ್ಲ.

**ಪುರುಷ ಪಾತ್ರಗಳು:** ರವೀಂದ್ರ, ಅಣ್ಣಯ್ಯ, ಹೇಮಂತ ಹೊನ್ನತ್ತಿ ಮತ್ತು ಅನುಪ ಕಾದಂಬರಿಯಲ್ಲಿರುವ ಮುಖ್ಯ ಪುರುಷ ಪಾತ್ರಗಳು. ತಂತು ಕಾದಂಬರಿಯು ಸ್ವಾತಂತ್ರೋತ್ತರ ಭಾರತದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಬದಲಾವಣೆಗಳು ಜನಜೀವನದ ಮೇಲೆ ಬೀರಿದ ಪರಿಣಾಮಗಳನ್ನು ಚಿತ್ರಿಸುತ್ತದೆ. ಗಾಂಧಿವಾದ, ನೆಹರುವಾದ ಮತ್ತು ಸ್ವಾಮಿ ವಿವೇಕಾನಂದರ ವಿಚಾರಧಾರೆಗಳನ್ನುಳ್ಳ ಸ್ವದೇಶಿ ಚಿಂತನೆಗಳು ಮತ್ತು ಸಮತಾವಾದ, ವಿಚಾರವಾದ ಮೊದಲಾದ ಜಾಗತಿಕ ಚಿಂತನೆಗಳೂ ಹೇಗೆ ಜನರಲ್ಲಿ ಆಳವಾದ ಪರಿಣಾಮವನ್ನು ಮಾಡುತ್ತಲಿದೆ ಎನ್ನುವುದನ್ನು ಸಮಕಾಲಿನ ಚಿಂತನೆಯ ರೂಪದಲ್ಲಿ ಕೆಲವು ಆದರ್ಶ ಪುರುಷರ ಚರಿತ್ರೆ ಮೂಲಕ ವಿವರಣೆ ನೀಡಬಯಸುತ್ತದೆ.

ಪತ್ರಿಕೋದ್ಯಮ, ಕಲೆ, ಶಿಕ್ಷಣ, ಮತ್ತು ಕೈಗಾರಿಕಾ ಕ್ಷೇತ್ರವನ್ನು ಬಳಸಿಕೊಂಡು ಆಯಾ ಕ್ಷೇತ್ರವನ್ನು ಪ್ರತಿನಿಧಿಸುವ ರವೀಂದ್ರ, ಹೇಮಂತ, ಅಣ್ಣಯ್ಯ ಮತ್ತು ಅನೂಪನ ಪಾತ್ರದ ಮೂಲಕ ಕಾದಂಬರಿ ತನ್ನ ಉದ್ದೇಶವನ್ನು ಸಾಧಿಸುವ ಪ್ರಯತ್ನ ನಡೆಸಿದೆ.

ರವೀಂದ್ರ ದೇಶದ ರಾಜಕೀಯ ಪರಿಸ್ಥಿತಿಯನ್ನು ನೈತಿಕ ಮಾನದಂಡಗಳಿಂದ ಬರಹಕ್ಕಿಳಿಸುವ ಆದರ್ಶವ್ಯಕ್ತಿ. ನೈತಿಕ ಚೌಕಟ್ಟಿನೊಳಗೆ ಜೀವಿಸಿದ ಅಜ್ಜ, ಅಜ್ಜಿ, ತಂದೆಯರ ಕೌಟುಂಬಿಕ ಆದರ್ಶದ ಹಿನ್ನೆಲೆ, ತನ್ನಲ್ಲಿಯೇ ವೈಯಕ್ತಿಕ ಎನ್ನಿಸಬಹುದಾದ ತನ್ನತನದ ಚಿಂತನೆಗಳು ಇವುಗಳೆಲ್ಲ ರವೀಂದ್ರವನ್ನು ಒಂದು ರೀತಿಯ ಚೌಕಟ್ಟಿನೊಳಗೆ ಬೆಳೆಸಿವೆ. ಈ ಚೌಕಟ್ಟಿನೊಳಗೆ ಬರಲು ಆಸಕ್ತರಾಗದವರನ್ನು ರವೀಂದ್ರ ತಿರಸ್ಕರಿಸುತ್ತಾನೆ. ಆ ವ್ಯಕ್ತಿಗಳು ಸ್ವತಃ ತನ್ನ ಹೆಂಡತಿ, ಮಗನೇ ಆಗಿದ್ದರೂ ಕೂಡ. ರವೀಂದ್ರನಿಗೆ ತನ್ನ ಆದರ್ಶವನ್ನು ನಿರೂಪಿಸಲು ಪತ್ರಿಕೆ, ವೇದಿಕೆ, ತಲ್ವಾರಂಥ ಸ್ನೇಹಿತರು ಇವರೆಲ್ಲರ ಸಹಕಾರ ದೊರೆಯುತ್ತದೆ. ವೈಯಕ್ತಿಕ ನಲೆಯಲ್ಲಿ ಆತನಿಗೆ ಸುಖದ ಬಾಳುವೆಯ ಕೊರತೆಯನ್ನು ಒಂದಿಷ್ಟು ಗಮನಿಸದಂತೆ ಅವನ ಆದರ್ಶಗಳು ಸದಾ ಅವನಿಗೆ ಬೆಂಗಾವಲಾಗಿರುತ್ತದೆ.

ಹೇಮಂತ ಹೊನ್ನತಿಗೆ ಪದವಿ, ಹುದ್ದೇ ಇದ್ದರೂ ಸಂಗೀತ ಸಾಧನೆಯೇ ಅವನ ಮುಖ್ಯಗುರಿಯಾಗಿರುತ್ತದೆ. ಕಾಂತಿಯೊಡನೆ ಅವನ ಸಂಬಂಧ ಒಂದು ಹಂತದವರೆಗೆ ಮಾತ್ರ ಮುಂದುವರಿಯಲು ಅವನಲ್ಲಿ ಮನೆಮಾಡಿದ ನೈತಿಕತೆಯ ಪವಿತ್ರ ಕಲ್ಪನೆಯೇ ಕಾರಣವಾಗುತ್ತದೆ. ಮನೆ, ಸಂಸಾರದಲ್ಲಿ ಮನಸ್ಸು ತೊಡಗಿಸದೆ ಹೇಮಂತ ಅಂಗವಿಕಲ ಮಕ್ಕಳಿಗಾಗಿ ಸಂಸ್ಥೆಯೊಂದನ್ನು ಸ್ಥಾಪಿಸಿ ಸಮಾಜ ಸುಧಾರಣೆಗೆ ತೊಡಗಿಸಿಕೊಂಡಾಗ ಅವನಿಗೆ ಗೆಳೆಯರು. ತಂದೆ, ತಾಯಿಯರು ಬೆಂಬಲ ಸಹಕಾರಗಳು ದೊರೆಯುತ್ತದೆ.

ಅಣ್ಣಯ್ಯ ನಡೆಸುವ ವಿವೇಕಾನಂದ ವಿದ್ಯಾಶಾಲೆಯೂ ರವೀಂದ್ರ, ಹೇಮಂತರ ಆದರ್ಶ ಕಲ್ಪನೆಯದೇ ಆಗಿದೆ. ಗಾಂಧಿ ತತ್ವದ ಅನುಸರಣೆ, ವಿವೇಕಾನಂದರ ಆದರ್ಶ, ಸಂಸ್ಕಾಸ ಮುಂತಾದ ವಿಚಾರಗಳೆಲ್ಲ ಅವನ ವಿದ್ಯಾಶಾಲೆಯಲ್ಲಿ, ಅಲ್ಲಿ ಪಾಠಕಲಿಸುವ ಶಿಕ್ಷಕರಲ್ಲಿ ಮನೆ ಮಾಡಿದೆ. ಅಣ್ಣಯ್ಯನ ಧ್ಯೇಯ ಸಾಧನೆಯಲ್ಲಿ, ಸಹಕರಿಸುವರೆಲ್ಲ ಗಂಡಸರೇ.

ಇದೇ ಪರಿಸರದಿಂದ ಬಂದು ಯೋಗಸಾಧನೆ ಶಿಬಿರವನ್ನು ನಡೆಸುವ ರಾಮಚಂದ್ರನದು ಬ್ರಹ್ಮಚಾರಿ ಜೀವನ ವಿಧಾನ, ಆದರ್ಶದ ಬಾಳುವೆ.

ರವೀಂದ್ರ, ಹೇಮಂತ, ಅಣ್ಣಯ್ಯ ಮತ್ತು ರಾಮಚಂದ್ರ - ಈ ಪುರುಷ ಪಾತ್ರಗಳ ಚಿತ್ರಣವು ಪುರುಷನ ಆದರ್ಶ ಸ್ಥಿತಿಯನ್ನು ಸೂಚಿಸುತ್ತದೆ. ಧ್ಯೇಯ, ಸಾಧನೆ, ಆದರ್ಶಪ್ರಿಯತೆ ಮತ್ತು ಸಹಕಾರಯುತವಾದ ಬಾಳುವೆ ಈ ಆದರ್ಶದ ಸ್ಥಿತಿಯ ಲಕ್ಷಣಗಳು. ಈ ಸ್ಥಿತಿಯ ವ್ಯಾಪ್ತಿಯಲ್ಲಿ ಹೆಂಗಸರನ್ನು ಪ್ರವೇಶಿದಂತೆ ಕಾದಂಬರಿ ವಿವರಗಳು ಇವೆ.

ಅನೂಪ ಆಧುನಿಕ ಭಾರತದ ತಂತ್ರಜ್ಞಾನದ ಸಂಕೇತ. ಆತನ ಸ್ವಚ್ಛಂಧ ಬದುಕು, ಧೈರ್ಯದ ನಡವಳಿಕೆ, ಮುನ್ನುಗ್ಗುವ ಧೈರ್ಯ, ಗೆದ್ದುಬರುವ ಛಾತಿ ಇವೆಲ್ಲವೂ ಈ ಸಂಕೇತದ ಮುಖ್ಯ ಲಕ್ಷಣಗಳು. ಅನುಪನಲ್ಲಿ ವ್ಯವಹಾರಕ್ಕಷ್ಟೆ ಆದ್ಯತೆ. ಮನುಷ್ಯ ಸಂಬಂಧಗಳಿಗಲ್ಲ. ವಶೀಲಿ ಬೇಕಾದಾಗ ತಂದೆಯನ್ನು, ಹಣಬೇಕಾದಾಗ ತಾಯಿಯನ್ನ ಆಶ್ರಯಿಸುವುದು ಅವನಿಗೆ ಸಹಜವೆನಿಸುವುದು, ಈ ವ್ಯವಹಾರ ಕೌಶಲ್ಯದ ಕಾರಣವಾಗಿಯೇ. ಅನುಪ ಭಾರತವನ್ನು ಬಿಟ್ಟು ವಿದೇಶದಲ್ಲಿ ನೆಲೆಸಲು ಬಯಸುವುದು. ಭಾರತಿಯ ಪರಿಸರಕ್ಕೆ ಒಗ್ಗದ ಆತನ ವ್ಯಕ್ತಿತ್ವದಿಂದಲೇ. ಸ್ವತಂತ್ರ ಭಾರತದ ಯುವ ಪೀಳಿಗೆಯನ್ನು ಪ್ರತಿನಿಧಿಸುವ ಅನೂಪನಲ್ಲಿ ಲೇಖಕ ಪಲಾಯನವಾದವನ್ನು ಕಾಣುತ್ತಾರೆ. ಸ್ವಸಂಸ್ಕೃತಿಯ ಅರಿವನ್ನು ಪಡೆಯಲು ಅಸಮರ್ಥವಾಗುವ ಸ್ಥಿತಿಗೆ ಕೌಟುಂಬಿಕ ಹಿನ್ನೆಲೆಯನ್ನು ಕಾರಣವಾಗಿ ಗುರುತಿಸುತ್ತಾರೆ. ಈ ವಿವರಗಳ ಹಿನ್ನಲೆಯಲ್ಲಿ ಕಾಂತಿ ಪಾತ್ರವನ್ನು ಗಮನಿಸಬೇಕಾಗಿದೆ.

'ತಂತು' ಕಾದಂಬರಿ ಕಾಂತಿಯ ಬದುಕಿನ ಎರಡು ಪ್ರಮುಖ ಘಟ್ಟಗಳನ್ನು ಗುರುತಿಸಿಕೊಂಡು ಅವಳ ವ್ಯಕ್ತಿತ್ವವನ್ನು ವಿವರಿಸುವ ಪ್ರಯತ್ನವನ್ನು ಮಾಡಿದೆ. ಆ. ಘಟ್ಟಗಳೆಂದರೆ:

೧. ರವೀಂದ್ರನ ಪತ್ನಿಯಾಗಿ ಕಳೆದ ಅವಧಿ.

೨. ಉದ್ದಿಮೆ ಸ್ಥಾಪಿಸಿ ಸ್ವತಂತ್ರಳಾಗಿ ಬದುಕಿದ ಅವಧಿ.

ರವೀಂದ್ರನ ಪತ್ನಿಯಾಗಿ ಕಾಂತಿ: ಶ್ರೀಮಂತ ಕುಟುಂಬದಲ್ಲಿ ಹುಟ್ಟಿ ಆಧುನಿಕ ಪರಿಸರದಲ್ಲಿ ಬೆಳೆದ ಕಾಂತಿ ಉತ್ತರ ಭಾರತದ ಜೀವನ ಶೈಲಿಗೆ ಒಗ್ಗಿಕೊಂಡವಳು. ಪತ್ರಿಕಾ ಸಂಪಾದಕ ಹುದ್ದೆಯಲ್ಲಿರುವ ರವೀಂದ್ರನನ್ನು ಮದುವೆಯಾದ ನಂತರ ಅವಳು ಮಧ್ಯಮ ವರ್ಗದ ಕುಟುಂಬವನ್ನು ಸೇರಿ ದಕ್ಷಿಣ ಭಾರತದ ಬೆಂಗಳೂರಿನಲ್ಲಿ ವಾಸಾಮಾಡುವುದು ಅನಿವಾರ್ಯವಾಗುತ್ತದೆ.

ಗ್ರಾಮೀಣ ಪರಿಸರದ ಮೂಲಬೇರನ್ನು ಇನ್ನು ಉಳಿಸಿಕೊಂಡು ಬಂದ ರವಿಂದ್ರನಲ್ಲಿ ಸಂಪ್ರದಾಯ ಆಚರಣೆ, ನಂಭಿಕೆಗಳಲ್ಲಿ ಅತಿಯಾದ ವಿಶ್ವಾಸ. ಆದರ್ಶ ಜೀವನ ಶೈಲಿ ಅವನದು. ಕಾಂತಿಗೆ ತಾನು ಹುಟ್ಟಿಬೆಳೆದ ಪರಿಸರದ ಪ್ರಭಾವದಿಂದ ರವೀಂದ್ರನನ್ನು ಆತನ ಜೀವನ ಶೈಲಿಯನ್ನು ಹೊಂದಿಕೊಂಡು ಬಾಳುವುದು ಸಹ್ಯವೆನಿಸುವುದಿಲ್ಲ.

ರವಿಂದ್ರನಿಗೆ ಹೆಂಡತಿಯಲ್ಲಿ ಕೆಲವು ನಿರೀಕ್ಷೆಗಳಿವೆ. ಮನೆಕೆಲಸ, ಮಕ್ಕಳ ಜವಾಬ್ದಾರಿ ನೋಡಿಕೊಳ್ಳುವ, ಗಂಡ ದಣಿದು ಬಂದಾಗ ಆತನ ಸೇವೆಯನ್ನು ಕೈಗೋಳ್ಳುವ ಗೃಹಿಣಿ ಧರ್ಮದ ನಡೆನುಡಿಗಳನ್ನು ಅವನು ಹೆಂಡತಿಯಲ್ಲಿ ನಿರೀಕ್ಷಿಸುತ್ತಾನೆ. ಅದು, ಕಾಣದಾದಾಗ ಅಸಮಾಧಾನ ಪಟ್ಟುಕೊಳ್ಳುತ್ತಾನೆ. ತನ್ನ ಅಭಿಪ್ರಾಯವನ್ನು ಹೆಂಡತಿ ಮೇಲೆ ನೇರವಾಗಿ ಅಲ್ಲದಿದ್ದರೂ ಸುತ್ತುಬಳಿಸಿ ಸೂಚಿಸುತ್ತ ಅವಳ ಮನಸ್ಸನ್ನು ನೋಯಿಸುತ್ತಿರುತ್ತಾನೆ.

ಕಾಂತಿಗೂ ಗಂಡನಿಂದ ಕೇಲವು ನಿರೀಕ್ಷೆಗಳಿವೆ. ಆರ್ಥಿಕವಾಗಿ ತಾವು ಮೇಲುವರ್ಗದ ಜೀವನವನ್ನು ನಡೆಸಬೇಕು, ಐಶಾರಾಮದ ಜೀವನವಿರಬೇಕು ಎಂಬ ಆಸೆ ಅವಳಲ್ಲಿದೆ. ರವೀಂದ್ರನ ಆದರ್ಶದ ಹುಚ್ಚು, ಆರ್ಥಿಕ ಬಿಕ್ಕಟ್ಟಿನ ಜೀವನ ಅವಳಲ್ಲಿ ಅಸಮಾಧಾನಕ್ಕೆ ಕಾರಣವಾಗುತ್ತದೆ. ಅನುಪನ ಶಾಲೆ ಪ್ರಸಂಗ ಗಂಡ ಹೆಂಡತಿ ನಡುವೆ ಕಂದರವನ್ನು ಉಂಟು ಮಾಡುತ್ತದೆ.

ಶಾಲೆಗೆ ಹೋಗುವ ವಯಸ್ಸಿನ ಹುಡುಗ ಮಾಂಸಾಹಾರ ಸೇವಿಸಲು ಹೋಗುವುದು. ತಾಯಿ ಹಣ ನೀಡಿ ಸಹಕಾರ ನೀಡುವುದು. ಶಾಲೆಯಿಂದ ಬಂದ ದೂರು ಇವುಗಳಿಂದ ರೇಗಿದ ರವೀಂದ್ರ ಮಗನನ್ನು ಹಾಲುಕೆರೆ ಶಾಲೆಗೆ ಕಳುಹಿಸಿದರೆ, ಮಗನ ತಾಯಾದ ತನ್ನಲ್ಲಿ ಒಂದು ಮಾತೂ ವಿಚಾರಿಸದೆ ಗಂಡ ನಡೆದುಕೊಂಡು ರೀತಿ ಕಾಂತಿಯ ಅಭಿಮಾನಕ್ಕೆ ದಕ್ಕೆಯನ್ನುಂಟು ಮಾಡುತ್ತದೆ.

ಮಗ ದೂರವಾದ ನಂತರದ ಒಂದು ವರ್ಷದ ಅವಧಿಯಲ್ಲಿ ಕಾಂತಿ ತನ್ನ ಜೀವನದ ಆತ್ಮಾವಲೋಕ ಮಾಡುತ್ತಾಳೆ. ಪ್ರತ್ಯಕ್ಷವಾಗಿ ಜಗಳವಾಡದಿದ್ದರೂ ಗಂಡ ತೋರಿಸುವ ಉಪೇಕ್ಷೆ, ಅನಾದಾರ ಅವಳನ್ನು ವೈವಾಹಿಕ ಬದುಕಿನಿಂದ ದೂರವಾಗಲು ಸಹಕರಿಸುತ್ತದೆ. "ತನಗೆ ಆಗಿರುವ ಅತೃಪ್ತಿಯು ಬರೇ ಮಗನ ಶಾಲೆಗೆ ಸಂಬಂಧಿಸಿದಲ್ಲ. ಇನ್ನು ಆಳವಾದ ಸಂಕೀರ್ಣವಾದ ಸ್ಥಿತಿಯ ತನ್ನೊಳಗೆ ಏರ್ಪಟ್ಟಿದೆ. ತನಗೂ ಇವನಿಗೂ ನಡುವೆ ಕಂದಕ ಏರ್ಪಡುತ್ತದೆ, ಎಂಬ ಭಾವನೆ ಬರುತ್ತಿತ್ತು. ಪ್ರಜ್ಞಾ ಪೂರ್ವಕವಾಗಿ ಯೋಚಿಸಿದರೆ ಏನೊಂದು ಕಾಣಿಸುತ್ತಿರಲಿಲ್ಲ[೧೭]." (ಅದೇ ಪುಟ:೧೮೪).

ಗಂಡನಲ್ಲಿ ಕಾಂತಿಗೆ ಗೌರವದ ಭಾವನೆಗಳು ಹುಟ್ಟದ ರೀತಿಯಲ್ಲಿ ಅವನ ವರ್ತನೆ ಇತ್ತು. ಪತ್ರಿಕಾ ವರದಿಗಾರನ ಮನಸ್ಸಿನಿಂದ ರವೀಂದ್ರ ಹೆಂಡತಿಯ ನಡೆನುಡಿಗಳನ್ನು ವಿಮರ್ಶಿಸುತ್ತಿದ್ದ. ಹೆಂಡತಿ ಮುಂದೆ ಎಂದೂ ಕ್ರಿಯಾತ್ಮಕವಾಗಿ ವರ್ತಿಸಿದವನೇ ಅಲ್ಲ. ಅವನ ಭಾವನೆಗಳೆಲ್ಲ ಮನಸ್ಸಿನ ತರ್ಕಗಳಲ್ಲಿ, ವಿಚಾರ ವಿಶ್ಲೇಷಣೆಯಲ್ಲಿ ಅಂತ್ಯ ಕಾಣುತ್ತಿದ್ದವು. ವಿಚಾರವನ್ನು ಸ್ಪಷ್ಟವಾಗಿ ವ್ಯಕ್ತ ಪಡಿಸದೆ ಉಪೇಕ್ಷೆ ತೋರಿಸುವುದು ಮಾತ್ರ ಅವನಿಂದ ಸಾಧ್ಯವಾಗುತ್ತಿತ್ತು. ತನ್ನ ಹೆಂಡತಿಯಲ್ಲಿ ನಂಬಿಕೆ, ವಿಶ್ವಾಸ ಅಥವಾ ಪ್ರೀತಿ, ಪ್ರೇಮ ವ್ಯಕ್ತಪಡಿಸಿದ ಯಾವ ಪ್ರಸಂಗಗಳೂ ಕಾದಂಬರಿಯಲ್ಲಿ ಬಂದಿಲ್ಲ. ಅವನ ನಿರೀಕ್ಷೆ ಏನಿದ್ದರೂ ಅವಳಿಂದ ಸೇವೆಯನ್ನು ಪಡೆಯುವ ರೀತಿಯದಾಗಿತ್ತು. ಮಗ ದಾರಿ ತಪ್ಪಿದರೆ ಅದಕ್ಕೆ ಕಾರಣ ಹೆಂಡತಿ ಎಂಬ ದೂರು, ಮೇಲೆ ಅವನಮ್ಮನ ಪ್ರಭಾವವಾಗಿರುವುದೇ ಅವನು ಕೆಡಲು ಕಾರಣವೆಂದು ಅವನ ತರ್ಕ. "ಮನುಷ್ಯನ ನೀತಿ ಸಂವೇದನೆಯ ಬೀಜಗಳೆಲ್ಲ ಎಳೆಬಾಲ್ಯದಲ್ಲಿ ಮೊಳಕೆಯಾಗುತ್ತದೆ. ಅನಂತರದೇನಿದ್ದರೂ ವಿವರಗಳ ಕೃಷಿ ಎಂದು ಎಲ್ಲೋ ಓದಿದ್ದು ನೆನಪಾಯಿತು. ಅವನಿಗಾದದೆಲ್ಲ ಅವನಮ್ಮನ ಪ್ರಭಾವ[೧೮]" (ಅದೇ ಪುಟ:೧೯).

ತಾನು ತನ್ನ ಬಾಲ್ಯ, ತನ್ನವರ ನೀತಿಯುತ ಬದುಕು ಇವೆಲ್ಲವೂ ಒಳ್ಳೆತನದ ಕುರುಹುಗಳು ಎಂದು ಸದಾ ಹೆಮ್ಮೆ ಪಟ್ಟುಕೊಳ್ಳುವ ರವೀಂದ್ರ ತನ್ನ ಮಗ, ಹೆಂಡತಿಯನ್ನು ಅರ್ಥಮಾಡಿಕೊಂಡಿರುವುದು ತನ್ನ ತರ್ಕದ ಹಿನ್ನೆಲೆಯಲ್ಲಿ ಮಾತ್ರ. ಪರಂಪರೆಯ ಕಡೆ ಗಮನವಿತ್ತು ನಡೆಯುವ ರವೀಂದ್ರನಲ್ಲಿ ಆಧುನಿಕ ವಿಚಾರಗಳ ಕುರಿತು ಪುರ್ವಾಗ್ರಹ

ಭಾವನೆ ಇದೆ. ಈ ಭಾವನೆಯಲ್ಲಿ ತನ್ನವರೇ ಆದ ಮಗ, ಹೆಂಡತಿಯನ್ನು ಸೇರಿಸಿಕೊಳ್ಳುವುದರಲ್ಲಿ ಅವನಿಗೆ ಯಾವ ಹಿಂಜರಿಕೆಯೂ ಇಲ್ಲ.

ರವೀಂದ್ರನ ನೀತಿ ಸಂಹಿತೆಯಲ್ಲಿ ತಾಯಿ ಮಗನಿಗೆ ಕೈ ಖರ್ಚಿಗೆ ಕೊಡುವುದು ಅಪರಾಧವಾಗಿದೆ, ದೇಶ ರಾಜಕಾರಣದ ವಿಚಾರವಾಗಿ ಗೆಳೆಯ ಪಂಡಿತನಲ್ಲಿ ನಡೆದ ಚರ್ಚೆಯ ವಿವರವನ್ನು ಈ ಸಂದರ್ಭದಲ್ಲಿ ರವೀಂದ್ರ ಯೋಚಿಸಿ ನೆನಪಿಸುತ್ತಾನೆ.

'ಮಾತೃತ್ವದಂಥ, ಪಾಶವೀ ಪ್ರವೃತ್ತಿ ಬೇರೆ ಯಾವುದೂ ಇಲ್ಲ. ನೀತಿ, ನ್ಯಾಯ, ಆದರ್ಶ, ಮಾದರಿ ಅನ್ನುವ ಯಾವ ತರ್ಕವೂ ಅದರೊಳಗೆ ನಡೆಯುಲ್ಲ''. (ಅದೇ ಪುಟ: ) ಪಾರಂಪರಿಕವಾಗಿರುವ ಮಾತೃತ್ವದ ಕಲ್ಪನೆಗಿಂತ ಭಿನ್ನವಾಗಿರುವ ವಿರೋಧಿ ನೆಲೆಯಲ್ಲಿ ನಿಲ್ಲಬಹುದಾದ ಮಾತೃತ್ವದ ಕಲ್ಪನೆಯನ್ನು ರವೀಂದ್ರ ಇಲ್ಲಿ ಹುಟ್ಟು ಹಾಕುತ್ತಾನೆ. ತಾಯ-ಮಗನ ಸಂಬಂಧದಲ್ಲಿ ಇದೇ ಭಾವನೆಯನ್ನು ರವೀಂದ್ರ ಇಟ್ಟುಕೊಳ್ಳುವುದರಿಂದ ಕಾಂತಿ ಕೊನೆಯವರೆಗೆ ಅವನನ್ನು ಕ್ಷಮಿಸುವುದಿಲ್ಲ. ಕಾಂತಿಗೆ ಹದಿನಾರು ವರ್ಷದ ತನ್ನ ದಾಂಪತ್ಯಕ್ಕೆ ಕೊನೆ ಹಾಡಲು ತನ್ನ ತಂದೆಯ ಹುಟ್ಟು ಹಬ್ಬದ ಆಚರಣೆ ನೆವವಾಗುತ್ತದೆ. ತನ್ನ ತವರಿಗೆ ತೆರಳಿದ ಕಾಂತಿ ತನ್ನ ವೈವಾಹಿಕ ಬದುಕಿನಿಂದ ದೂರವಾಗುತ್ತಾಳೆ.

ಸ್ವತಂತ್ರ ವ್ಯಕ್ತಿಯಾಗಿ ಕಾಂತಿ

ತಂದೆಯ ಎಪ್ಪತ್ತನೆಯ ಹುಟ್ಟುಹಬ್ಬಕ್ಕೆ ದೆಹಲಿಗೆ ತೆರಳಿದ ಘಟನೆಯಿಂದ ಕಾಂತಿ ಬದುಕಿನಲ್ಲಿ ಎರಡನೆ ಅಧ್ಯಾಯ ತೆರೆದುಕೊಳ್ಳುತ್ತದೆ. ಸಹಪಾಠಿ, ಸ್ನೇಹಿತೆ ಶೀತಲ ಭೇಟಿ, ತಂದೆ ನೀಡಿದ ಉಡುಗೊರೆ ಹಣ, ಗೆಳತಿ ಮುಂದಿಟ್ಟ ಅವಕಾಶಗಳು, ಕಾಂತಿ ಬದುಕಿನ ಹೊಸ ತಿರವಿಗೆ ಕಾರಣವಾಗುತ್ತದೆ.

ನಾಲ್ಕು ಗೋಡೆ ನಡುವೆ, ಮಧ್ಯಮವರ್ಗದ ಜೀವನ ರೀತಿಗೆ ಬೇಸತ್ತ ಕಾಂತಿಗೆ ತಾನು ಮರಳಿ ದೆಹಲಿ ಸೇರಿದ ರೀತಿ, ಸಂಪಾದನೆಯ ಅವಕಾಶ, ನಗರದ ಜೀವನ ಶೈಲಿ ಎಲ್ಲವೂ ಮುಕ್ತವಾತಾವರಣದ ಜೀವನವನ್ನು ನೀಡುತ್ತವೆ. ಎಂದೂ ಇಲ್ಲದ ಸ್ವಾತಂತ್ರ್ಯವನ್ನು ಕಾಂತಿ ಅನುಭವಿಸುತ್ತಾಳೆ. ನಿರ್ದಿಷ್ಟ ಗುಂಪಿನಲ್ಲಿ ತನ್ನನ್ನು ತಾನು ಗುರುತಿಸಿಕೊಳ್ಳುವ ಪ್ರಕ್ರಿಯೆ ಮುಗಿದ ಬಳಿಕ ಕಾಂತಿಗೆ ಬದುಕು ಸಹ್ಯವೆನಿಸುತ್ತದೆ. ಅವಳ ಒಂಟಿ ಬದುಕು, ಪ್ರೇಮ ಜೀವನ, ವ್ಯಾಪಾರ ವಹಿವಾಟುಗಳು ಈ ವಲಯದಲ್ಲಿ ಸುಲಭವಾಗಿ ಸ್ವೀಕೃತವಾಗುತ್ತವೆ. ಪ್ರತ್ಯೇಕತಾಭಾವ ಅಳಿದು ಕಾಂತಿ ಅ ಸಮಾಜದ ಒಂದು ಭಾಗವಾಗಿಯೇ ಸೇರಿಬಿಡುತ್ತಾಳೆ. ಕಾಂತಿ ಸ್ವತಂತ್ರ ಜೀವನವನ್ನು ಆಯ್ಕೆಮಾಡಿಕೊಳ್ಳಲು ಮುಖ್ಯ ಕಾರಣವೆಂದರೆ -

ಗಂಡನ ಮನೆಯ ಆರ್ಥಿಕ ಬಿಕ್ಕಟ್ಟಿನಿಂದ ಉಂಟಾದ ಅಸಹನೆ ಮೊದಲನೆಯದು. ಗಂಡನ ಆದಾಯದ ಮಿತಿ ತನ್ನ ಮತ್ತು ತನ್ನ ಮಗನ ಜೀವನಮಟ್ಟಕ್ಕೆ ಹೊಂದಿಕೊಳ್ಳಲು ಸಾಧ್ಯವಾಗದು ಎಂಬ ಅರಿವು ಅವಳಲ್ಲಿ ಹಣ ಸಂಪಾದನೆಯ ದಾರಿಯನ್ನು ಹುಡುಕಿಕೊಳ್ಳಲು ಪ್ರೇರಣೆ ನೀಡುತ್ತದೆ. ತಾನು ದುಡಿದು ಸಂಪಾದಿಸಬೇಕು ಎಂಬ ಭಾವನೆ ಇಲ್ಲಿ ಹುಟ್ಟಿಕೊಳ್ಳುತ್ತದೆ. ಗಂಡನಿಗೆ ತನ್ನಲ್ಲಿ ವಿಶ್ವಾಸ, ಆದರದ ಭಾವನೆಗಳಿಲ್ಲ ಎಂಬ ಸತ್ಯದ ಅರಿವು

ಅವಳಿಗೆ ನಿಧಾನವಾಗಿ ಹೊಳೆಯುತ್ತದೆ. ತನ್ನದು 'ತನಿಖಾ ಸ್ವಭಾವ'ವೆಂದೂ ಅಲಕ್ಷ್ಯದಿಂದ ಕಾಣುವುದು ಮಾತ್ರವಲ್ಲದೆ. ಕುಟುಂಬದ ಮಹತ್ವದ ನಿರ್ಧಾರಗಳಲ್ಲಿ ತನ್ನನ್ನು ಗಣನೆಗೆ ತೆಗೆದುಕೊಳ್ಳದಿರುವುದು ಅವಳಲ್ಲಿ ಹುಟ್ಟಿರುವ ಆಕ್ಷೇಪಣಾಭಾವಕ್ಕೆ ಕಾರಣವಾಗುತ್ತದೆ. ಆರ್ಥಿಕವಾಗಿ ಸ್ವತಂತ್ರವಾಗುವುದರ ಮೂಲಕ ವ್ಯಕ್ತಿ ಗೌರವವನ್ನು ತಾನು ಕಾಪಾಡಿಕೊಳ್ಳಬಲ್ಲೆ ಎಂಬ ಆತ್ಮವಿಶ್ವಾಸಕ್ಕಾಗಿ ಅವಳು ಮುಂದುವರಿಯುತ್ತಾಳೆ. ಮಗನ ಭವಿಷ್ಯ ಚಿಂತನೆಯಲ್ಲಿ ತಂದೆಗಿರುವಷ್ಟೇ ಹಕ್ಕು ತಾಯಿಗೂ ಇದೆ ಎಂದು ನಂಬಿಕೆಯ ಆಧಾರದಲ್ಲಿ ಅವಳು ತನ್ನ ಉದ್ದಿಮೆಯಲ್ಲಿ ಮಗನಿಗೆ ಉತ್ತರಾಧಿಕಾರತ್ವ ನೀಡಲು ಏಕಸಾಮ್ಯತ್ವವನ್ನು ಪಡೆಯುತ್ತಾಳೆ.

ಗಂಡನ ನೀತಿ, ಆದರ್ಶ, ಧೋರಣೆಗಳಿಗೆ ಕಟ್ಟುಬಿದ್ದು ತನಗೆ ವಿಶ್ವಾಸವಿರದ ಜೀವನ ರೀತಿಗೆ ಒಗ್ಗಿಕೊಳ್ಳುವುದಕ್ಕಿಂತ ಸ್ವತಂತ್ರ ಬದುಕು ಅವಳಿಗೆ ಹೆಚ್ಚು ಪ್ರಿಯವೆನಿಸುತ್ತದೆ. ಅದೇ ಭಾವವನ್ನು ಅವಳು ಹೇಮಂತನಲ್ಲಿಯೂ ವ್ಯಕ್ತಪಡಿಸುತ್ತಾಳೆ - "ಪ್ರತಿಯೊಬ್ಬ ವ್ಯಕ್ತಿಗೂ ತನ್ನದೇ ಆದ ವ್ಯಕ್ತಿತ್ವವಿರುತ್ತೆ. ಇರಬೇಕು. ಅದನ್ನು ಕಡೆಗಣಿಸಿ ಇನ್ನೊಂದು ವ್ಯಕ್ತಿಯನ್ನುವಲಂಬಿಸಿದ ಜೀವಿ ಅನ್ನುವ ಹಾಗೆ ಕಾಣುದು ನನಗೆ ಇಷ್ಟವಿಲ್ಲ". ಹೇಮಂತ ತನ್ನನ್ನು ಮಿಸೆಸ್ ರವೀಂದ್ರ ಎಂದು ಸಂಭೋಧನೆ ಮಾಡಿದ ರೀತಿಗೂ ಅವಳು ಆಕ್ಷೇಪ ವ್ಯಕ್ತಪಡಿಸುತ್ತಾಳೆ.

"...ಮೀಸೆಸ್ ರವೀಂದ್ರ ಅಂತ ಕರೆದಿರಿ, ಅಂದರೆ ರವಿಂದ್ರನನ್ನು ಬಿಟ್ಟು ನನಗೆ ವ್ಯಕ್ತಿತ್ವವಿಲ್ಲ. ಅಥವಾ ನನಗೂ ನಿಮಗೂ ಸಂಬಂಧವಿಲ್ಲ. ಅದರ ಅರ್ಥ ಅಷ್ಟೇ, ನನಗೊಂದು ಹೆಸರಿಲ್ಲ, ಒಂದು ವ್ಯಕ್ತಿತ್ವವಿಲ್ಲ ಹಾಗಲ್ಲವೇ ನಿಮ್ಮ ಧೋರಣೆ[೨೦]?" (ಅದೇ ಪುಟ:೨೪೬)

ಕಾಂತಿ ಯಾರಿಂದಲೂ ಯಾವ ರೀತಿಯ ನಿರೀಕ್ಷೆಯನ್ನು ಇಟ್ಟುಕೊಂಡುವಳಲ್ಲ. ಆದುದರಿಂದ ಅವಳಿಗೆ ಒಂಟಿತನ ಸಹ್ಯವಾಗುತ್ತದೆ. ಗಂಡನ ಮನೆ, ತಂದೆಯ ಮನೆಯಲ್ಲಿ ವಾಸ ಮಾಡದೆ ತನ್ನದೇ ಆದ ಪ್ರತ್ಯೇಕ ಮನೆಯಲ್ಲಿ ತನ್ನ ನೆಲೆಯನ್ನು ಕಾಣುತ್ತಾಳೆ ಕಾಂತಿ. ತನ್ನ ಜೀವನ ರೀತಿಗೆ ಅವಳಿಗೆ ಹೇಮಂತವಲ್ಲಿರುವ ಪಾಪಪ್ರಜ್ಞೆಯಾಗಲೀ, ಶೀತಲಳನ್ನು ಕಾಡುವ ಒಂಟಿತನವಾಗಲೀ ಬರುವುದಿಲ್ಲ. ಯಾವುದೇ ರೀತಿಯ ಭಾವಾವೇಶವಿಲ್ಲದೆ, ವ್ಯವಹಾರ ಕುಶಲತೆಯಿಂದ, ತಾನು ಸಾಯುವ ಸಮಯ, ಶೀತಲಳ ಮಾತಿನಂತೆ ನಡೆದುಕೊಳ್ಳದೆ, ತನ್ನ ಕರ್ತವ್ಯವೆನ್ನುವಂತೆ, ತನ್ನ ವ್ಯವಹಾರ, ಉದ್ದಿಮೆ, ಮನೆ ಎಲ್ಲವನ್ನು ತನ್ನ ಮಗ ಪಡೆಯುವಂತೆ ಕಾಗದಪತ್ರ ಮಾಡಿಕೊಂಡೇ ಸಾಯುತ್ತಾಳೆ. ಕಾಂತಿ ಬದುಕು ಅನೇಕ ಏರುತಗ್ಗುಗಳಿಂದ ಕೂಡಿದರೂ ತನ್ನ ಬದುಕಿನಲ್ಲಿ ಸಾಧನೆ ಮಾಡಿದರ ತೃಪ್ತಿಯಿಂದಲೇ ಅವಳು ಸಾಯುತ್ತಾಳೆ.

**ಅಡಿಟಿಪ್ಪಣಿಗಳು**


೧. ಭೈರಪ್ಪ ಎಸ್.ಎಲ್. (೧೯೬೮), **ನಾಯಿನೆರಳು**, ಸಾಹಿತ್ಯ ಭಂಡಾರ, ಬೆಂಗಳೂರು, ೧೯೮೭ (ಮ.ಮು) ಪುಟ: ೨೦೪.

೨. ಭೈರಪ್ಪ ಎಸ್.ಎಲ್., (೧೯೭೨), **ಗ್ರಹಣ**, ಸಾಹಿತ್ಯಭಂಡಾರ, ಬೆಂಗಳೂರು, ೧೮೮೭ (ಮ.ಮು) ಪುಟ: ೮೧-೮೨.

೩. ಭೈರಪ್ಪ ಎಸ್.ಎಲ್. (೧೯೬೫), **ವಂಶವೃಕ್ಷ**, ಸಾಹಿತ್ಯಭಂಡಾರ, ಬೆಂಗಳೂರು, ೧೯೮೮ (ಮ.ಮು) ಪುಟ: ೩೩೪.

೪. **ಗ್ರಹಣ,** ೧೯೮೭. ಪುಟ: ೮.

೫. ಪೂರ್ವೋಕ್ತ ಪುಟ: ೯.

೬. **ಗ್ರಹಣ,** ೧೯೮೭, ಪುಟ: ೮೯.

೭. ಭೈರಪ್ಪ ಎಸ್.ಎಲ್.,(೧೯೬೨) **ದೂರಸರಿದರು,** ಸಾಹಿತ್ಯ ಭಂಡಾರ, ಬೆಂಗಳೂರು, ೧೯೯೧ (ಮ.ಮ) ಪುಟ: ೨೦೮.

೮. ಪೂರ್ವೋಕ್ತ ಪುಟ: ೨೧೪.

೯. ಪೂರ್ವೋಕ್ತ ಪುಟ: ೨೨

೧೦. **ವಂಶವೃಕ್ಷ,** ೧೯೮೮. ಪುಟ: ೧೧.

೧೧. ಪೂರ್ವೋಕ್ತ, ಪುಟ:೧೮೪.

೧೨. ಪೂರ್ವೋಕ್ತ, ಪುಟ:೩೫೯.

೧೩. ಪೂರ್ವೋಕ್ತ ಪುಟ:೪೩೨-೪೩೩.

೧೪. ಭೈರಪ್ಪ ಎಸ್.ಎಲ್. (೧೯೯೩), **ತಂತು,** ಸಾಹಿತ್ಯಭಂಡಾರ, ಬೆಂಗಳೂರು, ೧೯೯೩. ಪುಟ: ೩.

೧೫. ಪೂರ್ವೋಕ್ತ ಪುಟ: ೧೮

೧೬. ಪೂರ್ವೋಕ್ತ ಪುಟ: ೮೪

೧೭. ಪೂರ್ವೋಕ್ತ ಪುಟ: ೧೮೪

೧೮. ಪೂರ್ವೋಕ್ತ ಪುಟ: ೧೯

೧೯. ಪೂರ್ವೋಕ್ತ ಪುಟ:

೨೦. ಪೂರ್ವೋಕ್ತ ಪುಟ: ೩೪೯

# ಉಪಸಂಹಾರ

'ಸ್ತ್ರೀ' ಎಂದರೆ ನಿಶ್ಚಿತ ಭೌತಿಕ ಸ್ವರೂಪವುಳ್ಳ ಆಲೋಚನೆಗಳನ್ನು ಭಾವನೆಗಳನ್ನು ವ್ಯಕ್ತಪಡಿಸಬಲ್ಲ, ಮನುಷ್ಯ ಸಮಾಜದ ಒಂದು ಜೀವಂತ ಘಟಕ; ಅಥವಾ ವ್ಯಕ್ತಿ. ಒಂದು ಘಟನೆ, ಒಂದು ಸನ್ನಿವೇಶವನ್ನು ಕಲ್ಪಿಸಿಕೊಂಡಂತೆ, ಕೃತಿಕಾರ ಸ್ತ್ರೀಸ್ವರೂಪವನ್ನು ಕಾಲ್ಪನಿಕವಾಗಿ ಗ್ರಹಿಸಿ ಚಿತ್ರಿಸುವುದು ವಾಸ್ತವಿಕ ಪ್ರಜ್ಞೆಯ ಬರಹಗಳಲ್ಲಿ ಸಾಧ್ಯವಾಗುವುದಿಲ್ಲ. ಆರೋಪಿತ ಗುಣಲಕ್ಷಣಗಳನ್ನು ಒಂದು ಹಂತದವರೆಗೆ ಬಳಸಿಕೊಂಡು ಮುಂದುವರಿದರೂ ಕೂಡಾ, ಆ ಮೂಲಕ ನಿಜವ್ಯಕ್ತಿತ್ವವನ್ನು ಮರೆ ಮಾಡುವುದು ಸಾಧ್ಯವಾಗಬಹುದೇ ವಿನಹ ಅದನ್ನು ಪೂರ್ತಿಯಾಗಿ ಅಳಿಸಿ ಹಾಕುವುದು ಸಾಧ್ಯವಾಗುವುದಿಲ್ಲ.

ಕಥನ ಸಾಹಿತ್ಯದ ಧೀರ್ಘ ಅವಲೋಕನ ಮತ್ತು ಪ್ರಸ್ತುತ ಪ್ರಬಂಧದಲ್ಲಿ ಚರ್ಚಿಸಿದ ವಿವರಗಳನ್ನು ಅನುಲಕ್ಷಿಸಿ, ಕಥನ ಸಾಹಿತ್ಯದ ನಿರ್ವಚನವನ್ನು ಈ ಕೆಳಗಿನ ತೀರ್ಮಾನಗಳ ಮೂಲಕ ಸ್ವೀಕರಿಸಲಾಗಿದೆ.

ವಾಸ್ತವತಾವಾದ ಮತ್ತು ಮಾನವತಾವಾದದ ಪ್ರೇರಣೆ ಪಡೆದಿರುವ ಕಥನ ಸಾಹಿತ್ಯವು ಹೆಣ್ಣನ್ನು ನಿರ್ವಚಿಸಿದ ವಿಧಾನವು ವಾಸ್ತವಪ್ರಜ್ಞೆಯದೇ ಆಗಿದೆ, ಎಂದು ತಿಳಿಯಬಹುದು.

ವ್ಯಕ್ತಿನಿಷ್ಠವಾಗಿರುವ ಈ ಪ್ರಕಾರವು ಹೆಣ್ಣನ್ನು ಮಾನವೀಯತೆಯ ಸಂಕೇತವಾಗಿ ಬಳಸಿಕೊಂಡಿದೆ. ಯುಗಧರ್ಮದ ಆವಶ್ಯತೆಗನುಗುಣವಾಗಿ ಪೂರ್ವಸ್ಥಿತಿಯಿಂದ ಕಳಚಿಕೊಂಡು ಬಿಡುಗಡೆಯ ಆಶಯದೊಡನೆ ಸ್ವತಂತ್ರವಾಗಿ ತನ್ನನ್ನು ತಾನು ಸ್ಥಾಪಿಸಿಕೊಳ್ಳಬೇಕೆನ್ನುವ ಮಾನವೀಯತೆಯ ಪ್ರಯತ್ನವನ್ನು ಸ್ತ್ರೀಪರಿಕಲ್ಪನೆ ಮೂಲಕ ಅಭಿವ್ಯಕ್ತಿಸಲಾಗಿದೆ. ಸಂಪ್ರದಾಯ, ಪರಂಪರೆ ಮತ್ತು ವ್ಯವಸ್ಥೆ ಮೊದಲಾದುವುಗಳ ನಿಯಂತ್ರಣದ ಅಧೀನಸ್ಥಿತಿಯಿಂದ ಕಳಚಿಕೊಂಡು ಸ್ವತಂತ್ರ ಅಭಿವ್ಯಕ್ತಿಗೆ, ತನ್ನ ಸ್ವಾಯತ್ತತೆಗೆ ತುಡಿಯುವ ಮಾನವೀಯತೆಯ ವಿಮೋಚಿತ ಸ್ಥಿತಿಯನ್ನು ಕಥನ ಸಾಹಿತ್ಯದ ಅಧೀನ ಸ್ತ್ರೀಪರಿಕಲ್ಪನೆ ಮತ್ತು ವಿಮೋಚಿತ ಸ್ತ್ರೀ ಪರಿಕಲ್ಪನೆಗಳು ಸಾಂಕೇತಿಕವಾಗಿ ವ್ಯಕ್ತಪಡಿಸುತ್ತವೆ.

ಕಥನ ಸಾಹಿತ್ಯದ ಸ್ತ್ರೀಪರತೆ ಮತ್ತು ಸ್ತ್ರೀಪ್ರಧಾನತೆಗೆ ಬರಹಗಾರರ ಸಾಮಾಜಿಕ ಕಳಕಳಿ ಮತ್ತು ಸ್ತ್ರೀಪರ ಕಾಳಜಿಗಳು ಮುಖ್ಯಕಾರಣಗಳಾಗಿವೆ ಎಂದು ಪರಿಗಣಿಸಬಹುದಾಗಿದೆ.

ಸಾಮಾಜಿಕ ಕಳಕಳಿ ಮತ್ತು ಸ್ತ್ರೀಪರ ಕಾಳಜಿಗಳ ಲಕ್ಷಣವಿರುವ ಕಥನ ಸಾಹಿತ್ಯದ ಸ್ತ್ರೀನಿರ್ವಚನವು ಈ ಕೆಳಗಿನ ರೀತಿಯಲ್ಲಿ ವ್ಯಕ್ತವಾಗಿದೆ:

**ಸಾಮಾಜಿಕ ಕಾಳಜಿಯ ಕಥನ ಸಾಹಿತ್ಯದ ಸ್ತ್ರೀನಿರ್ವಚನ**

ಸಾಮಾಜಿಕ ಕಾಳಜಿಯ ಕತಾಸಾಹಿತ್ಯದಲ್ಲಿ ಸ್ತ್ರೀನಿರ್ವಚಿಸಿಕೊಂಡ ವಿಧಾನವು ಒಟ್ಟು ಸಮಾಜದ ಹಿತದೃಷ್ಟಿಯನ್ನು

ಅನುಲಕ್ಷಿಸಿ ಮತ್ತು ಪೂರ್ವಸ್ಥಿತಿ ವಿರುದ್ಧ ಹೋರಾಡುವ ದೃಷ್ಟಿಕೋನದ ಮೂಲಕ ವ್ಯಕ್ತವಾಗಿದೆ.

ಸ್ತ್ರೀಸ್ವರೂಪ ಸಮಾಜದ ಗ್ರಹಿಕೆಯಲ್ಲಿರುವ ಸ್ತ್ರೀ ಸ್ವರೂಪವಾಗಿದೆ. ಇಲ್ಲಿನ ಸ್ತ್ರೀ ಸಮಾಜದ ಒಂದು ಘಟಕವಾಗಿದ್ದಾಳೆ. ಅವಳ ವ್ಯಕ್ತಿತ್ವ ಅವಳು ನಿರ್ವಹಿಸುವ ಸಾಮಾಜಿಕ ಪಾತ್ರವಾಗಿದೆ. ಹೆಣ್ಣು ಇಲ್ಲಿ ಗೃಹಿಣಿ, ಪತ್ನಿ, ವೇಶ್ಯೆ ಅಥವಾ ವಿಧವೆಯಾಗಿದ್ದಾಳೆ. ಅವಳ ಗುಣಲಕ್ಷಣಗಳು ಈ ಸಾಮಾಜಿಕ ಪಾತ್ರದ ಗುಣಲಕ್ಷಣಗಳೇ ಆಗಿವೆ.

ಸಮಾಜದ ಸ್ಥಿತಿ ಬದಲಾಗಬೇಕು, ಸಮಾಜ ಸ್ವೀಕರಿಸಿರುವ ಜೀವವಿರೋಧಿಮೌಲ್ಯಗಳು, ಆಚರಣೆಗಳು, ಸಂಪ್ರದಾಯಗಳು, ಅಚಾರವಿಚಾರಗಳು ಬದಲಾಗಬೇಕು--ಇದು ಸಾಮಾಜಿಕ ಕಾಳಜಿಯ ಸಾಹಿತ್ಯದ ಕೇಂದ್ರ ಆಶಯವಾಗಿದೆ.

ಈ ಆಶಯ ಸಮಾಜಸುಧಾರಣೆ, ಸಾಂಸ್ಕೃತಿಕ ಪುನರುಜ್ಜೀವನ, ಪ್ರಗತಿಶೀಲತೆ ಮೊದಲಾದ ಬಾಹ್ಯ ಅಂಶಗಳಿಂದ ಪ್ರೇರಣೆ ಪಡೆಯುತ್ತದೆ, ಮತ್ತು ಸಾಮಾಜಿಕ ಪದ್ಧತಿಗಳಾದ ಸತಿ, ಕೇಶಮುಂಡನ, ವೇಶ್ಯಾವೃತ್ತಿ ವಿರುದ್ಧ ಸಾಮಾಜಿಕ ನೆಲೆಯಲ್ಲಿ ನಡೆಯುವ ಕಾರ್ಯಾಚರಣೆಗಳ ಪರವಾಗಿ ನಿಂತು ಬೆಂಬಲ ಸೂಚಿಸುತ್ತದೆ. ಈ ಪ್ರೇರಣೆ, ಬೆಂಬಲಗಳು ಕತೆಕಾದಂಬರಿಗಳಲ್ಲಿ ವ್ಯವಸ್ಥೆ ವಿರುದ್ಧ ಪಾತ್ರಗಳು ಸೂಚಿಸುವ ಪ್ರತಿಭಟನೆ, ಪ್ರತಿರೋಧ ಮತ್ತು ಬಂಡಾಯದಂತಹ ಸಮಾಜವಿಮರ್ಶೆಗಳಲ್ಲಿ ವ್ಯಕ್ತವಾಗುತ್ತವೆ.

ಸಾಮಾಜಿಕ ಹೊಣೆಗಾರಿಕೆಯುಳ್ಳ ಬರಹಗಾರ ಅಧೀನ ಸ್ತ್ರೀಯನ್ನು ಈ ಹಂತದಲ್ಲಿ ಕಳಕಳಿಪೂರ್ವಕವಾಗಿ ಚಿತ್ರಿಸುತ್ತಾನೆ. ಮತ್ತು ಕುಟುಂಬ ವ್ಯವಸ್ಥೆಯನ್ನು, ಆ ಮೂಲಕ ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡುವಂತಾಗಲು ಗೃಹಿಣಿ, ಪತ್ನಿಯರಲ್ಲಿ ಆದರ್ಶಗುಣಗಳನ್ನು ಆರೋಪಿಸಿಕೊಳ್ಳುತ್ತಾನೆ. ಈ ಹಂತದಲ್ಲಿ ಗೃಹಾಧೀನತೆ ಹೆಣ್ಣಿನ ವಸ್ತುಸ್ಥಿತಿಯಾಗುತ್ತದೆ. ಮತ್ತು ಅವಳು ಸ್ವೀಕರಿಸುವ ಮೌಲ್ಯಗಳು ಸಮಾಜದ ಹಿತದೃಷ್ಟಿಯಿಂದ ಸ್ವೀಕೃತವಾಗುವ ರೀತಿಯದಾಗಿರುತ್ತವೆ.

ವಿಧವೆಯರ, ವೇಶ್ಯೆಯರ ಬದುಕಿನ ಧಾರುಣತೆ, ನೋವು, ದುಗುಡಗಳು ವ್ಯಕ್ತವಾಗಿರುವುದು ಸಾಮಾಜಿಕ ಅಸಮನತಾಕಲ್ಪನೆ ವಿರುದ್ಧವಾಗಿ. ಆದುದರಿಂದ ಸಾಮಾಜಿಕ ವಾತಾವರಣದಲ್ಲಿ ಹೆಣ್ಣಿನ ಶೋಷಣೆ ವಿರುದ್ಧ ನಡೆಸಬಹುದಾದದ ಕಾರ್ಯಾಚರಣೆಗಳು ಕೌಟುಂಬಿಕ ವಲಯದೊಳಗೆ ಸ್ವೀಕೃತವೆನಿಸುವುದಿಲ್ಲ. ಕೌಟುಂಬಿಕ ವಲಯದಲ್ಲಿ ಸ್ತ್ರೀ ತಾನು ನಿರ್ವಚಿಸಿಕೊಂಡ ವಿಧಾನವು ಸಾಮಾಜಿಕ ಸ್ವೀಕೃತಿಯ ರೀತಿಯಲ್ಲಿಯೇ ವ್ಯಕ್ತವಾಗಿರುವ ಕಾರಣ, ಅವಳು ಈ ಹಂತದಲ್ಲಿ ಸೂಚಿಸಬಹುದಾದ ಯಾವುದೇ ರೀತಿಯ ಪ್ರತಿರೋಧಗಳು ಅವಳದೇ ಸ್ವಂತವ್ಯಕ್ತಿತ್ವದ ವಿರುದ್ಧವಾಗಿ ಕಾಣಿಸಿಕೊಳ್ಳಬಹುದಾದ ಸಾಧ್ಯತೆಗಳಿರುವುದರಿಂದ, ಸಾಧಿತವಾಗುವುದಿಲ್ಲ. ಹೀಗೆ ಕೌಟುಂಬಿಕ ಚೌಕಟ್ಟಿನೊಳಗೆ ಸ್ತ್ರೀ ನಿರ್ವಹಿಸುವ ಪಾತ್ರ, ಸ್ತ್ರೀಯ ಅಭಿವ್ಯಕ್ತಿಯೇ ಆಗಿದೆ. ಈ ಅಭಿವ್ಯಕ್ತಿ ತೋರಿಸಬಹುದಾದ ಪ್ರತಿರೋಧಗಳು ದೌರ್ಬಲ್ಯಗಳಾಗಿ, ಸೋಲುಗಳಾಗಿ ಪರಿಗಣಿತವಾಗುತ್ತವೆ.

## ಸ್ತ್ರೀಪರ ಕಾಳಜಿಯ ಕಥನ ಸಾಹಿತ್ಯದ ಸ್ತ್ರೀನಿರ್ವಚನ

ಸ್ತ್ರೀಪರ ಕಾಳಜಿಯ ಕಥಾಸಾಹಿತ್ಯದಲ್ಲಿ ಸ್ತ್ರೀನಿರ್ವಚಿಸಿಕೊಂಡ ವಿಧಾನವು ವ್ಯಕ್ತಿಗತ ನೆಲೆಯಲ್ಲಿ ಹೆಣ್ಣಿನ ಹಿತಾಸಕ್ತಿಯನ್ನು ಮತ್ತು ಅವಳು ಈಗಿರುವ ಸ್ಥಿತಿ ವಿರುದ್ಧ ಹೋರಾಡುವ ದೃಷ್ಟಿಕೋನದ ಮೂಲಕ ವ್ಯಕ್ತವಾಗಿದೆ.

ಸ್ತ್ರೀಸ್ವರೂಪ ಸ್ವಾಯತ್ತತೆಯ ಅಂಶಗಳಿಂದ ಗೃಹೀತವಾಗಿದೆ. ಇಲ್ಲಿರುವ ಸ್ತ್ರೀ ವ್ಯಕ್ತಿರೂಪವಾಗಿದ್ದಾಳೆ. ಅವಳ ವ್ಯಕ್ತಿತ್ವ ಯಾವುದೇ ರೀತಿಯ ಪೂರ್ವಗ್ರಹಿಕೆಗೆ ಒಳಪಡದ ರೀತಿಯದಾಗಿರುತ್ತದೆ. ಸ್ತ್ರೀ ಇಲ್ಲಿ ಸಮಾಜದ ಘಟಕವಾಗಿರುವುದಕ್ಕಿಂತ ಹೆಚ್ಚಾಗಿ ಸ್ವಂತ ಅಸ್ತಿತ್ವದ ಕಲ್ಪನೆಯ ರೂಪವಾಗಿದ್ದಾಳೆ. ಅವಳ ಗುಣಲಕ್ಷಣಗಳು ವೈಯಕ್ತಿಕವಾದಂಥವು.

ಸ್ತ್ರೀ ಇರುವ ಸ್ಥಿತಿ ಬದಲಾಗಬೇಕು. ಅವಳ ಜೀವವಿರೋಧಿಯಾಗಿರುವ ಸಮಾಜದ ಮೌಲ್ಯಗಳು, ಸಂಪ್ರದಾಯಗಳು, ಆಚರಣೆಗಳು,ಆಚಾರವಿಚಾರಗಳು ಬದಲಾಗಬೇಕು - ಇದು ಸ್ತ್ರೀಪರ ಕಾಳಜಿಯ ಸಾಹಿತ್ಯದ ಕೇಂದ್ರ ಆಶಯವಾಗಿದೆ. ಈ ಆಶಯವು ಸಂಸ್ಕೃತಿ ಪುನರ್ ವ್ಯಾಖ್ಯಾನ, ಪುನರ್ ಮೌಲೀಕರಣ ಮೊದಲಾದ ಬಾಹ್ಯ ಅಂಶಗಳಿಂದ ಪ್ರೇರಣೆ ಪಡೆಯುತ್ತದೆ, ಮತ್ತು ಸಾಮಾಜಿಕ ನೆಲೆಯಲ್ಲಿ ಲಿಂಗ ಅಸಾಮಾನತೆ, ಲೈಂಗಿಕ ಶೋಷಣೆ, ಕೌಟುಂಬಿಕ ಹಿಂಸೆ ವಿರುದ್ಧ ನಡೆಯುವ ಕಾರ್ಯಚರಣೆಗಳ ಪರವಾಗಿ ನಿಂತು ಬೆಂಬಲ ಸೂಚಿಸುತ್ತದೆ. ಈ ಪ್ರೇರಣೆ ಮತ್ತು ಬೆಂಬಲಗಳು ಕತೆಕಾದಂಬರಿಗಳಲ್ಲಿ ವ್ಯವಸ್ಥೆರೂಪದಲ್ಲಿರುವ ಸಮಾಜ, ಕುಟುಂಬ ಮತ್ತು ಪುರಷಾಧಿಕಾರದ ವಿರುದ್ಧ ಪಾತ್ರಗಳು ಸೂಚಿಸುವ ಪ್ರತಿಭಟನೆ, ಪ್ರತಿರೋಧ ಮತ್ತು ಬಂಡಾಯದಂತಹ ಸ್ವ-ವಿಮರ್ಶಾತ್ಮಕ ಕಾರ್ಯಗತಿಗಳಲ್ಲಿ ವ್ಯಕ್ತವಾಗುತ್ತವೆ.

ಸ್ತ್ರೀಪರ ಕಾಳಜಿಯ ಸಾಹಿತ್ಯ ಸ್ತ್ರೀಯ ಅಧೀನಸ್ಥಿತಿಯನ್ನು ಈ ಹಂತದಲ್ಲಿ ಸಂಪೂರ್ಣರೂಪದಲ್ಲಿ ನಿರಾಕರಣೆಗೆ ಒಳಪಡಿಸಿ ವಿಮೋಚನಾ ವಿಧಾನವನ್ನು ಕಂಡುಕೊಳ್ಳುತ್ತದೆ. ಮತ್ತು ವ್ಯಕ್ತಿಗತನೆಲೆಯಲ್ಲಿ ಸ್ತ್ರೀ ಆತ್ಮಗೌರವನ್ನು ಉಳಿಸಿಕೊಳ್ಳಲು ತನ್ನಲ್ಲಿ ಎಚ್ಚರವನ್ನು, ಅರಿವನ್ನು ಬೆಳೆಸಿಕೊಳ್ಳುವುದನ್ನು ಸೂಚಿಸುತ್ತದೆ. ಈ ಹಂತದಲ್ಲಿ ಹೆಣ್ಣು ತನ್ನ ಸ್ವಂತ ಅಸ್ತಿತ್ವವನ್ನು ಸ್ಥಾಪಿಸಲು ವೈಯಕ್ತಿಕ ಸ್ವಾತಂತ್ರ್ಯಕ್ಕೆ ಹೆಚ್ಚಿನ ಆದ್ಯತೆ ನೀಡುತ್ತಾಳೆ ಮತ್ತು ಸಾಂಪ್ರದಾಯಕ ನಿಲುವಿನಿಂದ ಪ್ರೇರಿತವಾಗಿರುವ ವ್ಯಕ್ತಿತ್ವಕ್ಕೆ ಭಿನ್ನವಾದ ರೀತಿಯಲ್ಲಿ ಕಾಣಿಸಿಕೊಳ್ಳುತ್ತಾಳೆ. ಅವಳು ಸ್ವೀಕರಿಸುವ ಮೌಲ್ಯಗಳು, ವ್ಯಕ್ತಿಗತ ಸಾಧನೆಗೆ ಪೂರಕವಾಗಿರುವ ರೀತಿಯವುಗಳು.

ಕುಟುಂಬ ಮತ್ತು ಸಮಾಜದ ನೆಲೆಯಲ್ಲಿ ಇಲ್ಲಿ ಹೆಣ್ಣಿನ ನೋವು ದುಗುಡಗಳು, ಅವಳ ಬದುಕಿನ ದಾರುಣತೆ ವ್ಯಕ್ತವಾಗುವುದು ಲಿಂಗಾಸಾಮಾನತೆಯ ಕಲ್ಪನೆಯ ವಿರುದ್ಧವಾಗಿ. ಆದುದರಿಂದ ಸ್ತ್ರೀಶೋಷಣೆ ವಿರುದ್ಧ ನಡೆಯುವ ಕಾರ್ಯಾಚರಣೆಗಳು ಇಲ್ಲಿ ಎಲ್ಲ ದಿಕ್ಕಿನಿಂದಲೂ ಸ್ವೀಕೃತವಾಗುತ್ತವೆ. ಸ್ತ್ರೀ ತನ್ನನ್ನು ಕುಟುಂಬ ಮತ್ತು ಸಮಾಜದ ಹಿನ್ನೆಲೆಗಿಂತಲೂ ಹೆಚ್ಚಾಗಿ ಸ್ವತಂತ್ರವಾಗಿ ಕಲ್ಪಿಸಿಕೊಳ್ಳುತ್ತಾಳೆ. ಕುಟುಂಬ ಮತ್ತು ಸಮಾಜ ಎರಡರಲ್ಲಿಯೂ ಹೆಣ್ಣು ವ್ಯಕ್ತಿರೂಪದಲ್ಲಿ ನಿರ್ವಚಿಸಿಕೊಳ್ಳುತ್ತಾಳೆ. ಈ ಹಂತದಲ್ಲಿ ಸ್ತ್ರೀ ಸೂಚಿಸುವ ಸ್ವಾತಂತ್ರ್ಯದ ಹಂಬಲ, ಸಮಾನತಾ ಧೋರಣೆ ಮತ್ತು ಆಯ್ಕೆ ಸ್ವಾತಂತ್ರ್ಯಗಳು ಅವಳ ಬದುಕಿನ ಪರ್ಯಾಯ ಸಾಧ್ಯತೆಗಳ ಮೂಲಕವು ಸಫಲವಾಗುತ್ತವೆ.

ಇದು ಸ್ತ್ರೀಯ ಸ್ವ-ನಿರ್ವಚನದ ಅಭಿವ್ಯಕ್ತಿಯಾಗುತ್ತದೆ. ಈ ಅಭಿವ್ಯಕ್ತಿ ಮಾನವ ಸಹಜ ಗುಣಗಳಿಂದ, ದೌರ್ಬಲ್ಯಗಳಿಂದ ಕೂಡಿಕೊಂಡು ಅನನ್ಯವೆನಿಸುತ್ತದೆ.

ಕನ್ನಡ ಕಥನ ಸಾಹಿತ್ಯದ ಸ್ತ್ರೀನಿರ್ವಚನವನ್ನು [redacted] ಅಧ್ಯಯನವು ಮೇಲೆ ವಿವರಿಸಿದ ಅಂಶಗಳ ಮೂಲಕ ಕಂಡುಕೊಳ್ಳುವ ಪ್ರಯತ್ನವನ್ನು ಮಾಡಿದೆ. ಅಧ್ಯಯನದಲ್ಲಿ ಸಾಮಾಜಿಕ ಕಾದಂಬರಿ ಮತ್ತು ಕತೆಗಳನ್ನು ಮಾತ್ರ [redacted] ಆಯ್ಕೆ ಮಾಡಿಕೊಂಡಿರುವ ಕಾರಣ, ಇಲ್ಲಿ ಸಾಮಾಜಿಕ ಅಂಶಗಳಿಗೆ ಹೆಚ್ಚು ಒತ್ತನ್ನು ನೀಡಲಾಗಿದೆ. ಇದು [redacted] ಪ್ರಬಂಧದ ಮಿತಿಯೂ ಹೌದು. ಕತಾಸಾಹಿತ್ಯವನ್ನು ಈ ರೀತಿ ಪ್ರವೇಶ ಪಡೆದು ಅಧ್ಯಯನ ನಡೆಸುವ ಕ್ರಮ ಬಹುಶಃ ಕನ್ನಡದಲ್ಲಿ ಮೊದಲನೆಯದೂ ಆಗಬಹುದು. ಇದೇ ಕ್ರಮದಲ್ಲಿ ಕನ್ನಡದ ಇತರ ಸಾಹಿತ್ಯ ಪ್ರಕಾರಗಳನ್ನು ಆಕರವಾಗಿಟ್ಟು, ಸಾಮಾಜಿಕ ಅಂಶಗಳಿಂದ ಹೊರತಾಗಿ ಅಧ್ಯಯನ ನಡೆಸುವ ಸಾಧ್ಯತೆಗಳೂ ಇವೆ. ಕಥನ ಸಾಹಿತ್ಯವನ್ನಾಧಾರಿಸಿದ ಇತರ ಅಧ್ಯಯನಗಳ ಮುಂದುವರಿಕೆಯಾಗಿ ನಾನೀ ಕಾರ್ಯವನ್ನು ಕೈಗೊಂಡಿದ್ದೇನೆ. ಇದೇ ರೀತಿಯಲ್ಲಿ ಮುಂದುವರಿಯುವ ಅವಕಾಶಗಳು ಇವೆ ಎಂದು ಮಾತ್ರ ಇಲ್ಲಿ ಹೇಳಬಲ್ಲೆ.

ಈ ದಿಕ್ಕಿನಲ್ಲಿ ನನ್ನದು ಪ್ರಾಮಾಣಿಕ ಪ್ರಯತ್ನವೆಂದು ನನ್ನ ನಂಬಿಕೆಯಾಗಿದೆ.

# ಅನುಬಂಧಗಳು

## ಒಂದು

**ಪ್ರಾತಿನಿಧಿಕ ಬರಹಗಾರರ ಕೃತಿ ಸೂಚಿ ಮತ್ತು ಆಕರ ಸೂಚಿ**

**ಅ ತ್ರಿವೇಣಿ :** ಕಾದಂಬರಿ (ಮರು ಮುದ್ರಣಗಳು)


ತ್ರಿವೇಣಿ, ೧೯೯೩, **ಹೂವುಹಣ್ಣು**, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು.
ತ್ರಿವೇಣಿ, ೧೯೯೦, **ಅಪಸ್ವರ**, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು.
ತ್ರಿವೇಣಿ, ೧೯೯೧, **ಅಪಜಯ**, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು.
ತ್ರಿವೇಣಿ, ೧೯೮೭, **ಸೋತು ಗೆದ್ದವಳು**, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು.
ತ್ರಿವೇಣಿ, ೧೯೮೭, **ದೂರದ ಬೆಟ್ಟ**, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು.
ತ್ರಿವೇಣಿ, ೧೯೯೦, **ಮೊದಲ ಹೆಜ್ಜೆ**, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು.
ತ್ರಿವೇಣಿ, ೧೯೯೦, **ಮುಚ್ಚಿದ ಬಾಗಿಲು**, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು.
ತ್ರಿವೇಣಿ, ೧೯೯೪, **ಮುಕ್ತಿ**, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು.
ತ್ರಿವೇಣಿ, ೧೯೯೧, **ತಾವರೆಯಕೊಳ**, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು.
ತ್ರಿವೇಣಿ, ೧೯೮೭, **ಕಾಶಿಯಾತ್ರೆ**, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು.
ತ್ರಿವೇಣಿ, ೧೯೯೪, **ಹಣ್ಣೆಲೆ ಚಿಗುರಿದಾಗ**, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು.
ತ್ರಿವೇಣಿ, ೧೯೯೧, **ಬೆಳ್ಳಿಮೋಡ**, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು.
ತ್ರಿವೇಣಿ, ೧೯೯೦, **ವಸಂತಗಾನ**, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು.
ತ್ರಿವೇಣಿ, ೧೯೯೦, **ಅವಳ ಮಗಳು**, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು.
ತ್ರಿವೇಣಿ, ೧೯೯೩, **ಕೀಲುಗೊಂಬೆ**, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು.
ತ್ರಿವೇಣಿ, ೧೯೯೩, **ಅವಳ ಮನೆ**, ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು.
ತ್ರಿವೇಣಿ, ೧೯೯೪, **ಕಂಕಣ**, ಸಾಯಿಗೀತಾ ಪ್ರಕಾಶನ, ಮೈಸೂರು.
ತ್ರಿವೇಣಿ, ೧೯೯೪, **ಬಾನು ಬೆಳಗಿತು**, ಸಾಯಿಗೀತಾ ಪ್ರಕಾಶನ, ಮೈಸೂರು.
ತ್ರಿವೇಣಿ, ೧೯೯೫, **ಹೃದಯಗೀತ**, ಸಾಯಿಗೀತಾ ಪ್ರಕಾಶನ, ಮೈಸೂರು.
ತ್ರಿವೇಣಿ, ೧೯೯೪, **ಬೆಕ್ಕಿನ ಕಣ್ಣು**, ರವಿ ಪಬ್ಲಿಕೇಶನ್ಸ್, ಮೈಸೂರು.
ತ್ರಿವೇಣಿ, ೧೯೮೩, **ಶರಪಂಜರ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.


**ಆಕರ ಗ್ರಂಥ :**


ಗಾಯತ್ರಿ, ಎನ್ , ೧೯೮೯, **ತ್ರಿವೇಣಿ**, ಜಾಗೃತಿ ಪ್ರಕಾಶನ, ಬೆಂಗಳೂರು.(ಸಂ)
ವಿಮಲ, ಎನ್ .ವಿ., ೧೯೭೮, **ತ್ರಿವೇಣಿ ವ್ಯಕ್ತಿ ಮತ್ತು ಸಾಹಿತ್ಯ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು (ಸಂ)
ಸಬರದ, ವಿಜಯಶ್ರೀ, **ತ್ರಿವೇಣಿಯವರ ಕಾದಂಬರಿಗಳು**, ನವಕರ್ನಾಟಕ ಪ್ರಕಾಶನ, ಬೆಂಗಳೂರು.
ಸುಧಾರ್ಥಿ (ಸಂ) ೧೯೭೩ **ತ್ರಿವೇಣಿ ಕೃತಿಗಳ ಒಳನೋಟ**, ಪ್ರತಿಭಾ ಕಲಾ ಪರಿಷತ್ತು, ಬೆಂಗಳೂರು.


**ಲೇಖನ :**


ಆಮೂರ, ಜಿ. ಎಸ್. ೧೯೯೪. **"ಮಹಿಳಾ ಕಾದಂಬರಿಯ ಕೆಲವು ಮಾದರಿಗಳು"**; ಇಂದಿರಾ, ತ್ರಿವೇಣಿ, ಅನುಪಮಾ", ಕನ್ನಡ ಕಥನ ಸಾಹಿತ್ಯ: ಕಾದಂಬರಿ, ಶ್ರೀಹರಿ ಪ್ರಕಾಶನ, ಬೆಂಗಳೂರು. ಪುಟ: ೨೪೨ - ೨೫೯.
ದಬ್ಬೆ, ವಿಜಯಾ, ೧೯೮೯, **"ತ್ರಿವೇಣಿ ಒಂದು ಟಿಪ್ಪಣಿ"**, ಮಹಿಳೆ, ಸಾಹಿತ್ಯ ಸಮಾಜ. ರಚನಾ ಪ್ರಕಾಶನ, ಮೈಸೂರು.
ರೈ, ಉಷಾ, ಪಿ, ೧೯೯೭, **"ಶರಪಂಜರ ಒಂದು ವಿಶ್ಲೇಷಣೆ,"** ಅಂತರ್ಯ, ಸಾಹಿತ್ಯ ಪ್ರಕಾಶನ, ಬೆಂಗಳೂರು.
ಪಾರ್ವತಿ, ಎಚ್.ಎಸ್. ೧೯೮೧, **'ತ್ರಿವೇಣಿ'**, ಓದಿನಾ ಬಳಗು, ಮನಸೋಲ್ಲಾಸ ಪ್ರಕಾಶನ, ಬೆಂಗಳೂರು.

ಸುಮಿತ್ರಾಬಾಯಿ, ಬಿ. ಎನ್ . ೧೯೯೫, "ತ್ರಿವೇಣಿ ಬರಹಗಳಲ್ಲಿ ಸ್ತ್ರೀ ಸಂಬಂಧಿತ ಮೌಲ್ಯಗಳು". ವಿಚಯ, ಇಳಾಪ್ರಕಾಶನ, ಬೆಂಗಳೂರು. ಪುಟ: ೧೦೩-೧೧೨.

**ಆ. ವೈದೇಹಿ**

**ಕಾದಂಬರಿ:** ವೈದೇಹಿ, ೧೯೯೨, ಅಸ್ಪೃಶ್ಯರು, ನವಕರ್ನಾಟಕ ಪ್ರಕಾಶನ, ಬೆಂಗಳೂರು.

**ಕತಾಸಂಕಲನ :**

ವೈದೇಹಿ, ೧೯೭೯, ಮರಗಿಡಬಳ್ಳಿ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

ವೈದೇಹಿ, ೧೯೮೪, ಅಂತರಂಗದ ಪುಟಗಳು, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

ವೈದೇಹಿ, ೧೯೮೬, ಗೋಲ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

ವೈದೇಹಿ, ೧೯೯೧, ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

ವೈದೇಹಿ, ೧೯೯೦, ಆಯ್ದ ಕತೆಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

**ಸ್ವತಂತ್ರ ಕತೆಗಳು:**

ವೈದೇಹಿ, ೧೯೯೨, "ಮರೆವು" ಸಣ್ಣಕತೆ:೧೯೯೨, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ವೈದೇಹಿ, ೧೯೯೫, "ಕಾಣೆಯಾದವರು", ಪ್ರಜಾವಾಣಿ ದೀಪಾವಳಿ ವಿಶೇಷಾಂಕ.

ವೈದೇಹಿ, ೧೯೯೭, "ಅಂತರಾಳದ ಬದುಕು" ಪ್ರಜಾವಾಣಿ ದೀಪಾವಳಿ ವಿಶೇಷಾಂಕ.

ವೈದೇಹಿ, ೧೯೯೮ , "ಆಕ್ಸಿಡೆಂಟ್ " ಪ್ರಜಾವಾಣಿ ದೀಪಾವಳಿ ವಿಶೇಷಾಂಕ

ವೈದೇಹಿ, ೧೯೯೮, ಪಥಿಕರು: ಲಂಕೇಶ ಪತ್ರಿಕೆ.

ವೈದೇಹಿ, ೧೯೯೮, "ಪಯಣದಲ್ಲಿನ ಹುಡುಗಿ" ಲಂಕೇಶ ಪತ್ರಿಕೆ

**ಆಕರ ಗ್ರಂಥ:**

ಅಶೋಕ, ಟಿ.ಪಿ. ೧೯೯೫, ವೈದೇಹಿಯವರ ಕತೆಗಳು, ಕನ್ನಡ ಸಂಘ ಮತ್ತು ತಾಲೂಕು ಕನ್ನಡ ಸಾಹಿತ್ಯ ಪರಿಷತ್ತು, ಕುಂದಾಪುರ ( ದ.ಕ.)

**ಆಕರ ಲೇಖನ :**

ಅಶೋಕ, ಟಿ.ಪಿ. ೧೯೯೩, "ಸಾಹಿತ್ಯ ಪ್ರಕಾರಗಳು : ಕಾದಂಬರಿ" ಕನ್ನಡ ವಾರ್ಷಿಕ ೧೯೯೨, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕಮಲಾಪುರ,

ಆಮೂರ ಜಿ.ಎಸ್., ೧೯೮೩, "ಹೊಸ ಅಲೆಯ ಹತ್ತು ಉತ್ತಮ ಕತೆಗಳು : ೧೯೮೩"

ಪ್ರಸ್ತಾವನೆ, ಆಯ್ದು ಸಣ್ಣಕತೆಗಳು, ಸಾತ್ವಿಕಪಥ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೯೫

ನಾರಾಯಣ, ಕೆ.ವಿ., ೧೯೯೨, ೧೯೯೧ರ ಸಾಂಸ್ಕೃತಿಕ ಅಭಿವ್ಯಕ್ತಿಗಳು : ಸಣ್ಣಕತೆ (ಕೆಲವನ್ನು ಕುರಿತು ಟಿಪ್ಪಣೆಗಳು) ಕನ್ನಡ ವಾರ್ಷಿಕ : ೧೯೯೧, ಕನ್ನಡ ವಿಶ್ವವಿದ್ಯಾಲಯ, ಹಂಪಿ , ಕಮಲಾಪುರ.

ಚಕ್ರವರ್ತಿ,, ಮನು, (ಸಂ) ೧೯೯೩, "ನಾಗರಿಕತೆಯ ಕ್ರೌರ್ಯದ ಸಂಕೇತವಾಗಿ ಹುಚ್ಚು : ವೈದೇಹಿಯವರ ಅಕ್ಕು", ಭಾರತೀಯ ಸ್ತ್ರೀವಾದ, ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ.

ಸುಮಿತ್ರಾ, ಎಲ್ .ಸಿ., ೧೯೯೭, "ಸ್ತ್ರೀ ವಿಶಿಷ್ಟ ಕಾಳಜಿಯ ವೈದೇಹಿಯವರ ಕತೆಗಳು"

ವಿಭಾವ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

ಸುಮಿತ್ರಾಬಾಯಿ, ಬಿ. ಎನ್ ., ೧೯೯೩, "ಕಾದಂಬರಿ", ಕನ್ನಡ ಸಾಹಿತ್ಯ ಸಮೀಕ್ಷೆ : ೧೯೯೨, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

**ಇ. ಶಿವರಾಮ ಕಾರಂತ**

**ಕಾದಂಬರಿ**

ಕಾರಂತ, ಶಿವರಾಮ (೧೯೩೭), ೧೯೯೭, ಸರಸಮ್ಮನ ಸಮಾಧಿ, ಎಸ್.ಬಿ.ಎಸ್. ಪಬ್ಲಿಶರ್ಸ್, ಬೆಂಗಳೂರು,

ಕಾರಂತ, ಶಿವರಾಮ (೧೯೬೦), ೧೯೯೩ , ಅಳಿದ ಮೇಲೆ, ಎಸ್.ಬಿ.ಎಸ್. ಪಬ್ಲಿಶರ್ಸ್, ಬೆಂಗಳೂರು,

ಕಾರಂತ, ಶಿವರಾಮ (೧೯೬೮), ೧೯೯೬, ಮೂಕಜ್ಜಿಯ ಕನಸುಗಳು, ಎಸ್.ಬಿ.ಎಸ್. ಪಬ್ಲಿಶರ್ಸ್, ಬೆಂಗಳೂರು.

ಕಾರಂತ, ಶಿವರಾಮ (೧೯೭೦) ೧೯೯೨, ಮೈಮನಗಳ ಸುಳಿಯಲ್ಲಿ, ಎಸ್.ಬಿ.ಎಸ್.ಪಬ್ಲಿಶರ್ಸ್, ಬೆಂಗಳೂರು.

**ಆಕರ ಗ್ರಂಥಗಳು :**

ಅನಂತ ನಾರಾಯಣ, ಎಸ್. ೧೯೪೮, ಕಾರಂತರ ಕಾದಂಬರಿಗಳು, ಉಷಾ ಸಾಹಿತ್ಯ ಮಾಲೆ, ಮೈಸೂರು.

ಅಶೋಕ, ಟಿ.ಪಿ., ೧೯೮೨, ಕಾರಂತರ ಕಾದಂಬರಿಗಳಲ್ಲಿ ಗಂಡು ಹೆಣ್ಣು, ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ.

ಅಶೋಕ. ಟಿ.ಪಿ. ೧೯೯೨, ಶಿವರಾಮ ಕಾರಂತ - ಎರಡು ಅಧ್ಯಯನಗಳು, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

ಅಶೋಕ, ಟಿ.ಪಿ.೧೯೯೩, (ಸಂ), ಶಿವರಾಮ ಕಾರಂತ, ಕನ್ನಡ ವಿಶ್ವವಿದ್ಯಾಲಯ. , ಹಂಪಿ.

ಅಶೋಕ, ಟಿ.ಪಿ.೧೯೮೪, ಕಾರಂತ ಮಂಥನ, ಕರ್ನಾಟಕ ಸಂಘ,ದ.ಕ

ಇನಾಂದಾರ, ವಿ.ಎಂ. (೧೯೭೮), ೧೯೮೨, ಶಿವರಾಮ ಕಾರಂತ ಬದುಕು ಬರಹ, ಉಷಾ ಸಾಹಿತ್ಯ ಮಾಲೆ, ಮೈಸೂರು.

ರವಿಕುಮಾರ (ಪ್ರ.ಸಂ). ೧೯೯೨, ಕಾದಂಬರಿ ಕಣ್ಣಲ್ಲಿ ಕಾರಂತರು, ಪ್ರತಿಭಾ ಯುವ ವೇದಿಕೆ, ಬೆಂಗಳೂರು.

ಶಿವರುದ್ರಪ್ಪ, ಜಿ.ಎಸ್ . (ಸಂ)೧೯೮೩, ಕಾದಂಬರಿಕಾರರಾಗಿ ಕಾರಂತ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಸೀತಾರಾಮಯ್ಯ, ವಿ.(ಸಂ) ಆಚಾರ್ಯ,ಪಾ.ವೆಂ.(ಸಂ)೧೯೯೩ ಜ್ಞಾನಪೀಠ ಪ್ರಶಸ್ತಿ ವಿಜೇತ ಕನ್ನಡಿಗರು:೨, ಎಂ.ಜಿ.ಎಂ.ಕಾಲೇಜು, ಉಡುಪಿ.

ಸುಮಿತ್ರಾಬಾಯಿ, ಬಿ. ಎನ್ ., ೧೯೯೭, ಅಂಗಳದೊಳಗಿನ ಕಡಲು, ಕರ್ನಾಟಕ ಸಂಘ, ಪ್ರತ್ತೂರು,ದ.ಕ

ಹರಿದಾಸ ಕು.ಶಿ., (ಪ್ರ.ಸಂ) ೧೯೬೯, ಕಾರಂತ ಪ್ರಪಂಚ, ಕಾರಂತ ಅಭಿನಂದನಾ ಸಮಿತಿ, ಉಡುಪಿ.

**ಪತ್ರಿಕೆಗಳು:**

ಶೂದ್ರ ಸಂಪುಟ ೭, ಸಂಚಿಕೆ, ೫-೬, ಶೂದ್ರ ಶ್ರೀನಿವಾಸ (ಸಂ) ಬೆಂಗಳೂರು.

ಸಾಕ್ಷಿ(೩೮) ಏಪ್ರಿಲ್ ೧೯೭೮ ವಸಂತ ಸಂಚಿಕೆ (ಶಿವರಾಮ ಕಾರಂತ ಕಾದಂಬರಿಗಳು ವಿಶೇಷ ಸಂಚಿಕೆ)

ರಾಮಚಂದ್ರದೇವ (ಸಂ) ಅಕ್ಷರ ಪ್ರಕಾಶನ, ಹೆಗ್ಗೋಡು.

ಸಾಧನೆ, ಸಂಪುಟ, ೭. ಸಂಚಿಕೆ ೩, ಜುಲೈ - ಸೆಪ್ಟೆಂಬರ್ ೧೯೭೮. ಶಿವರುದ್ರಪ್ಪ, ಜಿ.ಎಸ್. (ಸಂ) ಬೆಂಗಳೂರು

**ಆಕರ ಲೇಖನಗಳು:**

ಅಶೋಕ, ಟಿ.ಪಿ. ೧೯೮೬, "ಕಾರಂತರ ಕಾದಂಬರಿಗಳಲ್ಲಿ ಗಂಡು ಹೆಣ್ಣಿನ ಸಂಬಂಧ" ಸಾಹಿತ್ಯ ಸಂಪರ್ಕ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ ೧೯೮೬, ಪುಟ:೧೦-೧೯.

ಆಮೂರ, ಜಿ. ಎಸ್., ೧೯೯೪, "ಕಾರಂತರ ಕಾದಂಬರಿಗಳಲ್ಲಿ ಬದುಕುವ ಬಗೆಗಳ ಅನ್ವೇಷಣೆ" ಕನ್ನಡ ಕಥನ ಸಾಹಿತ್ಯ ಕಾದಂಬರಿ, ಶ್ರೀಹರಿ ಪ್ರಕಾಶನ ಧಾರವಾಡ. ಪುಟ. ೧೦೪-೧೬೯.

ಕುರ್ತುಕೋಟಿ, ಕೀರ್ತಿನಾಥ, ೧೯೮೨, "ಕಾರಂತರ ಕಾದಂಬರಿಗಳಲ್ಲಿ ಸಂವೇದನೆಯ ಬೆಳವಣಿಗೆ" ವಿಮರ್ಶೆಯ ವಿನಯ, ಕಾದಂಬರಿ, ಮನೋಹರ ಗ್ರಂಥಮಾಲೆ, ಧಾರವಾಡ. ಪುಟ:

ಗಾಯತ್ರಿ, ಎನ್ . ೧೯೯೩, "ನವೋದಯ ಸಾಹಿತ್ಯದಲ್ಲಿ ಸಂಸ್ಕೃತಿಯ ವಿಕಾಸ ಮತ್ತು ಸ್ತ್ರೀ" ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಸಾಹಿತ್ಯ ಅಕಾಡೆಮಿ, ಬೆಂಗಳೂರು. ಪುಟ:೧೧೨-೧೫೫.

ದೇಸಾಯಿ, ಶಾಂತಿನಾಥ, ೧೯೮೪, "ಶಿವರಾಮ ಕಾರಂತ ಮೂಕಜ್ಜಿಯ ಕನಸುಗಳು" ಕನ್ನಡ ಭಾರತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ಪುಟ:

ಧರಣೇಂದ್ರಯ್ಯ, ಎ. ಎನ್ : ೧೯, "ಮನೋವಿಜ್ಞಾನದ ನೆಲೆಯಲ್ಲಿ ಕಾರಂತರ ಕಾದಂಬರಿಗಳು", . ಕಾದಂಬರಿಕಾರರಾಗಿ ಕಾರಂತ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ಪುಟ : ೧೦೫-೧೨೫

ನಾಗರಾಜ, ಡಿ. ಅರ್ .,೧೯೮೩ ಕನ್ನಡ ಕಾದಂಬರಿ ಪರಂಪರೆ ಮತ್ತು ಕಾರಂತರು" ಕಾದಂಬರಿಕಾರರಾಗಿ ಕಾರಂತ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ನಾಯಕ್ . ಜಿ. ಎಚ್ . ೧೯೯೩, ಕಾರಂತರ ಕಾದಂಬರಿಗಳಲ್ಲಿ ಜೀವನ ಶ್ರದ್ಧೆ ಮತ್ತು ಶೋಧನೆ, ಕಾದಂಬರಿಕಾರರಾಗಿ ಕಾರಂತ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ಪುಟ :೧೬.

ನಾರಾಯಣ. ಕೆ.ವಿ. ೧೯೯೨, "ಮೂಕಜ್ಜಿಯ ಕನಸುಗಳು" ಕಾದಂಬರಿ ಕಣ್ಣಲ್ಲಿ ಕಾರಂತರು, ಪ್ರತಿಭಾ ಯುವ ವೇದಿಕೆ, ಬೆಂಗಳೂರು. ಪುಟ: ೧ - ೪

ನಾರಾಯಣ ಕೆ.ವಿ. ೧೯೮೩, "ಕಾರಂತರ ಕಾದಂಬರಿಗಳಲ್ಲಿ ಶಿಲ್ಪ: ಒಂದು ಸಮೀಕ್ಷೆ" ಕಾದಂಬರಿಕಾರರಾಗಿ ಕಾರಂತ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ಪುಟ:

ಪರಿಮಳಾ, ೧೯೯೨, "ಮೂಕಜ್ಜಿಯ ಕನಸುಗಳು - ಒಂದು ಮನೋವೈಜ್ಞಾನಿಕ ವಿಶ್ಲೇಷಣೆ" ಕಾದಂಬರಿಯ ಕಣ್ಣಲ್ಲಿ ಕಾರಂತರು, ಪ್ರತಿಭಾ ಯುವ ವೇದಿಕೆ, ಬೆಂಗಳೂರು. ಪುಟ:೫ - ೧೪.

ಪ್ರಿಯದರ್ಶಿನಿ, ಮಂಗಳಾ, ೧೯೯೨, "ಕಾರಂತರ ಚೋಮನದುಡಿ - ಒಂದು ಟಿಪ್ಪಣಿ" ಕಾದಂಬರಿ ಕಣ್ಣಲ್ಲಿ ಕಾರಂತರು, ಪ್ರತಿಭಾ ಯುವ ವೇದಿಕೆ, ಬೆಂಗಳೂರು. ಪುಟ:೪೭-೫೨.

ಭೈರಪ್ಪ ಎಸ್.ಎಲ್, ೧೯೮೩, "ಪ್ರಾಸ್ತಾವಿಕ", ಕಾದಂಬರಿಕಾರರಾಗಿ ಕಾರಂತರು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ರಾಮಚಂದ್ರದೇವ, ೧೯೯೨ "ಕಾರಂತರ ಕಾದಂಬರಿಗಳು", ಕಾದಂಬರಿ ಕಣ್ಣಲ್ಲಿ ಕಾರಂತರು, ಪ್ರತಿಭಾ ಯುವವೇದಿಕೆ, ಬೆಂಗಳೂರು.

ಪುಟ: ೧೪೯-೧೬೪.
ರಾಮಚಂದ್ರನ್ ಸಿ.ಎನ್., ೧೯೯೨, "ಮೈಮನಗಳ ಸುಳಿಯಲ್ಲಿ - ವಸ್ತು ಮತ್ತು ವಿನ್ಯಾಸ" ಪ್ರತಿಭಾ ಯುವವೇದಿಕೆ, ಕಾದಂಬರಿ ಕಣ್ಣಲ್ಲಿ ಕಾರಂತರು, ಬೆಂಗಳೂರು. ಪುಟ: ೫೩-೬೪.
ರಾಮಚಂದ್ರಪ್ಪ ಬರಗೂರು, ೧೯೮೩, "ಕಾರಂತರ ಕಾದಂಬರಿಗಳಲ್ಲಿ ಸಾಮಾಜಿಕ ನ್ಯಾಯ ಕಲ್ಪನೆ", ಕಾದಂಬರಿಕಾರರಾಗಿ ಕಾರಂತ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ಪುಟ:೪೮-೫೭.
ರಾವ್, ದಾಮೋದರ, ಬಿ., (೧೯೬೮) ೧೯೯೨, "ಸರಸಮ್ಮನ ಸಮಾಧಿ, ಒಂದು ಹಿನ್ನೋಟ" ಆಯಾಮಗಳು, ಪರಿಸರ ಸಾಹಿತ್ಯ ಪ್ರಕಾಶನ, ಬೆಂಗಳೂರು. ಪುಟ:೪೨-೪೯.
ಸುಮಿತ್ರಾ. ಎಲ್. ಸಿ., ೧೯೯೭, "ಸರಸಮ್ಮನ ಸಮಾಧಿ: ಒಂದು ಟಿಪ್ಪಣಿ," ವಿಭಾವ, ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ.
ಸುಮಿತ್ರಾಬಾಯಿ, ಬಿ. ಎನ್. ೧೯೯೫, "ಮೂಕಜ್ಜಿಯ ಕನಸುಗಳು ಮತ್ತು ಶಿವರಾಮ ಕಾರಂತರ ಮಾನವತಾವಾದ" ಆಯನ, ವಿದ್ಯಾವರ್ಧಕ ಸಂಘ, ಬೆಂಗಳೂರು.ಪುಟ ೧ - ೧೩.

## ಈ. ಭೈರಪ್ಪ ಎಸ್.ಎಲ್.

ಕಾದಂಬರಿ

ಭೈರಪ್ಪ ಎಸ್. ಎಲ್. ೧೯೬೫, **ವಂಶವೃಕ್ಷ**, ಸಾಹಿತ್ಯ ಭಂಡಾರ, ಬೆಂಗಳೂರು
ಭೈರಪ್ಪ ಎಸ್. ಎಲ್. ೧೯೭೦, **ಗೃಹಭಂಗ**, ಸಾಹಿತ್ಯ ಭಂಡಾರ, ಬೆಂಗಳೂರು.
ಭೈರಪ್ಪ ಎಸ್. ಎಲ್. ೧೯೯೦, **ಅಂಚು**, ಸಾಹಿತ್ಯ ಭಂಡಾರ, ಬೆಂಗಳೂರು.
ಭೈರಪ್ಪ ಎಸ್. ಎಲ್. ೧೯೯೩, **ತಂತು**, ಸಾಹಿತ್ಯ ಭಂಡಾರ, ಬೆಂಗಳೂರು.

**ಆಕರ ಗ್ರಂಥಗಳು:**

ಕುಲಕರ್ಣಿ, ಮಾಧವ (ಸಂ), ಗೋವಿಂದರಾವ್, ಮ. (ಸಂ), ೧೯೭೮, **ಸಹಸ್ಪಂದನ**, ಸಾಹಿತ್ಯ ಭಂಡಾರ, ಬೆಂಗಳೂರು
ತೋರಣಗಟ್ಟಿ ಲೀಲಾವತಿ, ೧೯೭೭, **ಭೈರಪ್ಪನವರ ಕಾದಂಬರಿಗಳು**, (ಅಪ್ರಕಟಿತ ಮಹಾಪ್ರಬಂಧ)
ತೋರಣಗಟ್ಟಿ ಲೀಲಾವತಿ, ೧೯೯೨, **ಭೈರಪ್ಪನವರ ಕಾದಂಬರಿಗಳ ಸ್ವರೂಪ**, ವಿದ್ಯಾನಿಧಿ ಪ್ರಕಾಶನ, ಗದಗ
ಭೈರಪ್ಪ ಎಸ್.ಎಲ್. ೧೯೮೯, **ನಾನೇಕೆ ಬರೆಯುತ್ತೇನೆ**, ಸಾಹಿತ್ಯ ಭಂಡಾರ, ಬೆಂಗಳೂರು.
ವೆಂಕಟೇಶ, ಕೊಂಡಜ್ಜಿ(ಸಂ) ೧೯೯೩, **ಭೈರಪ್ಪಭಿನಂದನ**, ಕೊಂಡಜ್ಜಿ ಪ್ರಕಾಶನ, ಬೆಂಗಳೂರು.

**ಆಕರ ಲೇಖನಗಳು :**

ಆಮೂರ, ಜಿ. ಎನ್, ೧೯೯೪ **ಭೈರಪ್ಪನವರ ಕಾದಂಬರಿಗಳಲ್ಲಿ ಕಲೆ ಹಾಗೂ ತತ್ವ**, ಕನ್ನಡ ಕಥನ ಸಾಹಿತ್ಯ: ಕಾದಂಬರಿ, ಶ್ರೀಹರಿ ಪ್ರಕಾಶನ, ಧಾರವಾಡ. ಪುಟ ೪೧೨:೪೩೪.
ಕಾಯ್ಕಿಣಿ, ಗೌರೀಶ, ೧೯೭೮, "**ಭೈರಪ್ಪನವರ ಕಾದಂಬರಿಗಳಲ್ಲಿ ಧರ್ಮ**", ಸಹ ಸ್ಪಂದನ, ಸಾಹಿತ್ಯಭಂಡಾರ, ಬೆಂಗಳೂರು ಪುಟ:೧-೪೨.
ಕುಲಕರ್ಣಿ, ಮಾಧವ, ೧೯೭೮, "**ಕನ್ನಡ ಕಾದಂಬರಿ ಪರಂಪರೆ ಹಾಗೂ ಗೃಹಭಂಗ**", ಸಹ ಸ್ಪಂದನ,ಸಾಹಿತ್ಯ ಭಂಡಾರ ಬೆಂಗಳೂರು. ಪುಟ ೩೪೩ - ೩೫೦.
ಕುರ್ತುಕೋಟಿ, ಕೀರ್ತಿನಾಥ, ೧೯೭೮, "**ವಂಶವೃಕ್ಷ**" ಸಹ ಸ್ಪಂದನ, ಸಾಹಿತ್ಯ ಭಂಡಾರ, ಬೆಂಗಳೂರು.ಪುಟ : ೨೦೯ -೨೧೨.
ಕುರ್ತುಕೋಟಿ ಕೀರ್ತಿನಾಥ, ೧೯೮೨, "**ಭೈರಪ್ಪನವರ ಕಾದಂಬರಿಗಳಲ್ಲಿ ಮೌಲ್ಯ ವಿಧಾನದ ಸಮಸ್ಯೆ**", ವಿಮರ್ಶೆಯ ವಿನಯ : ಕಾದಂಬರಿ, ಮನೋಹರ ಗ್ರಂಥ ಮಾಲೆ, ಧಾರವಾಡ.ಪುಟ:
ಗೋವಿಂದರಾಜ, ಗಿರಡಿ, ೧೯೮೭, "**ವಂಶವೃಕ್ಷ**" ಕಾದಂಬರಿ ವಸ್ತು ಮತ್ತು ತಂತ್ರ, ಸ್ನೇಹ ಪ್ರಕಾಶನ ಬೆಂಗಳೂರು.ಪುಟ:೧೧೦-೧೩೦.
ದೇಸಾಯಿ, ಶಾಂತಿನಾಥ ೧೯೭೮ **ವಂಶವೃಕ್ಷ ರಚನೆ ಶಿಲ್ಪ**, ಸಹಸ್ಪಂದನ, ಸಾಹಿತ್ಯ ಭಂಡಾರ, ಬೆಂಗಳೂರು, ಪುಟ ೨೧೩-೨೨೩.
ಪಾಟೀಲ್. ಟಿ.ಎಲ್.೧೯೭೮,**ಭೈರಪ್ಪನವರ ಕಾದಂಬರಿಗಳಲ್ಲಿ ವೈಚಾರಿಕತೆ**, ಸಹಸ್ಪಂದನ,ಸಾಹಿತ್ಯ ಭಂಡಾರ,ಬೆಂಗಳೂರು ಪುಟ೮೧-೧೧೦.
ಬಾಲಸುಬ್ರಮಣ್ಯಂ ನರಹಳ್ಳಿ, ೧೯೯೩, "**ಅಂಚು : ಒಂದು ವಿಶ್ಲೇಷಣೆ**", ಭೈರಪ್ಪಭಿನಂದನಾ, ಕೊಂಡಜ್ಜಿ ಪ್ರಕಾಶನ ಬೆಂಗಳೂರು. ಪುಟ : ೯೮-೧೦೦
ಮಣಿ ಪ್ರಕಾಶ ಜಿ. ೧೯೯೩, "**ಎಸ್.ಎಲ್. ಭೈರಪ್ಪನವರ - 'ಅಂಚು'** ", ಭೈರಪ್ಪಭಿನಂದನ ಕೊಂಡಜ್ಜಿ ಪ್ರಕಾಶನ ಬೆಂಗಳೂರು. ಪುಟ : ೧೩೭ -೧೩೯.

ರಾಧಾಕೃಷ್ಣ ಕೆ. ೧೯೯೩, "ಗೃಹ ಭಂಗ' ಒಂದು ಸಮೀಕ್ಷೆ" ಭೈರಪ್ಪಭಿನಂದನ, ಕೊಂಡಜ್ಜಿ ಪ್ರಕಾಶನ, ಬೆಂಗಳೂರು. ಪುಟ:೧೪ - ೧೫೪.

ರಾಮಚಂದ್ರನ್ ಸಿ.ಎನ್., ೧೯೯೩, "ಭೈರಪ್ಪನವರ ಅಂಚು ಸ್ತ್ರೀ ಪುರುಷ ಸಂಬಂಧ ಇತ್ಯಾದಿ", ಭೈರಪ್ಪಭಿನಂದನ ಕೊಂಡಜ್ಜಿ ಪ್ರಕಾಶನ್ಯ ಬೆಂಗಳೂರು. ಪುಟ : ೧೦೯ -೧೧೩.

ರಾಮದಾಸ (೧೯೭೪), ೧೯೭೮, "ಗೃಹಭಂಗದೊಳಗಿನ ದುರಂತ", ಸಹಸ್ಪಂದನ, ಸಾಹಿತ್ಯ ಭಂಡಾರ,ಬೆಂಗಳೂರು.ಪುಟ:೩೫೧-೩೫೯.

ಲಲಿತಾ, ಯು. ಆರ್. ೧೯೭೮, ಭೈರಪ್ಪನವರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು, ಸಹಸ್ಪಂಧನ, ಸಾಹಿತ್ಯ ಭಂಡಾರ, ಬೆಂಗಳೂರು ಪುಟ: ೧೧೧-೧೩೦.

## ಎರಡು

**ಆಕರ ಗ್ರಂಥಗಳು:**

ಕಾದಂಬರಿ:

ಅಬೂಬಕರ, ಸಾರ, ೧೯೮೪, **ಚಂದ್ರಗಿರಿಯ ತೀರದಲ್ಲಿ**, ಪತ್ರಿಕೆ ಪ್ರಕಾಶನ, ಬೆಂಗಳೂರು.

ಇಂದಿರಾ, ಎಂ.ಕೆ., ೧೯೮೪, **ಫಣಿಯಮ್ಮ**, ಹೇಮಂತ ಸಾಹಿತ್ಯ, ಬೆಂಗಳೂರು.

ಇನಾಂದಾರ, ವಿ. ಎಂ. (೧೯೪೯), ೧೯೯೧, **ಶಾಪ**, ಗೀತಾ ಬುಕ್ ಹೌಸ್, ಮೈಸೂರು.

ಇನಾಂದಾರ, ವಿ. ಎಂ. (೧೯೫೨) ೧೯೯೩, **ಸ್ವರ್ಗದ ಬಾಗಿಲು**, ಗೀತಾ ಬುಕ್ ಹೌಸ್, ಮೈಸೂರು

ಇನಾಂದಾರ, ವಿ. ಎಂ. ೧೯೯೩ **ಮೋಹಿನಿ** (೪ ಭಾಗಗಳ ಸಂಯುಕ್ತ ಸಂಪುಟ) ಗೀತಾ ಬುಕ್ ಹೌಸ್, ಮೈಸೂರು

ಕುವೆಂಪು (೧೯೩೬), ೧೯೯೨, **ಕಾನೂರು ಹೆಗ್ಗಡಿತಿ**, ಉದಯರವಿ ಪ್ರಕಾಶನ, ಮೈಸೂರು.

ಚದುರಂಗ (೧೯೫೦) ೧೯೭೫, **ಸರ್ವಮಂಗಳಾ**, ನವ್ಹಾಲೆ ಪ್ರಕಾಶನ, ಮೈಸೂರು.

ಚದುರಂಗ (೧೯೬೦) ೧೯೭೬, **ಉಯ್ಯಾಲೆ**, ನವ್ಹಾಲೆ ಪ್ರಕಾಶನ, ಮೈಸೂರು.

ಚದುರಂಗ (೧೯೮೧) ೧೯೯೩, **ವೈಶಾಖ**, ನವ್ಹಾಲೆ ಪ್ರಕಾಶನ, ಮೈಸೂರು.

ನಿರಂಜನ, **ಪಾಲಿಗೆ ಬಂದ ಪಂಚಾಮೃತ**(೧೯೫೫), **ಏಕಾಂಗಿನಿ** (೧೯೫೫) - ಕನಸು ಸಂಪುಟ ೫, ಐಬಿಎಚ್ ಪ್ರಕಾಶನ ಬೆಂಗಳೂರು.

ನಿರಂಜನ, ಅನುಪಮಾ(೧೯೭೬) ೧೯೯೨, **ಮಾಧವಿ**, ಡಿ. ವಿ. ಕೆ. ಮೂರ್ತಿ, ಮೈಸೂರು.

ನಿರಂಜನ, ಅನುಪಮಾ ೧೯೮೫ **ಘೋಷ**, ಡಿ. ವಿ. ಕೆ. ಮೂರ್ತಿ, ಮೈಸೂರು.

ನಿರಂಜನ, ಅನುಪಮಾ ೧೯೮೯, **ಆಳ**, ಡಿ. ವಿ. ಕೆ. ಮೂರ್ತಿ, ಮೈಸೂರು.

ನಿರಂಜನ, ಅನುಪಮಾ, ೧೯೮೧, **ಕೊಳಚೆ ಕೊಂಪೆಯ ದಾನಿಗಳು**, ಡಿ. ವಿ. ಕೆ. ಮೂರ್ತಿ, ಮೈಸೂರು.

ಪುಣೇಕರ್, ಶಂಕರ ಮಾಕಾಶಿ, ೧೯೭೧, **ಗಂಗವ್ವ ಗಂಗಾಮಾಯಿ**, ಸುರುಚಿ ಪ್ರಕಾಶನ, ಮೈಸೂರು.

ಪ್ರಭಾವತಿ ಎನ್. ವಿ. ೧೯೯೬, **ದ್ರೌಪದಿ**, ನವಕರ್ನಾಟಕ ಪ್ರಕಾಶನ, ಬೆಂಗಳೂರು.

ಪ್ರಭಾವತಿ ಎನ್. ವಿ. ೧೯೯೭, **ಕುಂತಿ**, ನವಕರ್ನಾಟಕ ಪ್ರಕಾಶನ, ಬೆಂಗಳೂರು.

ಬಲ್ಲಾಳ, ವ್ಯಾಸರಾಯ, ೧೯೮೮, **ವಾತ್ಸಲ್ಯಪಥ**, ಗೀತಾ ಬುಕ್ ಹೌಸ್, ಮೈಸೂರು.

ಬಲ್ಲಾಳ, ವ್ಯಾಸರಾಯ, ೧೯೮೯, **ಅನುರಕ್ತೆ**, ಗೀತಾ ಬುಕ್ ಹೌಸ್, ಮೈಸೂರು.

ಬಲ್ಲಾಳ, ವ್ಯಾಸರಾಯ, ೧೯೯೦, **ಹೇಮಂತ ಗಾನ**, ಗೀತಾ ಬುಕ್ ಹೌಸ್, ಮೈಸೂರು.

ಬಲ್ಲಾಳ, ವ್ಯಾಸರಾಯ, ೧೯೯೦, **ಉತ್ತರಾಯಣ**, ಗೀತಾ ಬುಕ್ ಹೌಸ್, ಮೈಸೂರು.

ಬಲ್ಲಾಳ, ವ್ಯಾಸರಾಯ, ೧೯೯೧, **ಬಂಡಾಯ**, ಗೀತಾ ಬುಕ್ ಹೌಸ್, ಮೈಸೂರು.

ಬೊಳಾರ, ಬಾಬೂರಾಯ, (೧೯೦೫) ೧೯೮೫, **ವಾಗ್ದೇವಿ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ರಾವ್ ಬಹದ್ದೂರ್ , ೧೯೫೭, **ಗ್ರಾಮಾಯಣ**, ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ.

ವಾಸುದೇವಾಚಾರ್ಯ, ಕೆರೂರು, (೧೯೦೮) ೧೯೭೮, **ಇಂದಿರಾ**, ಉಷಾ ಸಾಹಿತ್ಯ ಮಾಲೇ ಮೈಸೂರು.

ವೆಂಕಟಗಿರಿರಾವ್ ದೊಡ್ಡೇರಿ, ೧೯೯೧, **ರತ್ನಿಯ ಮಗಳು**, ಗೀತಾ ಬುಕ್ ಹೌಸ್, ಮೈಸೂರು.

ವೆಂಕಟರಾಯ, ಗುಲವಾಡಿ (೧೮೯೯) ೧೯೮೫, **ಇಂದಿರಾ ಬಾಯಿ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ಶಾಂತೇಶ್ವರ ವೀಣಾ ೧೯೮೪, **ಶೋಷಣೆ, ಬಂಡಾಯ, ಇತ್ಯಾದಿ**, ಸುಂದರ ಪುಸ್ತಕ ಪ್ರಕಾಶನ, ಧಾರವಾಡ.

ಸತ್ಯನಾರಾಯಣ ಕೆ. ೧೯೯೨, **ಗೌರಿ**, ಅಪರ್ಣ ಪ್ರಕಾಶನ, ಬೆಂಗಳೂರು.

**ಕಥಾಸಂಕಲನ :**

ಅನಂತ ಮೂರ್ತಿ, ಯು. ಆರ್. (ಸಂ), ರಾಜ, ಗೋಪಾಲ, ಕ. ವೆಂ . (ಸಂ) (೧೯೮೭),೧೯೮೯, **ದಶವಾರ್ಷಿಕ ಸಣ್ಣಕತೆಗಳು :**

೧೯೭೪ -೧೯೮೩ **(ಆಯ್ದು ಕತೆಗಳು)** ಕರ್ನಾಟಕ ಸಾಹಿತ್ಯ ಅಕಾಡೆಮಿ,ಬೆಂಗಳೂರು.
ಕಮಲಮ್ಮ (ಸಂ), ೧೯೯೦, **ಬೆಳ್ಳಬಾಗಿನ**, ಕನ್ನಡ ಸಂಘ, ಜ್ಯೋತಿನಿವಾಸ ಕಾಲೇಜು, ಬೆಂಗಳೂರು.
ಗಿರಿಜಮ್ಮ, ಎಚ್, ೧೯೯೪, **ಆಯ್ದು ಕತೆಗಳು**, ಭಾಸ್ಕರ ಪ್ರಕಾಶನ, ಬೆಂಗಳೂರು.
ಗೌರಮ್ಮ, ಕೊಡಗಿನ, ೧೯೮೫, **ಕಂಬನಿ ಮತ್ತು ಚಿಗುರು**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.
ಚಿತ್ತಾಲ, ಯಶವಂತ, ೧೯೮೩, **ಚಿತ್ತಾಲಯ ಕತೆಗಳು** (ಸಮಗ್ರ), ಪ್ರಜಾಪ್ರಿಂಟರ್ಸ್, ಬೆಂಗಳೂರು.
ದಿವಾಕರ, ಎಸ್, (ಸಂ), ೧೯೯೭, **ಶತಮಾನದ ಸಣ್ಣಕತೆಗಳು**, ಪ್ರಿಸಂ ಬುಕ್ಸ್ ಫೈಲ್, ಬೆಂಗಳೂರು.
ನಾಯಕ, ಜಿ. ಎಚ್. (ಸಂ), (೧೯೭೮) ೧೯೯೧, **ಕನ್ನಡ ಸಣ್ಣಕತೆಗಳು**, ನ್ಯಾಶನಲ್ ಬುಕ್ ಟ್ರಸ್ಟ ಇಂಡಿಯಾ ನವದೆಹಲಿ.
ನಿರಂಜನ (ಪ್ರ.ಸಂ), ೧೯೮೦, **ಧರಣಿ ಮಂಡಳ ಮಧ್ಯದೊಳಗೆ**, ನವಕರ್ನಾಟಕ ಪ್ರಕಾಶನ, ಬೆಂಗಳೂರು.
ನೀರಮಾನ್ವಿ, ರಾಜಶೇಖರ (ಸಂ), **೧೯೯೦, ಸಣ್ಣಕತೆ : ೧೯೮೮,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
ನೇಮಿಚಂದ್ರ, ೧೯೮೫, **ನಮ್ಮ ಕನಸುಗಳಲ್ಲಿ** ನೀವಿದ್ದೀರಿ, ಐಬಿ.ಎಚ್., ಪ್ರಕಾಶನ ಬೆಂಗಳೂರು.
ನೇಮಿಚಂದ್ರ, ೧೯೯೨, **ಮತ್ತೆ** ಬರೆದ **ಕತೆಗಳು**, ಶ್ರೀ ಪ್ರಕಾಶನ, ಬೆಂಗಳೂರು.
ಪಟ್ಟಣಶೆಟ್ಟಿ, ಹೇಮಾ (ಸಂ), ೧೯೯೪, **ಸಣ್ಣ ಕತೆ : ೧೯೯೨,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
ಪಾರ್ವತಿ, ಎಚ್.ಎಸ್. (ಸಂ) ೧೯೮೯, **ಲೇಖಕಿಯರ ಸಣ್ಣಕತೆಗಳು**, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.
ಮಹಾದೇವ, ದೇವನೂರ, ೧೯೯೭, **ದೇವನೂರ ಮಹಾದೇವ ಅವರ ಕೃತಿಗಳು** (ಸಮಗ್ರ) ಪತ್ರಿಕೆ ಪ್ರಕಾಶನ, ಬೆಂಗಳೂರು.
ರಂಗನಾಥ, ಮಾವಿನಕೆರೆ (ಸಂ), ೧೯೯೨, **ಕಥಾಗುಚ್ಛ**, ಡಾ.ಮಾಸ್ತಿ ಶತಮಾನೋತ್ಸವ ಸಮಿತಿ, ಬೆಂಗಳೂರು.
ರಶೀದ್, ಅಬ್ದುಲ್, (ಸಂ), ೧೯೯೬, **ಸಣ್ಣಕತೆ:೧೯೯೫,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
ರಾವ್, ರಾಜಲಕ್ಷ್ಮಿ, ಎನ್., ೧೯೮೫, **ಸಂಗಮ**, ಕನ್ನಡ, ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.
ವೀರಭದ್ರಪ್ಪ, ಕುಂ., (ಸಂ), ೧೯೯೦, **ಸಣ್ಣಕತೆ : ೧೯೮೯,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
ವೆಂಕಟರಾವ್, ಮಿತ್ರಾ, ೧೯೯೭, **ಹಕ್ಕಿ ಮತ್ತು ಅವಳು**, ಸಾಹಿತ್ಯ ಪ್ರಕಾಶನ, ಮುಂಬೈ.
ಶಾಂತೇಶ್ವರ, ವೀಣಾ, ೧೯೬೮, **ಮುಳ್ಳುಗಳು**, ಸಂಕ್ರಮಣ ಪ್ರಕಾಶನ, ಧಾರವಾಡ.
ಶಾಂತೇಶ್ವರ, ವೀಣಾ, ೧೯೭೬, **ಕವಲು**, ನಿರ್ಮಾಣ ಪ್ರಕಾಶನ, ಧಾರವಾಡ.
ಶಾಂತೇಶ್ವರ, ವೀಣಾ, ೧೯೮೪, **ಹಸಿವು**, ಚಂದ್ರನಾಥ ಪ್ರಕಾಶನ, ಧಾರವಾಡ.
ಶಾಂತೇಶ್ವರ, ವೀಣಾ (ಸಂ), ೧೯೮೫, *ಲೇಖಕಿಯರ ಕತಾಸಂಕಲನ,* ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.
ಸಾವಿತ್ರಮ್ಮ, ಎಚ್ . ವಿ., (೧೯೬೫), ೧೯೫೫, **ಸರಿದ ಬೆರಳು**, ಕಾವ್ಯಾಲಯ, ಮೈಸೂರು.
ಸಾವಿತ್ರಮ್ಮ, ಎಚ್ . ವಿ. ೧೯೬೭, **ಮರುಮದುವೆ**, ಕಾವ್ಯಾಲಯ, ಮೈಸೂರು.
ಹಂದಾಳ, ಕೇಶವರೆಡ್ಡಿ, (ಸಂ) ೧೯೯೨, **ಸಣ್ಣಕತೆ : ೧೯೯೧,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

**ವಿಮರ್ಶೆ:**

ಅಶೋಕ, ಟಿ.ಪಿ. ೧೯೯೧, **ಸಾಹಿತ್ಯ ಸಂಪರ್ಕ**, ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ.
ಆಮೂರ, ಜಿ. ಎಸ್. ೧೯೯೪, **ಕನ್ನಡ ಕಥನ ಸಾಹಿತ್ಯ** : ಕಾದಂಬರಿ, ಶ್ರೀಹರಿ, ಪ್ರಕಾಶನ, ಧಾರವಾಡ.
ಕುರ್ತಕೋಟಿ, ಕೀರ್ತಿನಾಥ, ೧೯೮೨, **ವಿಮರ್ಶೆಯ ವಿನಯ** : ಕಾದಂಬರಿ, ಮನೋಹರ ಗ್ರಂಥಮಾಲಾ, ಧಾರವಾಡ.
ಕುರ್ತಕೋಟಿ, ಕೀರ್ತಿನಾಥ, ೧೯೯೮, **ನೂರುಮರ, ನೂರುಸ್ವರ**, ಕನ್ನಡ ವಿಶ್ವವಿದ್ಯಾಲಯ, ಹಂಪಿ.
ಗೋವಿಂದರಾಜ, ಗಿರಡ್ಡಿ, ೧೯೮೭, **ಕಾದಂಬರಿ: ವಸ್ತು ಮತ್ತು ತಂತ್ರ**, ಸ್ನೇಹ ಪ್ರಕಾಶನ, ಬೆಂಗಳೂರು.
ಗೋವಿಂದರಾಜ, ಗಿರಡ್ಡಿ, ೧೯೯೨, **ಸಾತತ್ಯ**, ಸ್ನೇಹ ಪ್ರಕಾಶನ, ಬೆಂಗಳೂರು.
ದೇಸಾಯಿ, ಶಾಂತಿನಾಥ, ೧೯೮೯, **ಕನ್ನಡ ಕಾದಂಬರಿ ನಡೆದು ಬಂದ ದಾರಿ**, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.
ದೇಸಯಿ, ಶಾಂತಿನಾಥ, ೧೯೯೦, **ನವ್ಯಸಾಹಿತ್ಯ ದರ್ಶನ**, ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗಾ.
ನಾಯಕ, ಜಿ. ಎಚ್ ., ೧೯೮೦, **ಅನಿವಾರ್ಯ**, ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ.
ನಾಯಕ, ಹಾ.ಮಾ. ೧೯೬೯, **ಸಂಚಯ**, ಶಾರದಾ ಮಂದಿರ, ಮೈಸೂರು.
ನಿರಂಜನ, ೧೯೮೮, ಪ್ರತಿಧ್ವನಿ - **ನಿರಂಜನ ವಾಚಿಕ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
ಪಾರ್ವತಿ, ಎಚ್.ಎಸ್. ೧೯೮೧, ಓದಿನಾ ಬಳಗು, ಮನಸೋಲ್ಲಾಸ ಪ್ರಕಾಶನ, ಬೆಂಗಳೂರು.
ಪಾರ್ವತಿ, ಎಚ್.ಎಸ್. ೧೯೮೪, **ಚಿಂತನ ಮಂಥನ**, ಮನಸೋಲ್ಲಾಸ ಪ್ರಕಾಶನ, ಬೆಂಗಳೂರು.
ಭಟ್ಟ, ಕು. ಶಿ.,(ಸಂ), ೧೯೮೮, ಬಲ್ಲಾಳರ **ಕಾದಂಬರಿಗಳು**, ಕೆಲವು ಅಧ್ಯಯನಗಳು, ಗೀತಾ ಬುಕ್ ಹೌಸ, ಮೈಸೂರು.
ಮಾಲಗತ್ತಿ, ಅರವಿಂದ, ೧೯೯೭, **ದಲಿತ ಸಾಹಿತ್ಯ ಪ್ರವೇಶಿಕೆ**, ಶೈಲಪ್ರಕಾಶನ, ಮುದ್ದೇಬೀಹಾಳ.

ಮುಕ್ತಾಯಕ್ಕ, ಎಚ್. ಎಸ್. ೧೯೯೭. **ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ**, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.
ಮೊಕಾಶಿ, ಶಂಕರ, ಪುಣೇಕರ (ಸಂ), ಸಿ.ಪಿ.ಕೆ.(ಸಂ), ೧೯೮೩, **ಕನ್ನಡ ವಿಮರ್ಶೆ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.
ರಘುನಾಥ, ಶಾಲಿನಿ, ೧೯೯೪, **ಸಮನ್ವಿತ**, ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ.
ರಾವ್, ದಾಮೋದರ, ೧೯೯೨, **ಆಯಾಮಗಳು**, ಪರಿಸರ ಸಾಹಿತ್ಯ ಪ್ರಕಾಶನ, ಬೆಂಗಳೂರು.
ರಾವ್, ರಾಘವೇಂದ್ರ, ಎಚ್.ಎಸ್. ೧೯೮೯, **ನಿಲುವು**, ಕ್ರೈಸ್ಟ್ ಕಾಲೇಜು, ಬೆಂಗಳೂರು.
ರಾಮಚಂದ್ರಪ್ಪ, ಬರಗೂರು (ಸಂ) ೧೯೯೩, **ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
ರಾಮಚಂದ್ರಪ್ಪ, ಬರಗೂರು (ಪ್ರ.ಸಂ) ೧೯೯೩, **ಕನ್ನಡ ಸಾಹಿತ್ಯದಲ್ಲಿ ಮನುಷ್ಯನ ಪರಿಕಲ್ಪನೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
ಶಿವರುದ್ರಪ್ಪ ಜಿ.ಎಸ್. (ಸಂ) (೧೯೭೧) ೧೯೮೧, **ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯ**, ಬೆಂಗಳೂರು. ವಿ.ವಿ. ಬೆಂಗಳೂರು.
ಶಿವರುದ್ರಪ್ಪ, ಜಿ.ಎಸ್. (ಸಂ) ೧೯೮೯, **ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
ಶಿವರುದ್ರಪ್ಪ, ಜಿ.ಎಸ್., (ಸಂ) ೧೯೯೦, **ಕನ್ನಡ ಸಾಹಿತ್ಯ ಸಂದರ್ಭ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
ಶೇಷಗಿರಿ ರಾವ್. ಎಲ್.ಎಸ್. (ಸಂ), ೧೯೮೪, **ಕನ್ನಡ ಭಾರತಿ**, ಕನ್ನಡ ಸಾಹಿತ್ಯ ಅಕಾಡೆಮಿ ಬೆಂಗಳೂರು.
ಸಬರದ, ಬಸವರಾಜ, ೧೯೯೪, **ಸಾಹಿತ್ಯ ಸಂಗಾತಿ**, ಪಲ್ಲವಿ ಪ್ರಕಾಶನ, ಗುಲಬರ್ಗಾ.
ಸುಮಿತ್ರಾ, ಎಲ್.ಸಿ. ೧೯೯೭, **ವಿಭಾವ**, ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ.
ಸುಮಿತ್ರಾಬಾಯಿ, ಬಿ.ಎನ್., ೧೯೮೬, **ಸಾರ್ವತ್ರಿಕದೆಡೆಗೆ**, ಮಾನವ ಪ್ರಕಾಶನ, ಹಾಸನ.
ಸುಮಿತ್ತಾಬಾಯಿ, ಬಿ. ಎನ್., ೧೯೯೫, **ವಿಚಯ**, ಇಳಾಪ್ರಕಾಶನ, ಬೆಂಗಳೂರು.
ಸುಮಿತ್ರಾಬಾಯಿ. ಬಿ.ಎನ್., ೧೯೮೫, **ಆಯನ**, ವಿದ್ಯಾವರ್ಧಕ ಸಂಘ, ಮಹಿಳಾ ಪ್ರಥಮ ದರ್ಜೆ ಕಾಲೇಜು, ಬೆಂಗಳೂರು.
ಹಿರೇಮಠ, ಉಜ್ವಲಾ, (ಸಂ) ೧೯೯೪, **ಲೇಖಕಿಯರ ಕೃತಿಗಳಲ್ಲಿ ಸ್ತ್ರೀ ಪಾತ್ರಗಳು**, ಗುಲಬರ್ಗಾ, ವಿಶ್ವವಿದ್ಯಾಲಯ, ಗುಲಬರ್ಗಾ.

### ಸಂಶೋಧನೆ

ಎಲಿಗಾರ, ಚೆನ್ನಕ್ಕ, ೧೯೯೦, **ಶಾಸನಗಳಲ್ಲಿ ಸ್ತ್ರೀ ಸಮಾಜ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
ಗಂಟಿ, ಮಲ್ಲಿಕಾ, ೧೯೯೪, **ಕನ್ನಡದಲ್ಲಿ ಮಹಿಳಾ ಕಥಾಸಾಹಿತ್ಯ**, ಯುವಲೋಕ ಪ್ರಕಾಶನ, ಧಾರವಾಡ.
ತವಗ, ಮಂದಾಕಿನಿ, ೧೯೯೫ , **ಕನ್ನಡ ಮಹಾಕಾವ್ಯಗಳಲ್ಲಿ ಸೀತೆಯ ಪಾತ್ರ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
ತೋರಣಗಟ್ಟಿ, ಲೀಲಾವತಿ, ೧೯೭೭, **ಭೈರಪ್ಪನವರ ಕಾದಂಬರಿಗಳು**, ಸಿರಿಗನ್ನಡ ಪ್ರಕಾಶನ, ಧಾರವಾಡ.
ಪ್ರಭಾವತಿ, ಎಸ್. ವಿ. ೧೯೯೨, **ಕನ್ನಡ ಸಾಹಿತ್ಯದಲ್ಲಿ ದ್ರೌಪದಿ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
ಪ್ರಭಾವತಿ, ಎಸ್. ವಿ. ೧೯೯೬, **ಪ್ರಾಚೀನ ಕನ್ನಡ ಕೃತಿಗಳಲ್ಲಿ ದ್ರೌಪದಿಯ ಚಿತ್ರಣ**, ಅಪರ್ಣಾ ಪ್ರಕಾಶನ, ಬೆಂಗಳೂರು.
ಪುರೋಹಿತ, ಮಂದಾಕಿನಿ, ೧೯೯೧, ಎಂ. ಕೆ. ಇಂದಿರಾ. **ಸಮಗ್ರ ಅಧ್ಯಯನ**, ಹೇಮಂತ ಪ್ರಕಾಶನ, ಬೆಂಗಳೂರು.
ಮಣಿಮಾಲಿನಿ, ೧೯೯೭, **ದ್ರೌಪದೀ ಸಮೀಕ್ಷೆ**, ಮುಂಬೈ ವಿಶ್ವವಿದ್ಯಾಲಯ, ಮುಂಬೈ.
ಮಹಿಷಿ, ಸರೋಜಿನಿ, ೧೯೬೫, **ಕರ್ನಾಟಕದ ಕವಯತ್ರಿಯರು**, ಕನ್ನಡ ಸಾಹಿತ್ಯ ಸಂಘ, ಧಾರವಾಡ.
ವೆಂಕಾರೆಡ್ಡಿ, ಮಧು, ೧೯೯೫, **ಹೊನ್ನಮ್ಮನ ಹದಿಬದೆಯ ಧರ್ಮ - ಒಂದು ಅಧ್ಯಯನ**,ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
ಸಬರದ, ವಿಜಯಶ್ರೀ, ೧೯೯೪, **ಅನುಪಮಾ ನಿರಂಜನ ಅವರ ಕಾದಂಬರಿಗಳು - ಒಂದು ಸಾಹಿತ್ಯಿಕ್ಕ ಅಧ್ಯಯನ**, ಡಿ.ವಿ.ಕೆ. ಮೂರ್ತಿ ಮೈಸೂರು.
ಸವದತ್ತಿಮಠ, ಸಂಗಮೇಶ, ೧೯೯೫, **ಸಾಹಿತ್ಯ ಸಂಶೋಧನಾ ಮಾರ್ಗ**, ರೂಪದರ್ಶಿ ಪ್ರಕಾಶನ, ಕಲಬುರ್ಗಿ.

### ಅಭಿನಂದನ ಗ್ರಂಥ

ಈಶ್ವರಭಟ, ಬೋಳಂತಕೋಡಿ (ಸಂ), ೧೯೮೮, **ಅನುಪಮಾಭಿನಂದನ** - ಅನುಪಮಾ ನಿರಂಜನ ಅಭಿನಂದನ ಗ್ರಂಥ, ಕರ್ನಾಟಕ ಸಂಘ, ಪುತ್ತೂರು. (ದ.ಕ.)
ಈಶ್ವರ ಭಟ, ಬೋಳಂತಕೋಡಿ (ಸಂ) ೧೯೮೬, ನಿರಂಜನಾಭಿನಂದನ - ನಿರಂಜನ ಅಭಿನಂದನ ಗ್ರಂಥ, ಕರ್ನಾಟಕ ಸಂಘ, ಪುತ್ತೂರು (ದ.ಕ)
ಕೃಷ್ಣರಾಯ, ಶಾ, ಮುಂ.,(ಸಂ) ೧೯೮೨, **ತ. ರಾ. ಸು. ಅಭಿನಂದನ**, ವಿಶ್ವಭಾರತಿ ಪ್ರಕಾಶನ ಮಡಗಾಂವ್ .

ದೇ. ಜೆ.ಗೌ(ಸಂ), ಸಿ.ಪಿ.ಕೆ.(ಸಂ), ೧೯೭೬, **ಕಟ್ಟಿಮನಿ**, ಅಭಿನಂದನ, ಬಸವರಾಜ ಕಟ್ಟಿಮನಿ, ಅಭಿನಂದನಾ ಗ್ರಂಥ, ಗೀತಾ ಬುಕ್ ಹೌಸ್, ಮೈಸೂರು.

ಪಾರ್ವತಿ, ಎಚ್.ಎಸ್. (ಸಂ), ೧೯೭೨, **ಭಾರತಿ**, ತಿರುಮಲೆ ರಾಜಮ್ಮ, ಅಭಿನಂದನಾ ಗ್ರಂಥ, ತಿರುಮಲೆ, ರಾಜಮ್ಮ, ಸನ್ಮಾನ ಸಮಿತಿ, ಬೆಂಗಳೂರು.

ಪಾರ್ವತಿ, ಎಚ್.ಎಸ್. (ಸಂ) ೧೯೯೧, **ಸುರಗಿ - ಶ್ರೀಮತಿ**, ಎಂ. ಕೆ. ಇಂದಿರಾ ಅಭೀನಂದನಾ ಗ್ರಂಥ ಕರ್ನಾಟಕ ಲೇಖಕಿಯರ ಸಂಘದ ಪರವಾಗಿ ಇಳಾ ಪ್ರಕಾಶನ, ಬೆಂಗಳೂರು.

ರಂಗನಾಥ, ಮಾವಿನಕೆರೆ (ಸಂ) ೧೯೭೨, **ಶ್ರೀನಿವಾಸ**, ಮಾಸ್ತಿ ವೆಂಕಟೇಶ ಅಯ್ಯಾಂಗಾರ ಅಭಿನಂದನಾ ಗ್ರಂಥ, ಡಾ.ಮಾಸ್ತಿ ಶತಮಾನೋತ್ಸವ ಸಮಿತಿ, ಬೆಂಗಳೂರು.

ರಾಜ, ಗೋಪಾಲಾಚಾರ್ಯ, ಎಂ. (ಸಂ), ೧೯೮೪, **ನವನೀತ**, ಪ್ರೊ. ವಿ.ಎಂ. ಇನಾಂದಾರ ಅಭಿನಂದನ ಗ್ರಂಥ, ಗೀತಾ ಬುಕ್ ಹೌಸ್, ಮೈಸೂರು.

ವೆಂಕಟೇಶ, ಜಿ. ಕೊಂಡಜ್ಜಿ, (ಸಂ) ೧೯೮೩, **ಭೈರಪ್ಪಾಭಿನಂದನ**, ಡಾ. ಎಸ್.ಎಲ್. ಭೈರಪ್ಪ ಅಭಿನಂದನ ಗ್ರಂಥ, ಕೊಂಡಜ್ಜಿ ಪ್ರಕಾಶನ, ಬೆಂಗಳೂರು.

ಶಂಕರ, ಡಿ. ಎ. (ಸಂ) ೧೯೮೯ **ವ್ಯಕ್ತಿ - ಅಭಿವ್ಯಕ್ತಿ**, ಚದುರಂಗ ಅಭಿನಂದನ ಗ್ರಂಥ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

**ಬದುಕು - ಬರಹ :**

ದಬ್ಬೆ, ವಿಜಯ (ಸಂ), ೧೯೮೯, **ಶ್ಯಾಮಲಾ ಸಂಚಯ**, ಶ್ಯಾಮಲಾದೇವಿ ಬೆಳಗಾಂವ್‌ಕರ ಬದುಕು ಬರಹ, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.

ದಬ್ಬೆ, ವಿಜಯ, (ಸಂ), ೧೯೯೨, **ಹಿತೈಷಿಣಿಯ ಹೆಜ್ಜೆಗಳು**, ನಂಜನಗೂಡು ತಿರುಮಲಾಂಬ ಬದುಕು ಬರಹ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ದಬ್ಬೆ, ವಿಜಯ, (ಸಂ) ೧೯೯೬, **ಸಾರಸರಸ್ವತಿ**, ಸರಸ್ವತಿಗೌಡರ ಬದುಕುಬರಹ, ಮಹಿಳಾ ಸಾಹಿತ್ಯಿಕಾ, ಹುಬ್ಬಳ್ಳಿ.

ದಬ್ಬೆ, ವಿಜಯ, (ಸಂ) ೧೯೯೮, **ಅನುಪಮಾ ನಿರಂಜನ ಬದಕು**, ಬರಹ, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.

ನೇಮಿಚಂದ್ರ, (ಸಂ) ೧೯೯ , **ಬೆಳಗೆರೆ ಜಾನಕಮ್ಮ**, ಬದುಕು ಬರಹ ಕರ್ನಾಟಕ ಲೇಖಕಿಯರ ಸಂಘ ಬೆಂಗಳೂರು.

ಪಾರ್ವತಿ, ಎಚ್.ಎಸ್, (ಸಂ), ೧೯೭೪, **ಆರ್ ಕಲ್ಯಾಣಮ್ಮ ಜೀವನಕಾರ್ಯ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಪಾರ್ವತಿ, ಎಚ್.ಎಸ್, (ಸಂ), ೧೯೯೨, **ತಿರುಮಲ ರಾಜಮ್ಮ ಜೀವನ**, ಸಾಹಿತ್ಯ ಪರಿಷತ್ತು, ಬೆಂಗಳೂರು.

ಮಂಗಳಾ, ಚಿ.ನ., (ಸಂ), ೧೯೯೧, **ತಿರುಮಲಾಂಬಾ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ವಿಮಲಾ, ಎಸ್.ವಿ., (ಸಂ), ೧೯೭೮, **ತ್ರಿವೇಣಿ: ವ್ಯಕ್ತಿ ಮತ್ತು ಸಾಹಿತ್ಯ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಶ್ರೀವಳ್ಳಿ, ಎಸ್.ಟಿ., (ಸಂ), ೧೯೯೪, **ಗಿರಿಬಾಲೆ- ಸರಸ್ವತಿ ರಾಜವಾಡೆ ಬದುಕು ಬರಹ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಶೇಷಗಿರಿರಾವ್, ಎಲ್.ಎಸ್., (ಸಂ) ೧೯೮೭, **ನಂಜನಗೂಡು ತಿರುಮಲಾಂಬ ಜೀವನ ಮತ್ತು ಸಾಹಿತ್ಯ**, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

ಸುಮಿತ್ರಾಬಾಯಿ, ಬಿ.ಎನ್.,(ಸಂ), ೧೯೯೪, **ಕಾತ್ಯಾಯಿನಿ ಸಾಹಿತ್ಯವಾಚಿಕೆ**, ಎಚ್.ಎಸ್. ಕಾತ್ಯಾಯಿನಿ ಬದುಕು ಬರಹ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಸುಮಿತ್ರಾಬಾಯಿ, ಬಿ.ಎನ್., (ಸಂ), ಗಾಯತ್ರಿ, ಎನ್, (ಸಂ), ೧೯೯೮, **ವಿಮುಕ್ತಿಯ ಹಾದಿ**, ಸಾವಿತ್ರಮ್ಮ ಎಚ್.ಖ., ಬದುಕು ಬರಹ, ಜಾಗೃತಿ ಮಹಿಳಾ ಪ್ರಕಾಶನ, ಬೆಂಗಳೂರು.

**ಜೀವನ ಚರಿತ್ರೆ:**

ಅಮೂರ, ಜಿ. ಎಸ್., **ಅ. ನ. ಕೃಷ್ಣರಾಯರು**

**ಆತ್ಮ ಚರಿತ್ರೆ**

ನಿರಂಜನ, ಅನುಪಮಾ, ೧೯೯೦, **ಬರಹಗಾರ್ತಿಯ ಬದುಕು**, ಡಿ.ವಿ.ಕೆ. ಮೂರ್ತಿ, ಮೈಸೂರು.

**ಅನುವಾದ:**

ದಬ್ಬೆ, ವಿಜಯಾ, (ಅನು) ಸುಮಿತ್ರಾಬಾಯಿ, ಬಿ.ಎನ್. (ಸಂ) ೧೯೮೬, **ವಿಮೋಚನೆಯೆಡೆಗೆ**, ಮೈಥಿಲಿ ಶಿವರಾಮನ (ಮೂಲ) ಸಮತಾ ವೇದಿಕೆ, ಮೈಸೂರು.

ರಿಸಬೂಡ, ಸರಸ್ವತಿ, (ಅನು), ೧೯೯೨, **ಸ್ತ್ರೀ ಪುರುಷ**, ಛಾಯಾ ದಾತಾರ (ಮೂಲ) ಇಳಾ ಪ್ರಕಾಶನ, ಬೆಂಗಳೂರು.

ವೈದೇಹಿ(ಅನು) ೧೯೮೫, **ಬೆಳ್ಳಿಯ ಸಂಕೋಲೆಗಳು**, ಮೈತ್ರೇಯ ಮುಖ್ಯೋಪಾಧ್ಯಾಯ(ಮೂಲ) ಅಕ್ಷರ ಪ್ರಕಾಶನ , ಹೆಗ್ಗೋಡು ಸಾಗರ.

**ಮಹಿಳಾ ಅಧ್ಯಯನ:**

ಇಂದಿರಾ ಆರ್ : ೧೯೯೫, **ಸ್ತ್ರೀವಾದ ದಿಕ್ಸೂಚಿ**, ಸಮತಾ, ಅಧ್ಯಯನ ಕೇಂದ್ರ, ಮೈಸೂರು.

ಗಾಯತ್ರಿ ಎನ್. ೧೯೯೧, **ಮಹಿಳೆ ಬಿಡುಗಡೆಯ ಹಾದಿಯಲ್ಲಿ**, ನವಕರ್ನಾಟಕ ಪ್ರಕಾಶನ, ಬೆಂಗಳೂರು.

ಚಕ್ರವರ್ತಿ, ಮನು (ಸಂ), ೧೯೯೩, **ಭಾರತೀಯ ಸ್ತ್ರೀವಾದ**, ಅಕ್ಷರಪ್ರಕಾಶನ, ಹೆಗ್ಗೋಡು ಸಾಗರ.

ದಬ್ಬೆ, ವಿಜಯಾ, ೧೯೮೯, **ಮಹಿಳೆ, ಸಾಹಿತ್ಯ, ಸಮಾಜ**, ರಚನಾ ಪ್ರಕಾಶನ, ಮೈಸೂರು.

ದಬ್ಬೆ, ವಿಜಯ, ೧೯೯೭, **ನಾರಿ:ದಾರಿ-ದಿಗಂತ**, ರಚನಾ ಪ್ರಕಾಶನ, ಮೈಸೂರು.

ದಬ್ಬೆ, ವಿಜಯಾ(ಸಂ) ೧೯೯೮, **ಲೇಖಲೋಕ;** ಮಹಿಳಾ ಸಾಹಿತ್ಯ ಒಂದು ಆತ್ಮಕಥನ, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.

ನಿರಂಜನ, ತೇಜಸ್ವಿನಿ (ಸಂ) ನಿರಂಜನ, ಸೀಮಂತಿನಿ(ಸಂ), ೧೯೯೪ **ಸ್ತ್ರೀವಾದಿ ಸಾಹಿತ್ಯ ವಿಮರ್ಶೆ**, ಕ್ರೈಸ್ಥ ಕಾಲೇಜು, ಬೆಂಗಳೂರು.

ರಾಮಚಂದ್ರಪ್ಪ, ಬರಗೂರು(ಪ್ರ,ಸಂ), ೧೯೯೩, **ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನ**, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ರೋಹಿಣಿ, ಬಿ.ಎಂ. ೧೯೯೫, **ಸ್ತ್ರೀ ಸಂವೇದನೆ**, ಹ. ಮಾರಿಶು, ಪ್ರಕಾಶನ, ಮಂಗಳೂರು.

ವಿಜಯಾ.ಡಿ., ೧೯೭೭, : **ಬದುಕು, ಬರಹ ಮತ್ತು ಮಹಿಳೆ**, ಗೀತಾ ಬುಕ್ ಹೌಸ್, ಮೈಸೂರು.

ವೆಂಕಟಲಕ್ಷ್ಮಿ, ಬಿ.ಎಸ್. ೧೯೯೧. **ಕನ್ನಡ ಲೇಖಕಿಯರ ನೆಲೆಬೆಲೆ**, ಎಸ್.ಟಿ. ಶಾಮ ಪ್ರಕಾಶನ, ಬೆಂಗಳೂರು.

ಶರ್ಮ, ಕೇಶವ. ಕೆ. ೧೯೯೨. **ಸ್ತ್ರೀವಾದಿ ವಿಮರ್ಶೆ**, ಅನ್ವೇಷಣೆ ಪ್ರಕಾಶನ, ಬೆಂಗಳೂರು.

## ಮೂರು

ಅನಂತನಾರಾಯಣ, ಎಸ್., **"ಕಾದಂಬರಿ:೧೯೨೦-೧೯೪೭"**, ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯ, ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು ೧೯೮೧ (೨ನೆ. ಮು.) ಪುಟ : ೧೦೨-೧೧೫.

ಆಮೂರ, ಜಿ.ಎಸ್., **"ಆಧುನಿಕ ಕನ್ನಡ ಕಾದಂಬರಿಯ ಬೆಳವಣಿಗೆಯ ಒಂದು ನೋಟ'**, ಅರ್ಥಲೋಕ, ಸ್ನೇಹ ಪ್ರಕಾಶನ ಬೆಂಗಳೂರು, ೧೯೮೮, ಪುಟ:೧-೧೫.

ಆಮೂರ, ಜಿ.ಎಸ್., **"ಆಯ್ದ ಸಣ್ಣಕತೆಗಳು : ಪ್ರಸ್ತಾವನೆ"**, ಸಾತ್ವಿಕಪಥ, ಪುಟ: ೧೫೫-೧೮೯.

ಆಮೂರ, ಜಿ.ಎಸ್., **"ಹೊಸ ಸಂವೇದನೆ"** ಕನ್ನಡ ಕಾದಂಬರಿಲೋಕ ೧೯೯೩ ಪುಟ ೧೫೧-೧೫೯.

ಆಮೂರ, ಜಿ. ಎಸ್., **"ಇಂದಿರೆ : ವಾಸ್ತವದ ಆಭಾಸ"** ಕನ್ನಡ ಕಥನ ಸಾಹಿತ್ಯ: ಕಾದಂಬರಿ, ಶ್ರೀಹರಿ ಪ್ರಕಾಶನ, ಧಾರವಾಡ, ೧೯೯೪, ಪುಟ - ೩೭ - ೪೩.

ಗಾಯತ್ರಿ, ಎನ್. **"ನವೋದಯ ಸಾಹಿತ್ಯದಲ್ಲಿ ಸಂಸ್ಕೃತಿಯ ವಿಕಾಸ ಮತ್ತು ಸ್ತ್ರೀ"** ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕನ್ನಡ ಸಾಹಿತ್ಯ ಅಕಾಡೆಮಿ ಬೆಂಗಳೂರು, ೧೯೯೩, ಪುಟ - ೧೮೯-೧೫೫.

ದಬ್ಬೆ, ವಿಜಯಾ, **"ಆಧುನಿಕತೆಯ ಹೊಸ್ತಿಲಲ್ಲಿ ಕನ್ನಡಿತಿ"** ನಾರಿ:ದಾರಿ-ದಿಗಂತ, ರಚನಾ ಪ್ರಕಾಶನ, ಮೈಸೂರು. ೧೯೯೭, ಪುಟ ೧೪೮-೧೫೭

ದಬ್ಬೆ ವಿಜಯಾ, **"ಕನ್ನಡ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನೆ'**, ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ, ಕನ್ನಡ ಸಾಹಿತ್ಯ ಅಕಾಡೆಮಿ ಬೆಂಗಳೂರು ೧೯೮೯, ಪುಟ ೧೯೧ - ೨೧೦.

ನಾಗರಾಜ ಡಿ.ಆರ್ ., **"ಸ್ತ್ರೀವಾದಿ ಸಾಹಿತ್ಯ ಮೀಮಾಂಸೆಯ ಸ್ವರೂಪ : ಸಮಸ್ಯೆಗಳು - ಸಾಧ್ಯತೆಗಳು"**, ಭಾರತೀಯ ಸ್ತ್ರೀವಾದ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೩, ಪುಟ ೧೧೯- ೧೩೧.

ಬಾಲಸುಬ್ರಹ್ಮಣ್ಯ, ನರಹಳ್ಳಿ, **"ಸಾಹಿತ್ಯ ಚಳುವಳಿಗಳು:ಒಂದು ತಾತ್ವಿಕ ವಿವೇಚನೆ"** ಕಥನ ಸಾಹಿತ್ಯ ಸಂದರ್ಭ, ೧೯೬೦, ಪುಟಗಳು: ೩-೧೨

ದೇಸಾಯಿ, ಶಾಂತಿನಾಥ, **"ಕನ್ನಡ ಕಾದಂಬರಿ ನಡೆದು ಬಂದ ರೀತಿ: ಉಪನ್ಯಾಸ ೧"** ಕನ್ನಡ ಕಾದಂಬರಿ ನಡೆದುಬಂದ ರೀತಿ, ಪ್ರಸಾರಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೯. ಪುಟಗಳು ೧-೨೦.

ಪರಿಮಳಾ ಎನ್.ಬಿ., **"ಸಂಶೋಧನೆ"** - ಮಹಿಳಾ ಸಾಹಿತ್ಯ: ೧೯೮೦-೧೯೮೩, ಶಾಶ್ವತಿ, ಎನ್.ಎಮ್.ಕೆ.ಆರ್.ವಿ. ಕಾಲೇಜು ಬೆಂಗಳೂರು. ಪುಟ : ೪೭.

ರಾಜಗೋಪಾಲ್, ಕ.ವೆಂ., **"ಸಣ್ಣಕತೆ. ೧೯೨೦ - ೧೯೪೭"**, ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯ, ಪ್ರಸಾರಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೧. (೨ನೇ ಮ.)ಪುಟ : ೮೨ - ೯೧.

ರಾಘವೇಂದ್ರ, ಎಚ್.ಎಸ್., **"ಕನ್ನಡ ಕಥಾಪರಂಪರೆ ಮತ್ತು ಮಾಸ್ತಿ"** ನಿಲುವು, ಕನ್ನಡ ಸಂಘ, ಕ್ರೈಸ್ತ ಕಾಲೇಜು, ಬೆಂಗಳೂರು, ೧೯೮೯. ಪುಟ. ೨೪೩-೨೫೨.

ರಾಘವೆಂದ್ರ, ಎಚ್.ಎಸ್., **"ಸಾಹಿತ್ಯದ ಅಧ್ಯಯನ ಮತ್ತು ಇತರ ಶೈಕ್ಷಣಿಕ ಶಿಸ್ತುಗಳು"** ನಿಲುವು,೧೯೮೯. ಪುಟ-೧-೩೭.

ರಾಮಚಂದ್ರ, ಸಿ.ಎನ್ ., "ಕನ್ನಡ ಮೊದಲ ಕಾದಂಬರಿಗಳ ಸ್ವರೂಪ" ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು, ಕನ್ನಡ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು ೧೯೮೭. ಪುಟ: ೧೨೨ - ೧೩೨.
ರಾವ್, ದಾಮೋದರ ಬಿ., "ಕನ್ನಡ ಕಾದಂಬರಿಯ ಉಗಮದ ಸಾಂಸ್ಕೃತಿಕ ಹಿನ್ನೆಲೆ" ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು, ೧೯೮೭. ಪುಟ: ೮೫-೯೪.
ರಾವ್, ಶೇಷಗಿರಿ ಎಲ್.ಎಸ್ ., "ಕನ್ನಡ ಕಾದಂಬರಿ ಲೋಕ" ಕನ್ನಡ ಸಾಹಿತ್ಯವಾಹಿನಿ, ಸುವಿದ್ಯಾ ಪ್ರಕಾಶನ, ಬೆಂಗಳೂರು, ೧೯೯೩. ಪುಟಗಳು :೧೬-೨೮
ಶಿವರಾಮಯ್ಯ, "ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಪಾತ್ರಾಭಿವ್ಯಕ್ತಿ ವಿಧಾನ," ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರ, ೧೯೯೩, ಪುಟ: ೬೧ -೯೫.
ಸುಮಿತ್ರಾಬಾಯಿ.ಬಿ. ಎನ್, "ಕಾದಂಬರಿ", ಕನ್ನಡ ಸಾಹಿತ್ಯ ಸಮಿಕ್ಷೆ- ೧೯೯೨, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. ೧೯೯೩. ಪುಟ:೨೫-೫೦
ಹಾವನೂರು, ಶ್ರೀನಿವಾಸ, "ಭಾರತೀಯ ಸಾಹಿತ್ಯದಲ್ಲಿ ಕಾದಂಬರಿಯ ಮೊದಲ ಘಟ್ಟ," ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೧೯೮೭, ಪುಟ : ೩೨ - ೫೦.
ಎಂಗೆಲ್ಸ್, ಫ್ರೆಡರಿಕ್ (೧೮೮೪) "ಕುಟುಂಬ II" ಕುಟುಂಬ, ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ, ಕೆ. ಎಲ್. ಗೋಪಾಲಕೃಷ್ಣರಾವ್ (ಅನು) ಪ್ರಗತಿ ಪ್ರಕಾಶನ, ಮಾಸ್ಕೋ, ೧೯೮೦, ಪುಟ: ೪೨ - ೧೧೮.

## ಅನುಬಂಧ

## ನಾಲ್ಕು

ಇಂಗ್ಲೀಷ್ ಭಾಷೆಯ ಕೃತಿಗಳು

Agarwal, Bina (ed.), 1991, Structures of Patriarchy-Women and the Household in Asia, Vol : II, Kali, Delhi.

Alexander C., (Ed.), Seidman, Steven (Ed.), (1990), 1994, Culture and Society-Contemporary Debates, Cambridge University Press, Cambridge.

Altekar, A.S., 1991, Position of Women In Hindu Civilization Motilal, Delhi.

Bhat, Sediyapu Krishna (1991), Discovery of Facts, Trans. Padekallu, Narasim Bhatta, Rashtrakavi Govinda Pai Samshodhana Kendra, Udupi 1996.

Bhat, Yashoda (Ed), 1993, The Image of Woman In Indian Literature, B.R.Publishing Corporation, Delhi.

Connell, R.M. 1987. Gendry And Power, Stanford, California.

Desai, Neera, 1990, Women and Society in India, Ajantha, Delhi.

Dhruvarajan, Vanaja, 1989, Hindu Women And The Power of Ideology, Vistaar, Delhi.

Ember, Carol R., Ember Melvin, 1995, Anthropology, Prentice Hallof India Pvt. Ltd., Delhi.

Ghadially, Rehana (ed)., 199 , Women in Indian Society-A reader, Sage, Delhi.

Haralambos, M. Heald, R.M. 1991, Sociology : Themes and Perspectives, Oxford University Press Oxford.

Jacobson, Doranna, Wadely, Susan, S., 1995, Women in India, Manohar Delhi.

Larrington, Carolyne (Ed)., 1992, The Feminist Campanion to Mythology, Pandora Press, London.

Lerner, Gerda, 1986, The Creation of patriarchy : Women and History, Vol. I & II, Oxford University, Press, London.

Mendes, Susan (Ed.), Rendall, Jane (Ed), 1989, Sexuality and Subordination, Routledge, London.

Nabar, Vrinda, 1995, Caste As Women, Penguin, Delhi.

Ostor, Akos, Freezzette, Line, et. al., (1992) 1995, Concept of Person Kinship, Caste and Marriage in India, Oxford University Press, Delhi.

Sangari, Kum Kumm, Vaid, Suresh, (Ed.), 1993, Recasting Women, Kali, Delhi.

Shah, Shalini, 1996, The Making of Womanhood-Gender relation in Maha Bharatha, Manohar, Delhi.

Tharu, Susie (Ed.), Lalitha K., (Ed.) 1991, Women Writing In India, Vol. I & II, Oxford University Press, Oxford.

Upadhaya, H.C., 1991, Status of Women In India, Anmol, Delhi.

**Articles** :

Alexander, Jeffrey, C., "Approaches to Culture-Contemporary Perspectives : Analytic Debates", Culture and Society-Contemporary Debates, Cambridge University Press, Cambridge, 1994, pp.1-27.
Bhat, Yashoda, "The changing Image of Woman (The Introduction)" The Image of Woman In Indian Literature, B.R.Publishing, Delhi, 1993, pp.I-XXIII.

Ember, R., Carol, "Sex and Culture" Chapter 17, Anthropology, Prentice Delhi, 1995, pp.287-306.

Ember, R., Carol, "Marriage and the Family" Chapter 18, Anthropology, Prentice, Delhi pp.308-328.

Kakar, Sudhir, "Feminine Identify in India", Women in India Society, Sage Delhi. pp.44-68.

Lerner, Gerda, "Definitions", The Creation Of Patriarchy. Vol. I, Oxford University, Oxford, pp.231-243.

Nandi, Ashis, "Women versus Womanliness In India-an essay in Social and Political Psychology", Women In India Society, Sage, Delhi. pp.69-80.

Lerner, Gerda, "The Creation of Partriarchy", The Creation of Patriarchy, Oxford University Press, Oxford pp.212-229.

Lerner, Gerda, "The Right to Learn, The Right to Teach, The Right to Define", The creation of Partriarchy, Oxford University Press, Oxford pp.19-219.

Wadley, Susan, "Women and the Hindu Tradition", Women In Indian Society, Sage, Delhi. pp.2-43.

